# ಅನಾಥೆ

ಗೋಪಾಲಕೃಷ್ಣ ಅಡಿಗ

ಮೋಹನ ಪ್ರಕಾಶನ
ಕೃಷ್ಣಮೂರ್ತಿಪುರಂ : : ಮೈಸೂರು

# ೧

ರಪ, ರಪ; ಟಪ, ಟಪ; ಟಪ್ಪ, ಟಪ್ಪ. ಮಳೆ, ಮಳೆ, ಮಳೆ. ಬಿಡುವೇ ಇಲ್ಲ. ಹಗಲು ರಾತ್ರಿ ಒಂದೇ ತಾಳ, ಒಂದೇ ಲಯ. ಆಕಾಶಕ್ಕೆ ಸುರಂಗ ಹೊಡೆದರೋ ಎನ್ನುವ ಹಾಗೆ ಧೋ ಧೋ ಎಂದು ಭೋ ಭೋ ಎಂದು ಮಳೆ ಸುರಿಯುತ್ತಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಪಡುಗಡಲ ತೀರ. ಬಳುವಡಿ ಊರೆಲ್ಲ ಮಳೆಯ ನೀರಲ್ಲಿ ತೊಯ್ದು ನೀರಿಗೆ ಬಿದ್ದು ಮೇಲಕ್ಕೆದ್ದು ನಿಂತ ಬೆಕ್ಕಿನಂತೆ ಒದ್ದಾಡುತ್ತಿತ್ತು. ಸುತ್ತುಮುತ್ತಲಿನ ಜಲಪ್ರಳಯದಲ್ಲಿ ಆ ಊರಿನ ಐದಾರು ಮನೆಗಳು ವಿಸ್ತಾರವಾದ ಸಮುದ್ರದಲ್ಲಿ ಹಡಗಿನ ಕೂವೆಮರಗಳಂತೆ ಕಾಣುತ್ತಿದ್ದುವು.

ಆ ವರ್ಷ ಮಳೆಗಾಲ ಶುರುವಾದದ್ದು ಬಹಳ ಬೇಗ. ವಾಡಿಕೆಯಂತೆ ಸಂಪ್ರದಾಯ ಸಮ್ಮತವಾಗಿ ಜೂನ್ ತಿಂಗಳ ಆರನೆಯ ತಾರೀಕಿಗೆ ಆರಂಭವಾಗಬೇಕಾಗಿದ್ದ ಮಳೆರಾಯನ ದಂಡಯಾತ್ರೆ ಮೇ ಕೊನೆಯ ವಾರದಲ್ಲೇ ಆರಂಭವಾಗಿ ಬಿಟ್ಟಿತ್ತು. ತನ್ನ ಬಾಣ ಬಿರುಸು ಕುಶಾಲುತೋಪುಗಳೊಡನೆ, ಚತುರಂಗಬಲ ಸಮೇತನಾಗಿ ಮಳೆರಾಯ ಅನಿರೀಕ್ಷಿತವಾಗಿಯೇ ಬಂದು ಬೀಡು ಬಿಟ್ಟ. ಊರಿನ ಜನರೆಲ್ಲಾ ಕೈಕೈ ಹಿಸುಕಿಕೊಳ್ಳಬೇಕಾಯಿತು. ಸೋಮಾರಿಗಳ ತಲೆಯ ಮೇಲಂತೂ ಚಪ್ಪಡಿ ಎಳೆದ ಹಾಗೇ. ಹುಲ್ಲು ಛಾವಣಿ ಹೊದೆಯಿಸದೇ ಇದ್ದವರು ಎಷ್ಟೋ ಜನ. ಪೇಟೆಯಿಂದ ಮಳೆಗಾಲಕ್ಕೆ ಬೇಕಾದ ಸಾಮಾನುಗಳನ್ನು ತಂದು ಸಂಗ್ರಹಿಸಿಟ್ಟುಕೊಳ್ಳದೆ ಇದ್ದವರು ಅನೇಕರು. ಪಕ್ಕದ ಹಾಡಿಯಿಂದ ತರಗೆಲೆಗಳನ್ನು ಒಟ್ಟಿ ತಂದು ಗುಡ್ಡೆ ಹಾಕಿ 'ಕುತ್ತರಿ' ಹಾಕದೆ ಇದ್ದವರು ಕೆಲವರು. ಅಂತೂ ಅರ್ಧಕ್ಕೆ ನಿಂತ ಕೆಲಸ

ಅರ್ಥಕ್ಕೆ. ಇದಕ್ಕೂ ಹೆಚ್ಚಾಗಿ ಭತ್ತವನ್ನು ಬಿತ್ತಿ ಅಗೆ ತಯಾರಿಸಲು ವಿಳಂಬ ಮಾಡಿದವರ ಪಾಡಂತೂ ನಾಯಿ ಪಾಡು. ತಡವಾಗಿ ಬಿತ್ತಿದ ಭತ್ತ ಮಳೆಯ ಒನಕೆಧಾರೆಯಲ್ಲಿ ಕೊಚ್ಚಿಹೋಯಿತು; ಆಗ ತಾನೇ ಕಣ್ಣು ಬಿಡುತ್ತಿದ್ದ ಅಗೆ ಮಳೆಯ ಹೊಡೆತಕ್ಕೆ ನುಚ್ಚುನೂರಾಗಿ ತೇಲಿ ಹೋಯಿತು. ಮಳೆ ನಿಂತರೆ ಮತ್ತೆ ಬಿತ್ತಬಹುದು. ಆದರೆ ಈ ತಾಂಡವನೃತ್ಯ ನಿಲ್ಲಬೇಕಲ್ಲ!

ಗದ್ದೆ, ತೋಟ, ತೋಡು, ಹಳ್ಳ, ಕೊಳ್ಳಗಳೆಲ್ಲ ನೀರಲ್ಲಿ ಮುಳುಗಿಹೋದುವು. ಮನೆಯ ಸುತ್ತಲ ಗದ್ದೆಗಳೆಲ್ಲ ಸರೋವರಗಳ ಹಾಗೆ. ಮನೆಯ ಹೊರಗೆ ಕಾಲಿಡಬೇಕಾದರೆ ದೋಣಿ ಬೇಕು ಎನ್ನುವಷ್ಟು ನೀರು. ಆಕಾಶದ ತುಂಬ ಕಾರ್ಮೋಡ; ಹಗಲಲ್ಲಿ ಸೂರ್ಯನಿಲ್ಲ; ರಾತ್ರಿ ನಕ್ಷತ್ರಗಳಿಲ್ಲ. ಸೂರ್ಯನನ್ನು ಕಾಣದೆ ಆಗಲೇ ಒಂದು ವಾರ.

ಮುಂಗಾರಿನ ಆರಂಭವೈಭವದ ರುದ್ರಾಟ್ಟಹಾಸವನ್ನು ಅನುಭವಿಸಿಯೇ ತಿಳಿಯಬೇಕು. ಮನೆಯೇ ಸೆರೆಮನೆ; ಹೊರಗೆ ಕಾಲಿಡಲು ಎಂಟೆದೆ ಬೇಕು. ಹೊರಗೆ ಕಾಲಿಟ್ಟರೆ ನಾಗಬೆತ್ತದಿಂದ ಬಾರಿಸಿದ ಹಾಗೆ ತೋರ ಹನಿಗಳ ಬಡಿತ. ಇದರ ಜೊತೆಗೇ ನಿರಂತರವಾದ ಗುಡುಗು, ಸಿಡಿಲು. ಫಳ್ ಫಳ್ ಎಂದು ಕಣ್ಣು ಕೊರೆಯುವ, ದಿಕ್ಕುಗೆಡಿಸುವ ಮಿಂಚು; ಕೋಲ್ಮಿಂಚು, ಬಳ್ಳಿಮಿಂಚು, ಕುಡಿಮಿಂಚು. ಛಟ್ ಛಟ್ ಛಟಾ ಎಂದು ಸಿಡಿಲು ಬಡಿದರೆ ಊರೇ ನಡುಗಬೇಕು. ತಂಗಾಳಿಯ ಸತತವಾದ ತುಮುಲದಿಂದ ತಡೆಯಲಾರದ ಚಳಿ; ಕಂಬಳಿಯೊಳಗೆ ಎಷ್ಟು ಮುದುರಿದರೂ ಸಾಲದು. ಗಾಳಿಯ, ಬಿರುಗಾಳಿಯ ಘೋರಾಟಕ್ಕೆ ತೆಂಗುಗಳು ಬಾಗಿ, ಬಾಳೆ ಮುರಿದು ಬಿದ್ದು, ಮಾವಿನ ಮರದಲ್ಲಿ ಇನ್ನೂ ಉಳಿದಿದ್ದ ಕಾಯಿಗಳೆಲ್ಲ ನೆಲದ ಮೇಲೆ.

ಆದರೂ ಜೀವನರಥ ನಡೆಯಬೇಕು. ವ್ಯವಸಾಯವೇ ಮುಖ್ಯ ವೃತ್ತಿಯಾದ ಜನ ಮಳೆಗಾಲದಲ್ಲಿ ಬೆಚ್ಚಗೆ ಕಂಬಳಿ ಹೊದೆದುಕೊಂಡು ಒಲೆಯ ಮುಂದೆ ಮುದುರಿ ಕುಳ್ಳಿರಲು ಸಾಧ್ಯವಿಲ್ಲ. ಕಂಬಳಿಯ ಮೊಟ್ಟೆಯನ್ನು ತಲೆಗೆ ಸಿಕ್ಕಿಸಿ, ಅದರ ಅಂಚುಗಳಿಂದ ಮೈಯನ್ನು ಎಷ್ಟು ಸಾಧ್ಯವೋ ಅಷ್ಟು ಮುಚ್ಚಿ ಮುದುರಿಕೊಂಡು ಕೈಯಲ್ಲಿ ಗುದ್ದಲಿ ಹಿಡಿದು ಮಳೆಯಲ್ಲೂ ಹೊರಗೆ ಹೊರಡಬೇಕು. ಎತ್ತುಗಳನ್ನು ನೊಗಕ್ಕೆ ಕಟ್ಟಿ ರಪರಪನೆ ಜಡಿಯುವ ಮಳೆಯಲ್ಲೂ

ಗದ್ದೆಯನ್ನು ಉಳಬೇಕು. ನುಚ್ಚುನೂರಾದ ಗದ್ದೆಯ ಅಂಚುಗಳನ್ನು ಗುದ್ದಲಿ ಹಿಡಿದು ಸರಿಪಡಿಸಬೇಕು. ಮಳೆಯ ಹೊಡೆತಕ್ಕೆ ಮಣ್ಣು ಕೊಚ್ಚಿಹೋಗದ ಹಾಗೆ ಸೊಪ್ಪು ತಂದು, ಮರದ ಗೆಲ್ಲುಗಳನ್ನು ತಂದು, ಒಣಹುಲ್ಲನ್ನು ಸೇರಿಸಿ ನೀರಿಗೆ ಗದ್ದೆಯಿಂದ ಗದ್ದೆಗೆ ಚಿಮ್ಮಲು ದಾರಿ ಮಾಡಿಕೊಟ್ಟು ಆ ದಾರಿ ಭದ್ರವಾಗಿರುವ ಹಾಗೆ ನೋಡಿಕೊಳ್ಳಬೇಕು. ಗದ್ದೆಗಳನ್ನು ಎಷ್ಟು ಸಲ ಉತ್ತರೆ ಅಷ್ಟು ಒಳ್ಳೆಯದು. ನೀರು ಹೆಚ್ಚಿಗೆ ನಿಲ್ಲದ ಏರುಗದ್ದೆಗಳಲ್ಲಿ ಮಳೆಯಲ್ಲೇ ನಟ್ಟಿ ಆಗಬೇಕು.

ಊರಲ್ಲಿ ಯಾರಿಗೂ ಬಿಡುವಿಲ್ಲ. ನಾಗಿ, ಸುಬ್ಬಿ, ತಿಮ್ಮಿ, ಪರಮ, ರವಿ ಎಲ್ಲರೂ ಬೆಳಗಾಗುತ್ತಲೇ ಎದ್ದು ತಂಗಳೂಟ ಮಾಡಿ ತಲೆಗೆ ಗುರುಬು ಸಿಕ್ಕಿಸಿಕೊಂಡು ಅಗೇಡಿಗೆ ಹೋಗಿ ಭತ್ತದ ಸಸಿಯನ್ನು ಕಿತ್ತು ಕಟ್ಟು ಕಟ್ಟು ಮಾಡಿ ಇಡಬೇಕು. ತಕ್ಕಷ್ಟು ಅಗೆ ಸಿದ್ಧವಾದ ಮೇಲೆ, ಎಂದರೆ ಮಧ್ಯಾಹ್ನದ ಮೇಲೆ ನಟ್ಟಿ. ಗಂಡಸರು ಉಳಬೇಕು; ಅಗೆ ಹೊತ್ತು ತರಬೇಕು. ಹೆಂಗಸರು ನೆಡಬೇಕು. ಈ ಎಲ್ಲ ಕೆಲಸವೂ ಮಳೆಯಲ್ಲೇ.

ಹೊತ್ತು ಮುಳುಗುವಷ್ಟಕ್ಕೆ ಎಲ್ಲ ಕೆಲಸವೂ ಮುಗಿಯುತ್ತದೆ. ಮನೆಗೆ ಬಂದು ಎತ್ತುಗಳನ್ನು ಕೊಟ್ಟಿಗೆಯಲ್ಲಿ ಕಟ್ಟಿ, ಅವಕ್ಕೆ ತಿನ್ನಲು ಹುಲ್ಲು ಹಾಕಿಬಿಟ್ಟರೆ ದಿನದ ಕೆಲಸ ತೀರಿತು. ಆಮೇಲೆ ಬೆಚ್ಚನೆ ಬಿಸಿನೀರಿನಲ್ಲಿ ಸ್ನಾನವಾಗಿ ರಾತ್ರಿಯೂಟ ಮುಗಿಸಿದರೆ ಮತ್ತೆ ಉಳಿದದ್ದು ಮಲಗುವುದೊಂದೇ ಕೆಲಸ. ಮಲಗಿದರೆ ಕೂಡಲೇ ಸವಿನಿದ್ದೆ. ಆ ನಿದ್ದೆಗೆ ಗುಡುಗು ಸಿಡಿಲಿನ ಮಿಂಚಿನ ಹಿಮ್ಮೇಳ. ಕೆರೆ ಬಾವಿಗಳೆಲ್ಲ ತುಂಬಿ ಅಂಗಳಕ್ಕೂ ಜಿಗಿಯುವ ಕಪ್ಪೆಗಳ ವಟವಟದ ಪಕ್ಕವಾದ್ಯ. ಮಿಂಚುಹುಳುಗಳ ದೀಪೋತ್ಸವ. ಮನೆಯ ಸೂರಿನ ಅಂಚಿನಿಂದ ಎಡೆಬಿಡದೆ ತೊಟ್ಟಿಕ್ಕುವ ಮಳೆ ಹನಿಗಳ ಮೃದಂಗ ವಾದನ. ಜೀರಟೆ ಹಕ್ಕಿಗಳ ಜೀರು ದನಿಯ ಲಾಲಿ.

ಹೊತ್ತು ಮುಳುಗಿದ ಮೇಲೆ ಊರಲ್ಲಿ ಜನಸಂಚಾರವೇ ಇಲ್ಲ. ದೀಪ ಹಚ್ಚುವ ಮನೆಗಳು ಆ ಊರಲ್ಲಿ ಒಂದೋ ಎರಡೋ. ಗಾಢಾಂಧಕಾರದ ಕಂಬಳಿ ಮುಸುಕಿನೊಳಗೆ ಊರು ಉಸಿರುಕಟ್ಟಿ ಮಲಗುತ್ತದೆ.

ಆ ದಿನ ಆಗಲೇ ಕತ್ತಲಾಗಿತ್ತು. ಗಂಟೆ ಎಂಟೋ, ಒಂಭತ್ತೋ

ಹತ್ತ್ರೋ ಯಾರು ಬಲ್ಲರು ? ಅಂತೂ ಕತ್ತಲೆ, ಕಗ್ಗತ್ತಲೆ. ಆಕಾಶದ ತುಂಬ ಕಾಳಿವ್ಮೆ ಹಿಂಡಿನಂಥ ಮೋಡ. ಒಂದು ನಕ್ಷತ್ರವೂ ಕಾಣಿಸದು. ಗದ್ದೆಯಾವುದು, ಅಂಚಾವುದು ; ನೀರಾವುದು ನೆಲ ಯಾವುದು— ಒಂದೂ ತಿಳಿಯದು. ಎಲ್ಲವೂ ಒಂದು ಕತ್ತಲೆಯ ಮುದ್ದೆ. ಬಾಗಿಲಿಕ್ಕಿದ ಮನೆಯ ಹೊರಗೆ ಏನು ಬೇಕಾದರೂ ಸಂಚರಿಸಬಹುದು. ಕೊಳ್ಳಿದೆವ್ವ ತನ್ನ ಕೊಳ್ಳಿಯನ್ನು ಬೀಸುತ್ತ ಶತಪಥ ತಿರುಗಬಹುದು. ಬೊಬ್ಬರ್ಯವೋ, ಜಟ್ಟಿಗವೋ ಯಾವ ದೆವ್ವವೇ ಇರಲಿ, ಅದು ಈಗ ನಿರ್ವಿಘ್ನವಾಗಿ ಸಂಚರಿಸಬಹುದು. ಸತ್ತವರ ಪ್ರೇತಗಳೆಲ್ಲ ನಿರ್ಭಯವಾಗಿ ಹೊರಬಂದು ತಮ್ಮ ಗತಜೀವನದ ಆಟಗಳನ್ನೆಲ್ಲಾ ಮತ್ತೆ ಆಡಿ ತೋರಿಸಬಹುದು.

ಕತ್ತಲಿನ ಭೀಕರತೆ ಕ್ಷಣ ಕ್ಷಣಕ್ಕೆ ಹೆಚ್ಚುತ್ತಿತ್ತು. ಮಳೆಯ ಆರ್ಭಟೆ ತಗ್ಗಿ ಸಣ್ಣಗೆ ಪಟಪಟನೆ ತೊಟ್ಟಿಕ್ಕುತ್ತಿತ್ತು. ಆದರೆ ಬಿರುಗಾಳಿ ಭೋರೆಂದು ಬೀಸುತ್ತಿತ್ತು; ಅಲ್ಲಿ ಇಲ್ಲಿ ಸಂದುಗೊಂದುಗಳನ್ನು ಹೊಕ್ಕು ಹೊರಟು ಸುಯ್ಗರೆಯುತ್ತಿತ್ತು; ಗೋಗರೆಯುತ್ತಿತ್ತು. ತೆಂಗಿನ ಮರದ ಗರಿಗಳು ಗಿರಗಿರನೆ ತಿರುಗಿ ಮರ್ಮರಿಸುತ್ತಿದ್ದುವು. ಗುಡುಗಿನ ಢೋಲು ಎಡಬಿಡದೆ ತ್ವರೆ ತ್ವರೆಯಾಗಿ ಒಂದೇ ಸಮನೆ ಬಾರಿಸುತ್ತಿತ್ತು; ಸಿಡಿಲು ಮತ್ತೆ ಮತ್ತೆ ಸಿಡಿದು ಗಾಢಾಂಧಕಾರದ ಕೋಟೆಗೆ ಸಿಡಿಮದ್ದಿನ ಸುರಂಗವನ್ನು ಹಾಕಿ ಮಸಗುತ್ತಿತ್ತು. ಕತ್ತಲ ಹೊಟ್ಟೆಯನ್ನು ಸೀಳಿ ಬರುವ ಮಿಂಚು ನಾಗರ ಹಾವಿನಂತೆ ಹೆಡೆಯಾಡಿಸಿ ಫೂತ್ಕರಿಸಿ ಮಾಯವಾಗುತ್ತಿತ್ತು. ಆಕಾಶದಲ್ಲಿ ಅದೃಶ್ಯ ಶಕ್ತಿಗಳ ತುಮುಲ ಕೋಲಾಹಲ ; ಭೂಮಿಯ ಮೇಲೆ ಪ್ರಕೃತಿ ಶಕ್ತಿಗಳ ತಾಂಡವ.

ಊರಲ್ಲಿ ಒಂದು ಬೆಳಕೂ ಕಾಣಿಸದು. ಊರು ಬಹಳ ಸಣ್ಣದು. ಅಲ್ಲಿರುವುದು ಆರೇ ಮನೆಗಳು. ಆದರೆ ಈ ಊರಿಗೆ ಹತ್ತಿರದಲ್ಲೇ ಇನ್ನೊಂದು ಊರು—ಅಲ್ಲಿ ಎಂಟು ಹತ್ತು ಮನೆಗಳು. ಈ ಊರಿನ ಮನೆಗಳೆಲ್ಲ ಬ್ರಾಹ್ಮಣರ ಮನೆಗಳು. ಅಲ್ಲಿಂದ ಹದಿನೈದು ಗಜ ದೂರದಲ್ಲೇ ಒಕ್ಕಲಿಗರ ಮನೆಗಳು.

ಇಲ್ಲ, ಒಂದು ಬೆಳಕೂ ಇಲ್ಲ. ಇಲ್ಲವೇ ? ಅಗೋ, ಅಲ್ಲಿ ಆ ಮೂರನೆಯ ಮನೆಯ ಬಾಗಿಲಿಂದ ಕೊಂಚ ಬೆಳಕು ಹೊರಗೆ ನುಸುಳಿ ಬರುತ್ತಿದೆ. ಅದು

ಶೀನಪ್ಪನ ಮನೆ. ಶೀನಪ್ಪನ ನಿಜವಾದ ಹೆಸರು ಶ್ರೀನಿವಾಸ ಜೋಯಿಸ. ಆದರೆ ಊರಿಗೆಲ್ಲ ಅವನು ಶೀನಪ್ಪನೇ. ಮನೆಯ ಮುಂದೆಯೇ ಒಂದು ಓಣಿ. ಓಣಿಯಲ್ಲಿ ಮಂಡಿ ತನಕ ಬರುವಷ್ಟು ನೀರು; ಓಣಿಯ ಎರಡೂ ಕಡೆ ಮರಗಳು. ಈ ಓಣಿಯಲ್ಲೇ ಒಂದು ಸರಳರೇಖೆಯಲ್ಲಿ ಒಂದಕ್ಕೊಂದು ತಾಗಿ ಮೂರು ಮನೆಗಳು. ಆ ಮನೆಗಳಾದ ಮೇಲೆ ಓಣಿ ಬಲಕ್ಕೆ ತಿರುಗುತ್ತದೆ. ಹಾಗೆ ನಾಲ್ಕು ಗಜ ನಡೆದರೆ ಇನ್ನೂ ಮೂರು ಮನೆಗಳು. ಶ್ರೀನಿವಾಸ ಜೋಯಿಸನ ಮನೆಗೆ ಹೊಂದಿಕೊಂಡಿರುವ ಎರಡು ಮನೆಗಳಲ್ಲಿರುವವರು ಅವನ ಕುಟುಂಬ ದವರೇ ; ಒಂದು ಅವನ ದೊಡ್ಡಪ್ಪನ ಮನೆ; ಇನ್ನೊಂದು ಚಿಕ್ಕಪ್ಪನ ಮನೆ. ಆ ಎರಡೂ ಮನೆಗಳು ತುಂಬಿದ ಮನೆಗಳು. ಮನೆ ತುಂಬ ಮಕ್ಕಳು.

ಶೀನಪ್ಪ ಮಾತ್ರ ಏಕಾಂಗಿ. ತಂದೆತಾಯಿಗಳು ಅವನ ಬಾಲ್ಯದಲ್ಲೇ ತೀರಿಕೊಂಡಿದ್ದರು. ಶೀನಪ್ಪನಿಗೆ ಆಗಲೇ ಮೂವತ್ತೈದು ವಯಸ್ಸಾಗಿದ್ದರೂ ಅವನು ಮದುವೆ ಮಾಡಿಕೊಂಡಿರಲಿಲ್ಲ. ಮದುವೆ ಮಾಡಿಕೊಳ್ಳುವ ಲಕ್ಷಣವೂ ಇರಲಿಲ್ಲ. ' ಒಂಟಿಯಾಗಿ ಬಾಳಿ ಒಂಟಿಯಾಗಿಯೇ ಹೋಗುವ ಜೀವ ಅದು ' ಎಂದು ಊರಿನ ಜನ ಆಗಲೇ ತೀರ್ಮಾನಕ್ಕೆ ಬಂದಿದ್ದರು. ದೊಡ್ಡಪ್ಪ ನಾರ ಣಪ್ಪ, ಚಿಕ್ಕಪ್ಪ ರಾಮಕೃಷ್ಣ ಇಬ್ಬರೂ ಮಾಡಿದ ಉಪದೇಶಕ್ಕೆ ಮನ್ನಣೆ ಸಿಗ ಲಿಲ್ಲ. ಶೀನಪ್ಪ ಆಜನ್ಮ ಬ್ರಹ್ಮಚಾರಿ ಎಂದೇ ಊರು ತೀರ್ಮಾನಿಸಿ ಬಿಟ್ಟಿತ್ತು. ಅವನು ಏಕೆ ಮದುವೆ ಮಾಡಿಕೊಳ್ಳುವುದಿಲ್ಲ ಎಂಬ ಬಗ್ಗೆ ನೂರಾರು ಊಹಾ ಪೋಹಗಳು ನಡೆದಿದ್ದುವು. ಆದರೆ ಕೊನೆಗೂ ಶೀನಪ್ಪ ಮದುವೆಯಾಗುವವ ನಲ್ಲ ಎಂದು ಅಷ್ಟೇ ಹೇಳಬಹುದಾಗಿತ್ತಲ್ಲದೇ ಖಚಿತವಾಗಿ ಅದಕ್ಕೆ ಇದೇ ಕಾರಣ ಎಂದು ಹೇಳುವುದು ಸಾಧ್ಯವಿರಲಿಲ್ಲ.

ಶೀನಪ್ಪನಿಗೆ ವಯಸ್ಸಿನಲ್ಲಿ ಬಹು ಮಟ್ಟಿಗೆ ಹಿರಿಯಾಳಾದ ಅಕ್ಕ ಸಾವಿತ್ರ ಮ್ಮನನ್ನು ಬಿಟ್ಟರೆ ಅವನ ವಿಷಯದಲ್ಲಿ ತನ್ನವನು ಅಂತ ತೀರ ಹಚ್ಚಿಕೊಳ್ಳು ವವರು ಜಗತ್ತಿನಲ್ಲಿ ಇನ್ನು ಯಾರೂ ಇಲ್ಲ. ಸಾವಿತ್ರಮ್ಮನನ್ನು ಆ ಊರಿಂದ ಹತ್ತು ಮೈಲಿ ದೂರದ ಗುಜ್ಜಾಡಿಯ ಶ್ಯಾಮಭಟ್ಟರಿಗೆ ಮದುವೆ ಮಾಡಿಕೊಟ್ಟಿ ದ್ದರು. ಇಪ್ಪತ್ತನೆಯ ಶತಮಾನದ ಆದಿ ಭಾಗದ ಆ ಕಾಲದಲ್ಲಿ ಮೋಟಾರು ಇನ್ನೂ ಅತ್ತ ಕಡೆ ಸುಳಿದಿರಲಿಲ್ಲ. ಕಾಲುನಡಿಗೆಯ ಸಂಚಾರವೇ ಆಗ ಮುಖ್ಯ.

ಆಗೀಗ ಎತ್ತಿನ ಗಾಡಿಯನ್ನು ಪ್ರಯಾಣಕ್ಕೆ ಉಪಯೋಗಿಸುತ್ತಿದ್ದರೂ ಗಾಡಿಯ ಮುಖ್ಯ ಕೆಲಸ ಸಾಮಾನುಗಳನ್ನು ಸಾಗಿಸುವುದಾಗಿತ್ತಲ್ಲದೇ ಮನುಷ್ಯರನ್ನಲ್ಲ. ನಡೆಯುವುದೆಂದರೆ ಯಾರೂ ಆಗ ಅಂಜುತ್ತಿರಲಿಲ್ಲ. ಮುದುಕರಿರಲಿ, ಮಕ್ಕಳಿರಲಿ ಹತ್ತು-ಹನ್ನೆರಡು ಮೈಲಿ ಪ್ರಯಾಣವೆಂದರೆ ಅದೊಂದು ದೊಡ್ಡ ಪ್ರಯಾಸ ಎಂದು ಭಾವಿಸುತ್ತಿರಲಿಲ್ಲ. ಆದರೂ ವ್ಯವಸಾಯ ನಿರತರಾದ ಜನ ಊರಿಂದೂರಿಗೆ ಹೋಗುವುದು ಬಹಳ ಕಡಿಮೆ. ಹಬ್ಬ ಹರಿದಿನ, ಮದುವೆ, ಮುಂಜಿಗಳಿಗಂತ ಅಲ್ಲದೆ ನೆಂಟರ ಮನೆಗೂ ಹೋಗುವುದು ಕಡಿಮೆ. ಸಾವಿತ್ರಮ್ಮ ವರ್ಷಕ್ಕೆರಡು ಸಲ ತನ್ನ ತಂದೆ ತಾಯಿಗಳ ಶ್ರಾದ್ಧಕ್ಕಾಗಿ ತನ್ನ ತಮ್ಮನ ಮನೆಗೆ ಬಂದು ಹೋಗುತ್ತಿದ್ದರೆ ಅದೇ ಹೆಚ್ಚು. ಬಂದಾಗಲೂ ನಾಲ್ಕೈದು ದಿನಗಳಿಗಿಂತ ಹೆಚ್ಚು ಕಾಲ ಅಲ್ಲಿ ನಿಲ್ಲುತ್ತಿರಲಿಲ್ಲ. ಇಲ್ಲಿದ್ದಾಗ ಆಕೆಗೆ ಅಲ್ಲಿಯದೇ ಚಿಂತೆ. ದನ, ಕರು, ಮನೆ, ಮಠ, ಗಂಡ-ಮಕ್ಕಳು. ಅಲ್ಲಿದ್ದಾಗಲೂ ತಮ್ಮನ ಚಿಂತೆ. 'ಕೈ ಸುಟ್ಟುಕೊಂಡು ಅಡಿಗೆ ಮಾಡಿಕೊಂಡು ಕಷ್ಟ ಪಡುತ್ತಿದ್ದಾನಲ್ಲ, ಶೀನ; ಒಂದು ಮದುವೆಯಾದರೂ ಮಾಡಿಕೊಂಡಿದ್ದರೆ!' ಎಂದು ದಿನಕ್ಕೆ ಒಂದು ಸಲವಾದರೂ ಆಕೆ ನಿಟ್ಟುಸುರು ಬಿಡದೇ ಇರುತ್ತಿರಲಿಲ್ಲ. ಸಹೋದರಿಯ ಆ ನಿಟ್ಟುಸುರಿನ ಸಹಾನುಭೂತಿಯೊಂದನ್ನು ಬಿಟ್ಟರೆ ಶೀನಪ್ಪನ ಜೀವನದಲ್ಲಿ ಆತ್ಮೀಯತೆಯ ಗಂಗಾಲಹರಿ ಬೇರೆ ಇಲ್ಲ.

ಶೀನಪ್ಪನ ಜೀವನ, ನಡತೆ ಎರಡೂ ಸಾಮಾನ್ಯಕ್ಕಿಂತ ಕೊಂಚ ಭಿನ್ನವಾದದ್ದು. ಅನೇಕ ಜನರಿಗೆ ಅವನ ಜೀವನದ ಅರ್ಥ ತಿಳಿಯುವುದಿಲ್ಲ. ಎಲ್ಲರ ಹಾಗೆ ಮಾಡಬೇಕು, ಎಲ್ಲರೂ ಇದ್ದ ಹಾಗೆ ಇರಬೇಕು. ಅದು ಸರಿ. ಹಾಗಲ್ಲದೇ 'ಊರಿಗೊಂದು ದಾರಿಯಾದರೆ ಪೋರನಿಗೊಂದು ದಾರಿ' ಎಂಬ ಹಾಗಿದ್ದರೆ ಅದು ತಪ್ಪೇ ಅಲ್ಲದಿದ್ದರೂ ಉಳಿದವರಿಗೆಲ್ಲ ಅದರಿಂದ ಕೊಂಚ ಅಸಮಾಧಾನ; ಏನೋ ಕಸಿವಿಸಿ. ಮದುವೆ ಮಾಡಿಕೊಳ್ಳಬೇಕು-ಆದಷ್ಟು ಬೇಗ; ಸಂಸಾರದ ಚಿಂತೆ ಹಚ್ಚಿಕೊಂಡು ದುಡ್ಡು ದುಗ್ಗಾಣಿ ಅಂತ ಹಗಲಿರುಳೂ ಒದ್ದಾಡುತ್ತಿರಬೇಕು. ತಂದೆ ಮಾಡುತ್ತಿದ್ದ ಕೆಲಸ ಮಗನೂ ಮಾಡಬೇಕು. ನಾಲ್ಕು ಜನ ಮೆಚ್ಚುವ ಹಾಗೆ ಅಥವಾ ಕರುಬುವ ಹಾಗೆ ಬಾಳುವೆ ಮಾಡಬೇಕು. ಇದೇ ಈ ಲೋಕದ ಜನದ ಸಾಮಾನ್ಯ ಧ್ಯೇಯ. ಈ ಎಲ್ಲ

ವನ್ನೂ ಮೀರಿ ನಿಂತರೆ ಹೇಗೆ? ಶೀನಪ್ಪನ ಈ ಬಗೆಯ ಅನಾಸಕ್ತಿಯಿಂದ ಉಳಿದವರಿಗೆಲ್ಲ ತಾವು ಕಂಡ ಲೋಕವೊಂದೇ ಲೋಕವಲ್ಲ, ತಾವು ಬಾಳುವ ಈ ಬಾಳೊಂದೇ ಬಾಳಲ್ಲ—ಇನ್ನೂ ಏನೇನೋ ಈ ಜಗತ್ತಿನಲ್ಲಿದೆ ಎಂದು ಅನ್ನಿಸುತ್ತದೆ. ಹಾಗೆ ಅನ್ನಿಸುವುದರಿಂದ ಇದ್ದದ್ದರಲ್ಲಿ ಶ್ರದ್ಧೆ ಅಳಿಯದಿದ್ದರೂ ಕೊಂಚ ಸಡಿಲುತ್ತದೆ. ಏನೋ ಒಂದು ಬಗೆಯ ಅತೃಪ್ತಿಯು, ಅಸಮಾಧಾನದ ಮಂಜುಗೈ ಎದೆಗೆ ಸೋಂಕಿದಂತೆ ಆಗುತ್ತದೆ. ಆದ ಕಾರಣವೇ ಲೋಕವಿರುದ್ಧವಾದುದನ್ನು ಕಂಡರೆ ಜನಕ್ಕೆ ಅಷ್ಟು ದಿಗಿಲು. ಅದರ ಬಗ್ಗೆ ಅದು ವಿಪರೀತವಾಗಿ ಕಂಡಾಗ ಅಷ್ಟು ಆಕ್ರೋಶ.

ಶೀನಪ್ಪನ ವರ್ತನೆ ವಿಚಿತ್ರ ವಿಲಕ್ಷಣ ಎಂದು ಎನ್ನಿಸಿತ್ತು ಊರಿನವರಿಗೆ. ಆದರೆ ಅದು ವಿಪರೀತಕ್ಕಿಟ್ಟುಕೊಂಡಿತು ಎಂದು ಮಾತ್ರ ಇನ್ನೂ ಎನ್ನಿಸಿರಲಿಲ್ಲ. ಇದಕ್ಕೆಲ್ಲ ಮುಖ್ಯ ಕಾರಣ ಶೀನಪ್ಪನ ಯಕ್ಷಗಾನದ ಹುಚ್ಚು, ಪದ ಕಟ್ಟುವ ಅಡ್ಡ ಕಸಬು ಅಂತ ಆತನ ದೊಡ್ಡಪ್ಪ ನಾರಣಪ್ಪನ ಖಚಿತವಾದ ಅಭಿಪ್ರಾಯ. ಈ ಮೇಳದವರು, ಆ ಹಗಲುವೇಷದವರು, ಈ ಭಾಗವತರು, ಈ ಸೋಮಾರಿ ಸೂಳೇಮಕ್ಕಳೆಲ್ಲ ಸೇರಿಕೊಂಡು ಶೀನಪ್ಪನನ್ನು ಕೆಡಿಸಿದರು ಅಂತ ದುಃಖದಿಂದ ಆತ ಆಗಾಗ ಹೇಳುತ್ತಿದ್ದ. ತಮ್ಮ ಮಗ ವಾಸುದೇವನಿಗೆ ಇಂಥ ಹುಚ್ಚು ಹಿಡಿಯಲಿಲ್ಲವಲ್ಲ ಅಂತ ಅವರಿಗೆ ಕೊಂಚ ಸಮಾಧಾನ. ಆದರೂ ಶೀನನಲ್ಲಿ ಏಕೋ ವಿಶೇಷ ವಾತ್ಸಲ್ಯ.

ಶೀನಪ್ಪ ವಿಲಕ್ಷಣ ಹೌದು. ಅದರಿಂದ ಇಲ್ಲಿಯ ತನಕ ಯಾರಿಗೂ ತೊಂದರೆ ಆಗಿಲ್ಲ. ಪರಂಪರಾಗತರಾದ ಪೌರೋಹಿತ್ಯದ ವೈದಿಕ ವೃತ್ತಿಯನ್ನು ಅವನು ಮಾಡುತ್ತಿಲ್ಲ ನಿಜ. ಆದರೆ ಸ್ನಾನ ಸಂಧ್ಯಾವಂದನೆ ಜಪತಪ ಬಿಟ್ಟಿರಲಿಲ್ಲ. ದುಡ್ಡು ಕಾಸು ಕೂಡಿಹಾಕುತ್ತಿರಲಿಲ್ಲ—ನಿಜ. ಆದರೆ ಅಪ್ಪನ ಆಸ್ತಿಯನ್ನು ಹುರಿದು ಮುಕ್ಕಿ ಗರೀಬನಾಗಿ ಭಿಕ್ಷಾಪಾತ್ರೆ ಹಿಡಿಯುವ ಸ್ಥಿತಿಗೂ ಬಂದಿಲ್ಲ. ಅವನ ಮನೆಯ ಸಮೀಪದಲ್ಲೇ ನಾಲ್ಕು ಮುಡಿ ಗದ್ದೆ. ಅದರಿಂದ ಬರುವ ಭತ್ತ ಅವನ ಜೀವನಕ್ಕೆ ಸಾಕಾಗುತ್ತದೆ. ಅವನ ಜೀವನಕ್ಕೇ ಏನು, ಅವನ ಮನೆಗೆ ಆಗಾಗ ಬಂದು ಬೀಡು ಬಿಡುವ ಅತಿಥಿ ಅಭ್ಯಾಗತರಿಗೂ ಸಾಕಾಗುತ್ತದೆ. ಊರ ದೇವರ ಪೂಜೆ ಅವನ ಮನೆತನಕ್ಕೆ ಸೇರಿದ್ದು.

ಅದನ್ನು ಶೀನಪ್ಪ ಶ್ರದ್ಧೆಯಿಂದ ಮಾಡಿ ಮುಗಿಸುತ್ತಾನೆ. ಅದರಿಂದ ಬರುವ ವರಮಾನ ಕಡಿಮೆ. ಸರಕಾರದವರು ಅವನ ಆ ಅರ್ಚಕ ವೃತ್ತಿಗೆ ಪ್ರತಿಫಲ ವಾಗಿ ಹದಿನಾರು ರೂಪಾಯಿ ತಸದೀಕು ಕೊಡುತ್ತಾರೆ. ಶೀನಪ್ಪ ನಿರ್ಲಿಪ್ತ ನಾಗಿ, ಅನಾಸಕ್ತನಾಗಿ ತನ್ನ ಗೋಳುಗಳಲ್ಲಿ ಮಗ್ನನಾಗಿ ತನ್ನ ಪಾಡಿಗೆ ತಾನು ಇರುತ್ತಿದ್ದುದರಿಂದ ಅವನನ್ನು ಕಂಡು ಕರುಬುವವರ ಸಂಖ್ಯೆಯೂ ಕಡಿಮೆ.

ಶೀನಪ್ಪ ಚೆನ್ನಾಗಿ ಓದಿದವನು. ವೇದಾಧ್ಯಯನ ಮಾಡಿದ್ದಾನೆ; ಸಂಸ್ಕೃತದಲ್ಲಿ ಕಾವ್ಯದ ವರೆಗೂ ಪಾಠ ನಡೆದಿದೆ. ಕನ್ನಡದ ಕಾವ್ಯಗಳಲ್ಲಿ ನಾರಣಪ್ಪನ ಭಾರತ, ಜೈಮಿನಿ ಭಾರತ, ತೊರವೆ ರಾಮಾಯಣ–ಇವುಗಳನ್ನು ಮನವಾರೆ ಬಹಳ ಸಲ ಓದಿದ್ದಾನೆ. ಒಂದು ಬಗೆಯ ಸಂಸ್ಕೃತಿಯ ವಾತಾವ ರಣವನ್ನು ತನಗಾಗಿ ತನ್ನ ಸುತ್ತ ತನ್ನ ಮನೆಯಲ್ಲಿ ನಿರ್ಮಿಸಿಕೊಂಡಿದ್ದಾನೆ. ಕೇವಲ ಜಡ ವೇದಾಭ್ಯಾಸ, ಪೌರೋಹಿತ್ಯಗಳಲ್ಲೇ ಉಳಿದೆಲ್ಲ ಬ್ರಾಹ್ಮಣರ ವಿದ್ಯಾಭ್ಯಾಸವೂ ಮುಗಿಯುತ್ತಿದ್ದಾಗ ಶೀನಪ್ಪನಲ್ಲಿ ಕಂಡು ಬಂದ ಈ ವಾಚ ನಾಭಿಲಾಷೆ ವಿಶೇಷವೇ ಎನ್ನಬೇಕು. ಆದರೂ ಅದು ಅವನ ರಕ್ತಗತವಾಗಿ ಬಂದ ಹಾಗೆ ಬಂದಿದೆ. ಇದರ ಜೊತೆಗೆ ಯಕ್ಷಗಾನದ ಆಟಗಳಲ್ಲಿ, ತಾಳ ಮದ್ದಳೆಗಳಲ್ಲಿ ವಿಚಿತ್ರವಾದ ಆಸಕ್ತಿ, ಉತ್ಸಾಹ. ಸ್ವತಃ ಆ ಕಡೆ ಪ್ರಸಿದ್ಧ ಅರ್ಥಗಾರ, ಅದಕ್ಕಿಂತ ಹೆಚ್ಚಾಗಿ ಭಾಗವತನಾಗಿ ಅನೇಕ ತಾಳಮದ್ದಳೆಗಳಲ್ಲಿ ಭಾಗವಹಿಸಿ ಹೆಸರು ಪಡೆದದ್ದಲ್ಲದೆ ಒಂದೆರಡು ಪ್ರಸಂಗಗಳನ್ನೂ ಕೂಡಾ ರಚಿಸಿ ಮನೆಯಲ್ಲೇ ಇಟ್ಟುಕೊಂಡಿದ್ದಾನೆ ಎಂತಲೂ ಕೆಲವರು ಹೇಳುತ್ತಿದ್ದರು. ಪ್ರತಿ ವರ್ಷ ಯಾವ ಮೇಳವೇ ಆ ಕಡೆ ಬರಲಿ, ಶೀನಪ್ಪನ ಮುಂದಾಳುತನ ದಲ್ಲಿ ಬಳುವಡಿಯಲ್ಲಿ ಒಂದು ಆಟ ಆಗಲೇ ಬೇಕು. ಉಳಿದವರು ಯಾರೂ ರೊಕ್ಕ ಬಿಚ್ಚಲು ಹಿಂದೆ ಮುಂದೆ ನೋಡಿದರೆ ಶೀನಪ್ಪನೇ ಎಲ್ಲ ಖರ್ಚಿನ ಭಾರ ವನ್ನೂ ವಹಿಸಲು ಸಿದ್ಧ. ಈ ರೀತಿಯಿಂದ ಶೀನಪ್ಪ ಸುತ್ತುಮುತ್ತಲಿನ ಜಂಜ ಡವನ್ನು ಮರೆಯಲು ಕಲಿತದ್ದರಿಂದ ಅವನ ಜೀವನದ ರೀತಿ ಸಾಮಾನ್ಯತೆ ಗಿಂತ ಭಿನ್ನವಾದದ್ದೂ ಸಹಜವೇ.

ಹೌದು, ಆ ಗಾಢಾಂಧಕಾರ ಕವಿದ ಊರಿನಲ್ಲಿ ಬೆಳಕಿನ ಕುಡಿ ಮಿನು ಗುತ್ತಿದ್ದುದು ಶೀನಪ್ಪನ ಮನೆಯಲ್ಲಿಯೇ. ಬಾಗಿಲ ಬಳಿ ನಿಂತರೆ, ಬಿರುಗಾಳಿ,

ಗುಡುಗುಗಳ ಸದ್ದು ಅಡಗಿದಾಗ ಮನೆಯೊಳಗೆ ಯಾರೋ ಮೃದುವಾಗಿ ರಾಗವಾಗಿ ಏನೋ ಪದ್ಯಗಳನ್ನು ಓದುತ್ತಿರುವುದು ಕೇಳಬಹುದು. ಕುರುಕ್ಷೇತ್ರದ ಭೀಷಣ ಯುದ್ಧ ಕೋಲಾಹಲದ ನಡುವೆ ಅಂದು ಕೇಳಿದ ಗೀತಾಬೋಧೆಯಂತೆ ಆ ಪದ್ಯದ ಮಂದ್ರತಾನ ಮಳೆರಾಯನ ಕ್ರುದ್ಧ ಕೋಲಾಹಲದಲ್ಲಿ ಅಸ್ಫುಟವಾಗಿ ಪುಟಿಯುತ್ತಿತ್ತು.

ಫಳ್ಳೆಂದು ಮಿಂಚು ಒಮ್ಮೆ ಬೆಂಕಿಯ ಗೆರೆ ಗೀರಿ ತೋರಿತು. ಮನೆ ಅಷ್ಟು ದೊಡ್ಡದಲ್ಲ. ಹೆಬ್ಬಾಗಿಲು ಮುಚ್ಚಿತ್ತು. ಒಳಗೆ ಹೆಬ್ಬಾಗಿಲು ಚಾವಡಿ; ನಡುವೆ ಅಂಗಳ. ಅಂಗಳದಲ್ಲಿ ಜಳಜಳ ನೀರು ಹರಿಯುತ್ತಿತ್ತು. ಅಂಗಳವನ್ನು ದಾಟಿದರೆ ಮನೆಯ ಚಾವಡಿ. ಉರಿಯುತ್ತಿದ್ದ ಕಂದೀಲಿನ ಮಂದ ಪ್ರಕಾಶ ಸುತ್ತುಮುತ್ತಲ ಕತ್ತಲೊಡನೆ ತನ್ನ ವ್ಯರ್ಥ ಸಂಗ್ರಾಮವನ್ನು ನಡಸುತ್ತಿತ್ತು. ಕಂದೀಲಿನ ಕೆಳಗೆ ತೆರೆದ ಪುಸ್ತಕ. ಪುಸ್ತಕದ ಮೇಲೆ ಎರಡೂ ಕೈಗಳನ್ನೂರಿ ತಲೆ ಬಗ್ಗಿಸಿ ಕುಳಿತಿದ್ದ ಶೀನಪ್ಪ. ಬಾಯಿಯಿಂದ ಪದ ಈಗ ಹೊರಡುತ್ತಿಲ್ಲ. ಪುಸ್ತಕ ಹಳದಿ ಬಣ್ಣದ ಕಾಗದದ ಹಾಳೆಯ ಪುಸ್ತಕ–ಜೈಮಿನಿ ಭಾರತ. ಸೀತಾಪಹರಣದ ಭಾಗವನ್ನು ಓದುತ್ತಿದ್ದ ಶೀನಪ್ಪ ಮಧ್ಯದಲ್ಲೇ ಓದು ನಿಲ್ಲಿಸಿ ಹಾಗೆಯೇ ಕುಳಿತಿದ್ದ. ತುಂಬು ಗರ್ಭಿಣಿ ಸೀತೆಯನ್ನು ನಿಷ್ಠುರನಾದ ರಾಮಚಂದ್ರ ಲೋಕಾಪವಾದ ಭೀತಿಯಿಂದ ಲಕ್ಷ್ಮಣನೊಡನೆ ಕಾಡಿಗಟ್ಟಿದ್ದ ಸಂದರ್ಭ. ಮಾಡಬಾರದ ಕೆಲಸವನ್ನು ಮಾಡಿ ಶೋಕದಿಂದ ತಪ್ತನಾದ ಲಕ್ಷ್ಮಣ ಸೀತಾಮಾತೆಯನ್ನು ಬಿಟ್ಟು ಹೋಗಿದ್ದಾನೆ—ಗಹನವಾದ ಕಾಡಿನ ಮಧ್ಯದಲ್ಲಿ, ಹುಲಿ ಚಿರತೆಯೇ ಮೊದಲಾದ ದುಷ್ಟ ಮೃಗಗಳ ವನ್ಯರಾಜ್ಯದಲ್ಲಿ. ಲೋಕಪಾವನೆಯಾದ ಸೀತೆ, ಮಹಾರಾಣಿ ಪರಮಪತಿವ್ರತೆಯಾಗಿಯೂ, ಲೋಕಾಪವಾದಕ್ಕೆ ಸಿಕ್ಕಿ ನಿರ್ಗತಿಕಳಂತೆ ಕಾಡುಪಾಲಾಗಿದ್ದಾಳೆ. ಲಕ್ಷ್ಮೀಶನ ನಾದಧಾರೆ ಭಾವ ತೀವ್ರತೆಯ ಜಂಝಾವಾತವನ್ನು ಶೀನಪ್ಪನ ಮನಸ್ಸಿನಲ್ಲಿ ಸೃಷ್ಟಿಸಿತ್ತು. ವನಸ್ಥಳದ ಮೃಗ ಪಕ್ಷಿ ಕ್ರಿಮಿಕೀಟಗಳೆಲ್ಲ ಪ್ರಕೃತಿ ಶಕ್ತಿಗಳೆಲ್ಲ ದುಃಖರಸದಲ್ಲಿ ಮುಳುಗಿ ಹೋಗಿದ್ದುವು. ಶೀನಪ್ಪನ ಕಣ್ಣಿನಿಂದ ಕಂಬನಿಯು ಬಳಬಳನೆ ಸುರಿಯುತ್ತಿತ್ತು. ಪುಸ್ತಕ ಒದ್ದೆಯಾಗಿತ್ತು.

ಹೊರಗೆ ಮಳೆ ಸುರಿಯುತ್ತಿತ್ತು. ಮಿಂಚು ಮಿಂಚುತ್ತಿತ್ತು. ಗುಡುಗು

ಆಗಾಗ ಮೊಳಗುತ್ತಿತ್ತು. ಸುಯ್ಯೆಂದು ಗಾಳಿ ಬೀಸಿ ದೀಪದ ಕುಡಿ ಅದುರುತ್ತಿತ್ತು. ಶೀನಪ್ಪನ ಕಣ್ಣಿನಲ್ಲಿ ಕಂಬನಿ ಧಾರೆ ಧಾರೆಯಾಗಿ ಸುರಿಯುತ್ತಿತ್ತು.

'ಅಯ್ಯೋ, ತಾಯಿ; ಎಂಥವಳಿಗೆ ಎಂಥ ಅವಸ್ಥೆ!' ಎಂದು ನಿಟ್ಟುಸಿರು ಬಿಟ್ಟು ಪುಸ್ತಕವನ್ನು ಮುಚ್ಚಿದ. ಜೀವನವೇ ಹಾಗೆ. ನೋವು, ಅಪಾರವಾದ ನೋವು. ಸಂಕಟ, ಸಹಿಸಲಾರದ ಶಿಕ್ಷೆ. ತಪ್ಪಿಗೂ ಶಿಕ್ಷೆ. ತಪ್ಪಿಲ್ಲದಿದ್ದರೂ ಶಿಕ್ಷೆ. ತಪ್ಪಿಗೂ ಶಿಕ್ಷೆಗೂ ಯಾವ ಸಂಬಂಧವೂ ಇಲ್ಲ ಎನ್ನುವಂಥ ಶಿಕ್ಷೆ. ತಪ್ಪು ಮಾಡಿದವರು ಇತರರು; ಶಿಕ್ಷೆ ದೇವಿ ಸೀತೆಗೆ. ಇದು ಮನುಷ್ಯ ಜೀವನ. ಇದು ಹೇಗೆ? ಇದು ಏಕೆ ಎಂದು ಶೀನಪ್ಪ ಬಹಳ ಸಲ ಯೋಚಿಸಿದ್ದ. ಯೋಚನೆ ಮಾಡಿದಂತೆಲ್ಲ ಮನಸ್ಸಿನ ದುಗುಡ ಹೆಚ್ಚುತ್ತದೆ; ಗಲಿಬಿಲಿ ಗೊಂದಲವಾಗುತ್ತದೆ. ಗೊಂದಲದಲ್ಲಿ ಮನಸ್ಸಿನ ಮುಂದೆ ದೊಡ್ಡ ಅಡ್ಡಗೋಡೆ ಬಂದು ನಿಲ್ಲುತ್ತದೆ. ಅದರಾಚೆ ಕಣ್ಣು ಕಾಣಿಸದು. ಅದನ್ನು ದಾಟಿ ಹೋಗಲು ಕಾಲಿಗೆ ತ್ರಾಣ ಸಾಲದು. 'ಯತೋ ವಾಚೋ ನಿವರ್ತಂತೇ' ಎಂದು ಪರಬ್ರಹ್ಮನನ್ನು ಕುರಿತು ಹೇಳುತ್ತಾರೆ ಆದರೆ ಮನುಷ್ಯ ಜೀವನದ ಈ ಸಮಸ್ಯೆಯು ಗಹನತೆ ಅದಕ್ಕಿಂತ ಕಡಿಮೆಯೇ?

ಇದು ಯಾರ ಲೀಲೆ? ಈ ಲೀಲೆ ಏಕೆ?

ಉತ್ತರವೆಲ್ಲಿ?—ಉತ್ತರವಿಲ್ಲ.

ದೀರ್ಘವಾಗಿ ಒಮ್ಮೆ ನಿಟ್ಟುಸಿರು ಬಿಟ್ಟು ಶೀನಪ್ಪ ತನ್ನ ಕಣ್ಣುಗಳನ್ನು ಒರಸಿಕೊಂಡ. ಕಂದೀಲನ್ನು ಹಿಡಿದು ಒಳಗೆ ದೇವರ ಮನೆಯೊಳಕ್ಕೆ ನಡೆದ. ದೇವರ ಮುಂದಿನ ಹಣತೆ ಇನ್ನೂ ಉರಿಯುತ್ತಿತ್ತು. ಬತ್ತಿ ಸಣ್ಣದಾಗುತ್ತ ಬರುತ್ತಿತ್ತು. ಎಣ್ಣೆ ಹಣತೆಯ ತಳಕ್ಕೆ ಅಂಟಿತ್ತು. ಸಂಜೆ ಹಚ್ಚಿ ಇಟ್ಟಿದ್ದ ಗಂಧದ ಕಡ್ಡಿಯ ಸುವಾಸನೆ, ಧೂಪದ ವಾಸನೆ ಇನ್ನೂ ದೇವರ ಕೋಣೆಯನ್ನು ತುಂಬಿತ್ತು. ಹೂವುಗಳಿಂದ ಅಲಂಕೃತವಾದ ಶ್ರೀಕೃಷ್ಣನ ವಿಗ್ರಹ ಬೆಳಕಿನಲ್ಲಿ ಥಳಥಳಿಸುತ್ತಿತ್ತು. ಕಂದೀಲನ್ನು ಒಂದು ಕಡೆ ಇರಿಸಿ, ಕೆಳಗೆ ಕುಳಿತು ಶೀನಪ್ಪ ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕಂದೀಲನ್ನು ಎತ್ತಿ ಹಿಡಿದು ಹೊರಡಲು ಸಿದ್ಧನಾದ.

ನಿದ್ದೆಗೆ ಕಣ್ಣು ಎಳೆಯ ತೊಡಗಿತ್ತು. ಆಗಲೇ ಬಹಳ ರಾತ್ರಿಯಾಗಿರ

ಬೇಕು. ಇನ್ನು ಮಲಗುವುದು ಎಂದುಕೊಂಡ.

ಇಷ್ಟು ಹೊತ್ತಿಗಾಗಲೇ ಮಳೆರಾಯನ ಸೈನ್ಯ ಕೊಂಚ ವಿಶ್ರಾಂತಿ ತೆಗೆದು ಕೊಂಡಿತ್ತು. ಮಳೆ ಸಣ್ಣ ಸಣ್ಣ ಹನಿಗಳಾಗಿ ಪಟಪಟಿಸುತ್ತಿತ್ತಲ್ಲದೆ ಮುಸಲ ಧಾರೆಯಾಗಿ ಅಲ್ಲ. ಗುಡುಗಿನ ಮೊಳಗು ನಿಂತು ಸುತ್ತಲೂ ನಿಶ್ಶಬ್ದ ಭಯಂ ಕರವಾಗಿ ಮರ್ಮರಿಸುತ್ತಿತ್ತು. ಮಿಂಚು ಮಾತ್ರ ಆಗಾಗ ಚಮಕಿಸಿ ಕಣ್ಮರೆ ಯಾಗುತ್ತಿತ್ತು. ಗಾಳಿಯೂ ಸ್ತಬ್ಧವಾಗಿ ಸುತ್ತಲಿನ ಜಗತ್ತೆಲ್ಲ ಉಸಿರು ಬಿಗಿ ಹಿಡಿದು ನಿಂತಂತೆ ಕಂಡಿತು. ಕಂದೀಲಿನ ದೀಪದ ಕುಡಿ ನಿಶ್ಚಲವಾಗಿ ನಿಂತಿತ್ತು. ದೇವರ ಮುಂದಿನ ಹಣತೆಯ ದೀಪ ಸ್ಥಿರವಾಗಿ ಉರಿ ಯುತ್ತಿತ್ತು.

ಅದೇನು ಶಬ್ದ ?

ಕತ್ತಲಿನ ಕರಾಳ ಹೃದಯವನ್ನು ಭೇದಿಸಿಕೊಂಡು ಆರ್ತನಾದವೊಂದು ನಿಶ್ಶಬ್ದವಾದ ಗಾಳಿಯ ಹಗಲೇರಿ ಬಂದು ಚೂರಿಯಂತೆ ಶೀನಪ್ಪನ ಹೃದಯ ವನ್ನು ಇರಿಯಿತು.

ಎಲ್ಲಿಂದ ಬಂತು ಈ ಚೀತ್ಕಾರ ? ಅಲ್ಲೇ ಎಲ್ಲೋ ಹತ್ತಿರ. ಬಹಳ ಹತ್ತಿರ. ಪಕ್ಕದ ಮನೆಯಿಂದಲೇ ? ಇಷ್ಟು ಹೊತ್ತಿಗೆ ಅಲ್ಲಿ ಯಾರು ಚೀರು ತ್ತಾರೆ ? ಅದು ಅಸಂಭವ. ಹಾಗಾದರೆ ? ಅದು ಕೇಳಿಸಿದ್ದೂ ಕೂಡಾ ಬಯಲ ಕಡೆಯಿಂದ.

ಕೈಲಿ ಕಂದೀಲನ್ನು ಹಾಗೇ ಹಿಡಿದು ನಿಂತು ಶೀನಪ್ಪ ಆಲಿಸಿದ. ಸೂರಿ ನಿಂದ ಬೀಳುವ ಮಳೆ ಹನಿಗಳ ತಟ ಪಟ ಸದ್ದಲ್ಲದೆ ಬೇರೆ ಏನೂ ಕೇಳಿಸದು. 'ಸರಿ, ನನಗೆಲ್ಲೋ ಭ್ರಮೆ. ಇಂಥ ಅಪರಾತ್ರಿ ಹೊತ್ತು ಮನುಷ್ಯ ಮಾತ್ರ ರಾದವರು ಹೊರಗೆ ಹೊರಡುವುದೆಂದರೇನು ? ಯಾವ ಪ್ರೇತವೋ ಪಿಶಾಚವೋ ಇದ್ದರೂ ಇದ್ದೀತು' ಎಂದು ಅನ್ನಿಸಿ ಶೀನಪ್ಪನ ಮೈ ಕೊಂಚ ನಡುಗಿತು— ಸಹಜವಾಗಿ. ಆದರೆ ಭೂತ ಪ್ರೇತಗಳಿಗೂ ಅವನು ಅಷ್ಟು ಸೊಪ್ಪು ಹಾಕು ವವನಲ್ಲ. ಬೆದರುವವರನ್ನು ಬೆದರಿಸುವುದಲ್ಲದೇ ಪ್ರೇತಗಳು ಶ್ರದ್ಧಾವಂತ ದೇವ ಭಕ್ತನನ್ನು ಸೋಂಕಲಾರವೆಂಬುದು ಅವನ ನಂಬಿಕೆ.

ಸರಿ, ಇನ್ನೇನು ಹೋಗಿ ಮಲಗುವುದೇ.

ಕಂದೀಲು ಹಿಡಿದು ಹೊರಗೆ ಬಂದು ಹಾಸಿಗೆಯ ಹತ್ತಿರ ಹೋಗುತ್ತಿದ್ದಾಗ ಮತ್ತೆ ಅದೇ ಕೂಗು, ಎದೆ ಇರಿಯುವ ಆರ್ತಧ್ವನಿ. 'ಅಯ್ಯೋ' ಎಂದು ಯಾರೋ ಕಷ್ಟಪಟ್ಟು ಕೂಗುತ್ತಿದ್ದ ಹಾಗೆ; ಗದ್ಗದ ಕಂಠದಿಂದ ಮಾತು ಕಷ್ಟದಿಂದ ತೆವಳಿಕೊಂಡು ಬಂದ ಹಾಗೆ. ಯಾರೋ ಮನುಷ್ಯರೇ ಇರಬೇಕು. ಆ ಧ್ವನಿ, ಆ ಆರ್ತ ನಿನಾದ ಮನುಷ್ಯರದು ಎಂದು ಶೀನಪ್ಪನ ಅಂತರಾತ್ಮ ಹೇಳಿತು. ದಾರುಣ ಯಾತನೆಯ ಆ ನಿಸ್ಸಹಾಯ ಚೀತ್ಕಾರವನ್ನು ಕೇಳಿ ಶೀನಪ್ಪನ ಹೃದಯವನ್ನು ಹಿಂಡಿದಂತಾಯಿತು. ಕಾಣದ ಯಾವುದೋ ಕೈ ತನ್ನ ಕರುಳನ್ನೇ ಕಿತ್ತು ತೆಗೆಯುವಂತೆ ಆಯಿತು.

ಸರಿ, ಅದು ಮನುಷ್ಯರ ಧ್ವನಿಯೇ. ಆಗಲಿ. ಆದರೆ ಅದು ಎಲ್ಲಿಂದ ಬರುತ್ತದೆ? ತನ್ನ ಮನೆಯ ಪಾಗಾರದಾಚೆಯಿಂದ, ತೆಂಗಿನ ತೋಟದ ಪಶ್ಚಿಮದ ಮೂಲೆಯಿಂದ ಎಂದು ಅವನಿಗೆ ಅನ್ನಿಸಿತು.

'ತಾನು ಈಗ ಏನು ಮಾಡಬೇಕು. ಕತ್ತಲು. ಸಣ್ಣ ಮಳೆ ಬೇರೆ. ಥಂಡಿಗಾಳಿ. ಹೊರಗೆ ಹೋಗಿ ನೋಡಲೋ ಬೇಡವೋ? ನೋಡಬೇಕೆ? ಆ ಆರ್ತಧ್ವನಿಯನ್ನು ಮರೆತು ಮಲಗಲು ಸಾಧ್ಯವೆ?

ಮತ್ತೆ ಕಿವಿಕೊಟ್ಟು ಆಲಿಸಿದ, ಸದ್ದಿಲ್ಲ. ಅದೇ ಮಳೆ ಹನಿಯ ಪಟಪಟ. ತೆಂಗಿನ ಗರಿಗಳ ಮರ್ಮರ. ಕಪ್ಪೆಯ ವಟವಟ. ಏನು ಮಾಡಲಿ? ಹೊರಗೆ ಹೋಗಿ ನೋಡಿ ಬಿಡೋಣವೆ? ಇರಲಿ, ಇನ್ನೊಂದು ಸಲ ಆ ಕೂಗು ಕೇಳಿದರೆ ಖಂಡಿತ ತಲೆ ಬಿದ್ದರೂ ಸರಿಯೆ, ಭೂತ ನುಂಗಿದರೂ ಸರಿಯೆ, ಅದೇನೆಂದು ಪರೀಕ್ಷಿಸಿಯೇ ತೀರುತ್ತೇನೆಂದು ನಿಶ್ಚಯಿಸಿಕೊಂಡು ಚಾಪೆಯ ಮೇಲೆ ಹಾಸಿಗೆಯನ್ನು ಬಿಚ್ಚಿ, ಹಾಸುವ ಬಟ್ಟೆಯನ್ನು ಕೊಡವಿ ಮತ್ತೆ ಹಾಸಿ ಮಗ್ಗುಲು ಹಾಸಿಗೆಯನ್ನು ಒದರಿ ಇಟ್ಟು, ದಿಂಬನ್ನು ಸರಿಪಡಿಸಿದ. ಇನ್ನೇನು ಮಲಗುವುದೋ?

ಮತ್ತೆ ಆ ಕೂಗು ಕೇಳಿಸಲಿಲ್ಲ, ಅದು ಕೇಳಿದ್ದು ಖಂಡಿತವಾಗಿಯೂ ಭ್ರಮೆ ಅಲ್ಲ. ಈಗ ಏನು ಮಾಡಬೇಕು? ಆ ಆಕ್ರಂದನವನ್ನು ಮರೆಯುವುದು ಹೇಗೆ? ಶೀನಪ್ಪನ ಹೃದಯ ಇನ್ನೂ ಡವಗುಟ್ಟುತ್ತಿತ್ತು. ಏನೋ ಅಶುಭವಾದುದರ ಪೂರ್ವ ಸೂಚನೆಯಂತೆ ಮನಸ್ಸನ್ನು ಮಂಕು ಕವಿದಿತ್ತು. ಯಾವ

ನಿರ್ಧಾರವನ್ನೂ ಮಾಡಲು ಸಾಧ್ಯವಾಗದಂತೆ ಭಯ, ಕರುಣ, ತಲ್ಲಣಗಳ ತುಮುಲದಿಂದ ಮನಸ್ಸು ಗೊಂದಲಗೊಂಡಿತ್ತು. ಏಕೋ ಏನೋ, ಈ ಮೂಹೂರ್ತದಿಂದಲೇ ತನ್ನ ನಿಜ ಜೀವನದ ಆರಂಭ ಎಂದು ಶೀನಪ್ಪನಿಗೆ ಅನ್ನಿಸತೊಡಗಿತ್ತು.

ಸಿದ್ಧವಾದ ಹಾಸಿಗೆಯ ಹತ್ತಿರದಲ್ಲೇ ಕಿವಿ ನಿಮಿರಿ ನಿಂತು ಆಲಿಸುತ್ತಿದ್ದ ಮಂತ್ರ ಮುಗ್ಧವಾದ ಹಾವಿನಂತೆ. ಕೂಗು ಮತ್ತೆ ಕೇಳಿಸಲಿಲ್ಲ. ಆದರೆ ಕೇಳಿಸಲೇ ಬೇಕು ಅಂತ ಅವನ ಮನಸ್ಸಿನೊಳಗೆ ಯಾವುದೋ ಒಡನುಡಿ ಯುತ್ತಿತ್ತು.

ಒಂದು ನಿಮಿಷ, ಎರಡು ನಿಮಿಷ, ಐದು ನಿಮಿಷ. ನಿಮಿಷವೊಂದು ಯುಗ. ಶೀನಪ್ಪನ ಉಸಿರು ಭಾರವಾಗಿ, ದೀರ್ಘವಾಗಿ ಅತಿ ಕಷ್ಟದಿಂದೆಂಬಂತೆ ಹೊರ ಹೊಮ್ಮುತ್ತಿತ್ತು. ಡಮುಡಮುಡಮು ಎಂದು ಢೋಲು ಬಾರಿಸಿದಂತೆ ಎದೆಯ ಸದ್ದು.

ಹಾ, ಕೊನೆಗೂ ಅದು ಏನದು ? ಮತ್ತೆ ಅದೇ ಎದೆಯಿರಿಯುವ ಆರ್ತ ನಾದ. ಆದರೆ ಈಗ ಇನ್ನೂ ಅಸ್ಪಷ್ಟ, ಅಸ್ಫುಟ. ಕೇಳಿತೋ ಕೇಳಿಸಲಿಲ್ಲವೋ ಎಂಬ ಹಾಗೆ. ದುಃಖ ನಿರ್ಭರವಾದ ಗೀತದ ಆಲಾಪನೆಯೆಲ್ಲ ಮುಗಿದು ಅದರ ಪ್ರತಿಧ್ವನಿ ಗಾಳಿಯ ಮೈಯನ್ನು ಮೆಲ್ಲನೆ ಬಹುಮೆಲ್ಲನೆ ಸವರಿ ಹೋದಂತೆ.

ಹೆಬ್ಬಾಗಿಲ ಹತ್ತಿರವೇ–ಸಂದೇಹವಿಲ್ಲ. 'ಅಯ್ಯೋ, ಸ್ವಾಮಿ' ಎಂದು ನಿಸ್ಸತ್ವವಾದ, ಬೆಂಡಾದ, ಹೀರಿಬಿಟ್ಟಂಥ ಸ್ವರ.

ಆಮೇಲೆ ಯಾರೋ ಮೆಲ್ಲನೆ ಬಹುಮೆಲ್ಲನೆ ತಟ್ಟಲೋ ಬೇಡವೋ ಎಂದು ಬಾಗಿಲನ್ನು ತಟ್ಟಿದ ಹಾಗೆ.

ಒಂದು ಕ್ಷಣ ನಿಶ್ಶಬ್ದ. ಮತ್ತೆ ಇದೇ ಕೊನೆಯದು, ಮತ್ತೆ ಇದು ಕೇಳಿಸದು ಎಂಬಂತೆ ದೀರ್ಘವಾದ, ಹೃದಯ ವಿದ್ರಾವಕವಾದ ಆರ್ತಸ್ವರ ವೊಂದು ಗಾಳಿಯನ್ನು ಬಗೆದು ಮುಗಿಯಿತು.

ಮರುಕ್ಷಣವೇ ಯಾರೋ ಯಾವುದೋ ಧೊಪ್ಪೆಂದು ಬಿದ್ದ ಸದ್ದು. ಬಳಿಕ ಜೀವಸಂಕಟದಿಂದ ನರಳುವ ಕೊನೆಯಿರದ ಮುಲುಕು

ಇಷ್ಟೆಲ್ಲ ಒಂದು ಕ್ಷಣದಲ್ಲಿ ನಡೆದು ಮುಗಿಯಿತು. ಕ್ಷಣ ಕ್ಷಣಕ್ಕೂ ಶೀನಪ್ಪನ ಎದೆಯ ಮಿಡಿತ ಹೆಚ್ಚುತ್ತಿತ್ತು. ಧೊಪ್ಪೆಂದು ಬಿದ್ದ ಸದ್ದು ಕೇಳಿ ದೊಡನೆ ಲಾಟೀನನ್ನು ಹಿಡಿದು ಹೆಬ್ಬಾಗಿಲಿನ ಕಡೆಗೆ ಓಡಿದ. ಮೈಯೆಲ್ಲ ನಡುಗುತ್ತಿತ್ತು. ಹೆಬ್ಬಾಗಿಲಿನ ಚಿಲಕ ತೆಗೆಯಲು ಇಷ್ಟು ಕಷ್ಟವೇ? ಕೈ ನಡುಗುತ್ತಿತ್ತು. ಥಂಡಿ ಗಾಳಿಯಲ್ಲೂ ಅವನ ಮುಖ ಬೆವತಿತ್ತು. ಎಷ್ಟು ಎಳೆದರೂ ಚಿಲಕ ತೆಗೆಯಲು ಬರಬಾರದೆ? ಒಂದು ನಿಮಿಷ ತಡವಾದರೆ ಹೊರ ಗಿದ್ದ ಆ.... ಆ.... ವ್ಯಕ್ತಿಯ ಗತಿ ಏನು? ಅದು ಪ್ರಾಣ ಸಂಕಟದ ಕೂಗು ಎಂಬುದರಲ್ಲಿ ಸಂದೇಹವಿಲ್ಲ.

ಅಂತೂ ಚಿಲಕ ಜಾರಿತು. ಹಳೆಯ ಬಾಗಿಲು ಕಿರಕಿರ ಎಂದು ತೆರೆ ಯಿತು.

ಹೊರಗಿನ ಗಾಳಿ ರೊಯ್ಯೆಂದು ಬೀಸಿ ಬಂದ ಆರ್ಭಟಕ್ಕೆ ಕಂದೀಲಿನ ಬೆಳಕಿನ ಕುಡಿ ಕ್ಷಣಮಾತ್ರದಲ್ಲಿ ಧಿಗ್ಗೆಂದು ನಿಮಿರಿ ಝುಗ್ಗನೆ ಆರಿ ಹೋಯಿತು.

ಕತ್ತಲು, ದಪ್ಪದಪ್ಪವಾದ ದಟ್ಟವಾದ ಕಾಡಿಗೆಗಲ್ಲಿನಂಥ ಕತ್ತಲು. ಹೊರಗೆ ಏನೂ ಕಾಣಿಸದು. ಬಾಗಿಲ ಹೊರಗೆ ಓಣಿಯ ತನಕ ನಾಲ್ಕು ಮೆಟ್ಟಲುಗಳ ಮೇಲಿಂದ ಮೆಲ್ಲನೆ ಯಾರೋ ಉಸಿರಾಡಿಸುವ, ಅಸ್ಪಷ್ಟವಾಗಿ ಯಾವದೋ ಮನುಷ್ಯ ಕಂಠ ನರಳುವ ಸದ್ದು.

ಆಕಾಶದಲ್ಲಿ ಮೋಡ ಮತ್ತೆ ದಟ್ಟಯಿಸುತ್ತಿತ್ತು. ಓ ಅಲ್ಲಿ ದೂರದಲ್ಲಿ ಮಿನುಗುತ್ತಿದ್ದ ಆ ಏಕಮಾತ್ರ ನಕ್ಷತ್ರವೂ ಕೈ ಚಾಚಿ ಬರುತ್ತಿದ್ದ ಕಾರ್ಮೋಡದ ಬಾಯಿಗೆ ತುತ್ತಾಯಿತು.

ಒಂದು ನಿಮಿಷ ಶೀನಪ್ಪ ಇಹಲೋಕವನ್ನೇ ಮರೆತವನಂತೆ ಶೂನ್ಯ ದೃಷ್ಟಿಯಿಂದ ಹೊರಗಿನ ಅಂಧಕಾರ ಸಮುದ್ರವನ್ನು ನೋಡುತ್ತ ನಿಂತಿದ್ದ.

ಮಿಂಚು! ಒಮ್ಮೆ ಮಿಂಚು ಮಿಂಚಿ ಸುತ್ತಮುತ್ತನ್ನೆಲ್ಲ ಬೆಳಗಿತು. ಕಣ್ಣು ಕತ್ತಲು ಬರುವಂಥ ಭೀಕರ ದೃಶ್ಯವೊಂದು ಶೀನಪ್ಪನ ಕಣ್ಣೆರಿದು ಮಾಯವಾಯಿತು. ಒಂದು ಮನುಷ್ಯ ದೇಹ–ಸ್ತ್ರೀ ದೇಹವೇ? – ಮುದುರಿ

ಮುದ್ದೆಯಾಗಿ ಎರಡನೆಯ ಮೆಟ್ಟಲಿನ ಮೇಲೆ ತಲೆ ಕೆಳಗಾಗಿ ಬಿದ್ದಿತ್ತು. ಬಟ್ಟೆ ನೆನೆದು ಒದ್ದೆಯಾಗಿ ಮೈಗೆ ಬಿಗಿಯಾಗಿ ಅಂಟಿಕೊಂಡಿತ್ತು. ಮೈ ಮೇಲಿನ ಬಟ್ಟೆ—ಅದು ಸೀರೆಯೇ ಹೌದು—ಅಸ್ತವ್ಯಸ್ತವಾಗಿತ್ತು. ಆದರೆ ಯಾವುದೂ ಸ್ಪಷ್ಟವಾಗಲಿಲ್ಲ.

ಹೌದು, ದೀಪ ಹಚ್ಚಿ ತರಬೇಕು.

ಮತ್ತೆ ಆರಿ ಹೋದ ಕಂದೀಲನ್ನು ಹಿಡಿದು ತಡವರಿಸುತ್ತ ಶೀನಪ್ಪ ಹೆಬ್ಬಾಗಿಲನ್ನು ದಾಟಿ ಅಂಗಳದ ನೀರಲ್ಲಿ ನಡೆದು ದೇವರ ಕೋಣೆಗೆ ಹೋದ. ಒಳ್ಳೆಯ ಅದೃಷ್ಟ. ದೀಪವಿನ್ನೂ ಆರಿರಲಿಲ್ಲ. ಆರಿ ಹೋಗುವಂತಿತ್ತು ಅಷ್ಟೆ. ಬೇಗ ಬೇಗನೆ ಒಂದು ಕಡ್ಡಿಯನ್ನು ಮುರಿದು ಬೆಂಕಿ ಹೊತ್ತಿಸಿ ಕೊಂಡು ಕಂದೀಲನ್ನು ಹಚ್ಚಿದ. ಹಾಗೇ ಕಂದೀಲನ್ನು ಅಲ್ಲಾಡಿಸಿ ನೋಡಿದ ಎಣ್ಣೆ ಕಡಿಮೆ ಇತ್ತು-ಆದರೆ ಇನ್ನೂ ಎಣ್ಣೆ ತೀರಿರಲಿಲ್ಲ. ದೇವರು ಎಷ್ಟೇ ಗೋಳು ಹುಯ್ದುಕೊಂಡರೂ ಸಂಪೂರ್ಣವಾಗಿ ಕೈ ಬಿಡುವುದಿಲ್ಲ ಎಂದು ಕೊಳ್ಳುತ್ತ ಶೀನಪ್ಪ ಕಂದೀಲನ್ನು ಹಿಡಿದು ಮತ್ತೆ ಹೆಬ್ಬಾಗಿಲ ಹೊರಗೆ ಬಂದ.

ಹೌದು, ಅದು ಹೆಂಗಸಿನ ಶರೀರ. ಹೆಂಗಸು. ಯುಗ ಯುಗಗಳಿಂದ ಮನಸ್ಸಿನಲ್ಲಿ ಬೀಡು ಬಿಟ್ಟು ಮನಸ್ಸಿನ ತಳತಳವನ್ನೂ ಆಳುತ್ತಿದ್ದ ವಿಧಿನಿಷೇಧಗಳೆಲ್ಲ ರಾಕ್ಷಸಾಕಾರದಿಂದ ಅವನ ಕಣ್ಣ ಮುಂದೆ ಬಂದು ನಿಂತುವು. ತಾನು ಗಂಡಸು, ಅದು ಆ ಶರೀರ ಹೆಂಗಸಿನದು—ಇಷ್ಟೇ ಸಾಕಲ್ಲ, ಜಗತ್ತಿನ ಎಲ್ಲ ಕೆಟ್ಟ ನಾಲಗೆಗಳೂ ಗಂಟೆಗೆ ನೂರು ಮೈಲಿ ವೇಗದಿಂದ ಸುತ್ತಲು; ಲೋಕಾಪವಾದ ಭೀತಿ. ಈಗ ತಾನು ಏನು ಮಾಡಬೇಕು ?

ನಟ್ಟಿರುಳಿನ ಈ ಅಪರಾತ್ರಿಯಲ್ಲಿ ಯಾವ ಹೆಂಗಸನ್ನು ಹುಡುಕಿ ತಂದು ಈ ಹೆಂಗಸಿನ ಯೋಗಕ್ಷೇಮ ವಿಚಾರಿಸಲು ಹೇಳಬೇಕು? ಅದೂ ಈ ಪ್ರಾಣೋತ್ಕಟಾವಸ್ಥೆಯಲ್ಲಿ ?

ಕಂದೀಲಿನ ದೀಪವನ್ನು ಮತ್ತೊಮ್ಮೆ ದೊಡ್ಡದು ಮಾಡಿ ನೋಡಿದ. ದಾರುಣವಾದ ಅನಂತ ಯಾತನೆಯ ಮುದ್ರೆ ಮಾಡಿದಂಥ ಮುಖ. ಸೋತು ಬೆಂಡಾಗಿ ನಿಷ್ಪ್ರಭವಾಗಿದ್ದರೂ ಜಗತ್ತಿನ ಕಾರುಣ್ಯವನ್ನೆಲ್ಲ ಉಕ್ಕಿಸುವಂಥ

ಕೋಮಲ ಮುಖ. ಬಾಯಿ ಕೊಂಚ ತೆರೆದಿತ್ತು. ಕಣ್ಣು ಮುಚ್ಚಿತ್ತು. ತಲೆ ತುಂಬ ಬೆಳೆದು ಕಾಡಿಗೆಯಷ್ಟು ಕಪ್ಪಾಗಿದ್ದ ಕೂದಲ ರಾಶಿ ಬಿಚ್ಚಿ ಹೋಗಿತ್ತು. ಬಿಚ್ಚಿದ ಕೂದಲಿನಿಂದ ನೀರು ತೊಟ್ಟಿಕ್ಕುತ್ತಿತ್ತು. ಮುಖ ಒದ್ದೆಯಾಗಿತ್ತು. ಮೈಯೆಲ್ಲ ಒದ್ದೆ. ಅವಳು ಬಿದ್ದ ಕಡೆಯೇ ಮೇಲೆ ಸೂರಿನಿಂದ ನೀರು ತೊಟ್ಟಿಕ್ಕುತ್ತಿತ್ತು. ತೊಟ್ಟ ವಸ್ತ್ರ ಅಸ್ತವ್ಯಸ್ತವಾಗಿತ್ತು. ಎದೆಯ ಸೆರಗು ಜಾರಿತ್ತು.

ವೃದ್ಧೆಯಲ್ಲ—ತರುಣಿ. ವಯಸ್ಸು ಇಪ್ಪತ್ತೈದು ; ಮೂವತ್ತಕ್ಕಿಂತ ಖಂಡಿತ ಹೆಚ್ಚಲ್ಲ.

ಇದೇನಿದು ? ನರಳುವ ಸದ್ದೂ ಇಲ್ಲ. ಅಯ್ಯೋ ! ಹೀಗೆ ನೋಡುತ್ತ ನಿಂತೆನಲ್ಲ ಎಂದು ಶೀನಪ್ಪ ತನ್ನನ್ನು ತಾನೇ ಶಪಿಸಿಕೊಂಡು ಮುಂದಿನ ನಿರ್ಧಾರವನ್ನು ಕ್ಷಣಾರ್ಧದಲ್ಲಿ ಮಾಡಿ ಬಿಟ್ಟ. ಮನುಷ್ಯ ಮನುಷ್ಯನಿಗೆ ಆಗಬೇಕು. ಪ್ರಾಣೋತ್ಕ್ರಮಣ ಕಾಲದಲ್ಲೂ ಆಗದೇ ಹೋದರೆ ಇನ್ನು ಯಾವಾಗ ? ಈ ಮನುಷ್ಯ ಶರೀರವನ್ನು ಅದು ಹೆಣ್ಣೋ ಗಂಡೋ—ಕಾಪಾಡುವುದು ಮನುಷ್ಯನಾದ ತನ್ನ ಕರ್ತವ್ಯ ಎಂದು ಬಗ್ಗಿ ಆಕೆಯ ಮೂಗಿನ ಹತ್ತಿರ ಕೈಯಿಟ್ಟು ನೋಡಿದ. ಶ್ವಾಸವಿನ್ನೂ ಆಡುತ್ತಿತ್ತು. ಇನ್ನೂ ಆಶೆಯಿತ್ತು. ಬಗ್ಗಿ ಹಾಗೆ ನೋಡಿದಾಗ ಅವನ ಮನಸ್ಸಿನ ಮೇಲೆ ಹಠಾತ್ತನೆ ಇನ್ನೊಂದು ಸಂಗತಿಯ ಅರಿವು ಸಿಡಿಲಿನಂತೆ ಬಡಿಯಿತು.

ಅವಳು ಗರ್ಭಿಣಿ ! ಆರೋ ಏಳೋ ತಿಂಗಳು ಇರಬೇಕು.

ಸೀತಾವನವಾಸ !

ಶೀನಪ್ಪನ ಕಣ್ಣು ತುಂಬಿ ಬಂದಿತು. ಮತ್ತೆ ಒಂದು ಕ್ಷಣವೂ ಯೋಚಿಸದೆ ಬಾಗಿ ಆ ದೇಹವನ್ನು ಹೂವಿನಂತೆ ಬಾಚಿ ಎತ್ತಿ ಹೆಗಲಮೇಲಿಟ್ಟುಕೊಂಡು ಒಂದು ಕೈಲಿ ಕಂದೀಲನ್ನು ಹಿಡಿದುಕೊಂಡು ಹೆಬ್ಬಾಗಿಲಿನೊಳಕ್ಕೆ ಬಂದು ಬಾಗಿಲ ಚಿಲಕವನ್ನು ಹಾಕಿಕೊಂಡ.

ಬಾಗಿಲು ಮುಚ್ಚುತ್ತಿದ್ದಂತೆಯೇ ಬಿರುಗಾಳಿ ಭೋರೆಂದು ಕೂಗಿ ರೇಗಿ ಮಸಗಿತು. ಛಟ ಛಟ ಛಟಾ ಎಂದು ಹತ್ತಿರದಲ್ಲೇ ಎಲ್ಲೋ ಸಿಡಿಲು ಸಿಡಿದು ನೆಲ ನಡುಗಿತು. ಗುಡುಗಿನ ಮಾರಿ ಢೋಲು ಮೊಳಗಿ ಮೊಳಗಿ ಮಾರ್ದನಿಯಿತು. ದಟ್ಟಯಿಸಿದ ಮೋಡದ ಕಟ್ಟೆಯೊಡೆದು ಮಳೆಯ ಪ್ರವಾಹ ಬುಸು

ಗುಟ್ಟಿ ಭೋರ್ಗರೆಯಿತು. ಮಿಂಚಿನ ಕೂರಲಗು ಕತ್ತಲಿನ ಹೊಟ್ಟೆಯನ್ನು ಬಗೆ ಬಗೆದು ಸುಗಿಯಿತು.

ಮಳೆ, ಮಳೆ, ಮಳೆ. ಆಕಾಶ ಪಾತಾಳಗಳನ್ನು ಒಂದು ಮಾಡುವ ಮಳೆ. ಈ ಮಳೆಗೆ ಬಿಡುವೇ ಇಲ್ಲವೇ?

## ೨

‘ಮನೆಯಲ್ಲಿ ಯಾರಾದರೂ ಹೆಂಗಸರು ಇದ್ದಿದ್ದರೆ’ ಎಂದು ಈಗ ಮೊತ್ತಮೊದಲನೆಯ ಬಾರಿಗೆ ಶೀನಪ್ಪನಿಗೆ ಅನ್ನಿಸಿತು. ಪ್ರಾಣೋತ್ಕ್ರಮಣ ಸ್ಥಿತಿಯಲ್ಲಿರುವ ಆ ಸ್ತ್ರೀ ಶರೀರವನ್ನು ಮನೆಯೊಳಗಂತೂ ತಂದುದಾಯಿತು. ಪಡಸಾಲೆಯಲ್ಲಿ ಒಂದು ಚಾಪೆಯನ್ನು ಹಾಸಿ ದಿಂಬನ್ನಿಟ್ಟು ಮಲಗಿಸಿದುದಾಯಿತು. ಮುಂದೇನು ಮಾಡಬೇಕು? ಯಾವ ರೀತಿ ಉಪಚರಿಸಿದರೆ ಹೋಗುತ್ತಲಿರುವ ಜೀವ ದೃಢವಾಗಿ ನಿಂತೀತು? ಯಾವುದೊಂದೂ ಸೂಚಿಸದೆ ಶೀನಪ್ಪ ಅರೆಕ್ಷಣ ನಿರುಪಾಯನಾಗಿ ನಿಂತ; ಹತ್ತು ಸಲ ತಲೆ ಕೆರೆದುಕೊಂಡ. ಆದರೆ ಕೂಡಲೇ ಏನು ಮಾಡಬೇಕೆಂದು ಮಾತ್ರ ಹೊಳೆಯಲಿಲ್ಲ.

ಮೈಯೆಲ್ಲ ಒದ್ದೆ. ಬಟ್ಟೆ ಮೈಗಂಟಿಕೊಂಡಿದೆ ಚಳಿ. ಆ ಬಟ್ಟೆಯನ್ನು ಕಳೆದು ಬೇರೆ ಬಟ್ಟೆ ತೊಡಿಸಬೇಕು. ಮೈ ಶಾಖವಾಗುವ ಹಾಗೆ ಮಾಡಬೇಕು. ಆದರೆ ಅದು ಹೆಂಗಸಿನ ಮೈ; ಮುಟ್ಟುವುದು ಹೇಗೆ? ‘ಅಯ್ಯೋ ಯಾರಾದರೊಬ್ಬ ಹೆಂಗಸು ಹತ್ತಿರವಿದ್ದಿದ್ದರೆ’ ಎಂದು ಮತ್ತೆ ನಿರುಪಾಯನಾಗಿ ನಿಟ್ಟುಸಿರು ಬಿಟ್ಟ.

ಆ ಹೊತ್ತಿಗೆ ಇನ್ನೊಂದು ಯೋಚನೆ ಹಠಾತ್ತಾಗಿ ಮನಸ್ಸಿನೊಳಗೆ ನುಗ್ಗಿ ಬಂತು. ‘ಇವಳು ಊಟ ಮಾಡಿದ್ದು ಯಾವಾಗಲೋ? ಹಸಿವೆಯಿಂದ ಎಷ್ಟು ಬಸವಳಿದಿದ್ದಾಳೋ? ಹಸಿವೆಯಲ್ಲಿಯೇ ಎಷ್ಟು ದೂರದಿಂದ ನಡೆದು ಬಂದಿದ್ದಾಳೊ?’ ಹೀಗೆ ಯೋಚಿಸುತ್ತಿರುವಾಗಲೇ ಆ ದೇಹ ಕೊಂಚ ಹಾಸಿಗೆಯಲ್ಲಿ ಅತ್ತಿತ್ತ ಅಲುಗುತ್ತಿತ್ತು. ಏನೋ ಮಾತನಾಡಲು ಅವಳು ಬಹಳ ಕಷ್ಟಪಡುತ್ತಿರುವಂತೆ ತೋರಿತು.

ಕೂಡಲೇ ಶೀನಪ್ಪನಿಗೆ ಬಾಲ್ಯದ ಯಾವುದೋ ಒಂದು ವಿದ್ಯಮಾನದ

ಸ್ಮರಣೆ ಹಠಾತ್ತಾಗಿ ಮನದಲ್ಲಿ ಸುಳಿಯಿತು. ಜೀವಸಂಕಟವಾಗುತ್ತಿದ್ದಾಗ ಅವರ ತಾಯಿ ಅಮೃತಪಾನಕವನ್ನು ಮಾಡಿಕೊಡುತ್ತಿದ್ದ ಜ್ಞಾಪಕ ಬಂದು ಅವನಿಗೆ ಬಹಳ ಸಂತೋಷವಾಯಿತು. ಏನಾದರೂ ಮಾಡಲು ಸಾಧ್ಯವಾಯಿತಲ್ಲ, ಎಂದು ಬಹಳ ತೃಪ್ತಿಯಿಂದ ನಿಟ್ಟುಸಿರು ಬಿಟ್ಟು ಅಡಿಗೆ ಮನೆಯೊಳಕ್ಕೆ ಓಡಿದ. ಸ್ವಲ್ಪ ಭತ್ತವನ್ನು ತಂದು ಅದನ್ನು ಚೆನ್ನಾಗಿ ಕುಟ್ಟಿ ನೀರು ಬೆರಸಿ ವಸ್ತ್ರದಲ್ಲಿ ಅದನ್ನು ಚೆನ್ನಾಗಿ ಶೋಧಿಸಿ, ಸ್ವಲ್ಪ ಗಟ್ಟಿ ಬೆಲ್ಲವನ್ನು ಅದಕ್ಕೆ ಬೆರಸಿ ತಂದು ಅವಳ ಬಾಯಿಗೆ ಹಿಡಿದ. ಮೊದಲು ಕೊಂಚ ಕೊಂಚವಾಗಿ ಹನಿ ಹನಿಯಾಗಿ ಅದನ್ನು ಚಪ್ಪರಿಸಿದ ತುಟಿಗಳ ವೇಗ ಕ್ರಮೇಣ ಹೆಚ್ಚಿತು. ಸ್ವಲ್ಪ ಪಾನಕ ಹೊಟ್ಟೆಗೆ ಹೋದ ಮೇಲೆ ಅವಳ ಕಣ್ಣುಗಳು ಅಗಲವಾಗಿ ತೆರೆದುವು. ಆ ಕಣ್ಣುಗಳ ಕಡೆ ದೃಷ್ಟಿ ಬೀರಿದಾಗ ಕೃತಜ್ಞತಾಭಾವನೆಯ ಮೂಕ ಪ್ರವಾಹವೊಂದು ಆ ಕಣ್ಣುಗಳಿಂದ ಹೊರಟು ಅವನ ಕಣ್ಣುಗಳನ್ನು ಬಂದು ಹಾಯ್ದುವು. ಅಗಲವಾದ ವಿಶಾಲವಾದ ಕಣ್ಣುಗಳು. ಅಬ್ಬಾ, ಅವು ಎಷ್ಟು ಚಂಚಲ. ಮನಸ್ಸಿನಲ್ಲಿ ಹುಟ್ಟುವ ಭಾವ ಭಾವಾಂತರಗಳ ಬಹು ಸೂಕ್ಷ್ಮ ಆಕಂಪನಗಳನ್ನೂ ಯಥಾವತ್ತಾಗಿ ಪ್ರತಿಬಿಂಬಿಸುವಂಥ ಕಣ್ಣುಗಳು. ಮಾಟವಾದ ಮುಖ ಕಷ್ಟದಿಂದಲೋ ದೇಹ ಶೋಷಣೆಯಿಂದಲೋ ಬಹಳ ಬಡವಾಗಿದ್ದರೂ ಕಾಂತಿಯುಕ್ತವಾದ ಮುಖ

ಒಂದು ಕ್ಷಣ ಹಾಗೆ ಎವೆಯಿಕ್ಕದೆ ಶೀನಪ್ಪ ದಿಗ್ಭ್ರಾಂತನಂತೆ ಆ ಕಣ್ಣುಗಳನ್ನು ನೋಡುತ್ತ ನಿಂತ ಬಹಳ ಹೊತ್ತು ಕಣ್ಣು ತೆರೆದಿದ್ದರಿಂದಲೋ, ಇಲ್ಲ ನಾಚಿಕೆಯಿಂದಲೋ ಅವಳು ಕಣ್ಣು ಮುಚ್ಚಿದಾಗಲೇ ಶೀನಪ್ಪನಿಗೆ ತನ್ನ ಮೈಯರಿವು ಬಂದದ್ದು.

ಅವಳ ಕಣ್ಣು ಮತ್ತೆ ತೆರೆಯಿತು. ತುಟಿ ಮತ್ತೆ ಅಲುಗಿತು. ಭಾರವಾದ ನಿಟ್ಟುಸಿರೊಂದು ಹೊರಬಿದ್ದಿತು. ಕಂದೀಲಿನ ಮಂದ ಪ್ರಕಾಶದ ಮುಸುಕು ಬೆಳಕಿನಲ್ಲಿ ಅವಳ ಕಣ್ಣ ಬೆಳಕು ವಿದ್ಯುಲ್ಲತೆಯಂತೆ ಕೊಂಕಿತು.

" ನಾನು–ನಾನು ಈಗ ಎಲ್ಲಿದ್ದೇನೆ ? " ಎಂದು ತೊದಲುತೊದಲಾಗಿ ಅವಳ ಬಾಯಿಂದ ಮಾತು ತಡೆತಡೆದು ಮಿಡಿಯಿತು.

' ಅಬ್ಬಾ, ಮಾತಾಡುವಷ್ಟಾದರೂ ಶಕ್ತಿ ಬಂದಿತಲ್ಲ. ಇನ್ನು ಪರವಾ

ಇಲ್ಲ ' ಎಂದು ಸಮಾಧಾನದ ನಿಟ್ಟುಸಿರು ಬಿಟ್ಟ ಶೀನಪ್ಪ.

" ತಾಯಿ, ಚಿಂತೆ ಮಾಡಬೇಡಿ. ಯಾವ ಭಯವೂ ಇಲ್ಲ. ಇದು ನಿಮ್ಮದೇ ಮನೆ. ಅಥವಾ ನಿಮ್ಮದೇ ಮನೆ ಅಂತ ತಿಳಿದುಕೊಳ್ಳಿ."

" ಮನೆ – ನನ್ನ ಮನೆ ? ಅಯ್ಯೋ, ಆ ಕಥೆ ಎಲ್ಲ ಮುಗಿಯಿತು. ಸ್ವಾಮಿ, ತಾವು ಯಾರೋ ತಿಳಿಯದು. ಈ ಪಾಪಿಯನ್ನು ಏಕೆ ಇಲ್ಲಿ ತಂದಿರಿ ? " ಎಂದು ಕೊಂಚ ತಡೆದು, ನಾಲಗೆಯಿಂದ ತುಟಿಯನ್ನು ಸವರಿ ಕೊಂಡು,

" ಯಾವ ಸೌಭಾಗ್ಯಕ್ಕೆಂದು ಈ ಅದೃಷ್ಟಹೀನಳಿಗೆ ಜೀವದಾನ ಮಾಡಿ ಧಿರಿ ? "

ಅವಳ ಬಾಯಿಂದ ಮಾತು ಉದ್ವೇಗಪೂರ್ಣವಾಗಿ ಹೊರಟಿತು. ಜೀವನವೇ ಬೇಡ ಅನ್ನಿಸುವಂಥ ಯಾವ ಕಷ್ಟಕ್ಕೆ ಇವಳು ಸಿಕ್ಕಿರಬಹುದು ? ಇವಳು ಯಾರು ? ಎಲ್ಲಿಂದ ಬಂದಳು ? ಇವಳ ಆ ಕಥೆ ಎಂಥದಿರಬಹುದು ? ಶೀನಪ್ಪನ ಕುತೂಹಲ ಸಾವಿರ ಮುಖವಾಗಿ ಹೆಡೆಯೆತ್ತಿತ್ತು. ಆದರೆ ಅದು ಯಾವುದಕ್ಕೂ ಇದು ಸಮಯವಲ್ಲ.

ಬಳಲಿದ ಹೆಂಗಸು, ನಿಶ್ಶಕ್ತಳಾದ ಹೆಂಗಸು, ಹೆಚ್ಚು ಮಾತಾಡುವುದು ಸರಿಯಲ್ಲ ಎಂಬ ಅರಿವು ಶೀನಪ್ಪನಿಗೆ ಬಹು ಬೇಗ ಮೂಡಿತು.

" ಅಮ್ಮಾ, ನೀವು ಬಹಳ ಬಳಲಿದ್ದೀರಿ. ನಿಮ್ಮಲ್ಲಿ ಈಗ ಮಾತಾಡು ವಷ್ಟು ಶಕ್ತಿಯಿಲ್ಲ. ಸ್ವಲ್ಪ ಹೀಗೆ ಮಲಗಿಕೊಂಡಿರಿ. ನಾನು ಈಗಲೇ ಬಂದು ಬಿಟ್ಟೆ. ಒಂದೇ ನಿಮಿಷ " ಎಂದು ಹೇಳುತ್ತ ಶೀನಪ್ಪ ದೇವರ ಮನೆಗೆ ಹೋಗಿ ಚಿಮಣಿಗೆ ದೀಪ ಹಚ್ಚಿ ಅದನ್ನು ತಂದು ಪಡಸಾಲೆಯಲ್ಲಿಟ್ಟು ಕಂದೀ ಲನ್ನು ಹಿಡಿದು ಹೊರಟ. ಹೊರಡುತ್ತ,

" ತಾಯಿ, ಇದೋ ಈ ಅಂಗವಸ್ತ್ರ ತೆಗೆದುಕೊಳ್ಳಿ. ತಲೆ, ಮುಖ ಸಾಧ್ಯವಾದರೆ ಕೊಂಚ ಒರಸಿಕೊಳ್ಳಿ. ನಾನು ಹೋಗಿ ಯಾರನ್ನಾದರೂ ಹೆಂಗಸರನ್ನು ಸಹಾಯಕ್ಕೆ ಕರೆತರುತ್ತೇನೆ. ಹೆಚ್ಚು ದೂರವಿಲ್ಲ. ಇಲ್ಲೇ ನೆರೆಮನೆ. ಯೋಚನೆ ಮಾಡಬೇಡಿ. ಹೆದರಿಕೆಯೇನೂ ಇಲ್ಲ." ಎಂದ.

ಅವಳು ಇದಕ್ಕೆ ಏನೂ ಪ್ರತ್ಯುತ್ತರ ಹೇಳಲಿಲ್ಲ. ಯಾವುದೋ

ಅಜ್ಞಾತ ಭಯದಿಂದೆಂಬಂತೆ ಅವಳ ಕಣ್ಣು ಕುಗ್ಗಿತು.

ಯಾರಾದರೊಬ್ಬಳು ಹೆಂಗಸಿನ ಸಹಾಯ ಈಗ ಅಗತ್ಯ ಎಂದು ಶೀನಪ್ಪ ನಿಗೆ ಅನ್ನಿಸಿತ್ತಲ್ಲದೆ ಯಾರ ಸಹಾಯವನ್ನು ಈ ಅಪರಾತ್ರಿಯಲ್ಲಿ ಕೋರಬೇಕು ಎಂದು ಅವನಿಗೆ ಹೊಳೆದಿರಲಿಲ್ಲ. ಯಾವ ನಿರ್ಧಾರವನ್ನೂ ಮಾಡದೆಯೇ ಕಂದೀಲು ಹಿಡಿದು ಹೊರ ಹೊರಟ. ಹೆಬ್ಬಾಗಿಲು ತೆರೆದು ಪುತ್ತಿ ಮುಂದಕ್ಕೆ ಮಾಡಿಕೊಂಡು ಹೊರಗೆ ಕಾಲಿಟ್ಟು ಇದ್ದಕ್ಕಿದ್ದ ಹಾಗೆ ನಿಂತು ಬಿಟ್ಟ.

ಆಕಾಶದಲ್ಲಿ ಮೋಡ ಕವಿದದ್ದು ಕವಿದ ಹಾಗೇ ಇತ್ತು. ಗುಡುಗು ನಿಂತಿದ್ದರೂ ಮಿಂಚಿನ ಕುಡುಗೋಲು ಮಾತ್ರ ಕತ್ತಲನ್ನು ಸವರುತ್ತಲೇ ಇತ್ತು. ಕತ್ತಲಿನ ಕಗ್ಗಲ್ಲ ಬುನಾದಿಯ ಕೆಳಗೆ ನಕ್ಷತ್ರಗಳು ಉಸಿರು ಕಟ್ಟಿ ಸತ್ತುಹೋಗಿ ರಬೇಕು. ಗಾಳಿ ತಡೆದು ತಡೆದು ಆಗೊಮ್ಮೆ ಈಗೊಮ್ಮೆ ಭೋರೆಂದು ಬೀಸು ತ್ತಿತ್ತು. ಮಳೆಯ ಅರ್ಭಟ ತಗ್ಗಿ ತೊಟಕು ತೊಟಕಾಗಿ ಹನಿಯುತ್ತಿತ್ತು.

ಚಳಿಗಾಳಿಗೆ ನಡುಗುತ್ತ ನಿಂತ ಶೀನಪ್ಪನ ಮನಸ್ಸು ಒಂದೇ ಸಮನೆ ಕೆಲಸ ಮಾಡುತ್ತಿತ್ತು. ಯಾರನ್ನು ಕರೆದು ತರೋಣ ಈಗ? ಪಕ್ಕದ ಮನೆಯ ತನ್ನ ದೊಡ್ಡಮ್ಮನನ್ನು—ನಾರಣಪ್ಪನವರ ಹೆಂಡತಿಯನ್ನು? ಏಕೋ ಅದು ಸರಿಯಲ್ಲ ಎನ್ನಿಸಿತು. ಅವರ ದೊಡ್ಡಮ್ಮ ಪಾರ್ವತಮ್ಮ ಒಂದು ತರಹದ ಹೆಂಗಸು. ಅದು ಎಂಥ ತರಹ ಅಂತ ಶೀನಪ್ಪನಿಗೆ ಇನ್ನೂ ತಿಳಿದಿರಲಿಲ್ಲ. ಅವನು ಅವರನ್ನು ಯಾವಾಗಲೂ ಗೌರವದಿಂದಲೇ 'ದೊಡ್ಡಮ್ಮ, ದೊಡ್ಡಮ್ಮ' ಎಂತ ಕರೆಯುತ್ತಿದ್ದ. ಆದರೆ ಶೀನಪ್ಪನನ್ನು ಕಂಡಾಗಲೆಲ್ಲ ಬಿಗಿಯುತ್ತಿದ್ದ ಅವರ ಹುಬ್ಬಿನ ಗಂಟು ಒಂದು ಸಲವೂ ಸಡಿಲಿದ್ದನ್ನು ಅವನು ಕಾಣ. ಮಾತಾಡಿದರೆ ಮುತ್ತು ಸುರಿಯುತ್ತದೋ ಎಂಬ ಹಾಗೆ ಆಡಿದರೆ ಒಂದೋ ಎರಡೋ ಮಾತು. ಹಾಗೆಂತ ಮಾತೇ ಕಮ್ಮಿ ಅಂತಲೂ ಇಲ್ಲ. ಅವರ ಗಂಟಲಿಗೆ ಊರಿಗೆ ಊರೇ ನಡುಗುತ್ತಿತ್ತು. ಆ ವಾಗ್ಧಾರೆಯ ಮುಂದೆ ಎಂಥ ಬೆಟ್ಟವೂ ನಿಲ್ಲಲಾರದು, ಕುಲಗಿರಿಗಳೇ ಕಳಚಿ ಬಿದ್ದಾವು ಎಂದು ಎಷ್ಟೋ ಸಲ ಪಾರ್ವತಮ್ಮನ ಗಂಡ ನಾರಣಪ್ಪನವರೇ ಸಿಟ್ಟುಸಿರು ಬಿಟ್ಟು 'ಪ್ರಾರಬ್ಧ' ಎಂದು ಹಣೆ ಹಣೆ ಬಡಿದುಕೊಳ್ಳುತ್ತಿದ್ದರು. ಪಾರ್ವತಮ್ಮನದು ಎಲ್ಲವೂ ಸರಿ. ಆದರೆ ಹೃದಯ? ಆ ವಿಷಯದಲ್ಲೇ ಶೀನಪ್ಪನಿಗೆ ಬಹಳ ಸಂದೇಹ.

ಅವನ ಬೆನ್ನ ಹಿಂದೆ ಪಾರ್ವತಮ್ಮ ಅವನ ಬಗ್ಗೆ ಆಡದಿದ್ದ ಮಾತು ಒಂದೂ ಇರಲಿಲ್ಲ.

ಅದರಾಚೆ ಮನೆ ಚಿಕ್ಕಪ್ಪ ರಾಮಕೃಷ್ಣನದು. ಆ ಮಹಾರಾಯನಿಗೆ ಶೀನಪ್ಪನ ಹೆಸರನ್ನು ಕೇಳಿದರೇ ಆಗದು. ಶೀನಪ್ಪನ ಗದ್ದೆ ಅವರ ಚಿಕ್ಕಪ್ಪನ ಗದ್ದೆ ಒಂದಕ್ಕೊಂದು ತಾಗಿದ್ದುವು. ಎರಡೂ ಅಗೇಡಿಗಳು—ಭತ್ತದ ಸಸಿ ಬೆಳೆಯಲು ಯೋಗ್ಯವಾದ ಗದ್ದೆಗಳು. ಚಿಕ್ಕಪ್ಪನಿಗೆ ಈ ಎರಡೂ ಗದ್ದೆಗಳು ತನ್ನದಾದರೆ ಬಹಳ ಅನುಕೂಲ ಎನ್ನಿಸಿತು. ಶೀನ ಹುಡುಗ, ಹೇಳಿದ ಮಾತು ಕೇಳುವವ ಅಂತ ಆಗ ನಂಬಿದ್ದ.

"ಶೀನ, ನಿನ್ನ ಅಗೇಡಿ ನನಗೆ ಕೊಟ್ಟು ಬಿಡೋ; ನನ್ನ ಆ ಇನ್ನೊಂದು ಗದ್ದೆ, ತೋಡಿನ ಹತ್ತಿರದ್ದು ನಿನಗೆ ಕೊಟ್ಟು ಬಿಡುತ್ತೇನೆ" ಎಂದ.

"ಅದು ಸರಿ ಚಿಕ್ಕಪ್ಪ, ಆದರೆ ನಿನ್ನ ಆ ಗದ್ದೆ ಅಗೆ ಬೆಳೆಯುವಂಥದಲ್ಲವಲ್ಲ ನನ್ನ ಗದ್ದೆಗಳಿಗೆಲ್ಲ ಅಗೆ ಇನ್ನೆಲ್ಲಿ ಬೆಳಸಲಿ?" ಎಂದ ಶೀನ

"ನಿನಗೇನೋ ಶೀನ, ಒಬ್ಬೊಂಟಿಗ. ನನಗೆ ಕೊಟ್ಟರೆ ಬಹಳ ಅನುಕೂಲವಾಗುತ್ತದೆ. ಅಗೇಡಿ ಇಲ್ಲದೆ ಬಹಳ ಫಜೀತಿ ಆಗಿದೆ ನೋಡು."

ಈ ವಾದ ಶೀನಪ್ಪನಿಗೆ ಅಷ್ಟು ಸರಿ ಅನ್ನಿಸಲಿಲ್ಲ. ತಾನು ಒಬ್ಬೊಂಟಿಗ ಅನ್ನುವಷ್ಟು ಕಾರಣದಿಂದಲೇ ತನಗೆ ಅತ್ಯಗತ್ಯವಾದುದನ್ನು ಕೊಟ್ಟೇ ಬಿಡು ಎನ್ನುವ ಮಾತು ಅಷ್ಟು ನ್ಯಾಯ ಅಂತಲೂ ಅವನಿಗೆ ತೋರಲಿಲ್ಲ. ಕೊಟ್ಟರೆ ದಾನವಾಗಿ ಕೊಡಬೇಕು. ಕೊಡಬಹುದು. ಆದರೆ ತನ್ನ ಚಿಕ್ಕಪ್ಪ ಆ ದಾನಕ್ಕೆ ತಕ್ಕ ಪಾತ್ರ ಅಂತ ಅವನಿಗೆ ಅನ್ನಿಸಲಿಲ್ಲ. ರಾಮಕೃಷ್ಣಜೋಯಿಸನಿಗೆ ಯಾವ ಕೊರತೆಯೂ ಇರಲಿಲ್ಲ. ಪಿತ್ರಾರ್ಜಿತ ಆಸ್ತಿಯ ಜೊತೆಗೆ ತಾನೂ ಕೊಂಚ ಹೊಸತಾಗಿ ಮಾಡಿದ. ಒಂದು ನಾಲ್ಕು ಜನಕ್ಕೆ ಸಾಲ ಕೊಟ್ಟಿದ್ದ, ಸಾಲ ಕೊಡುವಷ್ಟು ಆಢ್ಯ. ಮನೆಯಲ್ಲಿ ಇದ್ದವರೋ ಅವನು ಮತ್ತು ಅವನ ಹೆಂಡತಿ, ಇಬ್ಬರು ಮಕ್ಕಳು. ಆದ ಕಾರಣ,

"ಚಿಕ್ಕಪ್ಪ, ಅಗೇಡಿ ಕೊಟ್ಟರೆ ನಿನಗೆ ಬಹಳ ಅನುಕೂಲವಾಗುತ್ತದೆ. ಹೌದು. ಸಾಧ್ಯವಿದ್ದರೆ ಖಂಡಿತ ಕೊಟ್ಟುಬಿಡುತ್ತಿದ್ದೆ. ನನಗಿರುವುದು ಅದೊಂದೇ ಅಗೆ ಬೆಳೆಯುವ ಗದ್ದೆ. ಅದನ್ನು ಕೊಟ್ಟರೆ ನನಗೆ ಬಹಳ

ತೊಂದರೆ. ಏನು ಮಾಡಲಿ ? ” ಎಂದ.

ಇದನ್ನು ಕೇಳಿ ರಾಮಕೃಷ್ಣಜೋಯಿಸನ ಮುಖ ಕೆಂಪಾಯಿತು. “ ಏನೋ ನಮ್ಮ ಹುಡುಗ, ನಮ್ಮ ಸಮಯಕ್ಕೆ ಆದಾನು ಅಂತ ಹೇಳಿದೆ. ನಿನಗೆ ಇಷ್ಟವಿಲ್ಲದಿದ್ದರೆ ಬೇಡ. ನಿನ್ನ ಗದ್ದೆ ನೀನೇ ಇಟ್ಟುಕೊಂಡು ರಾಜಾಧಿ ರಾಜನಾಗಿ ಬಾಳು ” ಎಂದು ಹೇಳಿ ಹೋದವ ಮತ್ತೆ ಶ್ರೀನಿವಾಸನ ಕೈಲಿ ಮಾತಾಡುವುದಿರಲಿ, ಅವನ ಮುಖ ಕಂಡರೆ ಮುಖ ತಿರುಗಿಸುತ್ತಿದ್ದ. ಶೀನಪ್ಪನೇ ಆಗಾಗ ಅವನನ್ನು ಮಾತಾಡಿಸಲು ಯತ್ನಿಸುತ್ತಿದ್ದ.

ಈ ಎಲ್ಲ ಗತಕಾಲದ ನೆನಪು ಕ್ಷಣಾರ್ಧದಲ್ಲಿ ಶೀನಪ್ಪನ ಮನಸ್ಸಿನಲ್ಲಿ ಸುಳಿದು ಮರೆಯಾಯಿತು.

ಹೌದು. ಈ ಊರಿನಲ್ಲಿ ಯಾರಿಂದಲೂ ಸಹಾಯವನ್ನು ನಿರೀಕ್ಷಿಸುವುದು ಕಷ್ಟ. ಅವರಿಂದ ಯಾವ ಅಪಸಹಾಯವೂ ಆಗುತ್ತಿಲ್ಲ— ಅಷ್ಟಕ್ಕೇ ಸಂತೋಷ ಪಟ್ಟುಕೊಳ್ಳಬೇಕು. ಪಕ್ಕದೂರು ಹೊಸಕೋಟೆಯಲ್ಲಿರುವ ಅವನ ತಾಯಿಯ ತಾಯಿ ವೃದ್ಧೆ ಪುಟ್ಟಜ್ಜಿಯೊಬ್ಬಳಿಂದ ಮಾತ್ರ ಅಂಥ ನಿಸ್ಪೃಹ ಸಹಾಯ ಸಾಧ್ಯ. ಆದರೆ ಅಷ್ಟು ದೂರ ಹೋಗಲು ಪುರಸೊತ್ತಿಲ್ಲ ಈಗ.

ಸರಿ. ಮತ್ತೆ?

“ ಆಹಾ ! ಮರತೇ ಬಿಟ್ಟಿದ್ದೆನಲ್ಲ ! ” ಎಂದುಕೊಂಡ. ಸರಿ ಇಂಥ ವಿಷಮ ಕಾಲದ ಸಂದಿಗ್ಧ ಪರಿಸ್ಥಿತಿಯಲ್ಲಿ ಕೆಲಸಕ್ಕೆ ಆಗುವವಳು ಆ ಒಕ್ಕಲ ಗಿತ್ತಿ ನಾಗಿ ಅಲ್ಲದೇ ಇನ್ನಾರೂ ಇಲ್ಲ. ನಾಗಿಯೂ ಮುದುಕಿ. ತನ್ನ ವಯಸ್ಸೆಷ್ಟೆಂದು ಅವಳಿಗೇ ತಿಳಿಯದು. ಅವಳ ವಯಸ್ಸು ಅರುವತ್ತರಿಂದ ಎಂಭತ್ತರ ತನಕ ಎಷ್ಟಾದರೂ ಆಗಬಹುದು. ಆ ಊರಿನಲ್ಲಿ ಬಾಳಿ ಬದುಕಿ ಅಳಿದು ಹೋದ ಮೂರು ತಲೆಮಾರುಗಳ ಕಥೆಯೂ ಅವಳಿಗೆ ಗೊತ್ತು. ಆದರೆ ಒಂದು ದಿನವೂ ಅವಳು ಕೂತುಂಡವಳಲ್ಲ. ಪ್ರತಿ ದಿನವೂ ಪ್ರಾಯದ ಹೆಣ್ಣುಗಳೊಡನೆ ಸರಿಸಮವಾಗಿ ಕೆಲಸ ಮಾಡುತ್ತಾಳೆ. ಈಗ ಒಂದು ವರ್ಷದಿಂದ ನಾಲ್ಕು ಮೈಲಿ ದೂರದ ಕಾಡಿಗೆ ಹೋಗಿ ಸೊಪ್ಪು, ತರಗೆಲೆಗಳ ಹೊರೆ ಹೊತ್ತು ತರಲು ಮಾತ್ರ ಅವಳಿಗೆ ಆಗುತ್ತಿರಲಿಲ್ಲ. ಅದು ಬಿಟ್ಟು ನೀರು ಮೊಗೆಯುವುದು, ನೆಟ್ಟಿ, ಕೊಯಿಲು, ಕಳೆ ಕೀಳುವುದು— ಮುಂತಾದ ಎಲ್ಲ ಕೆಲಸಗಳಲ್ಲೂ ಅವಳು

ಪ್ರಾಯದವರೂ ನಾಚುವಂತೆ ಗೇಯುತ್ತಾಳೆ. ಮುಖದ ತೊಗಲು ಸುಕ್ಕುಗಟ್ಟಿದ್ದರೂ ಸದಾ ಪ್ರಸನ್ನವಾದ, ಮಂದಹಾಸದಿಂದ ಕೂಡಿದ ಮುಖ. ಶೀನಪ್ಪನೆಂದರೆ ಅವಳಿಗೆ ಪಂಚಪ್ರಾಣ. ಅವರು ಹಿರಿಯರ ಕಾಲದಿಂದಲೂ ಶೀನಪ್ಪನ ಒಕ್ಕಲು. ತನ್ನ ಒಡೆಯರು ಎಂತ ಅವಳಿಗೆ ಅವನಲ್ಲಿ ವಿಶೇಷ ಅಭಿಮಾನ. ಅದಕ್ಕೂ ಹೆಚ್ಚಾಗಿ ಶೀನಪ್ಪನ ಲಾಲನೆ ಪಾಲನೆ ಮಾಡಿದವಳೂ ಅವಳೇ. ಹತ್ತು ವರ್ಷಗಳಲ್ಲೇ ತನ್ನ ತಂದೆತಾಯಿಗಳನ್ನು ಕಳೆದುಕೊಂಡ ಈ ತಬ್ಬಲಿಯನ್ನು ಕಂಡರೆ ಅವಳಿಗೆ ವಿಶೇಷ ಅನುಕಂಪ.

'ಸರಿ—ಅದೇ ಸರಿ.' ಎಂದುಕೊಳ್ಳುತ್ತ ಸರಭರೆಂದು ಹನಿಯುತ್ತಿದ್ದ ಮಳೆಯನ್ನು ಲೆಕ್ಕಿಸದೆ ಶೀನಪ್ಪ ನಾಗಿಯ ಮನೆಯ ಕಡೆಗೆ ನಡೆದ. ಮನೆಯಿಂದ ಹತ್ತು ಗಜ ನಡೆದು ತೋಡು ದಾಟಿ ಮೇಲಕ್ಕೆ ಹತ್ತಿ, ನಾಲ್ಕು ಗದ್ದೆ ದಾಟಿದರೆ ಜೋಯಿಸರ ಬೆಟ್ಟು ಸಿಕ್ಕುತ್ತದೆ. ಅಲ್ಲಿನ ಹುಲ್ಲು ಜೋಪಡಿಯೇ ನಾಗಿಯದು ಆ ಹಿತ್ತಲಲ್ಲಿ ನಾಲ್ಕು ತೆಂಗಿನಮರ, ಎರಡು ಮಾವಿನಮರ, ಮೂರು ಗೇರುಮರ. ನಡುವೆಯೊಂದು ಬಾವಿ. ನಾಗಿಯ ಮನೆಯಲ್ಲಿ ಇದ್ದವರು ನಾಗಿ ಮತ್ತು ಅವಳ ಮಗಳು ಸುಬ್ಬಿ.

"ನಾಗೀ, ನಾಗೀೀ, ನಾಗೀೀೀ" ಎಂದು ಅವಳ ಗುಡಿಸಲ ಹೊರಗೆ ನಿಂತು ಶೀನಪ್ಪ ಮೂರು ಬಾರಿ ಕೂಗಿದ. ಆ ಅವಳು ಅನಾಥಳಾಗಿ ತನ್ನ ಮನೆಯಲ್ಲಿ ಒಬ್ಬಳೇ ಮಲಗಿರುವಳೆಂಬುದು ಅವನ ಮನಸ್ಸನ್ನು ತಿವಿಯುತ್ತಿತ್ತು. ಆ ಉದ್ವಿಗ್ನತೆ ಅವನ ಧ್ವನಿಯಲ್ಲೂ ಮೊಳಗಿತು.

ನಾಗಿ ಗಾಢನಿದ್ದೆಯಲ್ಲಿರಬೇಕು. ಅಲ್ಲೇ ಜಗಲಿಯ ಮೇಲೆ ಮಲಗಿದ್ದ ನಾಗಿಯ ಗೊರಕೆ ತಾಳಬದ್ಧವಾಗಿ ಮೊಳಗುತ್ತಿತ್ತು. "ಮಳೆಯಲ್ಲಿ ನೆಟ್ಟಿಯ ಕೆಲಸ ಮಾಡಿ ಬಳಲಿದ ಜೀವ. ಪಾಪ!" ಎಂದುಕೊಂಡ ಶೀನಪ್ಪ. ಆದರೆ ಕಾಲಯಾಪನೆಗೆ ಆಗ ಅವಕಾಶವೇ ಇರಲಿಲ್ಲ.

'ನಾಗಿ' ಎಂದು ಮತ್ತೊಮ್ಮೆ ಕೂಗಿದ. ಮಳೆಯ ಹನಿ ದಪ್ಪವಾಗುತ್ತಿತ್ತು ಆಕಾಶದ ಮೋಡ ಮತ್ತಷ್ಟು ಘನವಾಯಿತು. ಗಾಳಿಯ ವೇಗ ಕೊಂಚ ಹೆಚ್ಚಿತು. ಬೆಚ್ಚಿಬಿದ್ದವಳಂತೆ ನಾಗಿ ಎದ್ದು ಕುಳಿತು,

"ಯಾರು?" ಎಂದಳು.

“ ಯಾರು ಯಾರು ಅಂತ ಪ್ರಸಂಗ ಹೇಳಬೇಡ ಮಹಾರಾಯಿತಿ. ನಾನು. ಗೊತ್ತಾಯಿತಾ ? ”

“ ಅಯ್ಯೋ ಒಡೇರಾ ! ನಿದ್ದೆಯ ಮಬ್ಬು; ತಿಳೀಲೆ ಇಲ್ಲ. ಈ ಅಪ ರಾತ್ರಿ ಈ ಮಳೆಯಲ್ಲಿ ನೆನಕೊಂಡೇ ಬಂದ್ರಲ್ಲ ! ನೆನೀತಾ ಇದ್ದೀರಲ್ಲ ! ಏನಾ ಯಿತು ನನ್ನೊಡೆಯಾ ? ”

ನಾಗಿಯ ಧ್ವನಿಯಲ್ಲಿ ಆಶ್ಚರ್ಯ, ಕಾತರ, ವ್ಯಸನ ಬೆರೆತಿತ್ತು.

“ ನೋಡು ನಾಗಿ, ಹೆಚ್ಚು ಮಾತಾಡಲು ಪುರಸೊತ್ತಿಲ್ಲ. ಹಾಸಿಗೆ ಬಿಟ್ಟು ಏಳುತೀಯೋ ಇಲ್ಲವೋ. ಕೂಡಲೇ ಎದ್ದು ನನ್ನ ಸಂಗಡ ಬಾ. ಎಲ್ಲಾ ಮತ್ತೆ ಹೇಳುತ್ತೇನೆ.” ಎಂದು ಶೀನಪ್ಪ ಹೊರಟೇ ಬಿಟ್ಟ.

“ ಈ ಅಯ್ಯಂದು ಯಾವಾಗಲೂ ಹೀಗೆ. ಬಹಳ ವಿಚಿತ್ರ.” ಎಂದು ಗೊಣಗಿಕೊಳ್ಳುತ್ತ ನಾಗಿ ಎದ್ದು ತಲೆಗೆ ಕಂಬಳಿಯನ್ನು ಸಿಕ್ಕಿಸಿಕೊಂಡು ಅಲ್ಲೇ ಹಾಯಾಗಿ ಮಲಗಿ ಇನ್ನೂ ಗೊರಕೆ ಹೊಡೆಯುತ್ತಿದ್ದ ಮಗಳನ್ನು ಕಂಡು “ ಹೊಡಿ ಹೊಡಿ ಗೊರಕೆ ಹೊಡಿ. ಈ ಎಲ್ಲ ಗ್ರಾಚಾರವೂ ಈ ಮುದಿ ಮುಂಡೇಗೇ ” ಎಂದುಕೊಳ್ಳುತ್ತ ಶೀನಪ್ಪನನ್ನು ಹಿಂಬಾಲಿಸಿದಳು.

ನಾಗಿ ಮನೆ ಜಗಲಿ ಇಳಿಯುವಷ್ಟರಲ್ಲೇ ಶೀನಪ್ಪ ಒಂದು ಗದ್ದೆಯನ್ನು ದಾಟಿದ್ದ. ದೂರದಿಂದಲೇ ನಾಗಿ “ ಏಕಪ್ಪಾ ಹಾಗೆ ಓಡ್ತೀರಿ, ಒಡೆಯ. ಕತ್ತಲೆ. ಕಾಲ ಕೆಳಗೆ ಏನಿದೆಯೋ ಕಾಣುವುದಿಲ್ಲ. ನಾನು ಹೇಗೆ ಬರುವು ದಪ್ಪಾ. ನಾನು ಬರುವುದು ಬೇಡವಾ ” ಎಂದು ರಾಗವೆಳೆಯುತ್ತ ನಾಗಿ ನೆನಪಿನ ಬಲದಿಂದಲೇ ಬೇಗ ಬೇಗ ಕಾಲು ಹಾಕತೊಡಗಿದಳು. ಇದನ್ನು ಕೇಳಿ, ತನ್ನ ಕೈಯಲ್ಲಿ ಲಾಟೀನಿರುವುದನ್ನು ಮರೆತೇ ಬಿಟ್ಟಿದ್ದ ಶೀನಪ್ಪ ಮುದು ಕಿಯ ಬಗ್ಗೆ ಕನಿಕರಗೊಂಡು ತನ್ನ ನಡಿಗೆಯ ವೇಗವನ್ನು ಕೊಂಚ ತಗ್ಗಿಸಿದ. ಅಷ್ಟರಲ್ಲಿ ನಾಗಿಯೂ ಹತ್ತಿರ ಬಂದಿದ್ದಳು.

ಇಬ್ಬರೂ ಶೀನಪ್ಪನ ಮನೆಯ ಹತ್ತಿರ ಬಂದರು. ಶೀನಪ್ಪ ಮನೆ ಬಿಟ್ಟು ಪುನಃ ಮನೆ ಸೇರುವಷ್ಟಕ್ಕೆ ಹತ್ತು ನಿಮಿಷ ಕಾಲ ಕಳೆದಿರಬಹುದು. ಆದರೂ ಅದೆಷ್ಟೋ ಗಂಟೆಗಳೇ ಕಳೆದಿರಬೇಕು ಎನ್ನುವಷ್ಟು ದಿಗಿಲು ಶೀನಪ್ಪ ನಿಗೆ. ತಾನಿಲ್ಲದಾಗ ಆ ಅನಾಥೆಯ ಗತಿ ಏನಾಯಿತೋ ಎಂದು ಚಿಂತೆ. ತಾನು

ಹೊರಟಾಗ ಅವಳು ಕಣ್ಣು ತೆರೆದಿದ್ದಳು. ಏನೋ ಎರಡು ಮಾತು ಕೂಡ ಆಡಿದ್ದಳು.... ನಿಜ. ಆದರೆ ಅಂಥ ದುರ್ಬಲಸ್ಥಿತಿಯಲ್ಲಿ ಎಂತೋ ಏನೋ. ಯಾವ ಗಳಿಗೆಗೆ ಏನೋ. ಅಂಥ ಸ್ಥಿತಿಯಲ್ಲಿ ಅವಳನ್ನು ಬಿಟ್ಟು ಬಂದದ್ದು ಸರಿಯೇ, ಎಂದು ಶೀನಪ್ಪನ ಮನಸ್ಸು ವ್ಯಗ್ರವಾಗಿತ್ತು.

ಮುದುಕಿ ನಾಗಿಯೂ ಯೋಚಿಸುತ್ತಿದ್ದಳು : ಏನಾಗಿರಬಹುದು ಶೀನಪ್ಪನ ಮನೆಯಲ್ಲಿ. ಇವನು ಒಬ್ಬ. ಇಲ್ಲ, ಸಾವಿತ್ರಮ್ಮ ಏನಾದರೂ ಬಂದಿರಬಹುದೇ ? ಬಂದಿದ್ದ ಪಕ್ಷದಲ್ಲಿ ನಾಗಿಗೆ ಗೊತ್ತಾಗದೆ ಇರುತ್ತಿರಲಿಲ್ಲ. ಏನು ಕೆಲಸವಿರಲಿ, ಬೊಗಸೆಯಿರಲಿ ತನ್ನನ್ನು ಹುಡುಕಿಕೊಂಡು ಬಂದು " ನಾಗಿ ಹೇಗಿದ್ದೀ ? " ಎಂದು ಸುಖದುಃಖ ವಿಚಾರಿಸಿ ಕವಳಕ್ಕೆ ಅಷ್ಟು ಎಲೆ ಅಡಿಕೆ ಹೊಗೆಸೊಪ್ಪು ಕೊಟ್ಟು ಹೋಗದೆ ಇರುವವಳಲ್ಲ ಆ ಅಮ್ಮ; ಶೀನಪ್ಪ, ಸಾವಿತ್ರಮ್ಮ ಇಬ್ಬರೂ ಅಷ್ಟೆ. ಚಿನ್ನದಂಥ ಮನುಷ್ಯರು. ಅದರಲ್ಲಿ ಸಂದೇಹವಿಲ್ಲ. ಈ ಶೀನಪ್ಪ ಈಗ ಯಾವ ತಾಪತ್ರಯಕ್ಕೆ ಸಿಕ್ಕಿ ಹಾಕಿಕೊಂಡಿದ್ದಾನೆ ? ಈ ಮನುಷ್ಯ ಯಾವಾಗಲೂ ಹಾಗೆ. ಬೀದಿಯಲ್ಲಿ ಹೋಗುವ ತಾಪತ್ರಯವನ್ನು ಕರೆದು ತನ್ನ ತಲೆಯ ಮೇಲೆ ಹಾಕಿಕೊಳ್ಳುವ ಬುದ್ಧಿ.. ಮಾರಣಕಟ್ಟೆ ಮೇಳದ ಆ ಎರಡನೆ ವೇಷದ ರಾಮನನ್ನು ಮನೆಯಲ್ಲಿ ತಂದಿಟ್ಟುಕೊಂಡು ಈ ಇದೇ ಶೀನಪ್ಪ ಅವನ ಚಾಕರಿ ಮಾಡಿದ್ದು, ಗುಣವಾದ ಕೂಡಲೇ ಅವ ಇವರ ಮನೆಯಲ್ಲಿ ನಾಲ್ಕು ಲೋಟಗಳನ್ನೂ ಒಂದು ತಂಬಿಗೆಯನ್ನೂ ಎತ್ತಿಕೊಂಡು ಮಧ್ಯ ರಾತ್ರಿಯಲ್ಲಿ ಫರಾರಿಯಾದದ್ದು ನೆನಪಿಗೆ ಬಂದು ನಾಗಿಯ ಮುಖದ ಮೇಲೆ ಮುಗುಳು ನಗೆ ಅರಳುವಷ್ಟರಲ್ಲೇ ಶೀನಪ್ಪ ಮನೆಯ ಬಾಗಿಲು ತೆರೆದು ಒಳನುಗ್ಗಿದ.

ನಾಗಿಯೂ ಹಿಂಬಾಲಿಸಿದಳು.

ಶೀನಪ್ಪ ದಾಪುಗಾಲಿನಿಂದ ಪಡಸಾಲೆಯ ಬಾಗಿಲ ತನಕ ಹೋಗಿ ಒಳಗೆ ಇಣಿಕಿ ನೋಡಿದ. ನೋಡಿದವನು ಸ್ತಬ್ಧನಾಗಿ ಕಂದೀಲನ್ನು ಹೊಸ್ತಿಲ ಮೇಲೆ ಇಟ್ಟು ಕಂಭದಂತೆ ನಿಂತು ಬಿಟ್ಟ.

ಅವಳು ಹಾಸಿಗೆಯ ಮೇಲೆ ಇರಲಿಲ್ಲ!

ವರ್ಷವರ್ಷಕಾಲ ತಡೆ ಹಿಡಿದು ಮಡುವುಗಟ್ಟಿದ ಶೋಕ ಒಮ್ಮೆಲೇ

ಕಟ್ಟೆಯೊಡೆದು ಹೊರನುಗ್ಗಿದಂತೆ ಶೀನಪ್ಪ ಬಿಕ್ಕಿದ.

ಗಾಬರಿಗೊಂಡ ನಾಗಿ ಅವನ ಹಿಂದಿನಿಂದ ತಾನು ಪಡಸಾಲೆಯೊಳಕ್ಕೆ ಇಣಿಕಿ ನೋಡಿದಳು ತನ್ನ ಹಳೆಯ ಕಣ್ಣುಗಳನ್ನು ಉಜ್ಜಿ ನೋಡಿದಳು.

ಒಳಗೆ ಚಿಮಣಿ ದೀಪ ಇನ್ನೂ ಉರಿಯುತ್ತಿತ್ತು. ಹಾಸಿದ ಹಾಸಿಗೆ ಹಾಸಿದಂತೆಯೇ ಇತ್ತು. ಅದರ ಮೇಲೆ ತಲೆದೆಸೆಯಲ್ಲಿ ದಿಂಬೂ ಇತ್ತು. ಹಾಸಿಗೆಯಲ್ಲಿ ಯಾರೂ ಇರಲಿಲ್ಲ. ಹಾಸಿಗೆಯ ಹತ್ತಿರದಲ್ಲಿ ಒಂದು ಪಾತ್ರೆ; ಅದರ ಬಳಿಯಲ್ಲಿ ಒಂದು ಖಾಲಿ ಲೋಟ ಮಗುಚಿ ಬಿದ್ದಿತ್ತು. ಲೋಟದ ಬಳಿ ಏನೋ ಅಷ್ಟು ಬೆಳ್ಳಗಾದ ನೀರಿನಂಥ ದ್ರವ.

ಇದೆಲ್ಲಾ ಏನು ಎಂದು ತಿಳಿಯದೆ ನಾಗಿಯು ಕ್ಷಣಕಾಲ ದಿಗ್ಭ್ರಾಂತಳಾಗಿ ನಿಂತಳು.

" ಏನಾಯಿತು ಶೀನಪ್ಪಾ? ಹೀಗೆ ನಿಂತುಕೊಂಡು ಬಿಟ್ಟರೆ ಕೆಲಸ ಆದೀತಾ? ಆದದ್ದಾದರೂ ಏನು ಹೇಳಿ. ಇದಕ್ಕೇನಾ ನನ್ನ ಕರಕೊಂಡು ಬಂದದ್ದು " ಎಂದಳು ನಾಗಿ.

" ನಾಗಿ, ನಾಗಿ. ನಾನು ಏನೆಂತ ಹೇಳಲಿ ನಿನಗೆ? ಅವಳು ಇಲ್ಲಿ ಇಲ್ಲ. ಎಲ್ಲಿಗೆ ಹೋದಳು ? "

" ಅವಳು ? ಅವಳು ಎಂದರೆ ಯಾರು ಅಂತ ತಿಳೀಲಿ ನಾನು ? ಏನು, ಸಾವಿತ್ರಮ್ಮ ಬಂದಿದ್ದರಾ ?"

ನಾಗಿಯ ಮಾತು ಶೀನಪ್ಪನಿಗೆ ಕೇಳಿಸಿದಂತೆಯೇ ತೋರಲಿಲ್ಲ.

" ಹೌದು ಅವಳು. ನಿರಾಶ್ರಿತಳಾಗಿ ನನ್ನ ಮನೆಯ ಬಾಗಿಲಲ್ಲಿ ಬಂದು ಬಿದ್ದವಳು. ಜೀವ ಹೋಗುತ್ತದೋ ಇರುತ್ತದೋ ಎನ್ನುವ ಸ್ಥಿತಿಯಲ್ಲಿ ಇದ್ದವಳು. ಅಯ್ಯೋ, ಎಲ್ಲಿ ಹೋದಳು ಅವಳು? ಎಲ್ಲಿಗೆ ಹೋಗಬಲ್ಲಳವಳು ?"

" ಹೀಗೆಲ್ಲ ಒಗಟಿನ ಹಾಗೆ ಹೇಳುತ್ತಿದ್ದರೆ ನನಗೆ ಏನು ತಿಳಿಯಬೇಕು? ಸ್ವಲ್ಪ ಬಿಚ್ಚಿ ಹೇಳಬಾರದೆ ಶೀನಪ್ಪ. ಏನೋ ಹುಚ್ಚು ಹಿಡಿದ ಹಾಗೆ ಆಡುತ್ತಿದ್ದೀರಲ್ಲ. ಅವಳು ಯಾರು ? ಅವಳ ಹೆಸರೇನು ? ಒಂದು ಚೂರೂ ಹೇಳಬೇಡವಾ ? ಹೀಗೆ ಈ ಮುದಕೀನ ಯಾಕೆ ಸತಾಯಿಸ್ತೀರಿ. ನಾನು ನಿದ್ದೆ

ಗಿದ್ದೆ ಏನೂ ಮಾಡಬೇಡವಾ. ಹೂ, ಹೊರಟೇ ಬಿಟ್ಟೆ" ಎಂದು ಮುದುಕಿ ಹೊರಡುವಂತೆ ನಟಿಸಿದಳು.

ಶೀನಪ್ಪ ಗಕ್ಕನೆ ನಾಗಿಯ ಕಡೆ ತಿರುಗಿ, "ನಾಗಿ ಹಾಗೆಲ್ಲ ಹೇಳಬೇಡ ಅಜ್ಜಿ. ನಿನಗಿಂತ ಆಪ್ತರಾದವರು ನನಗೆ ಇಲ್ಲಿ ಯಾರೂ ಇಲ್ಲ. ಕೇಳು, ಹೇಳುತ್ತೇನೆ" ಎಂದು ಆ ರಾತ್ರಿ ನಡೆದದ್ದನ್ನೆಲ್ಲ ಅವಳಿಗೆ ಸಂಕ್ಷೇಪವಾಗಿ ಹೇಳಿ ಮುಗಿಸಿದ.

ಆ ಕಥೆಯನ್ನು ಕೇಳುತ್ತ ನಾಗಿಯ ಕಣ್ಣು ಹಸಿಗೂಡಿತು. ಅವಳು ಮತ್ತೆ ಮಾತಾಡಿದಾಗ ಅವಳ ಕಂಠ ಗದ್ಗದವಾಗಿತ್ತು.

"ಶೀನಪ್ಪ, ಈ ಲೋಕದ ಕಷ್ಟ ಎಲ್ಲ ನಿಮ್ಮ ಕುತ್ತಿಗೆಗೆ ಸುತ್ತುಹಾಕಿಕೊಳ್ಳುತ್ತಲ್ಲ, ನೋಡಿ ಹೇಗಿವೆ. ಬಾಗಿದವನ ಬೆನ್ನಿನ ಮೇಲೆ ಗುದ್ದು ಎನ್ನುವ ಹಾಗೆ ಅನುವು ಆಪತ್ತು ಅಂತ ಕಣ್ಣೀರಿಡುವವರಿಗೇ ಇಂಥ ಕುತ್ತು" ಎಂದು ನಿಟ್ಟುಸಿರು ಬಿಡುತ್ತಾ "ಅಯ್ಯೋ ಪಾಪ, ಎಲ್ಲಿ ಹೋದಳೋ ಆ ಬಡವಿ. ತುಂಬುಗರ್ಭಿಣಿ ಅಂತ ಬೇರೆ ಹೇಳ್ತೀರಿ. ಪಾಪ, ಪಾಪ" ಎಂದು ಕಂಬನಿಗರೆದಳು.

ನಾಗಿ ಮಾತಾಡುತ್ತಿದ್ದಾಗ ಶೀನಪ್ಪ ಅನ್ಯಮನಸ್ಕನಾಗಿ ಅತ್ತಿತ್ತ ದೃಷ್ಟಿ ಚೆಲ್ಲುತ್ತಿದ್ದ. ಅವನು ಹಾಗೆ ನಿಂತಿದ್ದಾಗ ತಣ್ಣನೆಯ ಗಾಳಿಯಲೆಯೊಂದು ಬಂದು ಅವನ ಮೈಸೋಂಕಿತು. ಆ ಗಾಳಿ ಬಂದ ದಿಕ್ಕಿನಲ್ಲಿ ಏನೋ ವಿಶೇಷವಿರುವ ಹಾಗೆ ಅವನಿಗೆ ಅನ್ನಿಸಿತು. ಪಡಸಾಲೆಯಿಂದ ಹಿತ್ತಲ ಕಡೆಗೆ ಹೋಗುವ ಬಾಗಿಲು ಹೇಗೋ ತೆರೆದುಕೊಂಡಿರುವುದು ಆಗ ಅವನ ಗಮನಕ್ಕೆ ಬಂತು. ರಾತ್ರಿಯಾಗುತ್ತಾ ತಾನು ಆ ಬಾಗಿಲನ್ನಿಕ್ಕಿ ಅಗುಳಿ ಹಾಕಿದ್ದು ಖಂಡಿತ. ಅದು ಈಗ ಹಠಾತ್ತಾಗಿ ಹೇಗೆ ತೆರೆದುಕೊಂಡಿದೆ? ಎಂದು ಯೋಚಿಸುತ್ತಲೇ ಶೀನಪ್ಪ ಕಂದೀಲನ್ನು ಎತ್ತಿ ಹಿಡಿದು ಆ ಕಡೆಗೆ ಹೊರಟ. ನಾಗಿಯೂ ಅವನ ಹಿಂದೆ ನಡೆದಳು.

ಹೊರಗಿನ ಕತ್ತಲಲ್ಲಿ ಏನೂ ಕಾಣಿಸದು. ಕಂದೀಲಿನ ಬೆಳಕೋ ಕಾಲ ಕೆಳಗೆ ಒಂದು ಗೇಣು ಚಚ್ಚೌಕದ ನೆಲವನ್ನು ಮಾತ್ರ ಬೆಳಗುತ್ತಿತ್ತು. ನಿಧಾನವಾಗಿ ಇಬ್ಬರೂ ಹಿತ್ತಲಿನ ಶೋಧನೆಗೆ ತೊಡಗಿದರು. ಹಿತ್ತಲಿನ ಆಚೆ ಕಡೆ

ಪಾಗಾರದ ಗೋಡೆ. ಅದನ್ನು ಯಾರೂ ಬಹಳ ಸಾಹಸಪಡದೆ ದಾಟಿ ಹೋಗುವ ಹಾಗಿರಲಿಲ್ಲ. ಏಕೋ ಹೊರಗೆ ಹೋಗಬೇಕೆನ್ನಿಸಿ ಎದ್ದು ಹೋದ ಆ ಅನಾಥೆ ಎಲ್ಲಾದರೂ ಕಾಲು ಜಾರಿ ಬಿದ್ದಿರಬಹುದು ಎಂಬ ಭೀತಿಯಿಂದ ಇಬ್ಬರೂ ತೋಟದ ಅಂಗುಲ ಅಂಗುಲವನ್ನೂ ಶೋಧಿಸುತ್ತ ಸುತ್ತಿದರು. ಬಾಳೆ ಗಿಡದ ಬುಡ, ತೆಂಗಿನ ಕಟ್ಟೆ, ಹಲಸಿನ ಮರದ ಸುತ್ತ. ಕೊನೆಗೆ ಮನೆಗೆ ತಾಗಿ ಹಿತ್ತಲಿನ ಬಲ ಭಾಗದಲ್ಲಿದ್ದ ಬಾವಿಯ ಕಡೆ ನಡೆದರು.

ಬಾವಿ ಕಟ್ಟೆಯ ಬಳಿ.

ಅಲ್ಲಿ ಏನೋ ಬಿದ್ದಿರುವುದು ಅವರಿಗೆ ದೂರದಿಂದಲೇ ಅಸ್ಪಷ್ಟವಾಗಿ ಕಂಡಿತು. ಹತ್ತಿರ ಹೋಗಿ ನೋಡಿದಾಗ ಅದೇ ಆ ಸ್ತ್ರೀ ಶರೀರ ಮತ್ತೆ ಭೂಗತವಾಗಿ ಬಿದ್ದಿತ್ತು. ಕಾಲು ಜಾರಿದ್ದರಿಂದಲೋ ಏನೋ ಅವಳು ಮುಖ ಕೆಳಗಾಗಿ ಬಿದ್ದಿದ್ದಳು. ವಸ್ತ್ರವೆಲ್ಲ ಕೆಸರಲ್ಲಿ ಕಲಸಿತ್ತು. ಲಾಟೀನನ್ನು ಬಗ್ಗಿಸಿ ನೋಡಿದಾಗ ಅವಳ ಮುಖದಲ್ಲಿ ಕೆಸರು ಮೆತ್ತಿದ್ದುದು ಕಂಡಿತು.

ಇವಳು ಏಕೆ ಹಾಸಿಗೆ ಬಿಟ್ಟು ಎದ್ದು ಹೊರಗೆ ಬಂದಳು ? ಅಂಥ ಅವಸ್ಥೆಯಲ್ಲಿ ಎದ್ದು ನಡೆದು ಬರುವುದು ಅವಳಿಗೆ ಹೇಗೆ ಸಾಧ್ಯವಾಯಿತು ? ಶೀನಪ್ಪ ಹೀಗೆ ಯೋಚಿಸುತ್ತಿರುವಾಗಲೇ ನಾಗಿ,

" ಸುಮ್ಮನೆ ನಿಂತುಕೊಂಡರೆ ಹೇಗೆ ? ಬನ್ನಿ, ಒಳಗೆ ಕರೆದುಕೊಂಡು ಹೋಗೋವ. ಈ ಪ್ರಾಣ ಉಳಿಸಿಕೊಳ್ಳಬೇಡವಾ ? " ಎಂದಳು.

ಕೂಡಲೇ ಶೀನಪ್ಪ ನಾಗಿ ಇಬ್ಬರೂ ಸೇರಿ ಅವಳನ್ನು ಒಳಗೆ ಹೊತ್ತು ತಂದರು.

ನಾಗಿ ಅವಳ ಮೈ ಮುಟ್ಟಿ ನೋಡಿ, ಮೂಗಿನ ಹತ್ತಿರ ಕೈಯಿಟ್ಟು ನೋಡಿ, ಎದೆಗೆ ಕಿವಿಗೊಟ್ಟು ಕೇಳಿ " ಇನ್ನೂ ಜೀವ ಇದೆ, ಶೀನಪ್ಪಯ್ಯ: ನೀವು ಸ್ವಲ್ಪ ಬಿಸಿ ನೀರನ್ನು ಕಾಯಿಸಿಕೊಂಡು ಬನ್ನಿ " ಎಂದು ನಾಗಿ ಈ ವಿಷಮ ಪರಿಸ್ಥಿತಿಯಲ್ಲಿ ತಾನೇ ಮುಂದಾಳುತನವನ್ನು ವಹಿಸಿಕೊಂಡಳು. ಶೀನಪ್ಪ ಅಡಿಗೆ ಮನೆಯ ಕಡೆಗೆ ನಡೆದ ಕೂಡಲೇ ನಾಗಿ ಬಚ್ಚಲು ಮನೆಗೆ ಹೋಗಿ ಒಂದಷ್ಟು ಬೂದಿಯನ್ನು ತಂದು ಅವಳ ಕಾಲಿಗೆ ಹಚ್ಚಿ ಅದು ಬಿಸಿಯಾಗುವಂತೆ ತಿಕ್ಕತೊಡಗಿದಳು. ಅಲ್ಲೇ ಇದ್ದ ಸ್ನಾನದ ಪಂಚೆಯನ್ನು ತೆಗೆದು

ಕೊಂಡು, ಗಂಟು ಸಡಿಲಿ ರಾಶಿರಾಶಿಯಾಗಿ ಬಿದ್ದಿದ್ದ ಕೂದಲನ್ನು ಚೆನ್ನಾಗಿ ತಿಕ್ಕಿ ಒರಸಿ ನೀರೆಲ್ಲ ಹೋಗುವಂತೆ ಮಾಡಿದಳು..

ಶೀನಪ್ಪ ಇಷ್ಟು ಹೊತ್ತಿಗೆ ಬಿಸಿ ನೀರು ಕಾಯಿಸಿ ತಂದ. ಆ ನೀರಿನಲ್ಲಿ ಸ್ನಾನದ ಪಂಚೆಯನ್ನು ಒದ್ದೆ ಮಾಡುತ್ತಾ " ಏನಾದರೂ ಕುಡಿಯುವುದಕ್ಕೆ ಅಷ್ಟು ಮಾಡಿಕೊಂಡು ಬನ್ನಿ ಶೀನಪ್ಪಯ್ಯ. ಜೀರಿಗೆ ಕೊತ್ತಂಬರಿ ಕಷಾಯ ಆಗಬಹುದು " ಎಂದಳು. ಶೀನಪ್ಪ ಮತ್ತೆ ಅಡಿಗೆ ಮನೆಗೆ ಹೋದ ಕೂಡಲೇ ನಾಗಿ ಬಿಸಿ ನೀರಿಂದ ಅವಳ ಮೈಯನ್ನು ಮೃದವಾಗಿ ಒರೆಸಿದಳು. ಅಲ್ಲೇ ಗಳದ ಮೇಲೆ ತೂಗುತ್ತಿದ್ದ ಶೀನಪ್ಪನ ಪಂಚೆಯನ್ನು ತೆಗೆದುಕೊಂಡು ಹತ್ತಿರ ಇಟ್ಟುಕೊಂಡಳು. ಅವಳ ಮೈಗೆ ಅಂಟಿಕೊಂಡಿದ್ದ ಸೀರೆಯನ್ನು ಬಿಚ್ಚಿ ತೆಗೆದು ಮತ್ತೆ ಮೈಯನ್ನೆಲ್ಲ ಶಾಖ ಹುಟ್ಟುವಂತೆ ಚೆನ್ನಾಗಿ ಒರಸಿ ತಿಕ್ಕಿ ಪಂಚೆಯನ್ನು ಅವಳ ಸೊಂಟಕ್ಕೆ ಸುತ್ತಿ ಮೈ ಮುಚ್ಚುವ ಹಾಗೆ ಮಾಡಿದಳು. ಇಷ್ಟು ಹೊತ್ತಿಗೆ ಅವಳ ಉಸಿರು ಕೊಂಚ ವೇಗವಾಗಿ ಆಡತೊಡಗಿತ್ತು. ಎದೆಯ ಬಡಿತ ಸ್ವಲ್ಪ ಹೆಚ್ಚಾಗಿತ್ತು. ಅಷ್ಟರಲ್ಲಿ ಶೀನಪ್ಪನೂ ಕಷಾಯವನ್ನು ತಂದು ಲೋಟಕ್ಕೆ ಬಗ್ಗಿಸಿ ನಾಗಿಯ ಕೈಗೆ ಕೊಟ್ಟ.

ನಾಗಿ, ಕೊಂಚ ಕೊಂಚವಾಗಿ ಬಾಯನ್ನು ತೆರೆದು ಅದನ್ನು ಅವಳಿಗೆ ಕುಡಿಸತೊಡಗಿದಳು. " ಹೆದರಬೇಡ ಶೀನಪ್ಪಾ, ಜೀವ ಬರ್ತಾದೆ ಇದೆ " ಎಂದಳು ನಾಗಿ.

ಶೀನಪ್ಪ ಹತ್ತಿರದಲ್ಲೇ ಪ್ರೇತಕಳೆ ತುಂಬಿದ ಆ ಮುಖವನ್ನು ನೋಡುತ್ತಾ ನಿಂತ.

ಒಂದೊಂದು ನಿಮಿಷ ಒಂದೊಂದು ಯುಗದಂತೆ ಕಂಡಿತು. ಹೊರಗೆ ಯಥಾಪ್ರಕಾರ ಗಾಳಿ ಭೋರೆನ್ನುತ್ತಿತ್ತು. ಮಳೆ ಮತ್ತೊಮ್ಮೆ ತನ್ನ ಬಲವನ್ನೆಲ್ಲ ಒಟ್ಟುಗೂಡಿಸಿ ವಿಜೃಂಭಿಸತೊಡಗಿತ್ತು.

ಕ್ರಮ ಕ್ರಮವಾಗಿ ಅವಳ ಮುಖದಲ್ಲಿ ಜೀವಕಳೆ ತುಂಬುತ್ತಿತ್ತು. ಉಸಿರ ವೇಗ ಸಹಜತೆಯ ಮಟ್ಟವನ್ನು ಮುಟ್ಟುತ್ತಿತ್ತು. ಮುಖ ಕೊಂಚ ಅಲುಗಿತು. ಕಣ್ಣಲ್ಲಿ ಚಲನೆ ಕಂಡಿತು. ಮೈ ಅತ್ತ ಸರಿಯಿತು.

ಸೀಮೆ ಸುಣ್ಣದಷ್ಟು ಬಿಳಚಿಕೊಂಡ ಮುಖ. ಕಣ್ಣಿನ ಸುತ್ತಲೂ ಕಪ್ಪ

ನೆಯ ವೃತ್ತ. ಬಿಳುಪೇರಿದ ಗಲ್ಲದಲ್ಲಿ ಅಲ್ಲಿ ಇಲ್ಲಿ ರಕ್ತ ಪರಿಚಲನೆಯ ಅಸ್ಫುಟಚ್ಛಾಯೆ. ಮಾಟವಾಗಿ, ಬಿಲ್ಲಿನಂತೆ ಬಾಗಿದ ದಟ್ಟವಾದ ಹುಬ್ಬು ಮುಖದ ಬೆಳ್ಪನೆಯ ಹಿನ್ನೆಲೆಯ ಮೇಲೆ ಎದ್ದು ಕಾಣುವ ಅಚ್ಚ ಕೆಂಪು ಬಣ್ಣದ ಚೆಂದುಟಿ. ಮೇಲ್ದುಟಿ ಕೊಂಚ ತೆರೆದಿತ್ತು. ಒಳಗೆ ಶುಭ್ರವಾದ ದಂತದಿಂದ ಕೆತ್ತಿ ತೆಗೆದಿಟ್ಟಂತಿರುವ ಒಂದೆರಡು ಹಲ್ಲುಗಳು ಹೊರಗೆ ಕಾಣಿಸುತ್ತಿದ್ದುವು.

ಮುಖದಲ್ಲಿ ಪ್ರೇತಕಳೆ ಸ್ವಲ್ಪ ಸ್ವಲ್ಪವಾಗಿ ಅಂಶ ಅಂಶವಾಗಿ ಜಾರುತ್ತ ಅದರ ಸ್ಥಾನದಲ್ಲಿ ಜೀವ ಚಂದ್ರನ ಒಂದೊಂದೇ ಕಳೆ ಮೈಗೂಡುತ್ತಿತ್ತು. ಬಾಳು ಸಾವಿನ ಈ ದ್ವಂದ್ವ ಯುದ್ಧವನ್ನು ಕುತೂಹಲದಿಂದ ನಾಗಿ ಶೀನಪ್ಪ ಇಬ್ಬರೂ ಮೈ ಮರೆತು ನೋಡುತ್ತ ನಿಂತಿದ್ದರು.

ಇದ್ದಕ್ಕಿದ್ದ ಹಾಗೆ ಮಲಗಿದ್ದವಳ ಮುಚ್ಚಿದ ತುಟಿಗಳನ್ನು ಒಡೆದುಕೊಂಡೋ ಎಂಬ ಹಾಗೆ ಭಯಂಕರವಾದ ಚೀತ್ಕಾರವೊಂದು ಹೊರಟು ಅಲ್ಲಿ ನೆಲಸಿದ್ದ ಗಾಢ ಮೌನವನ್ನು ಸೀಳಿ ಮೊಳಗಿತು. ಆ ಚೀತ್ಕಾರ ಹೊರಡುತ್ತಿದ್ದ ಹಾಗೇ ಅವಳ ದೇಹವೆಲ್ಲ ತರಗೆಲೆಯಂತೆ ತತ್ತರಿಸಿತು.

ಅದೇ ಆ ಪ್ರಾಣಸಂಕಟದ ಚೀತ್ಕಾರ. ಕೇಳಿ ಶೀನಪ್ಪನ ದೇಹವೂ ನಡುಗಿತು.

ಅವಳು ಅಸ್ಪಷ್ಟವಾಗಿ ಏನೋ ಕನವರಿಸುತ್ತಿದ್ದಳು. ತುಟಿಗಳು ಅತ್ತಿಂದಿತ್ತ ಮೇಲೆ ಕೆಳಗೆ ಚಲಿಸುತ್ತ ಕನಸಿನ ಮಬ್ಬಿನಲ್ಲಿ ಮಾತಿನ ರೂಪಗಳನ್ನು ಹುಡುಕುತ್ತಿದ್ದುವು.

“ಅಯ್ಯೋ, ಅಯ್ಯೋ.... ಕಾಪಾಡಿ, ಬಂದ, ಬಂದ, ಬಂದೇ ಬಿಟ್ಟ .... ಅಯ್ಯೋ” ಈ ಮಾತು ಹೃದಯವನ್ನೇ ಹರಿದು ತೆಗೆದಂತೆ, ಕೇಳುವವರ ಕರುಳೇ ಕಿತ್ತು ಬರುವಂತೆ, ಕೆಸರಲ್ಲಿ ಕಿತ್ತ ಕಾಲಿನಂತೆ ನಾಗಿ ಮತ್ತು ಶೀನಪ್ಪನ ಹೃದಯವನ್ನು ತುಳಿದುವು.

ನಾಗಿ ಅವಳ ಹಣೆಯ ಮೇಲೆ ಕೈಯಿಟ್ಟು ನೋಡಿದಳು. ಹಣೆ ಜ್ವರದಿಂದ ಕುದಿಯುತ್ತಿತ್ತು. ಭತ್ತ ಇಟ್ಟರೆ ಸಿಡಿದು ಅರಳಾಗುವಷ್ಟು ಬಿಸಿ. ಮೈ ಥರಥರನೆ ನಡುಗುತ್ತಿತ್ತು.

" ಬಹಳ ಜ್ವರ ಬಂದಿದೆ, ಶೀನಪ್ಪ, ತುಂಬು ಬಸುರಿ ಮಳೆಯಲ್ಲಿ ಅದೆಷ್ಟು ನೆನೆದಿದ್ದಾಳೋ ಪಾಪ."

" ಈಗ ಏನು ಮಾಡುವುದು ನಾಗಿ ? "

" ಏನಾದರೂ ಮದ್ದು ಕೂಡಲೆ ಮಾಡದೇ ಹೋದರೆ ಬದುಕುವುದು ಕಷ್ಟ ಸ್ವಾಮಿ. "

ಮದ್ದು ಕೊಡುವವರು ಸುತ್ತ ಮುತ್ತಲಿನ ಆ ಪ್ರದೇಶದಲ್ಲಿ ನಾಲ್ಕೈದು ಮಂದಿ ಇದ್ದರು. ಆದರೆ ಶಾಸ್ತ್ರೀಯವಾಗಿ ಆಯುರ್ವೇದವನ್ನು ಕಲಿತವರು ಮಾತ್ರ ಇಬ್ಬರೇ : ಕಂಭದ ಕೋಣೆಯ ಕೃಷ್ಣರಾಯರು; ಉಪ್ಪುಂದದ ಶೇಷ ಪಂಡಿತರು. ಶೇಷಪಂಡಿತರ ಕೈಗುಣ ಸುತ್ತ ಮುತ್ತಲೆಲ್ಲ ಬಹಳ ಪ್ರಸಿದ್ಧ. ಸರಿ, ಅಲ್ಲಿಗೆ ಹೋಗುವುದು ಎಂದು ನಿರ್ಧರಿಸಿ ಶೀನಪ್ಪ ಪಂಚೆ ಕಚ್ಚೆ ಹಾಕಿ ಉಟ್ಟು, ಮೈ ಮೇಲೊಂದು ಶಲ್ಯವನ್ನು ಹೊದೆದು ತಲೆಗೊಂದು ರುಮಾಲನ್ನು ಸುತ್ತಿ ಒಂದು ಕೈಯಲ್ಲಿ ಕಂದೀಲನ್ನೂ ಇನ್ನೊಂದರಲ್ಲಿ ಛತ್ರಿಯನ್ನೂ ಹಿಡಿದು ಸಿದ್ಧವಾದ.

"ನಾಗಿ, ನಾನು ಬೇಗ ಉಪ್ಪುಂದ ಪಂಡಿತರ ಮನೆಗೆ ಹೋಗಿ ಬರುತ್ತೇನೆ. ಸಾಧ್ಯವಾದರೆ ಪಂಡಿತರನ್ನೂ ಕರೆದುಕೊಂಡು ಬರಲು ಪ್ರಯತ್ನ ಮಾಡುತ್ತೇನೆ. ನೀನು ಮಾತ್ರ ಇಲ್ಲೇ ಇರು. ಬೇಗ ಬಂದುಬಿಡುತ್ತೇನೆ. ಜೋಕೆ." ಎಂದು ಹೊರಟೇ ಬಿಟ್ಟ.

" ಅಯ್ಯೋ ಪಾಪ, " ಎಂದು ನಾಗಿ ನಿಟ್ಟುಸಿರು ಬಿಟ್ಟು ಹೊರ ಬಾಗಿಲನ್ನು ಹಾಕಿ ಬಂದು ಹಾಸಿಗೆಯ ಹತ್ತಿರ ಕಾವಲು ಕುಳಿತಳು.

## ೨

" ಕೇಳಿದಿರಾ, ಕೇಳಿದಿರಾ ? " ಎನ್ನುತ್ತ ಪಾರ್ವತಮ್ಮ ತನ್ನ ಗಂಡ ನಾರಣಪ್ಪನ ಮೈಮೇಲೇ ಬೀಳುತ್ತಾಳೋ ಎನ್ನುವ ಹಾಗೆ ಎಗರಿ ಬಂದಳು.

ಪಾರ್ವತಮ್ಮನದು ಗುಂಡುಗುಂಡಾದ ಗುಜ್ಜುಗುಜ್ಜಾದ ದೇಹ. ಮಣಗಟ್ಟಲೆ ಮಾಂಸವನ್ನು ಹೊತ್ತ ಆ ಮಾನಿಸಿ ಓಡಾಡುವುದೇ ಒಂದು ಪವಾಡ ಎಂದು ನೋಡುವವರಿಗೆ ಅನ್ನಿಸಬೇಕು. ಆದರೂ ಬಹಳ ಚುರುಕು ; ನಿಂತಲ್ಲಿ ನಿಲ್ಲಲಾರಳು, ಕುಳಿತಲ್ಲಿ ಕುಳ್ಳಿರಲಾರಳು. ಸದಾ ಚಂಚಲ. ಮಾತಾಡುವಾಗ ಕೈ ಬಾಯಿಗಳು ಮಾತ್ರವಲ್ಲ. ಹುಬ್ಬು, ಎದೆ, ಕಾಲು – ಸರ್ವಾಂಗವೂ ಕುಣಿಯುತ್ತಿರಬೇಕು.

ನಾರಣಪ್ಪನ ಸ್ವರೂಪ, ತದ್ವಿರುದ್ಧ, ತೆಳ್ಳನೆ ತಂತಿಯಂಥ ದೇಹ. ಮಾಂಸವೇ ಇಲ್ಲವೋ ಎನ್ನುವಷ್ಟು ಬಡಕಲು. ಮೂರು ನಾರಣಪ್ಪನನ್ನು ಸೇರಿಸಿದರೆ ಒಂದು ಪಾರ್ವತಮ್ಮ ಎಂದು ಊರಿನ ರಸಿಕರು ಪಾರ್ವತಮ್ಮನ ಪರೋಕ್ಷದಲ್ಲಿ ಆಡುವ ಮಾತು. ನಾರಣಪ್ಪನ ಮಾತು ವರಹಕ್ಕೊಂದು ಹೊನ್ನಿಗೊಂದು ಆದರೆ ಪಾರ್ವತಮ್ಮನದು ಕಾಸಿಗೆ ಮೂರು ಸಾವಿರ, ಮತ್ತೆ ಇನ್ನೊಂದು ಸಾವಿರ ಕೊಸರಿಗೆ. ಮಾತಾಡುವುದು ಬಿಟ್ಟರೆ ಇನ್ನು ಈ ಮಹಾರಾಯತಿಗೆ ಬೇರೆ ಕೆಲಸವೇ ಇಲ್ಲವೋ ಎನ್ನುವಷ್ಟು ಮಾತು ಪಾರ್ವತಮ್ಮನಿಗೆ. ಒಂದು ಬಗೆಯ ನೀರಸವಾದ ಒಡಕು ಗಂಟಲು ಬೇರೆ. ದಿನವೆಲ್ಲ ಮನೆಯೊಳಗೆ ಹತ್ತಾರು ಸೀಮೆಎಣ್ಣೆ ಡಬ್ಬಿಗಳನ್ನು ಎಳೆದಾಡಿದಂತೆ ಸದಾ ನಾರಣಪ್ಪನ ಮನೆಯಲ್ಲಿ ಗದ್ದಲ ಕಿವಿಯಷ್ಟು ನಿರುಪಯೋಗಿಯಾದ ಇಂದ್ರಿಯ ಬೇರೊಂದಿಲ್ಲ ಎಂದು ನಾರಣಪ್ಪ ಎಷ್ಟೋ ಸಲ ಅಂದದ್ದನ್ನು ಬಹಳ ಜನ ಕೇಳಿದ್ದಾರೆ. ಆತ ಮನೆಯೊಳಗಿದ್ದಾಗ ತನ್ನ ಎರಡೂ ಕಿವಿಗಳೊಳಕ್ಕೆ ಹತ್ತಿಯ ದಪ್ಪನೆಯ

ಬಿರಡೆಗಳನ್ನು ಹಾಕಿಕೊಂಡೇ ಬದುಕುತ್ತಾನೆ ಎಂಬುದೂ ಆ ಊರಿನಲ್ಲಿ ಪ್ರಚಾರದಲ್ಲಿದ್ದ ಒಂದು ಕಥೆ. "ಇಲ್ಲವಾದರೆ ಇಷ್ಟು ಹೊತ್ತಿಗೆ ನಮ್ಮ ನಾರಣಪ್ಪ ಕಿವುಡನಾಗಿಬಿಡುತ್ತಿದ್ದ. ಹಾಗೆ ಅವನು ಕಿವುಡನಾಗಿಲ್ಲ ಎನ್ನು ವುದೇ ನಮ್ಮ ಕಥೆಗೆ ದೊಡ್ಡ ರುಜುವಾತು" ಎಂದು ಆ ಕಥೆಯ ಪುರಸ್ಕರ್ತರು ತಮ್ಮ ವಾದವನ್ನು ಮಂಡಿಸುತ್ತಾರೆ.

ಕತ್ತಲು ಕಳೆದು ಬೆಳಕು ಹರಿದಿತ್ತು. ಸೂರ್ಯೋದಯ ಆಗಿದೆಯೋ ಇಲ್ಲವೋ ಹೇಳುವುದು ಕಷ್ಟ. ಸೂರ್ಯೋದಯವಾಗಿ ಆಗಲೇ ಮೂರು ಗಳಿಗೆ ಆಗಿದ್ದರೂ ಇರಬಹುದು. ಅಥವಾ ಸೂರ್ಯೋದಯ ಇನ್ನೂ ಆಗದೇ ಇದ್ದರೂ ಇರಬಹುದು. ಮೋಡ ಕವಿದ ಆಕಾಶ ಮೂಕವಾಗಿ ನಿಂತಿತ್ತು. ರಾತ್ರಿಯೆಲ್ಲ ಸುರಿದ ಮಳೆ ಕೊಂಚ ವಿಶ್ರಾಂತಿ ತೆಗೆದುಕೊಂಡಂತಿತ್ತು. ನಾರಣಪ್ಪ ಆಗ ತಾನೇ ಹಾಸಿಗೆಯಿಂದೆದ್ದು 'ಪ್ರಾತಃಸ್ಮರಣೆಯ' ಶ್ಲೋಕಗಳನ್ನು ಗೊಣಗುತ್ತ ಮುಖ ತೊಳೆದುಕೊಳ್ಳಲು ಬಚ್ಚಲು ಮನೆಯ ಕಡೆ ಬಂದಿದ್ದರು.

ಒಂದು ಕೈಯಲ್ಲಿ ಅನ್ನದ ತಪ್ಪಲೆ, ಇನ್ನೊಂದರಲ್ಲಿ ಒಂದು ಬೋಗುಣಿ ಹಿಡಿದುಕೊಂಡು ತನ್ನ ಮೈಯ ಮಾಂಸಖಂಡಗಳೆಲ್ಲ ತಕಪಕನೆ ಕುಣಿಯು ತ್ತಿರಲು ಪಾರ್ವತಮ್ಮ ಬಚ್ಚಲು ಮನೆಗೆ ಬಂದು ತನ್ನ ಗಂಡನಿಗೆ ಇದಿರಾದಳು.

ತನ್ನ ಪ್ರಶ್ನೆಗೆ, ತನ್ನ ಉತ್ಸಾಹದ ಮಾತಿಗೆ ಗಂಡನಿಂದ ಯಾವ ಉತ್ತ ರವೂ ಬಾರದುದನ್ನು ಕಂಡು ಪಾರ್ವತಮ್ಮ ಬೆಂಕಿಯಾದಳು : "ನನ್ನ ಹಣೆ ಬರಹವೇ ಇಷ್ಟಾಯಿತು. ಈ ಮನೆಯಲ್ಲಿ ನನಗೆ ಎಂಜಲೆಲೆ ನೆಕ್ಕುವ ನಾಯಿ ಗಿರುವಷ್ಟೂ ಬೆಲೆ ಇಲ್ಲವಾಯಿತು. ಒಂದು ಮಾತಾಡಿದರೆ ಹಾ ಹೂ ಎನ್ನು ವಷ್ಟೂ ಸೈರಣೆ ಮನೆಯವರಿಗೆ ಇಲ್ಲವಾದ ಮೇಲೆ ನಾನು ಇದ್ದರೆಷ್ಟು ಬಿಟ್ಟ ರೆಷ್ಟು? ಅಯ್ಯೋ ಈ ಪಾಪಿ ಜನ್ಮಕ್ಕೆ ಎಂದು ಕೊನೆ ಬರುವುದೋ" ಎಂದು ಗದ್ಗದಕಂಠಳಾಗಿ "ಪರಮಾತ್ಮ, ಈ ಪಾಪಿಯನ್ನು ಕರಸಿಕೋ ಎಂದು ದಿನಾಲೂ ಬೇಡಿಕೊಳ್ಳುತ್ತಿದ್ದೇನೆ. ಇನ್ನೂ ಎಷ್ಟು ದಿನ ಈ ನರಕವಾಸವೋ. ಆ ಪರಮಾತ್ಮನಿಗೆ ನನ್ನ ಮೇಲೆ ದಯ ಯಾವಾಗ ಹುಟ್ಟುವುದೋ. ರಾಮಾ, ಗೋವಿಂದಾ" ಎನ್ನುತ್ತ ತಪ್ಪಲೆಯನ್ನು ನೆಲಕ್ಕೆ ಕುಕ್ಕಿದಳು

ಪಾರ್ವತಮ್ಮ ಮಾತಿನ ವರಸೆಯೆಲ್ಲವನ್ನೂ ಬಲ್ಲಳು. ಮಾತು ಕೂಡಾ

ಬಹಳ ಸಂಸ್ಕಾರಗೊಂಡದ್ದು. ಸುತ್ತುಮುತ್ತಲಿನ ನಾಲ್ಕೈದು ಮೈಲಿಗಳೊಳಗೆ ಆಗುವ ಒಂದು ಯಕ್ಷಗಾನದ ಆಟವನ್ನೂ ಬಿಟ್ಟವಳಲ್ಲ. ಅಲ್ಲಿನ ಪಾತ್ರಗಳ ಮಾತುಗಾರಿಕೆಯನ್ನು ಕೇಳಿ ಕೇಳಿ ಅವಳ ಮಾತೂ ಬೆಳೆಯಿತಲ್ಲದೆ ಮಾತಿಗೆ ಬಣ್ಣ ಕೊಡುವ ಉಪಮೆ ದೃಷ್ಟಾಂತಗಳ ಹೊರೆಹೊರೆಯೇ ಅವಳ ಮನಸ್ಸಿನ ಉಗ್ರಾಣದಲ್ಲಿ ಮನೆಮಾಡಿತ್ತು. ತನ್ನ ಮಾತಿನ ಕತ್ತಿವರಸೆಯ ಆಟಕ್ಕೆ ನಾರಣಪ್ಪನಂಥ ಬಡಪಾಯಿ ಪ್ರತಿ ಸ್ಪರ್ಧಿಯಾಗಿ ಸಿಕ್ಕಿದ್ದು ಮಾತ್ರ ಅವಳ ದುರ್ದೈವ.

ಪಾತ್ರೆ ನೆಲಕ್ಕೆ ಕುಕ್ಕಿದ ಸದ್ದು ಕೇಳಿದ ಕೂಡಲೇ ಈಗ ತಾನು ಮಾತ ನಾಡಬೇಕಾದ ಸಂದಿಗ್ಧ ಪರಿಸ್ಥಿತಿ ಪ್ರಾಪ್ತವಾಯಿತು ಎಂದು ನಾರಣಪ್ಪನಿಗೆ ತಿಳಿಯಿತು. ಪಾರ್ವತಮ್ಮನ ಕಂಠ ಗದ್ಗದವಾಯಿತೆಂದರೆ “ಏನು, ನನ್ನ ಮಾತಿಗೆ ಕೂಡಲೇ ಉತ್ತರ ಕೊಡುತ್ತೀರೋ, ಇಲ್ಲ ಇನ್ನು ಮುಂದೆ ಇಡೀ ದಿನ ನನ್ನ ಭಾಷಣ ಕೇಳುತ್ತೀರೋ” ಎಂದು ನೋಟೀಸು ಕೊಟ್ಟ ಹಾಗೆ.

“ಅದು ಏನು ಹೇಳಬೇಕಂತೀಯೋ ಅದನ್ನು ಹೇಳಿಬಿಡಬಾರದೆ? ಸುಮ್ಮನೆ ಕೇಳಿ ಕೇಳಿ, ಕೇಳಿದಿರಾ? ಅಂದರೆ?” ಎಂದು ನಾರಣಪ್ಪ ಕೊನೆಗೂ ಬಾಯಿ ಬಿಟ್ಟ. ಎಷ್ಟು ಕಷ್ಟಪಟ್ಟರೂ ಮಾತಿನಲ್ಲಿ ಕೊಂಚ ಅಸಹನೆ ತಲೆದೋರದೆ ಇರಲಿಲ್ಲ.

“ಹೇಳಿಬಿಡಬಾರದೆ ಅಂತ ಗದರಿಸುತ್ತೀರಲ್ಲ, ಮಹಾರಾಯರೇ; ನನಗೆ ಇನ್ನೇನೂ ಕೆಲಸವಿಲ್ಲ; ಹಗಲೆಲ್ಲ ಗರಟೆ ಹೆರೆಯುವುದಷ್ಟೆ ಕೆಲಸ ಅಂತ ತಿಳಿದಿರಾ? ಈ ಮನೆಯ ಕೆಲಸ, ಈ ಅಡಿಗೆ, ಈ ಹಸು ಎಮ್ಮೆಗಳ ಚಾಕರಿ–ಪರಮಾತ್ಮ, ಜೀವವೇ ಸಾಕು, ಸಾಕು ನಮ್ಮಪ್ಪ ಅನ್ನಿಸಿಬಿಟ್ಟಿದೆ. ‘ತೋರ ಮಾಣಿಕವೆಂದು ಹಿಡಿದುದು ಭೂರಿಕೆಂಡವಿದಾಯ್ತು.’ ಏನು ಮಾಡಲಿ? ಇಷ್ಟಕ್ಕೂ ಈ ಮಾತು ಹೇಳಿ ನನಗೆ ಆಗಬೇಕಾದ್ದೂ ಅಷ್ಟರಲ್ಲೇ ಇದೆ. ಏನೋ ನಿಮ್ಮ ಮೆಚ್ಚಿನ ಮಗ ಶೀನಪ್ಪನ ದರಬಾರನ್ನು ಕೇಳಿದರೆ ನಿಮ್ಮ ಮುಖ ಇಷ್ಟ ಗಲವಾಗಬಹುದು ಅಂತ ಹೇಳೋದಕ್ಕೆ ಬಂದೆ. ಬೇಡವಾದರೆ ಬೇಡ. ಅದನ್ನೆಲ್ಲ ಕಟ್ಟಿಕೊಂಡು ನನಗೇನಾಗಬೇಕಾಗಿದೆ?” ಪಾರ್ವತಮ್ಮ ತನ್ನ ಸಾಭಿನಯ ಭಾಷಣವನ್ನು ಹಂಡೆಯೊಳಕ್ಕೆ ಚೆಂಬನ್ನು ಬಲವಾಗಿ ಕುಟ್ಟಿ ಮುಗಿಸಿದಳು.

ಇಷ್ಟು ಹೊತ್ತು ಈ ಭಾಷಣವನ್ನು ತಾಳ್ಮೆಯಿಂದ ಕೇಳುತ್ತ ಹಲ್ಲು ತಿಕ್ಕಿ ಮುಗಿಸಿದ್ದ ನಾರಣಪ್ಪನಿಗೆ ಶೀನಪ್ಪನ ಹೆಸರು ಕೇಳಿದಾಗ ಕಿವಿ ಕೊಂಚ ನೆಟ್ಟಗಾಯಿತು. ತನ್ನ ತಮ್ಮನ ಒಬ್ಬನೇ ಒಬ್ಬನಾದ ತಬ್ಬಲಿ ಮಗನ ವಿಷಯದಲ್ಲಿ ನಾರಣಪ್ಪನಿಗೆ ಬಹಳ ವಾತ್ಸಲ್ಯ. ಅವನು ಈ ದಶಾವತಾರ ಯಕ್ಷಗಾನ ಅಂತ ಅಡ್ಡ ದಾರಿ ಹಿಡಿಯದೆ ಸುಖವಾಗಿ ಎಲ್ಲರಂತೆ ಮದುವೆ ಮಾಡಿಕೊಂಡು ಸಂಸಾರ ಸಾಗಿಸುತ್ತಿದ್ದಿದ್ದರೆ ಅವನಿಗೆ ಬಹಳ ಸಂತೋಷವಾಗುತ್ತಿತ್ತು. ಅದರೂ ಸಾಲ ಶೂಲ ಮಾಡಿಕೊಳ್ಳದೆ ಹೀನ ವೃತ್ತಿಗಿಳಿಯದೆ ಸದಾಚಾರಿಯಾಗಿ ತನ್ನ ಪಾಡಿಗೆ ತಾನು ಜೀವಿಸುತ್ತಿದ್ದ ಶೀನಪ್ಪನ ಬಗ್ಗೆ ಆತ ಅತೃಪ್ತನಾಗಲು ಯಾವ ಕಾರಣವೂ ಇರಲಿಲ್ಲ. ಯಾವಾಗಲು 'ನಮ್ಮ ಶೀನ' ಅಂತಲೇ ನಾರಣಪ್ಪ ಶೀನಪ್ಪನನ್ನು ಕುರಿತು ಮಾತಾಡುತ್ತಿದ್ದರು. ಒಂದೊಂದು ಸಲ ತನ್ನ ಸಂಸಾರ ಸುಖವನ್ನು ನೆನಸಿಕೊಂಡಾಗ ಶೀನಪ್ಪ ಮಾಡಿದ್ದೇ ಸರಿ ಎಂತಲೂ ಅವನಿಗೆ ಅನಿಸದಿರುತ್ತಿರಲಿಲ್ಲ.

"ಏನು ಶೀನನ ದರಬಾರು ಅಂದೆಯಲ್ಲ. ಅದೇನು ದರಬಾರು ನಡಸಿದ ನಮ್ಮ ಶೀನ ?"

ತನ್ನ ಗಂಡನ ಕುತೂಹಲ ಕೆರಳಿತು ಅಂತ ತಿಳಿದ ಕೂಡಲೇ ಪಾರ್ವತಮ್ಮ ಕೊಂಚ ಬಿಗಿಯಾದಳು. ಆತನನ್ನು ಆಟವಾಡಿಸಲು ಇದೇ ತಕ್ಕ ಸಮಯ ಎಂದು ಆಕೆ ಬಲ್ಲಳು.

"ಆಹಾ ನಾನು ಹೇಳಲಿಲ್ಲವೇ ? ನಿಮ್ಮ ಶೀನನ ಹೆಸರು ಕೇಳಿದ ಕೂಡಲೇ ಕಿವಿ ನೆಟ್ಟಗಾಯಿತಲ್ಲ! ಆ ಹುಡುಗ ಒಳ್ಳೇದಾಗುವ ಜಾತಿಯೇ ಅಲ್ಲ ಅಂತ ನಾನು ಹೇಳುತ್ತ ಬಂದದ್ದು ನಿಮಗೆ ತಮಾಷೆಯಾಗಿ ಕಂಡಿತು. ಇವಳಿಗೆ ದಾಯಾದಿ ಹುಡುಗನ ಮೇಲೆ ಏನೋ ಮತ್ಸರ ಅಂತ ನೀವು ತಿಳಿದಿರಿ. ಈಗಲಾದರೂ ನನ್ನ ಮಾತು ಸರಿಯಾಯಿತೋ ಇಲ್ಲವೋ ?" ಎಂದು ಪಾರ್ವತಮ್ಮ ತೃಪ್ತಿಯ ಮಂದಹಾಸವನ್ನು ಸೂಸಿದಳು.

"ಈಗ ಆದದ್ದಾದರೂ ಏನು ಶೀನ ಅಂಥಾ ಕೆಲಸ ಏನು ಮಾಡಿದ ?"

"ಏನು ಮಾಡಿದ ? ಪಿತೃಪಿತಾಮಹರ ಹೆಸರನೆಲ್ಲ ತೊಳೆದ. ಕುಲದ

ಹೆಸರಿಗೆ ಕೆಸರು ಹಚ್ಚಿದ. ಇನ್ನೂ ಮತ್ತೇನು ಮಾಡಬೇಕು ಪ್ರೀತಿಯ ದೊಡ್ಡಪ್ಪ ನೀವಾದರೂ ಅವನಿಗೆ ಹೇಳಿಕೊಡಿ."

ವಿಷಯವೇನೆಂದು ತಿಳಿಯದೆ ನಾರಣಪ್ಪ ಕೊಂಚ ಉದ್ವಿಗ್ನನಾದ. ತನ್ನ ಹೆಂಡತಿಗಾದ ಸಂತೋಷದ ಆಳವನ್ನು ಗುರುತಿಸಿದಾಗ ನಿಜವಾಗಿಯೂ ಏನೋ ನಡೆದಿರುವುದು ಖಂಡಿತ ಅಂತ ಅವನಿಗೆ ತೋರಿತು. ಆದರೆ ಅದು ಏನು? ಈ ವಾಚಾಳಿಯಿಂದ ಬೇಕಾದ ವಿಷಯವನ್ನು ಹೇಗೆ ತಿಳಿಯುವುದು? ಹೀಗೆ ಅವಳು ಮಾತಾಡಲು ಎಡೆ ಕೊಟ್ಟರೆ ಬೇಕಾದ ಸಂಗತಿ ತಿಳಿಯಲು ಇನ್ನೂ ಎಷ್ಟು ಯುಗಗಳು ಕಾಯಬೇಕೋ! ಕುತೂಹಲ ತೋರಿಸಿದಷ್ಟು ಪಾರ್ವತಮ್ಮನ ಮಾತಿನ ಪರಿಧಿ ಹಿಗ್ಗುತ್ತ ಹೋಗುತ್ತದೆಂದು ಬಹುಕಾಲದ ಅನುಭವದಿಂದ ನಾರಣಪ್ಪ ಅರಿತಿದ್ದ.

"ಹೋಗಲಿ, ನಡೆದದ್ದೇನು ಅಂತ ತಿಳಿಯುವ ಹಾಗೆ ಹೇಳುವುದಾದರೆ ಹೇಳು. ಇಲ್ಲವಾದರೆ ಬೇಡ ಏನಾದರೂ ನಡೆದದ್ದೇ ನಿಜವಾದರೆ ಈಗಲ್ಲದಿದ್ದರೆ ಆಮೇಲಾದರೂ ತಿಳಿದೇ ತಿಳಿಯುತ್ತದೆ." ಎಂದ

"ಅದನ್ನೇ ಹೇಳುತ್ತಾ ಇದ್ದೇನಲ್ಲ. ನಿಮಗೆ ಯಾವಾಗಲೂ ಅವಸರವೇ. ನನ್ನ ಮಾತು ಕೇಳುವುದೆಂದರೆ ನಿಮಗೇಕೆ ಇಷ್ಟು ಜೀವಸಂಕಟವೋ ಕಾಣೆ."

ಇಷ್ಟು ಹೊತ್ತಿಗೆ ಮುಖ ತೊಳೆದುಕೊಂಡಿದ್ದ ನಾರಣಪ್ಪ ಪಂಚೆಯ ಸೆರಗಿನಿಂದ ಮುಖ ಒರಸಿಕೊಂಡು ಬಚ್ಚಲಮನೆಯಿಂದ ಹೊರಡಲು ಸಿದ್ಧನಾದದ್ದನ್ನು ಕಂಡು ಪಾರ್ವತಮ್ಮ ಹುಸಿನಗು ನಗುತ್ತಾ,

"ಇಷ್ಟು ದಿನದ ನಿಮ್ಮ ಶೀನನ ಗುಟ್ಟು ನಿನ್ನೆರಾತ್ರಿ ರಟ್ಟಾಯಿತು. ಇಷ್ಟು ದಿನವೂ ನೀವು ಹುಡಗ ಒಳ್ಳೆಯವ, ಅಡ್ಡದಾರಿ ಹಿಡಿಯುವವನಲ್ಲ ಅಂತ ಹೇಳುತ್ತಾ ಬಂದಿದ್ದೀರಿ. ಲಂಗು ಲಾಗಾಮಿಲ್ಲದ ಅವನ ನಡವಳಿಕೆಯನ್ನು ತಿಳಿದಿದ್ದ ನನಗೆ ಮೊದಲಿಂದಲೂ ಸ್ವಲ್ಪ ಸಂಶಯ. ಅದು ನಿಮಗೂ ಗೊತ್ತಿದೆ. ಆದರೆ ನಾನು ಕೂಡಾ ಅವನು ಇಷ್ಟು ಕದೀಮ ಅಂತ ತಿಳಿದಿರಲಿಲ್ಲ."

"ನಿನ್ನೆ ರಾತ್ರಿ? ಏನು ಗುಟ್ಟು! ಏನು ರಟ್ಟಾದುದು?"

"ನಿನ್ನೆ ರಾತ್ರಿ ಅವನ ಮನೆಗೆ ಯಾರು ಬಂದಿದ್ದರು—ನಿಮಗೆ

ಗೊತ್ತಾ ? "

" ನನಗೆ ಗೊತ್ತಿದ್ದರೆ ಹೀಗೆ ನಿನ್ನ ಮಾತು ಕೇಳುತ್ತಾ ನಿಲ್ಲಬೇಕಾಗಿತ್ತೆ? "

" ನೀವು ಇಲ್ಲಿ ನಿಲ್ಲುವುದು ಬೇಡ, ಕೇಳುವುದೂ ಬೇಡ, ನೀವೇ ಹೋಗಿ ನಿಮ್ಮ ಮುದ್ದು ಮಗನ ರಂಭೆಯನ್ನು ನೋಡಿ ಆಶೀರ್ವಾದ ಮಾಡಿ ಬರ ಬಾರದೆ ? "

ಈ ಮಾತನ್ನು ಕೇಳಿ ನಾರಣಪ್ಪನ ತಲೆಯ ಮೇಲೆ ಆಕಾಶವೇ ಕೆಳಗೆ ಬಿದ್ದ ಹಾಗೆ ಆಯಿತು. ಶೀನ ಏನು ಮಾಡಿಕೊಂಡನಪ್ಪ ಅಂತ ಎದೆ ತಲ್ಲಣಿ ಸಿತು. ಪಾರ್ವತಮ್ಮ ಇಲಿ ಹೋದರೆ ಹುಲಿ ಹೋಯಿತು ಅಂತ ಕೊಂಚವೂ ಹಿಂದೆ ಮುಂದೆ ನೋಡದೆ ಹೇಳಬಲ್ಲನಳು— ನಿಜ. ಆದರೆ ಇಷ್ಟು ದೊಡ್ಡ ಕಥೆ ಯನ್ನು ಅವಳೂ ಕಟ್ಟಲಾರಳು. ಏನಾಗಿರಬಹುದು ಎಂದು ನಾರಣಪ್ಪ ಯೋಚಿಸಿತ್ತಿರುವಾಗಲೇ ಪಾರ್ವತಮ್ಮ,

" ಮದುವೆ ಮಾಡಿಕೊಳ್ಳೋ ಅಂತ ನೀವೆಲ್ಲ ಗಿಣಿಗೆ ಹೇಳಿದ ಹಾಗೆ ಹೇಳಿದರೂ ಅವ ಕಿವಿ ಮೇಲೆ ಹಾಕಿ ಕೊಂಡನಾ ? ಏನೋ ತಾನು ಆಜನ್ಮ ಸನ್ಯಾಸಿಯಾಗಿರುವ ಹಾಗೆ ಎಷ್ಟು ಎಗರಾಡಿದ ? ಈಗ ? ಪ್ರಾಯದ ಹುಡುಗ ಮದುವೆ ಮಾಡಿಕೊಳ್ಳುವುದಿಲ್ಲ ಎನ್ನಬೇಕಾದರೆ ಏನೋ ಸ್ವಾರಸ್ಯ ಇರಬೇಕು ಅಂತ ನನಗೆ ಮೊದಲಿಂದಲೂ ಅನ್ನಿಸುತ್ತಿತ್ತು. ಹೇಳಿದರೆ ನೀವು ನಂಬಲಿಲ್ಲ, ನನ್ನ ಮಾತು ಹಾರಿಸಿಬಿಟ್ಟಿರಿ. ಈಗ ನೋಡಿ ಬಂದಳಲ್ಲ ಕೊನೆಗೂ ಅವನ ಸೂಳೆ ? "

" ಸೂಳೆ ? "

" ಅಲ್ಲದೆ ಮತ್ತೇನು ? ಇಲ್ಲವಾದರೆ ನಿನ್ನೆ ಮಧ್ಯ ರಾತ್ರಿ ಹೊತ್ತಿಗೆ ಅವನ ಮನೆಗೆ ಒಬ್ಬಳೇ ಅವಳು ಬರುತ್ತಿದ್ದಳಾ ? ಬಂದು ಅಲ್ಲೇ ಇದ್ದುಬಿಡುತ್ತಿ ದ್ದಳಾ ?"

ತರ್ಕ ಶುದ್ಧವಾದ ಮಾತು. ಆದರೆ—

" ಆದರೆ ಅವಳು.... ಯಾರು ? " ಎಂದು ಕೇಳಿದ ನಾರಣಪ್ಪ.

" ಯಾರು ಅಂದರೆ ನಿಮ್ಮ ಶೀನ ಇಟ್ಟುಕೊಂಡವಳು. ಅಷ್ಟು ತಿಳಿ ಯುವುದಿಲ್ಲವೆ ನಿಮಗೆ ? ಇಷ್ಟೂ ಸಾಲದು ಎಂದರೆ ಅವಳು ಬಸುರಿಯಂತೆ.

ನೋಡಿದಿರಾ, ಹೇಗಿದೆ? ಯಾವ ಹೆಣ್ಣನ್ನೊ ಕೆಡಿಸಿ ಇಲ್ಲಿಗೆ ಬಂದು ಸನ್ಯಾಸಿಯಾಗಿ ಕೂತುಕೊಂಡ ನಿಮ್ಮ ಶೀನ. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ಊರಿಗೆ ಕಾಣಿಸದೆ ಇರುತ್ತದಾ? ಈಗ ಬಂದಿದ್ದಾಳೆ. ' ನನಗೆ ನೀನೇ ದಿಕ್ಕು ಅನ್ನುತ್ತ.' ಬಿಟ್ಟಾಳಾ ಮತ್ತೆ?— ಸುಖಪಡುವುದಕ್ಕೆ ಬೇಕು ಅದರ ಫಲ ಬೇಡ ಅಂದರೆ."

ನಾರಣಪ್ಪನ ಮನಸ್ಸು ಬಹಳ ವ್ಯಗ್ರವಾಯಿತು. ಏನೋ ಆಗಿದೆ; ಅದು ಸ್ಪಷ್ಟವಾಗಿ ಏನು ಅಂತ ತಿಳಿಯದ್ದರಿಂದ ಮನಸ್ಸಿನ ಮೂಕ ಸಂಕಟ ಇನ್ನೂ ಹೆಚ್ಚಿತು. ಶೀನ ಯಾವುದೋ ಒಂದು ಸುಳಿಯೊಳಗೆ ಸಿಕ್ಕಿ ಬಿದ್ದಿದ್ದಾನೆಂಬುದು ಮಾತ್ರ ನಿಜ. ತನ್ನ ಪಾಡಿಗೆ ತಾನು ಇದ್ದ ಶೀನನಿಗೆ ಈ ಸಂಕಟ ಪ್ರಾಪ್ತವಾಯಿತಲ್ಲ ಅಂತ ನಾರಣಪ್ಪನ ಹೃದಯ ಕರಗಿ "ಅಯ್ಯೋ ಪಾಪ" ಎಂದ.

"ಅಯ್ಯೋ ಪಾಪ, ಅಯ್ಯೋ ಪಾಪ ಎನ್ನುತ್ತ ಅವನನ್ನು ತಲೆಯ ಮೇಲೆ ಕೂರಿಸಿಕೊಂಡಿರಿ. ಈಗ ಎಲ್ಲರೂ ಅನುಭವಿಸಬೇಕಾಗಿದೆ. ಮನೆತನದ ಹೆಸರನ್ನು, ಬೀದಿಗೆಳೆದ, ಆ ಪಾಪಿ, ಭಂಡ. ಇನ್ನು ನಾವು ಊರಿನಲ್ಲಿ ಮುಖ ಎತ್ತಿಕೊಂಡು ತಿರುಗುವುದು ಹೇಗೆ ಹೇಳಿ." ಪಾರ್ವತಮ್ಮ ಬಹಳ ಸಂತೋಷದಿಂದ ಮಾತಾಡುತ್ತಿದ್ದಳೆಂಬುದು ಸ್ಪಷ್ಟವಾಗಿತ್ತು. ನಾರಣಪ್ಪ ಕೊಂಚ ಗಡಸು ದನಿಯಲ್ಲೇ ಕೇಳಿದರು.

"ಈ ಕಥೆಯೆಲ್ಲ ನಿನಗೆ ಹೇಳಿದವರು ಯಾರು?"

"ಇನ್ನು ಯಾರು ಹೇಳಬೇಕು? ನಿಮ್ಮ ಶೀನನ ಆ ಮುಖ್ಯ ಪ್ರಧಾನಿ ಇಲ್ಲವೇ ಆ ನಾಗಿ. ಅಬ್ಬ ಏನು ನಟನೆ ಆ ಮುದುಕೀದು. ಕಣ್ಣೀರೇನು ಸಿಟ್ಟೇನು? ಒಳ್ಳೆ ನಾಟಕದಲ್ಲಿ ವೇಷಾಡಿದ ಹಾಗೆ ಆಡಿಬಿಟ್ಟಳು. ಬೆಳಗಾಗೆದ್ದು ಹೊಸ್ತಲು ಬರೆಯಲು ಹೋದರೆ ಕಂಡದ್ದು ಆ ಅಷಾಢಭೂತಿಯ ಮುಖ. ಇವತ್ತೆಲ್ಲ ನನಗೆ ಏನು ಕಾದಿದೆಯೋ ದೇವರೇ ಬಲ್ಲ. ಬಲಗಣ್ಣು ಆಗಲೇ ಹೊಡೆದುಕೊಳ್ಳುತ್ತಿದೆ."

"ನಾಗಿ ಅಷ್ಟು ಹೊತ್ತಿಗೆ ಇಲ್ಲಿ ಹೇಗೆ ಬಂದಳು?"

"ಅವಳೂ ರಾತ್ರಿ ಶೀನನ ಮನೆಯಲ್ಲೇ ಇದ್ದಳಂತೆ. ಆ ರಂಭೆಗೇನೋ ಜ್ವರವೋ ಜಾಪತ್ತೋ ಎಂಥದೋ ಅಂತೆ. ರಾತ್ರಿ ಇಬ್ಬರಿಗೂ ನಿದ್ದೆಯಿಲ್ಲವಂತೆ

ರಾತ್ರಿ ಶೀನ ಪಂಡಿತರ ಮನೆಗೆ ಹೋಗಿ ಅವರನ್ನು ಕರೆದುಕೊಂಡು ಬಂದ ನಂತೆ. ವಿಪರೀತ ಜ್ವರ, ಇನ್ನೂ ಇಳೀಲಿಲ್ಲ ಅಂತ ಮುದುಕಿ ಏನೇನೋ ಗೊಣಗಿದಳು. ಅದೆಲ್ಲಾ ನನಗೇಕೆ ಅಂತ ನಾನು ಒಳಕ್ಕೆ ಬಂದು ಬಿಟ್ಟೆ."

ನಾರಣಪ್ಪನಿಗೆ ಇನ್ನು ಹೆಚ್ಚಿಗೆ ಏನೂ ತಮ್ಮ ಹೆಂಡತಿಯಿಂದ ತಿಳಿಯಲು ಸಾಧ್ಯವಿಲ್ಲ ಅಂತ ತೋರಿತು. ಪಾರ್ವತಮ್ಮನಿಗೂ ಕೂಡಾ ರಾತ್ರಿ ಶೀನಪ್ಪನ ಮನೆಗೆ ಯಾವಳೋ ಒಬ್ಬ ಅನಾಥೆ ಹೆಂಗಸು ಬಸುರಿ ಬಂದಿದ್ದಳು– ಅವಳಿಗೆ ಜ್ವರ ಅಂತ ಅಷ್ಟು ತಿಳಿದಿತ್ತಲ್ಲದೆ ಹೆಚ್ಚಿಗೆ ಏನೂ ತಿಳಿಯದು. ಉಳಿದದ್ದೆಲ್ಲ ಅವಳ ನವನವೋನ್ಮೇಷಶಾಲಿನಿಯಾದ ಬುದ್ಧಿ ಕಂಡದ್ದು. ನಾಗಿಯಿಂದ ಅವಳು ಇನ್ನೂ ಕೊಂಚ ವಿವರ ತಿಳಿಯಬಹುದಾಗಿತ್ತು. ಆದರೆ ಪಾರ್ವತಮ್ಮನ ಸಹಾನುಭೂತಿರಹಿತವಾದ ಕೊಂಕು ನುಡಿಗಳನ್ನು ಕೇಳಿದೊಡನೆಯೇ ನಾಗಿ ತನ್ನ ಮಾತು ನಿಲ್ಲಿಸಿ ಮನೆಯ ಕಡೆ ಹೊರಟಿದ್ದಳು. ಆದ್ದರಿಂದಲೇ ಪಾರ್ವತಮ್ಮನಿಗೆ ಆ ಮುದುಕಿಯ ಮೇಲೆ ಅಷ್ಟು ಸಿಟ್ಟು.

ನಾರಣಪ್ಪ ಮುಖ ತೊಳೆದುಕೊಂಡು ಹೊರಬಂದವನು ಗುದ್ದಲಿ ಹಿಡಿದು ಗದ್ದೆಯ ಕಡೆಗೆ ನಡೆದ. ಅವನ ಮನಸ್ಸು ಮಾತ್ರ ಅಶಾಂತವಾಗಿತ್ತು. ಶೀನಪ್ಪನ ಮನೆಗೆ ಹೋಗಿ ನಡೆದ ಸಂಗತಿಯೇನು ಎಂದು ವಿಚಾರಿಸಬೇಕೆಂದು ಮನಸ್ಸು ಹಾತೊರೆಯುತ್ತಿತ್ತು. ಮೂರು ಸಲ ಅವನ ಮನೆಯ ಕಡೆ ಕಾಲು ತಿರುಗಿತ್ತು. ಆದರೂ ಪಾರ್ವತಮ್ಮನ ಕೊಂಕು ನುಡಿಗಳಿಗಂಜಿ ಅತ್ತ ಹೋಗದೆ ಗದ್ದೆಯ ಕಡೆ ಮುಖ ತಿರುಗಿಸಿದ. ಅವನು ಶೀನಪ್ಪನ ಮನೆಯ ಕಡೆ ಕಾಲಿಡದೆ ಬಹಳ ದಿನಗಳಾಗಿದ್ದುವು. ಶೀನಪ್ಪನನ್ನು ನೋಡಬೇಕಾದಾಗಲೆಲ್ಲ ಊರ ಮಹಾಬಲೇಶ್ವರದೇವಸ್ಥಾನಕ್ಕೆ ಅವನು ಪೂಜೆಗೆ ಹೋಗುವ ಸಮಯಕ್ಕೆ ಸರಿಯಾಗಿ ತಾನೂ ಅಲ್ಲಿ ಹೋಗಿ ಅವನನ್ನು ಮಾತಾಡಿಸಿಕೊಂಡು ಬರುತ್ತಿದ್ದ. ಪಾರ್ವತಮ್ಮನ ಸರ್ವಾಧಿಕಾರದಿಂದ ಪ್ರತಿದಿನವೂ ಬಳಲುತ್ತಿದ್ದರೂ ಆದರ ವಿರುದ್ಧ ದಂಗೆಯೇಳುವ ಶಕ್ತಿಯೋ ಇಷ್ಟವೋ ನಾರಣಪ್ಪನಿಗಿರಲಿಲ್ಲ.

ನಾರಣಪ್ಪನಿಗೆ ಸುಮಾರು ಐವತ್ತು ವರ್ಷ ವಯಸ್ಸು. ತಲೆ ಕೂದಲೆಲ್ಲ ಬೆಳ್ಳಗಾಗಿದ್ದರೂ ಮುಖದ ಮೇಲೆ ಮುಪ್ಪಿನ ಕಳೆ ಇಲ್ಲ. ತೆಳ್ಳನೆಯ ದೇಹವಾದರೂ ಸದಾರೋಗ್ಯದಿಂದ ರಕ್ತ ತುಂಬಿ ಲಕಲಕಿಸುತ್ತಿತ್ತು. ಕಾರ್ಯ

ದಕ್ಷತೆಗೆ ನಾರಣಪ್ಪನನ್ನು ಬಿಟ್ಟರಿಲ್ಲ ಎಂದು ಊರಿಗೆ ಊರೇ ಹೊಗಳುತ್ತಿತ್ತು. ಅವನ ಗುಣಗಳಲ್ಲೆಲ್ಲ ಮುಖ್ಯವಾದದ್ದು ಕಷ್ಟ ಸಹಿಸುವ ಶಕ್ತಿ. ಅದು ಯಾವ ಕೆಲಸವೇ ಇರಲಿ, ಗದ್ದೆ ಕೆಲಸವಿರಲಿ, ಹೊರೆ ಹೊರುವುದಿರಲಿ; ಪ್ರಯಾಣವಿರಲಿ; ಪ್ರಾವಾಸವಿರಲಿ; ತಿಥಿ ಮಾಡಿಸುವುದಿರಲಿ; ಮದುವೆ ಮಾಡಿಸುವುದಿರಲಿ; ಈ ಎಲ್ಲದರಲ್ಲೂ ನಾರಣಪ್ಪ ದಕ್ಷ. ಸಂಸ್ಕೃತಜ್ಞಾನ, ವೇದಾಭ್ಯಾಸ, ಸ್ವಲ್ಪ ಮಟ್ಟಿಗೆ ಜೋತಿಷ್ಯ ಪರಿಶ್ರಮ ಇದ್ದದ್ದರಿಂದ ಸುತ್ತುಮುತ್ತಲ ಜನರೆಲ್ಲರ ಮನ್ನಣೆಗೂ ಪಾತ್ರನಾಗಿದ್ದ. ನಾರಾಯಣ ಜೋಯಿಸರ ಹೆಸರು ಆ ಕಡೆ ಕುಂದಾಪುರ, ಈ ಕಡೆ ಭಟಕಳದ ವರೆಗೂ ಹಬ್ಬಿತ್ತು. ಧರ್ಮಶಾಸ್ತ್ರದ ಕ್ಲಿಷ್ಟ ಸಮಸ್ಯೆಗಳ ನಿವಾರಣೆಗೆ, ಗಂಡು ಹೆಣ್ಣುಗಳ ಜಾತಕಗಳ ಜೋಡಿಯಲ್ಲಿ ಬಂದ ಸಂಶಯಗಳ ಪರಿಹಾರಕ್ಕೆ ಬಹಳ ದೂರದಿಂದ ಜನ ನಾರಣಪ್ಪನ ಬಳಿಗೆ ಬರುತ್ತಿದ್ದರು.

ಕೋಲು ಮುಖ; ತುದಿಯಲ್ಲಿ ನಸುವೇ ಬಾಗಿದ ಮೂಗು. ಗಡ್ಡದಲ್ಲಿ ಮಾತ್ರ ಹುಲುಸಾಗಿ ಬೆಳೆದ ಗಡ್ಡ. ಶಾಂತರಸದ ಮಡುಗಳಂತೆ ತೋಳುವ ವೃತ್ತಾಕಾರದ ಕಣ್ಣುಗಳು. ತೆಳ್ಳನೆಯ ನವುರು ತುಟಿಗಳು. ಗಿಡ್ಡವಾದರೂ ಅಂಗಾಂಗ ಸಾಮರಸ್ಯವುಳ್ಳ ಸುಟಿಯಾದ ದೇಹ. ನಾರಣಪ್ಪನನ್ನು ಕಂಡವರಿಗೆ ಸಹಜವಾಗಿಯೇ ಅವನಲ್ಲಿ ಗೌರವ ಹುಟ್ಟುತ್ತಿತ್ತು. ಅವನ ಮುಖದಲ್ಲಿ ಭೂತದಯೆಯ ಮತ್ತು ಅನುಕಂಪದ ಧ್ವನಿಯನ್ನು ಹೃದಯವುಳ್ಳವರೆಲ್ಲ ಕೇಳಬಹುದು.

ಆ ಊರಿನವರೆಲ್ಲ ನಾರಣಪ್ಪನ ಜೀವನದ ಮೂಲಸೆಲೆಯಾದ ಕಾರುಣ್ಯವನ್ನು ಗುರುತಿಸಿದ್ದರು. ಆ ಊರಲ್ಲಿ ನಾಲ್ಕೈದು ಮನೆಗಳನ್ನು ಬಿಟ್ಟರೆ ಉಳಿದವರೆಲ್ಲ ಬಡವರೇ ಎರಡು ಹೊತ್ತು ಸರಿಯಾಗಿ ಊಟಮಾಡಿಕೊಂಡಿದ್ದವನೇ ಅಲ್ಲಿ ಮಹಾ ಶ್ರೀಮಂತ. ನಾರಣಪ್ಪನೂ ಆ ದೃಷ್ಟಿಯಲ್ಲಿ ಶ್ರೀಮಂತನೇ. ಬಡವರ, ಅದರಲ್ಲೂ ಮುಖ್ಯವಾಗಿ ಭೂಮಿಯಿಲ್ಲದ ಕೃಷಕರ ಗೋಳಂತೂ ಹೇಳತೀರದು. ಬೇಸಿಗೆಯಲ್ಲಿ ಹಾಗೂ ಹೀಗೂ ಅಲ್ಲಿ ಇಲ್ಲಿ ಬದುಕು ಮಾಡಿ ಹೊಟ್ಟೆ ತುಂಬಿಸಿಕೊಳ್ಳುವರಾದರೂ ಮಳೆಗಾಲದಲ್ಲಿ ನಟ್ಟಿ ಮುಗಿದು ಮತ್ತೆ ಪೈರು ಬರುವ ತನಕ ಆ ಕ್ಷಾಮಕಾಲದಲ್ಲಿ ಆ ದರಿದ್ರರ ಗೋಳು ಹೇಳತೀರದು.

ಆ ರೈತರ ಜೊತೆಗೇ ಕೆಲಸ ಮಾಡುತ್ತ, ಅವರ ಕಷ್ಟಸುಖಗಳನ್ನು ಅಲ್ಪ ತೃಪ್ತಿಯನ್ನು, ಕೊನೆಯೇ ಇಲ್ಲದ ಗೆಯ್ಮೆಯನ್ನು, ಎಂದೂ ಕೊನೆಗಾಣದ ದಾರಿದ್ರ್ಯವನ್ನು ಕಂಡ ನಾರಣಪ್ಪನ ಮನಸ್ಸು ಆ ಹತಭಾಗ್ಯರಿಗೆ ನೆರವಾಗಲು ಸದಾ ತುಡಿಯುತ್ತಿರುವುದು. ಹೆಂಡತಿಯ ಸರ್ಪಕಾವಲಿನ ಭಯವಿಲ್ಲದೆ ಹೋಗಿದ್ದರೆ ಇಷ್ಟು ಹೊತ್ತಿಗೆ ಅವನು ಇರುವುದನ್ನೆಲ್ಲ ಕೊಟ್ಟು ಬರಿಗೈ ಆಗುತ್ತಿದ್ದನೋ ಏನೋ. ಹೆಂಡತಿಗೆ ತಿಳಿಯುವಂತೆ ಅವನು ಯಾವುದನ್ನೂ ಕೈಯೆತ್ತಿ ಕೊಡುವಂತಿಲ್ಲ. ಕೊಟ್ಟರೆ ಆಮೇಲೆ ನಾಲ್ಕು ತಿಂಗಳ ಕಾಲ ಮನೆಯಲ್ಲಿ ನೆಮ್ಮದಿಯಾಗಿ ಇರುವಂತೆಯೇ ಇಲ್ಲ. ಆದ ಕಾರಣ ಕದ್ದು ಮುಚ್ಚಿ ಒಂದು ಸೇರು ಅಕ್ಕಿ ಇವನಿಗೆ, ಒಂದು ಪಾವು ಅಕ್ಕಿ ಅವನಿಗೆ; ಒಂದು ಪಂಚೆ ಮತ್ತೊಬ್ಬನಿಗೆ 'ತಲೆಗೆ ಅಷ್ಟು ಎಣ್ಣೆ ಹೊಯ್ಸಿಕೊಂಡು ಹಾಳಾಗು' ಅಂತ ಒಂದಾಣೆ ಇನ್ನೊಬ್ಬಳಿಗೆ–ಹೀಗೆ ಗುಪ್ತವಾಗಿ ನಾರಣಪ್ಪ ಧರ್ಮ ಮಾಡಬೇಕಿತ್ತು. ಇದು ಕೂಡ ಊರಿನವರಿಗೆ ಗೊತ್ತು. ನಾರಣಪ್ಪನಿಂದ ಏನಾದರೂ ಕೆಲಸವಾಗಬೇಕಾಗಿದ್ದರೆ ಯಾರೂ ಅವನನ್ನು ಮನೆಯಲ್ಲಿ ನೋಡುತ್ತಿರಲಿಲ್ಲ. ನಾರಣಪ್ಪ ಮತ್ತು ಊರಿನ ಬಡವರಲ್ಲಿ ಈ ಬಗ್ಗೆ ಒಂದು ಬಗೆಯ ಮೂಕ ಒಡಂಬಡಿಕೆಯೇ ಆದಂತಿತ್ತು.

ಮನೆ ಬಿಟ್ಟು ಹೊರ ಹೊರಟರೇ ನಾರಣಪ್ಪ ಒಬ್ಬ ಮನುಷ್ಯ. ಮನೆಯೊಳಗೆ ಕೇವಲ ಬೆಕ್ಕಿನ ಮರಿ. ಮನೆಯ ಹೊರಗೆ ಅವನ ಮುಖದಲ್ಲಿ ಹೊಸ ಕಳೆಯೇ ಮೂಡುತ್ತಿತ್ತು. ಮುಖ ಅರಳುತ್ತಿತ್ತು. ಎಲ್ಲ ಜನದ ಸುಖ ದುಃಖದಲ್ಲಿ ಪಾಲುಗಾರನಾಗಿ, ಹಾಸ್ಯ ವಿನೋದಗಳಲ್ಲಿ ಬೆರೆತು ಜೀವನದ ತರಂಗ ಮಾಲೆಗಳಲ್ಲಿ ತನ್ಮಯನಾಗುತ್ತಿದ್ದ. ಹೆಚ್ಚು ಮಾತಾಡುವ ಸ್ವಭಾವವಲ್ಲವಾದರೂ ಆಡಿದ ಒಂದೆರೆಡು ಮಾತಿನಲ್ಲೇ ತನ್ನ ಹೃದಯದ ಸಾರಸರ್ವಸ್ವವನ್ನೂ ತೆರೆದು ತೋರಿಸುತ್ತಿದ್ದ.

ಇಂದು ಮಾತ್ರ ನಾರಣಪ್ಪನ ಮುಖದಲ್ಲಿ ಕಳೆಯಿಲ್ಲ. ಗದ್ದೆಯಂಚಿನಲ್ಲಿ ಗುದ್ದಲಿ ಹಿಡಿದು ಹಾಗೇ ಆಕಾಶದ ಕಡೆ ನೋಡುತ್ತ ನಿಂತಿದ್ದ. ಮೋಡದ ದಟ್ಟಣೆ ಕೊಂಚ ಕಡಿಮೆ ಆಗಿತ್ತು. ಪೂರ್ವ ದಿಕ್ಕಿನಲ್ಲಿ ದಟ್ಟವಾದ ಮೋಡದ ಒಳಗಡೆ ಕ್ರುದ್ಧನಾದ ಸೂರ್ಯ ಕುದಿಯುತ್ತಿರುವುದು ಕಂಡರೂ ಸೂರ್ಯನ

ಬೆಳಕು ಇಲ್ಲ. ಸುತ್ತುಮುತ್ತಲಿನ ಗದ್ದೆಗಳೆಲ್ಲ ನೀರಲ್ಲಿ ಮುಳುಗಿದ್ದುವು. ನೀರು ಭೋರೆಂದು ಗದ್ದೆಯಿಂದ ಗದ್ದೆಗೆ ಧುಮುಕುತ್ತಿತ್ತು. ಪಕ್ಕದ ಹಳ್ಳದಲ್ಲಿ ನೀರು ತುಂಬಿ ಹೊರ ಹರಿಯುತ್ತಿತ್ತು. ಹತ್ತಿರದ ಕೆರೆಯ ಅಂಚಿನ ಮೇಲೆ ಹಳದಿ ಬಣ್ಣದ ಕಪ್ಪೆಗಳು ಒಟಗುಟ್ಟುತ್ತಿದ್ದುವು.

ಹಳ್ಳಿಯ ಜನ ಅಲ್ಲಿ ಇಲ್ಲಿ ನಿಂತು ಮಾತಾಡುತ್ತಿದ್ದರು. ಗದ್ದೆ ಕೆಲಸಕ್ಕೆ ಬಂದವರು ಗದ್ದೆ ಅಂಚನ್ನು ಸರಿಪಡಿಸುವುದನ್ನು ಬಿಟ್ಟು, ಏರು ಗದ್ದೆಗಳಲ್ಲಿ ಉಳುವುದನ್ನು ಬಿಟ್ಟು, ನೆಟ್ಟಿಯಾಗಬೇಕಾದ ಗದ್ದೆಗೆ ಗೊಬ್ಬರ ಚೆಲ್ಲದೆ, ಅಗೇಡಿಗಳಲ್ಲಿ ಅಗೆ ಕೀಳದೆ ಹೀಗೆ ಏಕೆ ನಿಂತಿದ್ದಾರೆ, ಏನು ಮಾತಾಡುತ್ತಿದ್ದಾರೆ? ನಾರಣಪ್ಪ ಆಕಾಶದಿಂದ ದೃಷ್ಟಿಯನ್ನು ಸೆಳೆದು ಈ ಜನದ ಗುಂಪಿನ ಕಡೆಗೆ ತಿರುಗಿಸಿದಾಗ ಅವನಿಗೆ ಹೀಗೆ ಅನ್ನಿಸಿತು. . ಬಹುಶಃ ಅವರು ಶೀನಪ್ಪನನ್ನೇ ಕುರಿತು ಮಾತಾಡುತ್ತಿರಬೇಕು.

ನಿನ್ನೆ ರಾತ್ರಿ ಶೀನಪ್ಪನ ಮನೆಯಲ್ಲಿ ನಡೆದ ಆ ವಿಚಿತ್ರ ಕಥೆ ಈಗ ಹಳ್ಳಿಯ ಹತ್ತುಸಮಸ್ತರ ಸೊತ್ತಾಗಿತ್ತು. ಅಂಥ ಹಳ್ಳಿಯಲ್ಲಿ ಯಾವುದೂ ಗುಟ್ಟಾಗಿರುವುದು ಅಸಾಧ್ಯ. ಹಳ್ಳಿಗಳಲ್ಲಿ ನೂರು ಮನೆಗಳಿದ್ದರೂ ಎಲ್ಲ ಒಂದು ಮನೆಯ ಹಾಗೆ. ಆಕಾಶವಾಣಿಯಲ್ಲಿ ಪ್ರಸಾರ ಮಾಡಿದ ಹಾಗೆ ವರ್ತಮಾನ ಕ್ಷಣಾರ್ಧದಲ್ಲಿ ಮನೆಯಿಂದ ಮನೆಗೆ ಹಬ್ಬುತ್ತದೆ.

ಶೀನಪ್ಪನ ಮನೆಯಲ್ಲಿ ನಡೆದ ಸಂಗತಿ ಈಗ ಬಾಯಿಂದ ಬಾಯಿಗೆ ಹೋಗಿ ಶಾಖೋಪಶಾಖೆಗಳಾಗಿ ಬೆಳೆದಿತ್ತು. ಜನದಲ್ಲಿ ಕಥೆ ಕಟ್ಟುವ ಕಲೆ ಹುಟ್ಟಿನಿಂದಲೇ ಬಂದಿರುತ್ತದೆ ಅಂತ ಕಾಣಿಸುತ್ತದೆ. ಈ ಕಥೆ ಕಟ್ಟುವ ಕಲೆಯಷ್ಟೇ ಜನ್ಮಸಿದ್ಧವಾಗಿ ಬಂದದ್ದು ಅತಿಶಯೋಕ್ತಿ. ಇದ್ದ ಸಂಗತಿಗೆ ಬಣ್ಣ ಕಟ್ಟಿ ಹೇಳದೆ ಹೋದರೆ ಸ್ವಾರಸ್ಯವಿಲ್ಲ. ಇರುವುದನ್ನು ಇರುವ ಹಾಗೇ ಹೇಳುವುದಾದರೆ ದೇವರು ಮನುಷ್ಯನಿಗೆ ಕಲ್ಪನಾ ಶಕ್ತಿಯನ್ನು ಕೊಟ್ಟದ್ದಕ್ಕೆ ಏನು ಸಾರ್ಥಕ? ಆ ಊರಿನಲ್ಲೂ ಕೂಡಾ ಎಲ್ಲ ಊರುಗಳಲ್ಲಿರುವ ಹಾಗೆ ಎರಡು ಬಗೆಯ ಜನ; ಇನ್ನೊಬ್ಬರ ಕಷ್ಟದಿಂದ ಅಪಾರವಾದ ತೃಪ್ತಿಯನ್ನು ಪಡೆಯುತ್ತ, ಅದು ಹೆಚ್ಚಲು ತಮ್ಮ ಕೈಲಾಗುವುದನ್ನೆಲ್ಲ ಮಾಡುವವರು—ಇವರೇ ಎಲ್ಲ ಕಡೆಗಳಲ್ಲೂ ಬಹು ಸಂಖ್ಯೆಯವರು; ಇನ್ನೊಬ್ಬರ ಕಷ್ಟ ತಮ್ಮದೇ ಎಂದು

ತಿಳಿದು ಇನ್ನೇನಿಲ್ಲದಿದ್ದರೂ ಸಹಾನುಭೂತಿಯನ್ನು ತೋರುವವರು— ಇವರ ಸಂಖ್ಯೆ ಅತ್ಯಲ್ಪ.

ಅವಳು ಯಾರು, ಎಲ್ಲಿಂದ ಬಂದಳು, ಏಕೆ ಬಂದಳು ಎಂಬುದು ಇನ್ನೂ ಶೀನಪ್ಪನಿಗೂ ತಿಳಿಯದು. ಅವಳ ಕುಲ ಗೋತ್ರ ಯಾವುದೋ ದೇವರೇ ಬಲ್ಲ. ಹೀಗಿದ್ದರೂ ಕೂಡಾ ಹಳ್ಳಿಯಲ್ಲಿ ಅನೇಕರು ಆಗಲೇ ತಮಗೆ ಎಲ್ಲ ವಿಷಯವೂ ತಿಳಿದ ಹಾಗೆ ಖಡಾಖಂಡಿತವಾಗಿ ಮಾತಾಡುತ್ತಿದ್ದರು. ಶೀನಪ್ಪನ ಮತ್ತು ಅವಳ ಸಂಬಂಧ ಬಹಳ ಕಾಲದ್ದು. ಬಹಳ ಕಾಲ ಬಚ್ಚಿಟ್ಟ ಸಂಗತಿ ಈಗ ಬೆಳಕಿಗೆ ಬಂದಿದೆ. ಅವಳು ಉತ್ತಮ ಕುಲದ ಹೆಂಗಸಾಗಿರಲು ಸಾಧ್ಯವೇ ಇಲ್ಲ. ಆದ ಕಾರಣ ಅವಳು ಸೂಳೆಯರ ಜಾತಿಗೆ ಸೇರಿದವಳಿರಬೇಕು–ಅಂತ ಆಗಲೇ ಒಂದು ತೀರ್ಮಾನಕ್ಕೆ ಬಂದುಬಿಟ್ಟಿದ್ದರು.

“ ಆದರೆ ಅಂಥ ತುಂಬು ಗರ್ಭಿಣಿ ಅಂಥ ಮಳೆಯಲ್ಲಿ ಅಲ್ಲಿಗೆ ಯಾಕೆ ಬಂದಳು ? ” ಅಂತ ಹಳೇಪೈಕ ಈರ ಕೇಳಿದ ಪ್ರಶ್ನೆಗೆ ಮಾತ್ರ ಯಾರೂ ಉತ್ತರ ಹೇಳಲಿಲ್ಲ.

ಅಷ್ಟು ಹೊತ್ತಿಗೆ ನೇಗಿಲು ನೊಗ ಹಿಡಿದು ಎತ್ತುಗಳನ್ನು ಅಲ್ಲಿಗೆ ಹೊಡೆದು ಕೊಂಡು ಬಂದಿದ್ದ ಸೋಮು, “ ನಿನ್ನೆ ರಾತ್ರಿ ನಮ್ಮ ತಿಮ್ಮ ಮನೆಯ ಕಡೆಗೆ ಬರುತ್ತಿದ್ದಾಗ ಯಾರೋ ನರಳುತ್ತ ಮಳೆಯಲ್ಲಿ ನೆನೆದುಕೊಂಡು ಹೋಗುತ್ತಿರು ವುದನ್ನು ಕಂಡೆ ಅಂತ ಹೇಳುತ್ತಾನೆ. ಕೆಳಮನೆಯ ಶೇಷಭಟ್ಟರೂ ಕೂಡಾ ‘ ನಿನ್ನೆ ರಾತ್ರಿ ಯಾರೋ ನಮ್ಮ ಮನೆ ಬಾಗಿಲು ತಟ್ಟಿ ಚೀರಿದಂತಾಯಿತು. ಏನು ಭೂತವೋ ಪ್ರೇತವೋ ಸುಡುಗಾಡೋ ಅಂತ ಹೆದರಿ ನಾನು ಬಾಗಿಲು ತೆರೆಯಲಿಲ್ಲ ’ ಅಂತ ಹೇಳುತ್ತಾರೆ ” ಎಂದ.

ಅದನ್ನು ಕೇಳಿ ಈರ, “ ನೋಡಿದಿರಾ ? ಆ ಹೆಂಗಸು ಮಳೆಯ ಹೊಡೆತ ತಾಳಲಾರದೆ ಎಷ್ಟು ಮನೆಗಳ ಬಾಗಿಲನ್ನು ತಟ್ಟಿದ್ದಳೋ ಏನೋ. ಯಾರೂ ಬಾಗಿಲು ತೆರೆಯಲಿಲ್ಲ. ಶೀನಪ್ಪನ ಮನೆ ಬಾಗಿಲಿಗೆ ಬಂದು ಬಿದ್ದಾಗ ಅವಳಿಗೆ ಸ್ಮೃತಿ ಇರಲಿಲ್ಲ ಅಂತ ನಾಗಿ ಹೇಳುತ್ತಾಳೆ. ಬೀದಿ ಹೆಣವಾಗುತ್ತಿದ್ದ ಆ ಬಡ ಪಾಯಿಯನ್ನು ನಮ್ಮ ಶೀನಪ್ಪ ಒಳಕ್ಕೆ ಕರೆದುಕೊಂಡರು. ಏನು, ಅವಳು ಹಾಗೇ ಸಾಯಲಿ ಅಂತ ಬಿಡಬೇಕಾಗಿತ್ತೇ ? ಎಂಥ ಜನರೋ ನೀವು !

ಅಷ್ಟಕ್ಕೇ ಇಷ್ಟು ಕಥೆ ಕಟ್ಟುತ್ತಿದ್ದೀರಲ್ಲ" ಎಂದು ರೇಗಾಡಿದ.

ಕೇಳಿದವರಿಗೆ ಈರನ ಮಾತಿನಲ್ಲಿ ಕೊಂಚ ಸತ್ಯವಿದೆ ಎನ್ನಿಸಿತು. ಆದರೂ ಸಂದೇಹ. ಇನ್ನೂ ಏನೋ ಇರಬೇಕು, ಇಲ್ಲದಿದ್ದರೆ ಇಷ್ಟು ಪುಕಾರು ಹೇಗೆ ಹುಟ್ಟೀತು?

"ಅದೆಲ್ಲಾ ಸರಿ ಈರಣ್ಣ. ಆದರೆ ಯಾವ ಜಾತಿಯೋ, ಯಾವ ಕುಲವೋ? ಅವಳನ್ನು ಶೀನಪ್ಪ ಮನೆಯಲ್ಲಿಟ್ಟುಕೊಳ್ಳುವುದು ಸರಿಯೆ?" ಎಂದು ದುರ್ಗ ಸವಾಲು ಹಾಕಿದ.

"ಹಾಗಾದರೆ ಅವಳನ್ನು ಬಾವಿಗೆ ತಳ್ಳಬೇಕಂತೀಯೇನು? ಜ್ವರದಿಂದ ಮೈ ಮೇಲೆ ಅವಳಿಗೆ ಪ್ರಜ್ಞೆಯೇ ಇಲ್ಲ ಅಂತ ನಾಗಿ ಹೇಳುತ್ತಾಳೆ. ಇಂಥ ಸಂದರ್ಭದಲ್ಲಿ ಜಾತಿ ಕುಲ ನೋಡಬಹುದಾ? ಹೋಗುವ ಜೀವ ಉಳಿಸುವುದು ಮೊದಲನೆಯ ಕೆಲಸವಲ್ಲವಾ? ಅದೇ ಮನುಷ್ಯರ ಧರ್ಮ ಅಂತ ನನಗೆ ತೋರುತ್ತಣ್ಣ."

"ಅಂತೂ ಶೀನಪ್ಪಯ್ಯ ಬಹಳ ಫಜೀತಿಗೆ ಸಿಕ್ಕಿಕೊಂಡ ಹಾಗಾಯಿತು. ಪಾಪ!" ಎಂದ ಸೋಮ.

ಅದೂ ಹೌದು. ಫಜೀತಿ. ಅರ್ಧ ಸಂದೇಹ, ಅರ್ಧ ಸಹಾನುಭೂತಿಯಿಂದ ಹಳ್ಳಿಯ ಜನ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದರು. ಈರನೊಬ್ಬನಿಗೇ ಯಾವ ಸಂದೇಹವೂ ಇಲ್ಲ. ಅವನು ಶೀನಪ್ಪನನ್ನು ಬಹಳ ಚೆನ್ನಾಗಿ ಬಲ್ಲ.

ನಾರಣಪ್ಪನಿಗೆ ಗದ್ದೆಯಲ್ಲಿ ಕೆಲಸ ಮಾಡಲು ಮನಸ್ಸೇ ಬರಲಿಲ್ಲ. ಗುದ್ದಲಿಯನ್ನು ಅಲ್ಲೇ ಬಿಟ್ಟು ನಾಗಿಯನ್ನು ಹುಡುಕಿಕೊಂಡು ಹೊರಟ. ವಿಷಯವನ್ನು ಸರಿಯಾಗಿ ತಿಳಿಯದೇ ಅವನ ಮನಸ್ಸು ನೆಮ್ಮದಿ ಹೊಂದುವಂತೆ ಇರಲಿಲ್ಲ. ಶೀನಪ್ಪ ತನ್ನ ಸುತ್ತ ತಾನೇ ಬಲೆಯನ್ನು ರಚಿಸಿಕೊಂಡನೋ ಅಥವಾ ಅಕಸ್ಮಾತ್ತಾಗಿ ಎಲ್ಲಿಂದಲೋ ಬಂದ ಬಲೆಯಲ್ಲಿ ಸಿಕ್ಕಿ ಬಿದ್ದನೋ. ಇದು ಈಗ ತಾನು ತಿಳಿಯಬೇಕಾದ ಮಾತು ಎಂದುಕೊಳ್ಳುತ್ತ ನಾರಣಪ್ಪ ನಾಗಿಯ ಮನೆಯ ಕಡೆಗೆ ನಡೆದ.

೪

ಪಂಡಿತರು ಬಂದಾಗ ಆಗಲೇ ಕೋಳಿ ಕೂಗುವ ಹೊತ್ತು. ಅವಳು ಹಾಸಿಗೆಯಲ್ಲಿ ಪ್ರಜ್ಞೆ ಇಲ್ಲದೆ ಮಲಗಿದ್ದಳು. ಆಗಾಗ ಜ್ವರದ ಭ್ರಮೆಯಲ್ಲಿ ಏನೇನೋ ಕನವರಿಸುತ್ತ ಒದ್ದಾಡುತ್ತಿದ್ದಳು. ಹತ್ತಿರದಲ್ಲೇ ಕೂತ ನಾಗಿ ಒತ್ತಿ ಬರುವ ನಿದ್ದೆಯನ್ನು ಬಹು ಪ್ರಯಾಸದಿಂದ ತಡೆಹಿಡಿಯುತ್ತ ಆಕಳಿಸುತ್ತ ಮೌನವಾಗಿ ಕುಳಿತಿದ್ದಳು.

ಪಂಡಿತರು ನಾಡಿ ನೋಡಿದರು. ಅವರು ಹಾಗೆ ರೋಗಿಯನ್ನು ಪರೀಕ್ಷಿಸುತ್ತಿದ್ದಾಗ ಶೀನಪ್ಪನ ಎದೆ ಡವಗುಟ್ಟುತ್ತಿತ್ತು. ತನ್ನ ಅಚಾತುರ್ಯದಿಂದ, ಅಜ್ಞಾನದಿಂದ ಆ ಜೀವಕ್ಕೆ ಎಲ್ಲಿ ಹಾನಿಯಾಯಿತೋ ಎಂಬ ದಿಗಿಲಿನಿಂದ ತತ್ತರಿಸುತ್ತ ನಿಂತಿದ್ದ. ಅವಳು ಯಾರು, ಏನು, ಎಲ್ಲಿಯವಳು ಎಂಥವಳು ಎಂಬುದು ತಿಳಿಯದೆ ಇದ್ದರೂ ಯಾವುದೋ ಒಂದು ಹೂಮಾಲಿಯಿಂದ ಅವನ ಹೃದಯ ಆಗಲೇ ಬದ್ಧವಾಗಿತ್ತು. ತನ್ನ ಜೀವದ ಒಂದು ಖಂಡವೇ ಅಲ್ಲಿ ಹಾಸಿಗೆಯ ಮೇಲೆ ಜ್ವರಬಾಧೆಯಿಂದ ಬಳಲುತ್ತಿದ್ದರೆ ಹೇಗೋ ಹಾಗೆ ಶೀನಪ್ಪ ಸಂಕಟಪಡುತ್ತ ಪಂಡಿತರನ್ನೇ ನೋಡುತ್ತ ನಿಂತಿದ್ದ.

ನಾಡಿ ಪರೀಕ್ಷೆಯನ್ನು ಮುಗಿಸಿ ಪಂಡಿತರು, "ಹೆದರಬೇಡಿ, ಶೀನಪ್ಪ; ಜೀವಕ್ಕೇನೂ ಅಪಾಯವಿಲ್ಲ," ಎಂದಾಗ ಶೀನಪ್ಪನಿಗೆ ತನ್ನ ಎದೆಯ ಮೇಲಿಂದ ದೊಡ್ಡ ಭಾರವೊಂದನ್ನು ಎತ್ತಿ ತೆಗೆದಂತಾಯಿತು. ಪಂಡಿತರು ಅವಳ ಹಣೆಗೆ ತಾವು ತಂದ ಲೇಪವನ್ನು ಹಚ್ಚಿ ನಾಲ್ಕೈದು ಗಿಡಮೂಲಿಕೆಗಳನ್ನು ಶೀನಪ್ಪನಿಗೆ ಕೊಡುತ್ತ "ಒಲೆಯ ಮೇಲೆ ನಾಲ್ಕು ಪಾವು ನೀರಿಟ್ಟು ನೀರು ಕುದಿಯುತ್ತಿರುವಾಗ ಇದನ್ನು ನೀರಿಗೆ ಹಾಕಿ ಚೆನ್ನಾಗಿ ಬತ್ತಿಸಬೇಕು. ನೀರೆಲ್ಲಾ ಬತ್ತಿ

ಒಂದು ಪಾವಿನಷ್ಟು ಉಳಿದಾಗ ಕೆಳಗಿಳಿಸಿ ಶೋಧಿಸಿ ಬೆಳಗ್ಗೆ ಒಂದು ಸಲ, ಮಧ್ಯಾಹ್ನ ಒಂದು ಸಲ, ರಾತ್ರಿ ಒಂದು ಸಲ ಕೊಡಿ. ಚಿಂತೆಯೇನೂ ಇಲ್ಲ. ಈ ಮಧ್ಯಾಹ್ನದೊಳಗೆ ಜ್ವರ ಇಳಿಯುತ್ತದೆ. ನೀವು ಮತ್ತೆ ನಾಳೆ ಬೆಳಗ್ಗೆ ಬಂದು ನನ್ನನ್ನು ನೋಡಿ" ಎಂದರು.

"ಹೊಟ್ಟೆಗೆ ಏನು ಕೊಡುವುದು ಪಂಡಿತರೇ" ಎಂದು ಮೂಲೆಯಲ್ಲಿ ಮುದುರಿ ಕುಳಿತಿದ್ದ ನಾಗಿ ಕೇಳಿದಳು.

"ಹೌದು, ಮರೆತೇ ಬಿಟ್ಟಿದ್ದೆ. ಪ್ರಜ್ಞೆ ಬಂದ ಕೂಡಲೇ ಹುರಿಯಕ್ಕಿ ಗಂಜಿ ಮಾಡಿ ಎಷ್ಟು ಬೇಕೋ ಅಷ್ಟು ಕೊಡಿ. ಮತ್ತೆ ರಾತ್ರಿಯೂ ಅಷ್ಟು ಗಂಜಿ ಕೊಡಿ." ಎಂದು ಪಂಡಿತರು ಏಳುತ್ತ ಮತ್ತೊಮ್ಮೆ ಶೀನಪ್ಪನ ಕಡೆಗೆ ತಿರುಗಿ "ಜೀವಕ್ಕೆ ಕೊಂಚವೂ ಗಂಡಾಂತರವಿಲ್ಲ. ಗಾಬರಿಯಾಗಬೇಡಿ" ಎಂದು ಅಭಯಕೊಟ್ಟು ಹೊರಟುಹೋದರು. ಪಂಡಿತರು ಹೊರಟು ಹೋದಾಗ ಬೆಳಗು ಹರಿಯುವ ಸಮಯ.

ಪಂಡಿತರು ಹೊರಟು ಹೋದ ಕೂಡಲೇ ಶೀನಪ್ಪ ನಾಗಿಯ ಕಡೆ ತಿರುಗಿ "ನಾಗಿ, ನೀನು ಈ ರಾತ್ರಿ ನನಗೆ ಮಾಡಿದ ಉಪಕಾರ ನಾನು ಏಳೇಳು ಜನ್ಮಕ್ಕೂ ಮರೆಯಲಾರೆ. ಪಾಪ, ಮುದುಕಿ, ರಾತ್ರಿಯೆಲ್ಲ ನಿದೆಯಿಲ್ಲ. ಹೋಗು" ಎಂದ.

"ಮನುಷ್ಯರು ಮನುಷ್ಯರಿಗೆ ಸಹಾಯ ಮಾಡಬೇಡವೇ ಶೀನಪ್ಪಾ. ನಿಮ್ಮ ಮನೆಯ ಉಪ್ಪುಂಡವಳು ನಾನು ನಿಮ್ಮ ಸೇವೆ ಮಾಡಬೇಡವಾ. ನನಗೇನೂ ತೊಂದರೆಯಿಲ್ಲ. ಒಡೇರಿಗೆ ರಾತ್ರಿಯೆಲ್ಲ ನಿದ್ದೆಯಿಲ್ಲವಲ್ಲ. ನಿಮ್ಮ ಜೀವ ಎಷ್ಟು ನೋತಿದೆಯೋ ಅಂತ ಅದೇ ಚಿಂತೆ ನನಗೆ."

"ಸರಿ ನಾಗಿ; ನೀನು ಈಗ ಹೋಗು; ಮತ್ತೆ ಮಧ್ಯಾಹ್ನದ ಮೇಲೆ ಇತ್ತ ಕಡೆ ಬಾ," ಎಂದು ಒಳಕ್ಕೆ ಹೋಗಿ ಒಂದು ಸೇರು ಅಕ್ಕಿ ತಂದು ಅವಳಿಗೆ ಕೊಟ್ಟ. ಮುದುಕಿ ಕಣ್ಣೊರಸಿಕೊಳ್ಳುತ್ತ ಹೊರಟು ಹೋದಳು.

ನಾಗಿ ಹೊರಟು ಹೋದ ಮೇಲೆ ಮನೆಯಲ್ಲಿ ಶೀನಪ್ಪ ಮತ್ತು ಅವಳು. ಪ್ರಜ್ಞಾಹೀನಳಾಗಿ ಹಾಸಿಗೆಯ ಮೇಲೆ ಮಲಗಿ ಬಾಳು ಸಾವುಗಳ ನಡುನಾಡಿನಲ್ಲಿ ತೂಗುಯ್ಯಾಲೆಯಾಡುತ್ತಿರುವ ಅಜ್ಞಾತಕುಲಗೋತ್ರಳಾದ ಆ ಅವಳು

ಮತ್ತೆ–ಶೀನಪ್ಪ; ಜೀವನದಲ್ಲಿ ಮೊತ್ತಮೊದಲನೆಯ ಬಾರಿಗೆ ಜವಾಬುದಾರಿಯ ಹೊರಲಾರದ ಹೊರೆ ಹೊತ್ತು ನಿಂತ ಮೂವತ್ತೈದು ವಯಸ್ಸಿನ ಮುಗ್ಧ ಶೀನಪ್ಪ.

ಹೊರಗೆ ಕಾಗೆ ಕಾ ಕಾ ಎನ್ನುತ್ತಿತ್ತು. ಬೆಳಗಾಗಿರಬೇಕು. ಆದರೂ ಮಬ್ಬು–ಮುಸುಕು. ಆಕಾಶದ ಮೇಲೆ ಹಾಕಿದ್ದ ಕಾರ್ಮೋಡದ ಪರದೆ ಕೊಂಚವೂ ಸರಿದಿರಲಿಲ್ಲ. ಮಳೆಯಿಲ್ಲ. ಆದರೂ ಸುತ್ತಲೂ ಮಳೆಯ ವಾತಾವರಣ.

ಶೀನಪ್ಪ ಎದ್ದು ಹೋಗಿ ಮುಖ ತೊಳೆದುಕೊಂಡು ಬಂದ. ರಾತ್ರಿಯೆಲ್ಲ ನಿದ್ದೆಯಿಲ್ಲವಾಗಿ ಕಣ್ಣು ಉರಿಯುತ್ತಿತ್ತು. ಮನಸ್ಸೂ ಹೊತ್ತಿಕೊಂಡಿತ್ತು; ನೂರು ಯೋಚನೆಗಳ ಜ್ವಾಲೆ ಜಾಗ್ರತ ಮನಸ್ಸನ್ನು ನೆಕ್ಕಿ ಕುಣಿಯುತ್ತಿತ್ತು. ಮೂವತ್ತೈದು ವರ್ಷಗಳ ಜೀವನ ಹಾಳೆ ಹಾಳೆಯಾಗಿ ಕಣ್ಣು ಮುಂದೆ ಬಿಚ್ಚಿಕೊಳ್ಳುತ್ತಿತ್ತು.

ಅವಳು ಅಲ್ಲಿ ಹಾಸಿಗೆಯ ಮೇಲೆ ಯಥಾ ಪ್ರಕಾರ ನಿಶ್ಚಲಳಾಗಿ ಮಲಗಿದ್ದಳು. ಕನವರಿಕೆ ಈಗ ನಿಂತಿತ್ತು; ಮುಖ ಶಾಂತವಾಗಿತ್ತು. ಉಸಿರು ತಾಳಬದ್ಧವಾಗಿ ಲಾಸ್ಯವಾಡುತ್ತಿತ್ತು.

ಶೀನಪ್ಪ ಅಡಿಗೆ ಮನೆಗೆ ಹೋಗಿ ಒಲೆ ಹೊತ್ತಿಸಿ ಕಷಾಯಕ್ಕೆ ನೀರಿಟ್ಟು ಬಂದ. ಅವಳು ಪಡಸಾಲೆಯಲ್ಲಿ ಹಾಸಿಗೆಯ ಮೇಲೆ ಮಲಗಿದ್ದಳು. ಶೀನಪ್ಪ ಹೊಸ್ತಿಲಿನೀಚೆ ಚಾವಡಿಯಲ್ಲಿ ಕಂಭಕ್ಕೊರಗಿ ಕುಳಿತ. ಪ್ರಜ್ಞಾಶೂನ್ಯವಾದ ಆ ಮುಖದಲ್ಲೇ ಅವನ ಕಣ್ಣು ನೆಟ್ಟಿತು.

ಎಂಥ ಮುಖ ಅದು! ಅಂಥ ಮುಖವನ್ನು ಶೀನಪ್ಪ ಎಲ್ಲೂ ಕಂಡಿಲ್ಲ. ಮನುಷ್ಯ ಮಾತ್ರಳಾದವಳಲ್ಲಿ ಇಂಥ ದಿವ್ಯ ಎನ್ನುವಂಥ ಚೆಲುವು ಹೇಗೆ ಬಂತು ಎಂದು ಬೆರಗಾದ. ಒಂದು ದೋಷವನ್ನೂ ಹೆಕ್ಕಲು ಅಸಾಧ್ಯ ಎನ್ನುವಂತೆ ದಂತದಲ್ಲಿ ಅತ್ಯುತ್ತಮ ಶಿಲ್ಪಿಯೊಬ್ಬ ಕಡೆದಿಟ್ಟಂಥ ಮುಖ. ಆ ಮೂಗು, ಆ ಹುಬ್ಬು, ಆ ಕೆನ್ನೆ, ಆ ಗಲ್ಲ–ಎಲ್ಲವೂ ನಿರ್ದುಷ್ಟ. ಅದು ಮನಸ್ಸನ್ನು ಸೆಳೆದು ಮೋಹದ ಮಬ್ಬಿನಲ್ಲಿ ಕೆಡಹುವ ಚೆಲುವಲ್ಲ; ಗೌರವ ಹುಟ್ಟಿಸುವ, ಪೂಜಿಸೋಣ ಎನ್ನಿಸುವ ಮುಖ. ಒಂದೆರಡು ಕಡೆ ದೇವರ ವಿಗ್ರಹದಲ್ಲಿ ಮಾತ್ರ

ಶೀನಪ್ಪ ಇಂಥ ಮನೋಜ್ಞತೆಯನ್ನು ಕಂಡಿದ್ದ. ಮನುಷ್ಯರಲ್ಲಿ ಅಂಥ ಮುಖ ಸೌಂದರ್ಯ ದುರ್ಲಭ.

ಇಂಥ ಸೌಂದರ್ಯಕ್ಕೆ ಇಂಥ ಗತಿ ಹೇಗೆ ಬಂತು ? ಇಷ್ಟು ಕಷ್ಟಪಟ್ಟು ಸೃಷ್ಟಿಸಿದ ಇಂಥ ದಿವ್ಯ ವಿಗ್ರಹಕ್ಕೆ ಬ್ರಹ್ಮ ಇಂಥ ಹಣೆಬರಹವನ್ನು ಅದು ಹೇಗೆ ಬರೆದ ? ನಿರ್ಗತಿಕಳಾಗಿ, ಮನೆ ಮಾರು ಬಿಟ್ಟು ಊರು ಕೇರಿ ಬಿಟ್ಟು ಅನಾಥಳಾಗಿ ಅದೃಷ್ಟದ ಕೈಯ ದಾಳವಾಗಿ ಹೇಗೆ ಇವಳು ಇತ್ತ ಈ ತೀರದತ್ತ ತೇಲಿ ಬಂದಳು ?

ಭಾರವಾದ ಕಣ್ಣುಗಳಿಂದ ಆ ಮುಖವನ್ನೇ ನೋಡುತ್ತ ಶರತ್ಕಾಲದ ಚಂದ್ರನನ್ನು ನೋಡನೋಡುತ್ತ ಚಂದ್ರಬಿಂಬದಲ್ಲೇ ತಲ್ಲೀನನಾಗುವ ಕವಿಯಂತೆ ಶೀನಪ್ಪ ಆ ಮುಖದಲ್ಲಿ ಮಗ್ನನಾದ.

ಆ ಮುಖವನ್ನು ಹಾಗೆ ನೋಡುತ್ತಿದ್ದಂತೆ ಕ್ರಮೇಣ ಅದರ ಸ್ಥಾನದಲ್ಲಿ ಅಷ್ಟೇ ಸುಂದರವಾದ, ಆದರೆ ಇನ್ನಷ್ಟು ಮಾದಕವಾದ ಇನ್ನೊಂದು ಮುಖ ಬಂದು ನಕ್ಕಿತು. ಆ ನಗೆಯ ಬೆಳಕು ಕೋಣೆಯನ್ನೆಲ್ಲ ತುಂಬಿ ತುಳುಕಿತು. ಅದರ ತೆರೆ ಬಂದು ಬಡಿದಾಗ ಶೀನಪ್ಪ ಮೈ ತಿಳಿದು ವಿಹ್ವಲನಾಗಿ

" ಯಾರು ನೀನು ? " ಎಂದ.

" ಯಾರು ಅಂತ ಕೇಳುತ್ತೀರಾ ? ನಾನಲ್ಲವ ? ಆಗಲೇ ಮರೆತು ಬಿಟ್ಟಿರೇನೋ ಜೋಯಿಸರು. " ಸರಸವಾದ, ಸರಳವಾದ, ಹುಚ್ಚು ಹಿಡಿಸುವಂಥ ಮಾತು.

ಶಾರದ-- ಶಾರದಾ !

ಶೀನಪ್ಪನ ಕಣ್ಣು ಮಂಜಾಯಿತು.

" ಶಾರದಾ–ನಿನ್ನ ಕಥೆ ಎಷ್ಟು ಭಯಂಕರ ಚಿನ್ನಾ." ಎಂದ ಶೀನಪ್ಪನಿಗೆ ತನ್ನ ಹೃದಯವೆಲ್ಲ ಕರಗಿ ನೀರಾಗಿ ಹರಿಯುತ್ತಿರುವಂತೆ ತೋರಿತು.

ಶಾರದೆ ಈಗ ಈ ಲೋಕದಲ್ಲಿ ಇಲ್ಲ. ಜಗತ್ತು ಅವಳನ್ನು ಮರೆತಿದೆ. ಶೀನಪ್ಪನ ಕಣ್ಣು ಮುಂದೆಯೇ ಅವಳು ಸುಟ್ಟು ಬೂದಿಯಾಗಿ ಹೋದಳು— ಅವನ ಶಾರದೆ ಒಂದು ಹಿಡಿ ಬೂದಿ. ಆದರೆ ಶೀನಪ್ಪನ ಕನಸಿನ ಲೋಕಕ್ಕೆ

ಅವಳೇ ರಾಣಿ. ಅಲ್ಲಿ ಅವಳ ಆಣತಿಯಿಲ್ಲದೆ ಒಂದು ಹುಲ್ಲು ಕಡ್ಡಿಯೂ ಚಲಿಸದು.

" ಕ್ಷಮಿಸು ಶಾರದಾ ; ಒಂದು ಕ್ಷಣ ನಿನ್ನನ್ನು ಮರೆತೆ; ಅಥವಾ ನಿಜ ಹೇಳಬೇಕಾದರೆ ಈ ಪ್ರಜ್ಞಾಹೀನ ಮುಖದಲ್ಲಿ ನಿನ್ನ ಮುಖವನ್ನು ಪ್ರತಿಷ್ಠಾಪಿಸಿದೆ—ತಪ್ಪಾಯಿತು. ಕ್ಷಮಿಸು " ಎಂದು ಶೀನಪ್ಪ ಮಲಗಿದವಳ ಮುಖದ ಕಡೆಗೆ ಮತ್ತೆ ನೋಡಿದ. ಅಲ್ಲಿ ಈಗ ಶಾರದೆಯಿಲ್ಲ; ಅವಳ ಮಾದಕವಾದ ನಗುವಿಲ್ಲ, ಅವಳ ತುಂಟತನದ ಸುಗ್ಗಿಯ ಕುಣಿತವಿಲ್ಲ. ಈ ಮುಖ ಬೇರೆ. ಇದು ಮನುಷ್ಯರ ಕೈಗೆ ಮೀರಿದ ಚೆಲುವು; ಶಾಂತದ, ಕರುಣದ, ಗಂಭೀರ ಸರೋವರ. ಗಾಳಿಯಿಂದ ಸದಾ ಚಂಚಲವಾದ ಸದಾಗಮನಶೀಲವಾದ ಗಿರಿತರಂಗಿಣಿ ಅಲ್ಲ.

ಶಾರದೆಯ ಕಥೆ.

ಹತ್ತು ವರ್ಷಗಳ ಹಿಂದೆ ಅದು ಒಂದು ಕನಸಿನಂತೆ ನಡೆದುಹೋಯಿತು. ಅದು ನಿಜವಾಗಿಯೂ ವಾಸ್ತವ ಜಗತ್ತಿನಲ್ಲಿ ನಡೆಯಿತೆ ? ಅಥವಾ ಶೀನಪ್ಪನಿಗೋಸ್ಕರವಾಗಿಯೇ ಯಾವುದೋ ಮಹಾಕವಿ ಬರೆದು ಬಿಟ್ಟು ಹೋದ ಒಂದು ರುದ್ರ ನಾಟಕವೇ ?

ಶೀನಪ್ಪನ ಬಾಳ ಹಾಯಿಗೆ ಗಾಳಿ ತುಂಬಿ ಸದಾ ಚಟಪಟಿಸುತ್ತಿದ್ದ, ಪಟಪಟಿಸುತ್ತಿದ್ದ ಕಾಲ ಅದು. ಮೊಗ್ಗು ಹೂವಾಗುತ್ತಿದ್ದ ಕಾಲ; ಹೂವಿನ ಸುತ್ತಲೂ ದುಂಬಿ ಝೇಂಕರಿಸುತ್ತಿದ್ದ ಕಾಲ. ಮರಮರದಲ್ಲೂ ಕೋಗಿಲೆ ಕೂತು ಕುಕಿಲುತ್ತಿದ್ದ ಕಾಲ.

ಯವ್ವನದ ಪ್ರವಾಹದಲ್ಲಿ ಶೀನಪ್ಪನ ಮನಸ್ಸು ತರಗೆಲೆಯಂತೆ ಕೊಚ್ಚಿ ಹೋಗುತ್ತಲೇ ಹುಚ್ಚು ಹುಚ್ಚಾಗಿ ಕುಣಿಯುತ್ತಿತ್ತು. ಕನಸಿನ ಕಾಮನ ಬಿಲ್ಲಿನ ಮೇಲೆ ಕೂತು ಕಲ್ಪನೆ ತೂಗುತ್ತಿತ್ತು. ಕಬ್ಬಿಣವನ್ನು ಹೊನ್ನಾಗಿಸಬೇಕೆನ್ನುವ, ಮರಳಿನಲ್ಲಿ ರಸ ಹಿಂಡಬೇಕೆನ್ನುವ, ಮುಗಿಲ ಹೂವನ್ನು ಮುಡಿಯಬೇಕೆನ್ನುವ, ಅಸಾಧ್ಯವಾದುದನ್ನು ಸಾಧ್ಯವಾಗಿಸಿಯೇ ತೀರುವೆನೆನ್ನುವ ಪೌರುಷ ಒಲದ ಪಾಂಚಜನ್ಯವನ್ನು ಮೊಳಗುತ್ತ ಶೀನಪ್ಪ ಆಗ ಬಾಳ ಬೀದಿಗಳಲ್ಲಿ ದಿಗ್ವಿಜಯಿಯಂತೆ ವಿಜೃಂಭಿಸುತ್ತಿದ್ದ. ಕಾಲು ನೆಲವ ಮೇಲಿದ್ದೂ ಮನಸ್ಸು ತಾರೆಗ

ಳೊಡನೆ; ಮಹಾಮೇರುವಿನಂಥ ಆಶೆ ವಿಶ್ವವ್ಯಾಪಿಯಾದ ಆಕಾಂಕ್ಷೆ.

ಈಗ ಆ ಹುಚ್ಚು ಆಶೆಗಳನ್ನು, ಆ ಅರ್ಥಹೀನ ಆತ್ಮ ವಿಶ್ವಾಸವನ್ನು ನೆನೆದರೆ ನಗು ಬರುತ್ತದೆ ಶೀನಪ್ಪನಿಗೆ; ಅಳುವೂ ಬರುತ್ತದೆ. ಮುಗಿಲಲ್ಲಿ ಕಟ್ಟಿದ ಮಹಲು ಈಗ ಕಡಕೊಂಡು ಬಿದ್ದಿದೆ. ಅಂಥದೇ ಒಂದು ಮಹಲನ್ನು ಇಲ್ಲಿ ಈ ನೆಲದ ಮೇಲೆ ಕಟ್ಟಬೇಕೆನ್ನುವ ಆಶೆ ಮಾತ್ರ ಇನ್ನೂ ಇದೆ. ಅದು ಕಟ್ಟಲು ಆಗುವುದಿಲ್ಲ; ಎದೆಯ ಕಾತರ ಹಿಂಗುವುದಿಲ್ಲ.

ಶೀನಪ್ಪನದು ಮಧುರವಾದ ಕಂಠ. ಅವನು ಕುಳಿತು ಪದ ಹೇಳ ತೊಡಗಿದನೆಂದರೆ ಸುತ್ತಲೂ ನೆರೆದ ಜನ ಮಂತ್ರ ಮುಗ್ಧರಾಗಬೇಕು. ಯಕ್ಷಗಾನದಲ್ಲಿ ಕ್ರಮ ಬದ್ಧವಾದ ಅಭ್ಯಾಸವೂ ಅವನಿಗಾಗಿತ್ತು. ತಾಳ ಜ್ಞಾನ, ರಾಗಜ್ಞಾನ ಜನ್ಮದತ್ತವಾಗಿಯೇ ಅವನಿಗೆ ಬಂದಿತ್ತು. ಯಾವ ಪ್ರಸಂಗದ ಯಾವ ರಾಗವೇ ಇರಲಿ ಅದನ್ನು ಲೀಲಾಜಾಲವಾಗಿ ಹಾಡುತ್ತಿದ್ದ. ಅವನ ಕಂಠದಿಂದ ಬಂದ ಹಾಡಿಗೆ ಇನ್ನೆಲ್ಲೂ ಕೇಳದ ಒಂದು ಇಂಪು ಕೂಡುತ್ತಿತ್ತು. ಬೆಣ್ಣೆಯ ಬೆಟ್ಟ ಬಿಸಿಲ ಶಾಖಕ್ಕೆ ನುಣ್ಣ ನುಣ್ಣನೆ ಕರಗುವಂತೆ, ನೀರಿಗೆ ಬಿದ್ದ ಕಲ್ಲುಸಕ್ಕರೆ ನಿಧಾನವಾಗಿ ಕರಗುವಂತೆ ಅವನ ಕಂಠದಿಂದ ನಾದ ಮೃದುವಾಗಿ ನುಣ್ಣನುಣ್ಣನೆ ಬಂದು ಕೇಳುವವರ ಕಿವಿಗೆ ಅಮೃತವನ್ನು ಸುರಿಯುತ್ತಿತ್ತು. ಆ ಕಾಲದಲ್ಲಿ ಶೀನಪ್ಪನು ಹಾಡಿದ ಕಂದ ಪದ್ಯಗಳನ್ನು ಕೇಳಿ ಮೈ ಮರೆಯ ದಿದ್ದವರು ವಿರಳ. ಸುತ್ತಮುತ್ತಲಲ್ಲಿ ಎಲ್ಲಿ ತಾಳಮದ್ದಲೆಯಾಗಲಿ ಅಲ್ಲಿ ಶೀನಪ್ಪನೇ ಭಾಗವತನಾಗಬೇಕು. ಎಷ್ಟೋ ಸಲ ಮೇಳದವರ ಬಯಲಾಟ ದಲ್ಲೂ ಶೀನಪ್ಪನಿಗೆ ಕರೆ ಬರುತ್ತಿತ್ತು. ಎಲ್ಲ ಕಡೆಯಿಂದಲೂ ಪ್ರಶಂಸೆ; ಶೀನಪ್ಪ ಬಾಯಿಬಿಟ್ಟರೆ ಸುತ್ತಲೂ ಹುಣ್ಣಿಮೆಯ ಚಂದ್ರ ಗಹಗಹಿಸಿದ ಹಾಗೆ. ಸುತ್ತಲೂ ಹತ್ತು ಸಾವಿರ ಮಲ್ಲಿಗೆ ಹೂಗಳು ಏಕಕಾಲದಲ್ಲಿ ಅರಳಿ ಗಂಧ ನೈವೇದ್ಯವನ್ನು ಅರ್ಪಿಸಿದ ಹಾಗೆ ಆನಂದದಿಂದ ಮೈ ಮರೆತ ಶ್ರಾವಕರ ನಡುವೆ ಕುಳಿತಾಗ ಶೀನಪ್ಪ ಅಪೂರ್ವ ಆನಂದವನ್ನು ಅನುಭವಿಸುತ್ತಿದ್ದ. ತನ್ನ ಗಾನದಿಂದ ಎಷ್ಟು ಜನಕ್ಕೆ ಆನಂದ ಎಂಬ ಆತ್ಮ ತೃಪ್ತಿಯೊಡನೆ ತನ್ನ ಗಾನಕ್ಕೆ ಎಣೆಯಿಲ್ಲ ಎಂಬ ಅಭಿಮಾನ, ಅಹಂಕಾರ.

ಆ ಕಾಲದಲ್ಲಿ ಶೀನಪ್ಪ ಭಾಗವಹಿಸದ ತಾಳಮದ್ದಲೆ ಇರಲಿಲ್ಲ. ಅವನು

ಸುತ್ತಿ ಬಾರದ ಊರಿರಲಿಲ್ಲ. ಹೊಗಳಿಕೆಯ ಗಾಳಿ ತುಂಬಿದ ಚೆಂಡಿನಂತೆ ಅವನು ಊರಿಂದೂರಿಗೆ ಪುಟಿಯುತ್ತಿದ್ದ. ತಿಂಗಳುಗಟ್ಟಲೆ ಮನೆಗೇ ಬರುತ್ತಿರಲಿಲ್ಲ. ಈ ದಿನ ನಾಯಕನಕಟ್ಟೆ, ನಾಳೆ ಉಪ್ಪುಂದ, ನಾಡಿದ್ದು ಬೈಂದೂರು; ಶಿರೂರು, ಭಟಕಳ; ಏಳಜಿತ, ಅರೆಶಿರೂರು, ಕೊಲ್ಲೂರು; ಕಿರುಮುಸೀಶ್ವರ, ಮರವಂತೆ, ಗಂಗೊಳ್ಳಿ, ಕುಂದಾಪುರ; ಅರೆಹೊಳೆ, ವಂಡಸೆ, ಹೇರಂಜಾಲ, ಹಳಗೇರಿ— ಹೀಗೆ ಅವನು ರಥದಂತೆ ಸುತ್ತುತ್ತಿದ್ದ.

ಒಂದು ಸಲ ಏಳಜಿತಕ್ಕೆ ಅವನು ಹೋಗಬೇಕಾಗಿ ಬಂತು ಆ ಊರಿನ ಶ್ಯಾನುಭಾಗರು ಬಹಳ ಪ್ರಸಿದ್ಧರು, ಶ್ರೀಮಂತರು. ತಮ್ಮ ಮಗಳ ಮದುವೆಯನ್ನು ಬಹು ವಿಜೃಂಭಣೆಯಿಂದ ನೆರವೇರಿಸುತ್ತಿದ್ದ ಕಾಲದಲ್ಲಿ ಒಂದು ತಾಳಮದ್ದಲೆಯೂ ಆಗಬೇಕು ಅಂತ ಅವರಿಗೆ ಅನ್ನಿಸಿತು. ಆ ಬಗ್ಗೆ ಆ ಪ್ರದೇಶದ ಪ್ರಸಿದ್ಧ ಅರ್ಥಗಾರರನ್ನೆಲ್ಲ ಕರಸಿದ್ದರು. ಭಾಗವತಿಕೆಗೆ ಶೀನಪ್ಪ ನಿಗೆ ಕರೆ ಬಂತು.

ಶೀನಪ್ಪನ ಸೋದರತ್ತೆಯನ್ನು ಏಳಜಿತಕ್ಕೆ ಕೊಟ್ಟಿದ್ದರು. ಸೋದರತ್ತೆ ಸೀತಮ್ಮನನ್ನು ಶೀನಪ್ಪ ಕಂಡದ್ದು ಅವನು ಹುಡುಗನಾಗಿದ್ದಾಗ. ಸೀತಮ್ಮನ ಮುಖದ ಅಸ್ಪಷ್ಟವಾದ ನೆನಪು ಮಾತ್ರ ಅವನ ಮನಸ್ಸಿನಲ್ಲಿತ್ತು. ಎಂಟು ಮೈಲಿ ದೂರದ ಏಳಜಿತವೇ ಆಗ ಬಹಳ ದೂರವಾಗಿದ್ದ ಕಾಲ. ಶೀನಪ್ಪನ ತಂದೆ ಗತಿಸಿದಾಗೊಮ್ಮೆ ಈ ಕಡೆ ಬಂದ ಸೀತಮ್ಮ ಮತ್ತೆ ಬರಲಿಲ್ಲ. ಅವರ ಗಂಡ ತೀರಿ ಹೋದ ವರ್ತಮಾನ ಶೀನಪ್ಪನಿಗೆ ಬಂದಿತ್ತು. ಆದರೆ ಆ ಕಾಲ ದಲ್ಲೇ ಶೀನಪ್ಪನ ಅಕ್ಕನ ಮನೆಯಲ್ಲಿ ಅವಳ ಮಗನಿಗೆ ಉಪನಯನವಿದ್ದದ್ದ ರಿಂದ ಶೀನಪ್ಪ ಅಲ್ಲಿಗೆ ಹೋಗಬೇಕಾಯಿತು. ಆಮೇಲೆ ಸೋದರತ್ತೆಯ ವರ್ತ ಮಾನವೇನೂ ಅವನಿಗೆ ಸಿಕ್ಕಿರಲಿಲ್ಲ.

ಈಗ ಮತ್ತೆ ಏಳಜಿತಕ್ಕೆ ಹೋಗಬೇಕಾಗಿ ಬಂದಾಗ ಥಟಕ್ಕನೆ ಅವನಿಗೆ ತನ್ನ ಸೋದರತ್ತೆಯ ನೆನಪು ಬಂತು. "ಪಾಪ, ಹೇಗಿದ್ದಾಳೋ. ಒಬ್ಬೊಂ ಟಿಗಳಾಗಿ ಆ ಊರಿನಲ್ಲಿ ಹೇಗೆ ಜೀವನ ಸಾಗಿಸುತ್ತಿದ್ದಾಳೋ? ನೋಡಿ ಬರ ಬೇಕು" ಎಂದುಕೊಳ್ಳುತ್ತ ಏಳಜಿತಕ್ಕೆ ಹೊರಟ.

ಮಧ್ಯಾಹ್ನ ಊಟ ಮಾಡಿ ವಿಶ್ರಮಿಸಿಕೊಂಡು ಹೊರಟ ಅವನು ಏಳ

ಜಿತವನ್ನು ತಲಪುವಷ್ಟರಲ್ಲಿ ಕತ್ತಲಾಗಿತ್ತು. ಏಳಜಿತ ಕಾಡುಗಳ ಮಧ್ಯದ ಊರು. ಗುಂಪು ಗುಂಪಾಗಿ ಎಂಟು ಹತ್ತು ಮನೆ; ಇನ್ನು ಅಲ್ಲಲ್ಲಿ ಚೆದರಿದ ಕೆಲವು ಮನೆಗಳು. ಮನೆಗಳ ಸುತ್ತಲೂ ಭೀಕರವಾದ ಕಾಡು. ಹುಲಿ, ಚಿರತೆ, ಆನೆ ಮುಂತಾದ ಎಲ್ಲ ವನ್ಯ ಜಂತುಗಳಿಗೂ ವಾಸಸ್ಥಾನವಾದ ಗಹನ ಆರಣ್ಯ. ಅಲ್ಲಲ್ಲಿ ಮನೆಯ ಮುಂದೆ ಕಾಡು ಕಡಿದು ಮಾಡಿದ ಗದ್ದೆ-ಬಯಲು; ತೆಂಗು, ಅಡಿಕೆ ತೋಟ. ಕರಾವಳಿಯಿಂದ ಹೋದವರಿಗೆ ಆ ಊರು ಭಯಂಕರವೇ.

ಶ್ಯಾನುಭೋಗರ ಮನೆಯ ಮದುವೆ ಗಲಾಟೆಯಲ್ಲಿ ಅವನಿಗೆ ತನ್ನ ಸೋದರತ್ತೆಯ ಮನೆಗೆ ಕೂಡಲೇ ಹೋಗಲು ಆಗಲಿಲ್ಲ ಹೋಗುವಾಗಲೇ ಕತ್ತಲಾಗಿತ್ತು. ಊಟ ಉಪಚಾರ ಮುಗಿಯುವಷ್ಟರಲ್ಲಿ ಹತ್ತು ಗಳಿಗೆ. ಆಮೇಲೆ ತಾಳಮದ್ದಳೆ.

ತಾಳಮದ್ದಳೆಗೆ ಬಹಳ ಜನ ನೆರೆದಿದ್ದರು. ಸುತ್ತುಮುತ್ತಲ ಹಳ್ಳಿಗಳಿಂದಲೂ ಜನ ಬಂದಿದ್ದರು. ಚಪ್ಪರದಲ್ಲಿ ಗಂಡಸರು, ಹೆಂಗಸರು, ಮಕ್ಕಳು ಕಿಕ್ಕಿರಿದಿದ್ದರು. ಶೀನಪ್ಪ ಭಾಗವತನಾಗಿ ಕುಳಿತು, ಕೈಯಲ್ಲಿ ತಾಳ ಹಿಡಿದುಕೊಂಡು ಪಕ್ಕದಲ್ಲಿ ಶ್ರುತಿಯನ್ನು ಊದುತ್ತಿರಲು, ಮೃದಂಗದವನು ಮದ್ದಳೆಯ ಕರಣೆಯ ಮೇಲೆ ಕೈ ಆಡಿಸುತ್ತಿರಲು 'ಗಜಮುಖದವಗೆ, ಗಣಪಗೆ' ಎಂದು ಮಂಗಳಾಚರಣೆಯನ್ನು ಹಾಡತೊಡಗಿದೊಡನೆಯೇ ಸಭೆಯ ಗದ್ದಲವಡಗಿ ಪ್ರಶಾಂತ ಮೌನ ನೆಲಸಿತು. ಅವನ ಕಂಠದಿಂದ ಹೊರ ಹೊಮ್ಮುತ್ತಿದ್ದ ಗಾನತರಂಗದಲ್ಲಿ ಎಲ್ಲರೂ ಮಗ್ನರಾದರು. ಮಕ್ಕಳುಮರಿ ಕೂಡಾ ಪರವಶವಾಗಿ ಕೇಳಿದುವು. ಪದಪದಕ್ಕೆ ಶೀನಪ್ಪನ ಕಂಠಶ್ರೀ ನೂತನ ಲಾವಣ್ಯವನ್ನು ಬಿತ್ತರಿಸುತ್ತ ಕ್ಷಣಕ್ಕೊಂದು ಹೊಸ ಭಂಗಿಯನ್ನು, ಹೊಸ ಮುದ್ರೆಯನ್ನು ಪ್ರದರ್ಶಿಸುತ್ತ ಅಂತರಿಕ್ಷದಲ್ಲಿ ಕುಣಿದಳು.

ಅಂದಿನ ಪ್ರಸಂಗ 'ಸುಧನ್ವ ಕಾಳಗ.' ಮೊದಲು ಭಾಗವತ ಪದ ಹಾಡಿ ಹೇಳಬೇಕು. ಆಮೇಲೆ ಅರ್ಥಗಾರರು ತಮ್ಮ ತಮ್ಮ ಪಾತ್ರಕ್ಕೆ ತಕ್ಕ ಅರ್ಥವನ್ನು ಹಾಡಿದ ಪದದ ಆಧಾರದ ಮೇಲೆ ಹೇಳಬೇಕು--ಅರ್ಥ ಮುಗಿದ ಮೇಲೆ ಮತ್ತೆ ಪದ, ಮತ್ತೆ ಅರ್ಥ. ಪದ ಹೇಳುವಾಗ ಸೋರೆಬುರುಡೆಯ

ಶ್ರುತಿ ಒಬ್ಬ ಹಿಡಿದಿರುತ್ತಾನೆ; ಇನ್ನೊಬ್ಬ ಮದ್ದಳೆಯನ್ನು ಬಾರಿಸುತ್ತಿರುತ್ತಾನೆ ಭಾಗವತ ಕೈಲಿ ತಾಳ ಹಿಡಿದು ಪದದ ತಾಳಕ್ಕೆ ಸರಿಯಾಗಿ ಅದನ್ನು ಬಾರಿಸುತ್ತಾ ಹಾಡುತ್ತಾನೆ. ಪದ ಮುಗಿದೊಡನೆಯೇ ಮದ್ದಳೆ ನಿಲ್ಲುತ್ತದೆ. ಮತ್ತೆ ಅರ್ಥ.

ಕಥೆ—ಸುಧನ್ವನ ಹೃದಯದ್ರಾವಕವಾದ ಕಥೆ ಪದರು ಪದರಾಗಿ ಪದ ಪದಕ್ಕೆ ಬಿಚ್ಚಿಕೊಳ್ಳುತ್ತಿತ್ತು. ರಾಜಸೂಯ ಯಾಗಕ್ಕಾಗಿ ದಿಗ್ವಿಜಯಕ್ಕೆ ಬಂದ ಅರ್ಜುನನ ಕುದುರೆಯನ್ನು ಕಟ್ಟಿ ಹಾಕಿ ಆಗಿದೆ. ಯುದ್ಧವನ್ನು ಆಹ್ವಾನಿಸಿಯಾಗಿದೆ. ಸುಧನ್ವ ಯುದ್ಧಕ್ಕೆ ಹೋಗಬೇಕು. ಇತ್ತ ಅವನ ಮನೋವಲ್ಲಭೆ ಪತಿ ಸಮಾಗಮಕ್ಕೆ ಕಾತರಳಾಗಿ ಕಾದಿದ್ದಾಳೆ. ಶೃಂಗಾರ—ಕರುಣಗಳ ಅಪೂರ್ವ ಸಮ್ಮಿಲನ. ಸಭಿಕರೆಲ್ಲ ಕಥೆಯಲ್ಲಿ ತಲ್ಲೀನರಾಗಿದ್ದಾರೆ.

ಸಭೆಯಲ್ಲಿದ್ದ ಎರಡು ಕಣ್ಣುಗಳು ಮಾತ್ರ ಶೀನಪ್ಪನ ಮುಖದಲ್ಲಿ ನಟ್ಟಿದ್ದುವು. ಗಂಭೀರವಾದ ಮಂದಹಾಸಯುಕ್ತವಾದ ಮುಖ. ಕೊಂಚ ಚಚಂಲವಾದ, ಕೊಂಚ ಸ್ವಪ್ನ ಪರವಶವಾದ ಆದರೂ ಅದ್ಭುತವಾದ ಆಳವನ್ನು ಸೂಚಿಸುವ ಕಣ್ಣುಗಳು. ಎತ್ತರವಾದ ಹಣೆ. ಸುರುಳಿ ಸುರುಳಿಯಾಗಿ ದಟ್ಟವಾಗಿ ಹೊರೆ ಹೊರೆಯಾಗಿ ತಲೆಯನ್ನು ಕವಿದಿದ್ದ ಅಚ್ಚಕಪ್ಪು ಕಾಡಿಗೆ ಕೂದಲು. ಎದೆಸೆಟೆದು ವೀರಾಸನದಲ್ಲಿ ಶೀನಪ್ಪ ಆಗ ಕೂತಿದ್ದ. ದಷ್ಟಪುಷ್ಟವಾಗಿ ಪ್ರಮಾಣಬದ್ಧವಾಗಿ ಮಾಂಸ ತುಂಬಿ ಮಿರುಗುವ ಅಂಗಾಂಗಗಳು. ಅಷ್ಟೇನೂ ಎತ್ತರವಲ್ಲದ ಸಮಪ್ರಮಾಣದ ದೇಹ. ಕ್ಷಣ ಕ್ಷಣಕ್ಕೆ ಹೊಸ ಭಾವಗಳನ್ನು ಬಿಂಬಿಸುತ್ತ ಭಾವದ ಚಿಲುಮೆಗಳಂತೆ ತೋರುವ ಕಣ್ಣುಗಳು. ಈಗ ಶೃಂಗಾರ, ಈಗ ಕರುಣ, ಈಗ ಅಗೋ ವೀರ— ಭಾವಭಾವಾಂತರಗಳು ಕಣ್ಣುಗಳಲ್ಲಿ ಪುಟಿಯುತ್ತಿದ್ದುವು. ಆ ಎರಡು ಕಣ್ಣುಗಳು ಶೀನಪ್ಪನ ಕಣ್ಣುಗಳ ಲಾಸ್ಯವನ್ನು ದಿಟ್ಟಿಸುತ್ತ ಪರವಶವಾಗಿದ್ದುವು.

ಪದ ಮುಗಿದು ಅರ್ಥ ಸುರುಳಿ ಸುರುಳಿಯಾಗಿ ಬಿಚ್ಚುತ್ತಿದ್ದ ವಿರಾಮ ಕಾಲದಲ್ಲಿ ಶೀನಪ್ಪನ ಕಣ್ಣು ಸಭೆಯ ಕಡೆ ತಿರುಗಿ ಮುಖದಿಂದ ಮುಖಕ್ಕೆ ಪಯಣ ಹೊರಟಿತು. ಪಯಣ ಹೊರಟ ಕಣ್ಣು ಆ ಎರಡು ಕಣ್ಣುಗಳ ಕೋಟೆಯಲ್ಲಿ ಸೆರೆಯಾಯಿತು.

ದಿಗ್ಭ್ರಮೆ ಹಿಡಿಸುವಷ್ಟು ಸುಂದರವಾದ, ಹುಚ್ಚು ಹಿಡಿಸುವಷ್ಟು ಮೋಹಕವಾದ ಕಣ್ಣುಗಳು. ಶೀನಪ್ಪ ನೋಡಿದ; ನೋಡಿ ಬೆರಗಾದ; ಇಂಥ ಕಣ್ಣುಗಳು ಇಲ್ಲಿಗೆ ಎಲ್ಲಿಂದ ಬಂದುವು? ಎಲ್ಲೋ ನೋಡಿದಂತೆ ಅನ್ನಿಸುವ, ಆದರೆ ಎಲ್ಲಿ ಎಂದು ಹೇಳಲು ಬಾರದಂಥ ಅಪೂರ್ವ ಕಾಂತಿಯುಳ್ಳ ಕಣ್ಣುಗಳು. ಮುಖದಿಂದ ಮುಖಕ್ಕೆ ನೆಗೆಯುತ್ತಿದ್ದ ಶೀನಪ್ಪನ ಕಣ್ಣುಗಳು ಅಲ್ಲಿ ಬಂದು ತಂಗಿದುವು. ಅಲ್ಲಿಂದ ಮುಂದೆ ಸಾಗಲು ಆಗದೆ ಅಲ್ಲೇ ಜೋತುಬಿದ್ದುವು. ಕಣ್ಣು ಕಣ್ಣು ಕೂಡಿದೊಡನೆಯೇ ಸಭೆಯಲ್ಲಿದ್ದ ಆ ಕಣ್ಣುಗಳು ತಗ್ಗಿದುವು, ನೆಲದ ಕಡೆ ಬಾಗಿದುವು

ಆದರೆ ಶೀನಪ್ಪನ ಕಣ್ಣು ಅಲ್ಲಿಂದ ಮುಂದೆ ಚಲಿಸದು. ತಲೆ ಬಾಗಿ ಕುಳಿತಿದ್ದರೂ ಅವಳು ಕಣ್ಣಿನ ಯಾವುದೋ ಕುಡಿಯಿಂದ ಅವಳು ತನ್ನನ್ನೇ ನೋಡುತ್ತಿರುವಂತೆ ಶೀನಪ್ಪನಿಗೆ ಅನ್ನಿಸಿತ್ತು. ಆ ಕಣ್ಣುಗಳಿಗೂ ತನಗೂ ಏನೋ ಬಾಂಧವ್ಯ ಇರುವ ಹಾಗೆ, ಅಜ್ಞಾತವಾದ ಯಾವುದೋ ಒಂದು ಶಕ್ತಿ ತನ್ನ ಹೃದಯವನ್ನು ಆ ಇನ್ನೊಂದು ಹೃದಯಕ್ಕೆ ಬೆಸೆಯುತ್ತಿರುವಂತೆ ತೋರಿತು.

ಹಿಂದೆ ಎಂದೂ ತಾನು ಅನುಭವಿಸದಿದ್ದ ವಿಶೇಷವಾದೊಂದು ಭಾವನೆ ಮನಸ್ಸಿನ ಸರೋವರದಲ್ಲಿ ದಳ ತೆರೆಯುತ್ತಿತ್ತು. ಮುಗ್ಧವಾದ ಮುಖ; ತುಟಿಯ ಸುತ್ತಲೂ ತುಂಟತನದ ಛಾಯೆ. ಮಿಂಚಿನ ಬಲೆಯನ್ನೆಸೆದು ಸಂಚು ಹೂಡಿ ಮಿಂಚಿನಂತೆ ಮರೆಯಾಗುವ ಕಣ್ಣು. ಇನ್ನೂ ಹುಡುಗಿ— ಪ್ರಾಯ ಹದಿಮೂರೋ—ಹದಿನಾಲ್ಕೋ?

ಅರ್ಥಗಾರರ ಮಾತು ಮುಗಿದು ಸುತ್ತಲೂ ಮೌನ ಮುಸುಕಿದಾಗಲೇ ಶೀನಪ್ಪನಿಗೆ ಎಚ್ಚರ. ಪದ ಹೇಳಬೇಕಾದ ತಾನು ಎತ್ತಲೋ ನೋಡುತ್ತ ಮೂಕನಾಗಿ ಕುಳಿತದ್ದನ್ನು ಉಳಿದೆಲ್ಲರೂ ನೋಡುತ್ತಿದ್ದುದರ ಅರಿವು ಬಂದಾಗ ಶೀನಪ್ಪನ ಮುಖ ಕೆಂಪಾಯಿತು. ತನ್ನ ಕರ್ತವ್ಯದ ಪ್ರಜ್ಞೆ ಬಂತು. ಮನಸ್ಸಿಲ್ಲದ ಮನಸ್ಸಿನಿಂದ ತನ್ನ ಕಣ್ಣುಗಳನ್ನು ಆ ಸೂಜಿಗಲ್ಲಿಂದ ಸೆಳೆದು ಪ್ರಯತ್ನಪೂರ್ವಕವಾಗಿ ಮುಂದಿನ ಪದವನ್ನು ಜ್ಞಾಪಿಸಿಕೊಂಡು ಹಾಡಿದ. ಕಂಠದಲ್ಲಿ ಏನೋ ಉದಾಸಭಾವ ಹಠಾತ್ತಾಗಿ ಮೈದೋರಿದಂತೆ ಸಭಿಕರಿಗೆ ಅನ್ನಿಸಿತು. ಹಾಡಿಗೆ ಮತ್ತೆ ಮೊದಲಿನ ಕಳೆ ಕಟ್ಟಲಿಲ್ಲ. ಎಂದೂ ತಾಳ ತಪ್ಪದವ ಇಂದು

ಒಂದೆರಡು ಕಡೆ ಮುಗ್ಗರಿಸಿದ. ಅನ್ಯಮನಸ್ಕನಾಗಿಯೇ ತನ್ನ ಕೆಲಸವನ್ನು ಸಾಧಿಸಿದ, ಮುಂದುವರೆಸಿದ. ಆ ಕಣ್ಣುಗಳ ಕರೆ ಅಂತರಂಗದಲ್ಲಿ ಮಾರ್ದನಿಗೊಡುತ್ತ ಕಲಕಲನಾದಿನಿಯಾದ ತರಂಗಿಣಿಯಂತೆ ಮೊರೆಯಿತು.

ಮತ್ತೆ ಮತ್ತೆ ಅವನ ಕಣ್ಣು ಆ ಕಣ್ಣುಗಳನ್ನು ಹುಡುಕಿ ಹೊರಟುವು. ಆದರೆ ಅಲ್ಲಿ ತಗ್ಗಿದ ತಲೆ ಮತ್ತೆ ಮೇಲೇಳಲಿಲ್ಲ ಆಗೀಗೊಮ್ಮೆ ಆ ತಲೆ ಮೇಲಕ್ಕೆದ್ದಾಗ ಅವನ ಕಣ್ಣು ಅತ್ತ ಸುಳಿದೊಡನೆಯೇ ಮತ್ತೆ ಅದು ಬಾಗುತ್ತಿತ್ತು. ಅದೊಂದು ಬಗೆಯ ಕಣ್ಣುಮುಚ್ಚಾಲೆಯ ಆಟವೇ ಆಯಿತು.

ಅಂತೂ ತಾಳಮದ್ದಲೆ ಮುಗಿಯಿತು. ಕೇಳಬಂದವರೆಲ್ಲ ತಮ್ಮ ತಮ್ಮ ಮನೆಗೆ ತೆರಳಿದರು. ಉಳಿದವರೆಲ್ಲ ಶ್ಯಾನುಭಾಗರ ವಿಶಾಲವಾದ ಮನೆಯಲ್ಲಿ ಅಲ್ಲಿ ಇಲ್ಲಿ ಮಲಗಿಕೊಂಡರು.

ಬೆಳಗಾಯಿತು.

ಎದ್ದು ಮುಖ ತೊಳೆದ ಕೂಡಲೇ ಶೀನಪ್ಪ ತನ್ನ ಸೋದರತ್ತೆಯ ಮನೆಯನ್ನು ಹುಡುಕಿಕೊಂಡು ಹೊರಟ.

ರಾಜರಸ್ತೆಯನ್ನು ಬಿಟ್ಟು ಅಡ್ಡದಾರಿ ಹಿಡಿದರೆ ಕಾಲುದಾರಿ. ಆ ದಾರಿಯ ಎರಡೂ ಕಡೆ ಗಹನವಾದ ಅರಣ್ಯ. ದಟ್ಟವಾಗಿ ಬೆಳೆದ ಮರಗಳ ನಡುವಿನಿಂದ ಎದೆ ನಡುಗಿಸುವಂಥ, ಭೀಕರವಾದ ಆದರೆ ಅಸ್ಪಷ್ಟವಾದ ಝೇಂಕಾರ ಕೇಳುತ್ತಿತ್ತು. ದಟ್ಟವಾದ ಮರಗಳ ಕೋಟೆಯೊಳಗೆ ಕತ್ತಲೆ ಇನ್ನೂ ತನ್ನ ರಾಜ್ಯವನ್ನು ನಡಸುತ್ತಿತ್ತು. ದಾರಿಯು ಮೇಲೆ ಮಾತ್ರ ನಸುಬೆಳಕು.

ಹೀಗೆ ಒಂದು ಅರ್ಧ ಮೈಲಿ ನಡೆದರೆ ಹಠಾತ್ತಾಗಿ ಕಾಡು ಕೊನೆಗೊಂಡು ಬಯಲು ಕಾಣುತ್ತದೆ. ಬಯಲಿನ ವಿಸ್ತಾರ ಬಹಳ ಕಡಿಮೆ. ಅಲ್ಲಿ ನಾಲ್ಕೈದು ಗದ್ದೆಗಳು. ಒಂದು ತೋಟ. ತೋಟದ ನಡುವಿನಲ್ಲಿ ಒಂದು ಸಣ್ಣದಾದ ಮನೆ. ಮನೆಯ ಸುತ್ತಲೂ ಪಾಗಾರ. ಪಾಗಾರದಲ್ಲೇ ಒಂದು ದೊಡ್ಡ ಬಾಗಿಲು. ಮನೆಯ ಹಿಂದೆ ಸಣ್ಣದೊಂದು ಬೆಟ್ಟ.

ದೂರದಿಂದಲೇ ಬಾಗಿಲು ತೆರೆದಿರುವುದು ಶೀನಪ್ಪನಿಗೆ ಕಾಣಿಸಿತು. ಗದ್ದೆಯಂಚಿನಲ್ಲೇ ಜೋಪಾನವಾಗಿ ನಡೆಯುತ್ತ ಸ್ವಲ್ಪ ಹತ್ತಿರ ಬಂದಾಗ ಬಾಗಿಲ ಬಳಿ ಯಾರೋ ನಿಂತಿರುವುದು ಕಾಣಿಸಿತು. ಅವನ ಸೋದರತ್ತೆ

ಯಂತೂ ಅಲ್ಲ. ಯಾರಿರಬಹುದು ? ಸೋದರತ್ತೆಗೆ ಒಂದು ಮಗು ಇದ್ದುದು ಅವನಿಗೆ ಗೊತ್ತು. ಆದರೆ ಆ ಮಗುವನ್ನು ಅವನೂ ಎಂದೂ ನೋಡಿರಲಿಲ್ಲ ಅದು ಹೆಣ್ಣೋ ಗಂಡೋ ಅದೂ ಅವನಿಗೆ ತಿಳಿಯದು. ಸರಿಯಾಗಿ ನೆನಪಿಲ್ಲ. ನಮ್ಮ ನಮ್ಮವರಿಂದ ಇಷ್ಟು ದೂರವಿರಬಾರದು-ಎಂದುಕೊಂಡ ತಾನು ಈ ಮೊದಲೇ ಇಲ್ಲಿಗೆ ಯಾಕೆ ಬರಲಿಲ್ಲ ? ಬಂದು ಸೋದರತ್ತೆಯನ್ನು ನೋಡಿ ಕೊಂಡು ಯೋಗಕ್ಷೇಮ ವಿಚಾರಿಸಿಕೊಂಡು ಹೋಗಲಿಲ್ಲ ಎಂಬ ಪಶ್ಚಾತ್ತಾಪವೂ ಮೂಡಿತು.

ಬಾಗಿಲಿಗೆ ಇನ್ನೇನು ಎರಡೇ ಗಜ.

" ಬನ್ನಿ ಭಾವಯ್ಯ; ಕೊನೆಗೂ ಬಂದೇ ಬಿಟ್ಟಿತಲ್ಲ ಸವಾರಿ. ನಿಮ್ಮ ದಾರಿಯನ್ನೇ ಕಾಯುತ್ತಿದ್ದೇವೆ " ಎಂಬ ಮಾತು ಬಾಗಿಲೊಳಗಿನಿಂದ ಮಿಡಿಯಿತು.

ಶೀನಪ್ಪ ಕಣ್ಣೆತ್ತಿ ನೋಡಿದ.

ಅವೇ ಆ ಕಣ್ಣುಗಳು ; ಅದೇ ತುಂಟ ನಗೆ, ಅವನ ಮನಸ್ಸನ್ನೆಲ್ಲ ಕದ್ದ ಅದೇ ಆ ಪೋರಿ !

ಒಂದು ಕ್ಷಣ ಶೀನಪ್ಪ ತಬ್ಬಿಬ್ಬಾದ. ಅವಳು ಇಲ್ಲಿಗೆ ಹೇಗೆ ಬಂದಳು ? ಇದು ತನ್ನ ಸೋದರತ್ತೆಯ ಮನೆ ಅಲ್ಲವೋ ? " ದಾರಿ ತಪ್ಪಿ ಇನ್ನಾರದೋ ಮನೆಗೆ ಬಂದು ಬಿಟ್ಟೆನೋ " ಎಂದು ಕೊಂಚ ಗಾಬರಿಯಾದ.

ಶೀನಪ್ಪ ದಿಗ್ಭ್ರಾಂತನಾಗಿ ನಿಂತದ್ದನ್ನು ಕಂಡು ಅವಳು " ಹೆದರ ಬೇಡಿ ಜೋಯಿಸರೇ. ನಿಮಗೆ ನನ್ನ ಗುರುತು ಇಲ್ಲ-ಸರಿ. ಆದರೆ ನಿಮ್ಮ ಸೋದರತ್ತೆಯ ಗುರುತಾದರೂ ಇದೆಯೋ ಇಲ್ಲವೋ. ಕೇಳಿ, ನಾನು ಶಾರದೆ; ನಿಮ್ಮ ಸೋದರತ್ತೆ ಸೀತಮ್ಮನ ಮಗಳು " ಎಂದು ನಗುತ್ತಾ " ಏಕೆ ಅಲ್ಲೇ ನಿಂತು ಬಿಟ್ಟಿರಿ ? ಬನ್ನಿ ಒಳಗೆ " ಎಂದು ಕರೆಯುತ್ತಾ ಒಳಕ್ಕೆ ಓಡಿ ಹೋಗುತ್ತ " ಅಮ್ಮಾ, ಅಮ್ಮಾ, ಶೀನಭಾವಯ್ಯ ಬಂದರು " ಎಂದು ಕೂಗಿ ಹೇಳಿದಳು.

ಶಾರದೆ—ಸೋದರತ್ತೆಯ ಮಗಳು. ಅಬ್ಬಾ, ಎಂಥ ಚುರುಕು ಹುಡುಗಿ. ಎಷ್ಟು ಸರಳವಾಗಿ, ಸಹಜವಾಗಿ ಮಾತಾಡುತ್ತಾಳೆ! ಎಂಥ ಮಧುರವಾದ ಕಂಠ!

ಈ ಕಂಠದ ಮುಂದೆ ತನ್ನ ಕಂಠವನ್ನು ನಿವಾಳಿಸಿ ಚೆಲ್ಲಬೇಕು ಎಂದು ಕೊಳ್ಳುತ್ತ ಶ್ರೀನಿವಾಸ ಮನೆಯೊಳಗೆ ನಡೆದ.

ಸಣ್ಣ ಮನೆ ಆದರೂ ಬಹಳ ಅಚ್ಚುಕಟ್ಟು. ನೆಲ ಥಳ ಥಳ ಹೊಳೆಯುತ್ತಿತ್ತು. ಎಲ್ಲೂ ಒಂದು ಕಸದ ಕಡ್ಡಿಯಾಗಲೀ, ಧೂಳಿನ ಕಣವಾಗಲೀ ಕಾಣದು.

ಅಷ್ಟರಲ್ಲೇ ಅಡಿಗೆ ಮನೆಯಲ್ಲಿ ಏನೋ ಕೆಲಸದಲ್ಲಿದ್ದ ಸೀತಮ್ಮ ಕೆಲಸವನ್ನು ಹಾಗೇ ಬಿಟ್ಟು ಹೊರಕ್ಕೆ ಬಂದು ' ಶೀನ, ಬಾ, ಕೂತುಕೋ ' ಎಂದು ' ಶಾರದಾ, ಎಲ್ಲಿ ಒಂದು ಚಾಪೆ ತಂದು ಹಾಸು ' ಎಂದಳು.

ಶಾರದೆ ಚಾಪೆ ತಂದು ಹಾಸಿ ಮಿಂಚಿನಂತೆ ಕಣ್ಮರೆಯಾದಳು.

ಶೀನಪ್ಪ ಚಾಪೆಯ ಮೇಲೆ ಕೂತುಕೊಂಡ.

" ಕೊನೆಗೂ ಈ ಬಡ ಸೋದರತ್ತೆಯ ಜ್ಞಾಪಕ ಬಂತಲ್ಲ, ಶೀನ ನೀನು ಇಲ್ಲಿಗೆ ಬರುತ್ತೀಯೋ ಇಲ್ಲವೋ ಅಂತ ನಾನೇ ಶ್ಯಾನುಭಾಗರ ಮನೆಗೆ ಬರುತ್ತಿದ್ದೆ. ಅಂತೂ ನೀನೇ ಬಂದೆಯಲ್ಲಪ್ಪ. ನನಗೆ ಎಷ್ಟು ಸಂತೋಷವಾಗಿದೆ ಅಂತೀಯ. " ಎಂದಳು ಸೀತಮ್ಮ.

" ಇಷ್ಟು ದಿನ ಈ ಕಡೆ ಬರದೆ ಬಹಳ ತಪ್ಪುಮಾಡಿದೆ, ಅತ್ತೆ. ಇಷ್ಟು ದೂರ ಬಂದೂ ಈ ಕಡೆ ಬಾರದೆ ಹೋಗುತ್ತಿದ್ದೆನೆ? ನಾನು ಅಷ್ಟು ದೊಡ್ಡ ಮನುಷ್ಯ ಅಂತ ತಿಳಿದೆಯಾ ? "

ಹಾಗಲ್ಲ, ಶೀನ; ಹೋಗಿ ಬಂದು ಮಾಡುತ್ತಿದ್ದರೇ ಬಾಂಧವ್ಯ, ನಂಟು. ಇಲ್ಲದಿದ್ದರೆ ಏನು ಹೇಳು–ಯಾರಿಗೆ ಯಾರೋ ಅಂದ ಹಾಗೆ. "

" ನಿನ್ನೆ ರಾತ್ರಿ ತಾಳಮದ್ದಲೆಗೆ ನೀನು ಬಂದಿರಬಹುದೆಂದು ಸುತ್ತಲೂ ನೋಡಿದೆ. ನೀನು ಎಲ್ಲೂ ಕಾಣಿಸಲಿಲ್ಲ. ಏನು, ಬಂದಿರಲಿಲ್ಲವೆ ? "

" ಬರಬೇಕಂತ ಮಾಡಿದ್ದೆನಪ್ಪಾ; ಎಮ್ಮೆ ತಪ್ಪಿಸಿಕೊಂಡು ಹೋದದ್ದು ಎಷ್ಟು ಹೊತ್ತಾದರೂ ಬರಲಿಲ್ಲ. ಕೊಟ್ಟಿಗೆಯಲ್ಲಿ ಕರು ಕಿರಿಚುತ್ತಿತ್ತು. ಎಮ್ಮೆ ಬಂದು ಹಾಲು ಕರೆಯದೆ ಹೇಗೆ ಬರಲಿ ಅಂತ ಮನೆಯಲ್ಲೇ ಇದ್ದು ಬಿಟ್ಟೆ. ಶಾರದೆ ಹೊತ್ತು ಕಂತುವ ಮೊದಲೇ ಹೋದವಳು ತಾಳಮದ್ದಲೆ ಮುಗಿಸಿಕೊಂಡೇ ಬಂದಳು. ಬಂದವಳಿಗೆ ತನ್ನ ಭಾವಯ್ಯನ ಹೊಗಳಿಕೆಯಲ್ಲದೆ ಬೇರೆ

ಕೆಲಸವಿಲ್ಲ. ಅಷ್ಟು ಚೆನ್ನಾಗಿ ನೀನು ಪದ ಹೇಳುವುದು ಹೌದೋ ಅಂತ ನನಗೂ ಕೇಳಬೇಕೆನ್ನಿಸಿ ಬಿಟ್ಟಿದೆ ನೋಡು."

"ಸಾಕಮ್ಮ, ಸುಮ್ಮನಿರು" ಎಂದು ಶಾರದೆ ಅಡಿಗೆ ಮನೆಯಿಂದ ಕೂಗಿ ಹೇಳಿದಳು.

"ನಿನಗೆ ಇಷ್ಟು ದೊಡ್ಡ ಮಗಳಿರಬಹುದೆಂದು ನಾನು ಊಹಿಸಿಯೂ ಇರಲಿಲ್ಲ, ಅತ್ತೆ" ಎಂದು ಶೀನಪ್ಪ ಮಾತು ತಿರುಗಿಸಿದ.

ಶಾರದೆ ಯಾಕೆ ಹೊರಗೆ ಬರುವುದಿಲ್ಲ ಎಂದು ಅವನ ಮನಸ್ಸು ತುಡಿಯುತ್ತಿತ್ತು.

"ಮಗಳೇನೋ ದೊಡ್ಡವಳಾದಳು ಶೀನ. ಯಾರ ಕತ್ತಿಗಾದರೂ ಕಟ್ಟಬೇಕಲ್ಲ—ಅದೇ ಯೋಚನೆ ನನಗೆ. ಮನೆಯಲ್ಲಿ ಗಂಡಸರಿಲ್ಲ. ಏನೋ ಎಂತೋ" ಎಂದು ನಿಟ್ಟುಸಿರುಬಿಟ್ಟರು.

"ಕತ್ತಿಗೆ ಕಟ್ಟುವುದಕ್ಕೆ ನಾನೇನು ಕುಂಟೆಯೇ?" ಎಂದು ಒಳಗಿನಿಂದ ಪ್ರಶ್ನೆ ಬಂತು.

ಅದನ್ನು ಕೇಳಿ ನಗುತ್ತ ಶೀನಪ್ಪ, "ಇಂಥ ಚುರುಕು ಹೆಣ್ಣಿಗೆ ವರ ಸಿಕ್ಕುವುದೇನು ಕಷ್ಟ, ಅತ್ತೆ; ಸುಮ್ಮನಿರು" ಎಂದ. ತಾನೇ ವರ ಆಗಬಾರದೆ ಎಂದು ಮನಸ್ಸು ಕಾತರಿಸುತ್ತಿತ್ತು. ಹಾಗೆ ಹೇಳಿಬಿಡಲೇ ಅಂತಲೂ ಅನ್ನಿಸಿತು, ಆದರೆ ನಾಚಿಕೆ ಆ ಮಾತನ್ನು ತಡೆಯಿತು.

"ಅದೆಲ್ಲ ಸರಿ ಮಹಾರಾಯ; ನಮ್ಮ ಮನೆಗೇನು ಹೆಣ್ಣು ಹುಡುಕಿಕೊಂಡು ಬರುತ್ತಾರಾ? ಹೋಗಿ ನಾಲ್ಕು ಕಡೆ ವಿಚಾರಿಸಿ ಸಂಬಂಧ ಬೆಳಸಬೇಡವೆ? ಆ ಕೆಲಸ ಯಾರು ಮಾಡಬೇಕು, ಹೇಳು. ಈ ಮಗುವನ್ನು ನನ್ನ ಕೈಗೆ ಹಾಕಿ ಅವರು ಕಣ್ಮುಚ್ಚಿದರು." ಸೀತಮ್ಮನ ಕಂಠ ಕಟ್ಟಿಬಂತು.

ಅಷ್ಟು ಹೊತ್ತಿಗೆ ಶಾರದೆ ಬಂದು ತಟ್ಟೆಯಲ್ಲಿ ಹಪ್ಪಳ—ಸಂಡಿಗೆ, ಇನ್ನೊಂದರಲ್ಲಿ ಒಗ್ಗರಣೆ ಹಾಕಿದ ಅವಲಕ್ಕಿ ತಂದು ಶೀನಪ್ಪನ ಮುಂದೆ ಇಟ್ಟಳು.

"ಇಷ್ಟು ಹೊತ್ತು ಶಾರದಮ್ಮನವರು ಒಳಗೆ ಕುಳಿತು ಇದೇ ಕೆಲಸ ಮಾಡುತ್ತಿದ್ದುದೋ?" ಎಂದ ಶೀನಪ್ಪ, ನಗುತ್ತ.

"ಅಪರೂಪಕ್ಕೆ ಬಂದವರಿಗೆ ಇಷ್ಟು ಕೂಡಾ ಮಾಡದಿದ್ದರೆ ಹೇಗೆ

ಭಾವಯ್ಯ ; ಇದೆಲ್ಲ ನಿಮಗೆ ಸೇರುವುದೋ ಇಲ್ಲವೋ ? ಬೇಡವಾದರೆ ಹೇಳಿ ”

“ ಇಷ್ಟು ಪ್ರೀತಿಯಿಂದ ಕೊಟ್ಟಿದ್ದು ಬೇಡ ಅಂತ ಹೇಗೆ ಹೇಳಲಿ. ಹೋಗಲಿಬಿಡು, ತಿಂದೇ ಬಿಡುತ್ತೇನೆ” ಎಂದು ಶೀನಪ್ಪ ತಿಂಡಿಯನ್ನು ತಿನ್ನುತ್ತ;

“ ಬಹಳ ರುಚಿಯಾಗಿದೆ. ಇಷ್ಟು ರುಚಿಯಾದ ಅವಲಕ್ಕಿ ನಾನೆಲ್ಲೂ ತಿಂದೇ ಇಲ್ಲ ” ಎಂದ.

“ ಓಹೋ, ಶಾರದೆ ನಿನ್ನ ಸಂಗೀತ ಹೊಗಳಿದಳು ಅಂತ ನೀನು ಅವಳು ಮಾಡಿದ ತಿಂಡಿಯನ್ನು ಹೊಗಳಲು ಶುರುಮಾಡಿದೆಯೋ. ಒಳ್ಳೇ ಜೋಡಿ !” ಎಂದು ಇವರಿಬ್ಬರ ಮಾತುಕತೆಯನ್ನು ಕೇಳಿ ಸಂತೋಷಪಡುತ್ತಿದ್ದ ಸೀತಮ್ಮ ನುಡಿದರು.

ಆಗ ಮತ್ತೆ ಇಬ್ಬರ ಕಣ್ಣೂ ಬೆರೆತುವು. ಇಬ್ಬರ ಮೈಯೂ ಪುಳಕಿತ ವಾಯಿತು.

ಆಮೇಲೆ ಬಹಳ ಮಾತು ನಡೆಯಿತು. ಸೀತಮ್ಮ ತನ್ನ ಬಂಧು ಬಾಂಧವರ ಆರೋಗ್ಯವನ್ನೆಲ್ಲ ವಿಚಾರಿಸಿ ತಿಳಿದಳು. ದಾಕ್ಷಿಣ್ಯಕ್ಕಾಗಿ ಶೀನಪ್ಪ “ ಮನೆಯಲ್ಲಿ ಕೆಲಸವಿದೆ, ಹೋಗಬೇಕು ” ಎಂದರೆ ಅವರು ಬಿಡಲಿಲ್ಲ. ಅಲ್ಲಿ ಎರಡು ದಿನವಿದ್ದು ಮೂರನೆಯ ದಿನ ಬೆಳಗ್ಗೆ ಅವನಿಗೆ ಹೊರಡುವುದು ಸಾಧ್ಯ ವಾಯಿತು. ಆ ಎರಡು ದಿನಗಳಲ್ಲೇ ಶೀನಪ್ಪ ಮತ್ತು ಶಾರದೆ ಒಬ್ಬರನ್ನೊಬ್ಬರು ಚೆನ್ನಾಗಿ ಅರಿತರು ; ಒಬ್ಬರಿಗೊಬ್ಬರು ಸಂಪೂರ್ಣವಾಗಿ ಒಲಿದರು. ಶೀನಪ್ಪನು ಶಾರದೆಯ ಮಾತಿನ ಚುರುಕನ್ನು ಮಾತ್ರವಲ್ಲ ಕೆಲಸದಲ್ಲಿ ಅವಳು ತೋರುತ್ತಿದ್ದ ದಕ್ಷತೆಯನ್ನೂ ಕಂಡ. ಒಂದು ಕ್ಷಣವಾದರೂ ಅವಳು ಸುಮ್ಮನೆ ಕುಳಿತಿರು ತ್ತಿರಲಿಲ್ಲ. ಅಡಿಗೆಯ ಕೆಲಸ, ಮನೆಯ ಕೆಲಸ ಎಲ್ಲದರಲ್ಲೂ ತಾಯಿಗೆ ಬಲ ಗೈಯಾಗಿ ಕೆಲಸ ಮಾಡುತ್ತಿದ್ದಳು. ತಾಯಿ ಮಗಳಿಬ್ಬರೂ ಶೀನಪ್ಪನಿಗೆ ರಾಜಾತಿಥ್ಯವನ್ನೇ ಮಾಡಿದರು.

ಅಲ್ಲಿ ಅವನು ಇದ್ದ ಎರಡು ದಿನ ಎರಡು ಕ್ಷಣದಂತೆ ಕಳೆಯಿತು. ಸುಂದರವಾದ ಪ್ರದೇಶ ಅದು. ಅಷ್ಟೇ ಪ್ರಶಾಂತವಾದುದು. ಹಿಂದೆ ಗುಡ್ಡ, ಮುಂದೆ ಕಾಡು. ಅಲ್ಲಿ ಇದ್ದದ್ದು ಸೀತಮ್ಮನ ಮನೆ. ಹತ್ತಿರದಲ್ಲೇ ಒಂದು ಒಕ್ಕಲ ಮನೆ. ಅಲ್ಲಿ ತಿಮ್ಮ, ತಿಮ್ಮನ ಹೆಂಡತಿ ಮಾದೇವಿ ಮತ್ತೆ ಎರಡು

ಮಕ್ಕಳು. ಆ ಒಕ್ಕಲು ಮನೆಯವರ ಸಹಕಾರದಿಂದಲೇ ಸೀತಮ್ಮನಿಗೆ ತನ್ನ ವ್ಯವಸಾಯ ಸಾಗಿಸಲು ಸಾಧ್ಯವಾದದ್ದು. ಆಕೆ ತಿಮ್ಮನಿಗೂ ಒಂದು ಮುಡಿ ಗದ್ದೆ ಸಾಗುವಳಿಗೆ ಕೊಟ್ಟಿದ್ದಳು. ಒಡತಿ ಒಕ್ಕಲು ಅನ್ಯೋನ್ಯವಾಗಿ ಬಾಳಿಕೊಂಡು ಬಂದಿದ್ದರು. ಹತ್ತಿರದಲ್ಲಿ ಅಲ್ಲಿ ಮತ್ತೆ ಮನೆಯಿಲ್ಲ; ಜನವಸತಿ ಮತ್ತೆ ಸಿಕ್ಕಬೇಕಾದರೆ ಎರಡು ಫರ್ಲಾಂಗ್ ದೂರ ಹೋಗಬೇಕು.

"ಅಬ್ಬಾ ಎಂಥ ಭಯಂಕರ ಸ್ಥಳ. ಇಲ್ಲಿ ನಿಮಗೆ ಇಬ್ಬರಿಗೇ ಇರಲು ಹೆದರಿಕೆ ಆಗುವುದಿಲ್ಲವೇ?" ಎಂದು ಶೀನಪ್ಪ ತನ್ನ ಸೋದರತ್ತೆಯನ್ನು ಕೇಳಿದ.

"ಅಭ್ಯಾಸವಾದ ಮೇಲೆ ಎಲ್ಲ ಒಗ್ಗುತ್ತದೆ ಶೀನಾ. ನನಗೂ ಮದುವೆಯಾಗಿ ಬಂದ ಹೊಸದರಲ್ಲಿ ಬಹಳ ಹೆದರಿಕೆಯಾಗುತ್ತಿತ್ತು. ಈಗ ಹಾಗೇನೂ ಇಲ್ಲ ಶಾರದಾ ಅಂತೂ ಇಲ್ಲಿ ನಿರ್ಭಯವಾಗಿ ಓಡಾಡುತ್ತಿರುತ್ತಾಳೆ. ಹುಲೀದು ಮಾತ್ರ ಸ್ವಲ್ಪ ಹೆದರಿಕೆಯೇ. ಮೊನ್ನೆಮೊನ್ನೆ ನಮ್ಮ ಕಪಿಲೆ ದನವನ್ನು ಮನೆಯ ಮುಂದೆಯೇ ಹುಲಿ ಮುರಿದು ಹಾಕಿತು. ಆದರೆ ಏನು ಮಾಡುವುದು? ಇಲ್ಲಿ ಇದೆಲ್ಲ ನಡೆಯುತಕ್ಕದ್ದೇ" ಎಂದಳು.

ಆದರೆ ಶೀನಪ್ಪನಿಗೆ ಅವರ ನಿಸ್ಸಹಾಯ ಒಂಟಿ ಜೀವನವನ್ನು ಕಂಡು ಎದೆ ತಲ್ಲಣಿಸಿತು.

ಶೀನಪ್ಪ ಕೊನೆಗೂ ಅವರ ಅನುಮತಿ ಪಡೆದು ಅಲ್ಲಿಂದ ಹೊರಡಲು ಸಿದ್ಧನಾದಾಗ ಶಾರದೆ,

"ಭಾವಯ್ಯ, ಮತ್ತೆ ಯಾವಾಗ ಇತ್ತ ಕಡೆ? ಏಳಜಿತಕ್ಕೆ ಬೆನ್ನು ಹಾಕಿದ ಕೂಡಲೇ ನಮ್ಮನ್ನೆಲ್ಲ ಮರೆತೇಬಿಡುತ್ತೀರೇನೋ?" ಎಂದಳು.

"ಇನ್ನು ಈ ನಿಮ್ಮ ಮನೆಯನ್ನು ಮರೆತರೆ ನನ್ನ ಮನೆಯನ್ನೇ ಮರೆತ ಹಾಗೆ, ಶಾರದಾ. ಶಾರದೆಯ ಮೇಘಾಛ್ಛಾಸಿ ನನ್ನನ್ನು ಸೆಳೆಯುತ್ತದೆ. ಸೋದರತ್ತೆಯ ಮಗಳ ಆದರಾತಿಥ್ಯ ನನ್ನ ಜಾಯ ನೀರೂರುವಂತೆ ಮಾಡುತ್ತದೆ. ಯಾವುದೋ ಎರಡು ಕಣ್ಣುಗಳು ಸದಾ ನನ್ನ ಮುಂದೆ ಕಾವಲಿರುತ್ತವೆ" ಎಂದ.

ಈ ಮಾತನ್ನು ಕೇಳಿ ಶಾರದೆ ಕೊಂಚ ನಾಚಿ,

“ನಮ್ಮ ಭಾವಯ್ಯ ಪದಕಟ್ಟುವವರು, ಹಾಡುವವರು ಮಾತ್ರವಲ್ಲ ಅಂತ ಕೇಳಿದ್ದೆ. ಅದು ನಿಜ ಎಂದ ಹಾಗಾಯಿತು.”

“ಶಾರದೆಯ ಅನುಗ್ರಹವೊಂದಿದ್ದರೆ ಏನು ತಾನೇ ಸಾಧ್ಯವಿಲ್ಲ ?” ಎಂದು ಶೀನಪ್ಪ ಹೇಳುತ್ತಿದ್ದಾಗಲೇ ಸೀತಮ್ಮ ಅಲ್ಲಿಗೆ ಬಂದಳು. ತನ್ನ ಮಾತು ಅವಳಿಗೆ ಕೇಳಿರಬಹುದೇನೋ ಎಂದು ಶೀನಪ್ಪ ಕೊಂಚ ಗಾಬರಿಯಾದ.

“ಶೀನ, ಮತ್ತೆ ಯಾವಾಗಲೋ ಇತ್ತ ಕಡೆ ? ಆಗಾಗ ಬರುತ್ತಿರು ಮಾರಾಯ. ನಾವಿಬ್ಬರು ಬಡ ಬಂಧುಗಳು ಈ ಲೋಕದಲ್ಲಿ ಇದ್ದೇವೆ ಅನ್ನುವದನ್ನು ಮರೆಯಬೇಡಪ್ಪಾ” ಎಂದಳು ಸೀತಮ್ಮ.

“ಇಲ್ಲ ಅತ್ತೆ. ತಾಯಿಗಿಂತ ಹೆಚ್ಚು ಪ್ರೀತಿಯನ್ನು ನನಗೆ ಇಲ್ಲಿ ಎರಡು ದಿನ ತೋರಿಸಿದ್ದೀರಿ. ನನಗೂ ಇನ್ನು ಯಾರಿದ್ದಾರೆ ? ಬರುತ್ತೇನೆ. ಆದರೆ ನೀವೂ ಆ ಕಡೆ ಒಂದು ಸಲ ಬರಬೇಕು.”

“ಬರಬೇಕು ಬರಬೇಕು ಅಂತಲೇ ವರ್ಷಗಳೇ ಕಳೆದುಹೋದುವು ಶೀನಪ್ಪಾ; ನನಗೂ ನಾನು ಹುಟ್ಟಿದೂರನ್ನು ನೋಡಬೇಕೆಂದು ಆಶೆ. ಈ ವರ್ಷವಾದರೂ ಬರಬೇಕು ಅಂತ ಮನಸ್ಸು. ಏನಾಗುವುದೋ ?”

“ನೀವು ಖಂಡಿತ ಬರಬೇಕು ಅತ್ತೆ ; ಈ ವರ್ಷ ನಮ್ಮ ದೊಡ್ಡಪ್ಪನ ಮಗ ಸುಬ್ರಮಣ್ಯನಿಗೆ ಮದುವೆ ಆಗಬಹುದು. ಆಗಲಾದರೂ ಖಂಡಿತ ಬರಬೇಕು.”

“ಖಂಡಿತವಾಗಿಯೂ ಬರುತ್ತೇನೆ, ಶೀನ. ಅಲ್ಲ, ನೀನೂ ಒಂದು ಮದುವೆ ಯಾಕೆ ಮಾಡಿಕೊಳ್ಳಬಾರದೋ ? ಮನೆಯಲ್ಲಿ ಯಾರೂ ಇಲ್ಲ, ನಿನಗೆ. ನೀನೇ ಕೈ ಸುಟ್ಟುಕೊಂಡು ಅಡಿಗೆ ಮಾಡಿಕೊಳ್ಳಬೇಕು. ಎಷ್ಟು ದಿನ ಅಂತ ಹೀಗೆ ಪೇಚಾಡುತ್ತೀಯೋ ?”

“ಅದಕ್ಕೇಕೆ ಇಷ್ಟು ಅವಸರ, ಅತ್ತೆ ? ಆಗುತ್ತೆ.”

“ಮಾಡಿದರೆ ಆಗುತ್ತೆ. ನಿನ್ನನ್ನೂ ಶಾರದೆಯನ್ನೂ ನೋಡಿ ಒಳ್ಳೇ ಜೋಡಿ ಎನ್ನಿಸಿತು. ನಿನ್ನ ಮನಸ್ಸು ಹೇಗೋ.”

ಈ ಮಾತನ್ನು ಕೇಳಿ “ಥೂ, ಹೋಗೇ ಅಮ್ಮ” ಎಂದವಳೇ ಶಾರದೆ

ಮನೆಯೊಳಕ್ಕೆ ಚಿಮ್ಮಿದಳು.

" ಹಿರಿಯರು ಇದ್ದಾರಲ್ಲ, ಅವರು ಏನು ಹೇಳುತ್ತಾರೋ ಕೇಳೋಣ. ಎಲ್ಲ ದೈವೇಚ್ಛೆ " ಎನ್ನುತ್ತ ಶೀನಪ್ಪ ಸೋದರತ್ತೆಗೆ ನಮಸ್ಕರಿಸಿ, " ಏ ಹುಡುಗಿ ಹೋಗಿ ಬರುತ್ತೇನೆ ಕಣೇ " ಎಂದ. ಒಳಗಿನಿಂದಲೇ ' ಹೂ ' ಅಂತ ಉತ್ತರ ಬಂತು. ಕೊಂಚ ಅಸಮಾಧಾನವಾಯಿತು ಶೀನಪ್ಪನಿಗೆ. ಹಾಗೆಯೇ ಹೊರಟ.

ಶೀನಪ್ಪ ಬಾಗಿಲು ದಾಟಿ ಎರಡು ಹೆಜ್ಜೆ ಹೋಗುವಷ್ಟರಲ್ಲಿ ಶಾರದೆ ಬಾಗಿಲ ಬಳಿಗೆ ಬಂದಿದ್ದಳು. ಹಿಂತಿರುಗಿ ನೋಡಿದಾಗ ಅವಳ ಕಣ್ಣು ನೀರು ತುಂಬಿದ್ದು ಶೀನಪ್ಪನಿಗೆ ಕಂಡಿತು. ಅವಳು ಅಲ್ಲೇ ನಿಂತಿದ್ದಳು. ಹಿಂತಿರುಗಿ ನೋಡಿದಾಗಲೆಲ್ಲ ಆ ಕಣ್ಣುಗಳು ಅವನನ್ನು ಅಪ್ಪಿ ಮುದ್ದಿಟ್ಟು ಸೇವರಿಸುತ್ತಿದ್ದುವು. ಶೀನಪ್ಪ ಕಣ್ಮರೆಯಾಗುವ ವರೆಗೂ ಅವಳು ಅಲ್ಲೇ ನಿಂತಿದ್ದಳು. ಶೀನಪ್ಪನನ್ನು ಆ ಎರಡು ಕಣ್ಣುಗಳು ಹಿಂಬಾಲಿಸಿದುವು.

ಒಂದು ಸಮಸ್ಯೆ ಬಗೆಹರಿದಂತಾಗಿ ಸೀತಮ್ಮನಿಗೆ ಕೊಂಚ ತೃಪ್ತಿಯಾಯಿತು. ಶೀನಪ್ಪ ಶಾರದೆಯ ಕಟಾಕ್ಷಪಂಜರದಲ್ಲಿ ಬದ್ಧನಾದ. ಹೊಸ ಪ್ರೀತಿಯ, ಮುಗ್ಧ ಪ್ರಣಯದ ಪ್ರವಾಹದ ಮೇಲೆ ಶೀನಪ್ಪನ ಹೃದಯ ತಳಿರಿನಂತೆ ತೇಲಿತು. ಶಾರದೆ ಹೊಸ ಕನಸುಗಳ ಮಾಲೆಯನ್ನು ಹೆಣೆಯುತ್ತ ತನ್ನ ವೀಣೆಯಲ್ಲಿ ಶೀನಭಾವಯ್ಯನ ನಾಮವನ್ನು ನುಡಿಸುತ್ತ ಮೈ ಮರೆತಳು.

ಆ ವರ್ಷವೇ ಸುಬ್ರಹ್ಮಣ್ಯನ ಮದುವೆ ನಿಶ್ಚಯವಾಯಿತು. ಆಡಿದ ಮಾತಿನಂತೆ ಸೀತಮ್ಮ ಮತ್ತು ಶಾರದೆ ಮದುವೆಗೆ ಎರಡು ದಿನಕ್ಕೆ ಮುಂಚಿತವಾಗಿಯೇ ಬಂದರು. ಹೆಣ್ಣಿನ ಮನೆ ಮಂಡಸೆ; ಬಳುವಡಿಯಿಂದ ಸುಮಾರು ಹತ್ತು–ಹನ್ನೆರಡು ಮೈಲಿ ದೂರ ಅರೆಹೊಳೆಯ ತನಕ, ಅಂದರೆ ನಾಲ್ಕೈದು ಮೈಲಿ ದೂರ ನಡೆದು ಹೋಗಿ ದೋಣಿ ಮಾಡಿಕೊಂಡರೆ ಮಂಡಸೆಯನ್ನು ಸುಖವಾಗಿ ತಲಪಬಹುದು. ಈ ಸಂದರ್ಭದಲ್ಲಿ ಶೀನಪ್ಪ ಮತ್ತು ಶಾರದೆ ಇನ್ನೂ ಹತ್ತಿರ ಬಂದರು. ಶೀನಪ್ಪನ ಲೋಕವೆಲ್ಲ ಶಾರದೆ, ಶಾರದೆಯ ಲೋಕವೆಲ್ಲ ಶೀನಪ್ಪ. ಉಳಿದ ಜಗತ್ತೆಲ್ಲ ಅವರ ಪಾಲಿಗೆ ಶೂನ್ಯವಾಯಿತು

ಬಾಯಿ ಆಡಿದ ಮಾತಿಗೂ ಕಡಿಮೆ ಇರಲಿಲ್ಲ. ಕಣ್ಣು ನುಡಿದ ಮಾತು

ಮಾತ್ರ ಅಸಂಖ್ಯ.

ಅರೆಹೊಳೆಯಿಂದ ದೊಡ್ಡ ದೋಣಿಯನ್ನೇ ಗೊತ್ತು ಮಾಡಿದ್ದರು. ಅರೆ ಹೊಳೆಯನ್ನು ಅವರು ತಲಪಿದಾಗ ಹೊತ್ತು ಮುಳುಗುವ ಸಮಯ. ಅಲ್ಲಿ ಕೊಂಚ ಕುಳಿತು ದಣಿವಾರಿಸಿಕೊಂಡು ಬಾಯಾರಿಕೆ, ತೀರಿಸಿಕೊಂಡು ಎಲೆ ಅಡಿಕೆ ಹಾಕಿಕೊಳ್ಳುವವರು ಹಾಕಿಕೊಂಡು ದೋಣಿಯನ್ನು ಗೊತ್ತು ಮಾಡು ವಷ್ಟರಲ್ಲೇ ಎರಡು ಗಳಿಗೆ ರಾತ್ರಿ.

ಶುಕ್ಲಪಕ್ಷದ ಚತುರ್ದಶಿ ದಿವಸ. ಸುತ್ತಲೂ ಹಾಲು ಚೆಲ್ಲಿದಂತೆ ಬೆಳ್ದಿಂ ಗಳು. ಆಕಾಶದಲ್ಲಿ ಬೆಳ್ಳಿ ಮೋಡ. ಹೊಳೆಯ ನೀರು ತಕಪಕನೆ ಕುಣಿ ಯುತ್ತಿತ್ತು. ಬೇಸಗೆಯ ಕಾಲ. ಹಿತವಾಗಿ ತಂಗಾಳಿ ಬೀಸುತ್ತಿತ್ತು.

ದೋಣಿ ನೀರಿನ ಮೇಲೆ ಸಳಸಳನೆ ಜಾರಿ ಮುನ್ನುಗ್ಗುತ್ತಿತ್ತು. ದೋಣಿ ತುಂಬ ಜನ. ಶೀನಪ್ಪನ ಹತ್ತಿರದಲ್ಲೇ ಶಾರದೆ ಕುಳಿತಿದ್ದಳು. ಇಬ್ಬರೂ ಕನಸು ಕಾಣುತ್ತಿದ್ದರು. ಮೇಲೆ ಆಕಾಶದಲ್ಲಿ ಚಂದ್ರ ನಿಟ್ಟೋಟ ದಿಂದ ಮುಂದೆ ಮುಂದೆ ಓಡುತ್ತ ಮೋಡಗಳ ಕೂಡ ಸರಸವಾಡುತ್ತಿದ್ದ. ಬೆಳು ದಿಂಗಳ ಕ್ಷೀರ ಪ್ರವಾಹದಲ್ಲಿ ನೆನೆದ ತಾರೆಗಳು ನೀಲದಳದಲ್ಲಿ ನಡುಗುತ್ತಿದ್ದುವು.

ಹೊಳೆಯ ಎರಡು ದಡಗಳಲ್ಲಿ ತೆಂಗಿನ ತೋಟಗಳು. ಕಪ್ಪಾಗಿ ದಟ್ಟ ವಾಗಿ ಚಂದ್ರನಿಗೆ ಹೆದರಿ ಓಡಿ ಬಂದ ಕತ್ತಲಿಗೆ ರಕ್ಷಣೆ ಕೊಡುತ್ತ ತೆಂಗಿನ ಮರ ಗಳು ಗಾಳಿಗೆ ಮರ್ಮರಿಸುತ್ತಿದ್ದುವು.

ಬೆಳುದಿಂಗಳಿನ ಮಂತ್ರದಂಡದಿಂದ ಎಲ್ಲಕ್ಕೂ ಹೊಸ ಕಳೆ. ಲೋಕವೇ ಸ್ವಪ್ನ ಲೋಕವಾಯಿತು. ಕುಳಿತ ದೋಣಿ ಮುಗಿಲ ದೋಣಿಯಾಯಿತು ಶೀನಪ್ಪ-ಶಾರದೆ ಅನಂತ ಪ್ರಣಯಿಗಳೂ ಪಯಣಿಗರೂ ಆದರು. ದೋಣಿ ತೆರೆಗಳೊಡನೆ ಆಟವಾಡುತ್ತ ಸಳಸಳನೆ ಮುನ್ನುಗ್ಗಿತು.

ಶೀನಪ್ಪ ಮೆಲ್ಲಮೆಲ್ಲನೆ ಏನೋ ಪದ ಗೊಣಗುತ್ತಿದ್ದ. ಮುಗ್ಧಳಾಗಿ ಶಾರದೆ ಕೇಳುತ್ತಿದ್ದಳು. ರಾತ್ರಿ ಹೆಚ್ಚುತ್ತ ಬಂದಂತೆ ಒಬ್ಬೊಬ್ಬರಾಗಿ ಎಲ್ಲರೂ ಕಣ್ಮುಚ್ಚಿದರು; ಕುಳಿತಲ್ಲೇ ಒರಗಿದರು.

ಹಾಡುತ್ತ ಹಾಡುತ್ತ ಶೀನಪ್ಪ ಶಾರದೆಯ ಕಡೆಗೆ ತಿರುಗಿ ನೋಡಿದ. ಅವಳ ಕಣ್ಣು ಶುಕ್ರತಾರೆಯಂತೆ ಹೊಳೆಯುತ್ತಿತ್ತು. ಹಣೆಯ ಮೇಲೆ ಜಡೆ

ತಪ್ಪಿಸಿಕೊಂಡು ಬಂದ ಒಂದು ತುಂಟ ಕೂದಲು ಕುಣಿಯುತ್ತಿತ್ತು. ಬೆಳು ದಿಂಗಳಿನಿಂದ ಅವಳ ಮುಖ ಕಾಂತಿ ಇನ್ನಷ್ಟು ಉಜ್ವಲವಾಗಿತ್ತು. ಅವಳ ಮುಖ ಭಂಗಿಯಲ್ಲಿ ಪರವಶತೆಯ ಮನೋಜ್ಞವಾದ ಮರೆವು-ಕವಿದಿತ್ತು.

ದೋಣಿಯೊಳಗಿನ ಕತ್ತಲಲ್ಲಿ ಶೀನಪ್ಪನ ಕೈ ಅವಳ ಕೈಯನ್ನು ಹುಡುಕಿ ಹೊರಟಿತು. ಆ ಕೈ ಈ ಕೈಗೆ ಒಂದು ಕೂಡಿತು.

ಹಸ್ತಸ್ಪರ್ಶದಿಂದ ಮೈ ರೋಮಾಂಚಗೊಂಡಿತು. ಮನಸ್ಸು ಗರಿಗಟ್ಟಿ ಹಾರಿತು. ಹೃದಯ ಸಪ್ತಸ್ವರ್ಗಗಳಾಗಿ ಆನಂದ ಗೋಪುರದ ಮೇಲೆ ನಿಂತು ಕುಕಿಲಿತು.

ಆಕಾಶದ ನೀಲ ಸಾಗರದಲ್ಲಿ ಬೆಳ್ಳಿ ಮೋಡದ ಹಾಯಿಬಿಚ್ಚಿ ಚಂದ್ರನ ದೋಣಿ ತೇಲಿತು.

ಕೈ ಕೈಗಳ ಮೃದು ಬಂಧದಲ್ಲಿ ಹೊಸ ಜೀವನದ ಸಸಿ ಗಿಡವಾಗಿ ಮರ ವಾಗಿ ಹೂವು ತಳೆದು ಅರಳಿ ಕಂಪನ್ನು ಬೀರಿತು.

ಮಾತಿಲ್ಲ, ಕಥೆಯಿಲ್ಲ, ಮೌನ. ಆಕಾಶವೂ ಮೌನ; ಚಂದ್ರನೂ ಮೌನ. ನಕ್ಷತ್ರಲೋಕವೂ ಮೌನ. ತೆಂಗಿನ ತೋಪೂ ಮೌನ. ಹಾಗೆಯೇ ಶೀನಪ್ಪ ಶಾರದೆಯರೂ.

ಕೈಗೆ ಕೈಗೆ ಸೇರಿತು. ಇನ್ನು ಉಳಿದದ್ದೆಲ್ಲ ಲೌಕಿಕ— ಎಂದುಕೊಂಡ ಶೀನಪ್ಪ.

ಮದುವೆಯ ಕಾಲದಲ್ಲಿ ಶೀನಪ್ಪ ಶಾರದೆ ಇಬ್ಬರೂ ಬಹಳ ಓಡಾಡಿದರು. ಬಹಳ ಉತ್ಸಾಹದಿಂದ ಕೆಲಸ ಮಾಡಿದರು. ಇಬ್ಬರೂ ನೆಲ ಬಿಟ್ಟು ಒಂದು ಮೊಳ ಮೇಲಕ್ಕೆ ನಡೆಯುತ್ತಿದ್ದರು. ಏನೋ ಸಂತೋಷ; ಏನೋ ಪರವಶತೆ: ಏನೋ ಒಂದು ತರಹ-ಮನಸ್ಸಿನಲ್ಲಿ.

ಮದುವೆ ಹೇಗೆ ಮುಗಿಯಿತೋ—ಅಲ್ಲಿ ಏನೇನು ನಡೆಯಿತೋ ಇಬ್ಬ ರಿಗೂ ತಿಳಿಯದು.

ಶಾರದೆ ತಿಳಿದದ್ದು, ನೆನಪಿನಲ್ಲಿಟ್ಟದ್ದು ಶೀನಪ್ಪನನ್ನ; ಶೀನಪ್ಪ ಅರಿತದ್ದು, ಮನಸ್ಸಿನಲ್ಲಿ ಗುಡಿ ಕಟ್ಟಿ ಇಟ್ಟದ್ದು ಶಾರದೆಯನ್ನು.

ಮದುವೆಯಾಗಿ ಊರಿಗೆ ಮರಳಿದ ಬಳಿಕ ಸೀತಮ್ಮ ನಾರಣಪ್ಪನ

ಕೂಡ ಮಾತಾಡಿ ಮದುವೆಯನ್ನು ನಿಷ್ಕರ್ಷಿಸಿಕೊಂಡು ಹೋದರು. ಶೀನಪ್ಪ ಶಾರದೆ ಸಂತೋಷದ ತುಟ್ಟತುದಿಯನ್ನೇ ಮೆಟ್ಟಿ ನಿಂತರು.

ನೆಲ ನಕ್ಕಿತು, ಜಲ ನಕ್ಕಿತು, ಆಕಾಶ ಗಹಗಹಿಸಿತು.

"ಈ ಬೇಸಗೆ, ಈ ಮಳೆಗಾಲ ಕಳೆಯಲಿ; ಆಮೇಲೆ ಮದುವೆ" ಎಂದ ನಾರಣಪ್ಪ "ಆಗ ಇಬ್ಬರಿಗೂ ಗುರುಬಲ ಚೆನ್ನಾಗಿರುತ್ತದೆ. ಒಂದು ಒಳ್ಳೆಯ ಮುಹೂರ್ತ ನೋಡಿ ಮದುವೆ ಮಾಡಿ ಬಿಡೋಣ. ಅವನಿಗೂ ದಿಕ್ಕಿಲ್ಲ, ನಿನಗೂ ದಿಕ್ಕಿಲ್ಲ; ಇಬ್ಬರಿಗೂ ಒಂದು ದಿಕ್ಕಾಯಿತು. ಹಳೆಯ ನಂಟು ಚಿಗಿತು ಹೊಸ ನಂಟಾಗಲಿ. ಇದು ಸರಿ."

ಸೀತಮ್ಮ ಸಂತೃಪ್ತಳಾಗಿ ಮನೆಗೆ ತೆರಳಿದಳು. ಶಾರದೆ ತನ್ನ ಮನಸ್ಸಿನಲ್ಲಿ ಶೀನಪ್ಪನನ್ನು ತುಂಬಿ ಜೀವನವಲ್ಲೆಲ್ಲ ಹೊಸ ಕನಸನ್ನು ತುಂಬಿ ನಡೆದಳು.

ಇತ್ತ ಶೀನಪ್ಪ ಗಾಳಿಗೋಪುರಗಳ ಮೇಲೇ ಓಡಾಡುತ್ತಾ ನಕ್ಷತ್ರಗಳ ಕೂಡ ಕೇಳಿ ಬೆಳಸುತ್ತ ಶಾರದೆಯ ಕಣ್ಣ ಬೆಳಕಿನ ಹೊಳೆಯಲ್ಲಿ ತೇಲುತ್ತ ಕನಸು ಬೀದಿಗಳಲ್ಲಿ ಚಿರಸಂಚಾರಿಯಾದ.

ನೀರ ಮೇಲಣ ಗುಳ್ಳೆ ನೋಡಲು ಬಹಳ ಚಂದ. ನೀರಿನಲ್ಲಿ ಅದರ ಓಡಾಟವಂತೂ ಭರತ ನಾಟ್ಯದಂತೆ ಮೋಹಕ. ಅದರ ಮೇಲೆ ಮಳೆ ಬಿಲ್ಲು ಬಂದು ಸೊಗಸುತ್ತದೆ. ಆದರೆ?

ನಡು ಬೇಸಗೆಯಲ್ಲೊಂದು ದಿನ ಫಳಜಿತದ ಶ್ಯಾನುಭಾಗರ ಆಳು ಆ ಕಡೆ ಬಂದವ ಒಂದು ಕೆಟ್ಟ ಸುದ್ದಿ ತಂದ. ಊರಲ್ಲೆಲ್ಲ ಭಯಂಕರ ಸಿಡುಬು; ಮನೆ ಮನೆಯಲ್ಲೂ ಮರಣ. ಯಾವ ದೇವರ ಕೋಪವೊ? ಯಾರ ಶಾಪವೋ?

ಈ ಸಮಾಚಾರ ಕೇಳಿದ ಶೀನಪ್ಪನ ಹೃದಯ ಕಾತರವಾಯಿತು. ಒಂದು ಕ್ಷಣವೂ ಮತ್ತೆ ಮನೆಯಲ್ಲಿ ಕುಳ್ಳಿರಲಾರದೆ ಹೋದ. ಹೊತ್ತು ಆಗಲೇ ಪಶ್ಚಿಮದ ಕಡೆ ತೀರ ಇಳಿದಿತ್ತು. ಹೊತ್ತು ಕಂತಲು ಇನ್ನು ನಾಲ್ಕೈದು ಗಳಿಗೆಗೆ ಹೆಚ್ಚು ಇಲ್ಲ. ಫಳಜಿತಕ್ಕೆ ಆರೇಳು ಮೈಲಿ ದಾರಿ, ಕಾಡುದಾರಿ. ಇದು ಯಾವುದನ್ನೂ ಗಣಿಸದೆ ಶೀನಪ್ಪ ಉಟ್ಟ ಪಂಚೆಯಲ್ಲೇ ಹೊರಟುಬಿಟ್ಟ.

ಗಾಳಿಯೊಡನೆ ಪಂದ್ಯ ಹೂಡಿ ಕಾಲು ಮುಂದೋಡುತ್ತಿತ್ತು. ಅಶುಭ

ಚಿಂತನೆಯಿಂದ ಮನಸ್ಸಿನ ತುಂಬ ಕಾರ್ಮೋಡ ಕವಿದಿತು. ತನ್ನ ಶಾರದೆ ಪಸನ್ನಮುಖಿಯಾದ ಶಾರದೆ, ಕುಣಿವ ಕಣ್ಣುಳ್ಳ ಶಾರದೆ, ಮಾತಿನಲ್ಲಿ ಚತುರೆಯಾದ ಶಾರದೆ, ಪ್ರೇಮದ ಗಣಿ ಶಾರದೆ—ಅವಳ ಕೂದಲೂ ಕೊಂಕಿಲ್ಲ ಎಂದು ಮತ್ತೆ ಮತ್ತೆ ಮನಸ್ಸಿಗೆ ಭರವಸೆ ಹೇಳುತ್ತ ಹಾದಿ ನಡೆದ. ಆದರೂ ಆ ಶಂಕೆ, ಸಂದೇಹ, ಮನಸ್ಸಿನಲ್ಲಿ ಮುಜಗರ. ಹಾದಿ ಸಾಗಿದ್ದು ಶ್ರೀನಿವಾಸನಿಗೆ ತಿಳಿಯಲೇ ಇಲ್ಲ. ಕಾಡು ನಡುವಿನ ದಾರಿಯಲ್ಲಿ ಏರಿ ಇಳಿದು ಕಾಲು ತನಗೆ ತಾನೇ ಮುಂದೋಡುತ್ತಿತ್ತು. ಸುತ್ತಮುತ್ತಲಿನ ಯಾವುದೂ ಅವನ ಗಮನ ವನ್ನು ಸೆಳೆಯಲಿಲ್ಲ. ಏಳಜಿತಕ್ಕೆ ಹೋಗಬೇಕೆಂಬುದೇ ಗುರಿ; ಶಾರದೆಯ ಬಗೆಗೆ ಚಿಂತೆಯೇ ಮನಸ್ಸಿನ ಕೆಲಸ. ಬೆವರು ಸುರಿಯುತ್ತಿತ್ತು. ಏದುಸುರು ಬರುತ್ತಿತ್ತು. ಹೊತ್ತು ಇಳಿಯುತ್ತಿತ್ತು.

ಶೀನಪ್ಪ ಏಳಜಿತವನ್ನು ತಲಪುವಷ್ಟರಲ್ಲಿ ಆಗಲೇ ಕತ್ತಲಾಗಿತ್ತು. ಆಕಾಶದ ತುಂಬ ಮೋಡ. ಗಾಳಿ ಇಲ್ಲ. ಧಗೆ. ಶಖೆ. ಬೆವರು.

ಒಳಗಿದ್ದ ಸಣ್ಣದೊಂದು ದೀಪ ಸೀತಮ್ಮನ ಮನೆಯ ಇರವನ್ನು ಸಾರಿತು. ಬಾಗಿಲು ತಟ್ಟಿದಾಗ ತಿಮ್ಮ ಕಂದೀಲು ಹಿಡಿದು ಬಾಗಿಲು ತೆರದ. ಅವನ ಮುಖ ಕಂದಿತ್ತು. ಒಳಗೆ ಹೋಗುತ್ತಲೇ ಸೀತಮ್ಮ 'ಅಯ್ಯೋ ಶೀನಾ, ಅಯ್ಯೋ!' ಎಂದು ಎದೆಗರಗುವಂತೆ ಅಳುತ್ತಾ ಮುಖ ಮುಚ್ಚಿ ಕೊಂಡರು.

ಒಳಗೆ ಚಿಮಣಿ ದೀಪವೊಂದು ಮಿಣಮಿಣನೆ ಉರಿಯುತ್ತಿತ್ತು. ಮನೆ ಯೆಲ್ಲ ಹಾಳು ಸುರಿಯುತ್ತಿತ್ತು. ಮಸುಕು ಬೆಳಕಿನಲ್ಲಿ ಶೀನಪ್ಪ ನೋಡಿದ. ಬಾಳೆಯೆಲೆಗಳನ್ನು ಹಾಸಿ ಅದರ ಮೇಲೆ ಶಾರದೆಯನ್ನು ಮಲಗಿಸಿದ್ದರು. ಮೈ ತುಂಬ ಸಿಡುಬಿನ ಬೊಕ್ಕೆಗಳು. ಮೈಯಲ್ಲಿ ಒಂದಂಗುಲ ಜಾಗವೂ ಖಾಲಿ ಯಿಲ್ಲ. ಮುಖದ ಮೇಲೂ ಬೆಳ್ಳನೆಯ ಬೊಕ್ಕೆಗಳು—ಒತ್ತೊತ್ತಾಗಿ. ಮುಖ ವಿಕೃತವಾಗಿತ್ತು. ಅಲ್ಲಿ ಅಂದಿನ ಆ ಗೆಲುವಿಲ್ಲ; ಆ ಉಲ್ಲಾಸವಿಲ್ಲ; ಆ ತುಂಟ ನಗೆಯ ಮಾದಕಪ್ರಭೆಯಿಲ್ಲ. ಶಾರದೆಯ ಮುಖ ಅನ್ನುವಂತೆಯೇ ಇಲ್ಲ. ಕಣ್ಣುಗಳು ಮಾತ್ರ ಅವೇ ಆ ಕಣ್ಣುಗಳು. ಹೃದಯದ ಸಾರಸರ್ವಸ್ವವನ್ನೆಲ್ಲ ತಮ್ಮ ಪರಿಧಿಯೊಳಗೆ ಹಿಡಿದು ನಿಂತ ಜ್ವಲಂತ ಗೋಲಗಳು.

ಮಾತಾಡಬೇಕೆಂದು ಎದೆ ತುಡಿಯುತ್ತಿದ್ದರೂ ಶಾರದೆಗೆ ಮಾತಾಡಲು ಆಗದು. ಕಣ್ಣು ಭಾವಯ್ಯನನ್ನು ಸ್ವಾಗತಿಸಿ, ಪ್ರೇಮದ ಮಿಂಚಿನ ಹೊಳೆಯನ್ನು ಹರಿಯಿಸಿ ಮುಚ್ಚಿದುವು.

ನೋಡಿ ಶೀನಪ್ಪನಿಗೆ ಕರುಳು ಕಿವಿಚಿದಂತಾಯಿತು. 'ಏನು ಮಾಡಬೇಕು ಈಗ? ಇವಳನ್ನು, ತನ್ನ ಜೀವನದ ಸರ್ವಸ್ವವಾದ ಈ ಮುಗ್ಧೆಯನ್ನು ಉಳಿಸಿಕೊಳ್ಳುವುದು ಹೇಗೆ? ಅಯ್ಯೋ, ದೇವರೇ, ಇದೆಂಥ ಕೆಲಸವನ್ನು ಮಾಡಿದೆ?'

ಮೂಲೆಯಲ್ಲಿ ಹತಾಶಳಾಗಿ, ದಿಗ್ಭ್ರಾಂತಳಾಗಿ ಕುಳಿತ ಅತ್ತೆಯನ್ನು ಕುರಿತು ಶೀನಪ್ಪ "ಅತ್ತೆ, ಏನು ಔಷಧ ಮಾಡುತ್ತಿದ್ದೀರಿ?" ಎಂದು ಕೇಳಿದ.

"ನಮಗೆ ತಿಳಿದದ್ದೆಲ್ಲ ಮುಗಿಯಿತು, ಶೀನಾ. ಇನ್ನೊಂದು ದಿನ ಕಳೆದರೆ ಆಮೇಲೆ ಗಂಡಾಂತರವಿಲ್ಲ ಎನ್ನುತ್ತಾರೆ. ಒಂದು ದಿನ ಕಳೆಯುವುದೇ, ಶೀನಾ?"

ಆ ಮಾತಿಗೆ ಏನು ಹೇಳಬೇಕು?

"ಈ ಮಾರಿಗೆ ಬಹಳ ಜನ ಬಲಿಯಾದರು ಶೀನಾ, ಈ ಊರಿನಲ್ಲಿ; ನನ್ನ ಈ ಮಗಳ ಗತಿಯೇನು? ಇವಳು ಹೋದರೆ ನನಗೆ ಇನ್ನೇನು ಗತಿ, ಶೀನಾ?" ಎಂದು ಸೀತಮ್ಮ ಬಿಕ್ಕಿಬಿಕ್ಕಿ ಅಳತೊಡಗಿದಳು.

"ಅಳಬೇಡಿ ಅತ್ತೆ; ದೇವರು ದೊಡ್ಡವನು. ನಮ್ಮ ಶಾರದೆ ಉಳಿಯುತ್ತಾಳೆ" ಎಂದು ಸಂತೈಸಲು ಪ್ರಯತ್ನಪಟ್ಟ. ಆದರೆ ಶೀನಪ್ಪನಿಗೆ ತನ್ನ ಮಾತಿನಲ್ಲಿ ತನಗೇ ನಂಬಿಕೆ ಇರಲಿಲ್ಲ.

ಸ್ವಲ್ಪ ಹೊತ್ತು ಹಾಗೇ ಕೂತಿದ್ದು ಶೀನಪ್ಪ ಒಂದು ನಿರ್ಧಾರಕ್ಕೆ ಬಂದ. "ಅತ್ತೆ, ಇದರಲ್ಲೆಲ್ಲ ಉಪ್ಪುಂದದ ಪಂಡಿತರು ಬಹಳ ತಿಳಿದವರು. ಹೋಗಿ ಅವರನ್ನು ಕರೆದುಕೊಂಡು ಬರುತ್ತೇನೆ." ಎಂದ.

"ಅಯ್ಯೋ ಶೀನಾ, ಇದೆಂಥ ಮಾತು ಆಡುತ್ತೀ. ಈ ಕಗ್ಗತ್ತಲೆಯಲ್ಲಿ, ಕಾಡುದಾರಿಯಲ್ಲಿ ಎಂಟು ಮೈಲಿ ದೂರ ಹೋಗುತ್ತೇನೆನ್ನುತ್ತೀಯಲ್ಲ! ಬೇಡ ಮಗೂ. ನಾನು ನಿನ್ನನ್ನೂ ಕಳೆದುಕೊಳ್ಳಬೇಕೆ? ದೇವರು ಮಾಡಿದ ಹಾಗೆ ಆಗಲಿ. ಬೇಡಪ್ಪಾ, ನೀನು ಹೋಗಬೇಡ. ಪಂಡಿತರೇನು ಬ್ರಹ್ಮನಲ್ಲ."

ಎಂದಳು ಸೀತಮ್ಮ.

“ ಮಾಡುವಷ್ಟನ್ನು ಮಾಡಿಯೇ ತೀರಬೇಕು ಅತ್ತೆ; ನಮ್ಮ ಶಾರದೆಯ ಜೀವಕ್ಕಿಂತ ಹೆಚ್ಚಿನದು ಯಾವುದು ? ” ಎಂದು ಕಂದೀಲನ್ನು ಎತ್ತಿಕೊಂಡ.

ತನ್ನ ಮಗಳಿಗಾಗಿ ಇಷ್ಟು ಮಾಡುತ್ತೇನೆನ್ನುವವನನ್ನು ತಾಯಿ ಸೀತಮ್ಮ ಹೇಗೆ ತಡೆದಾಳು ? “ ಶೀನ, ಜೊತೆಗೆ ತಿಮ್ಮನನ್ನಾದರೂ ಕರೆದುಗೊಂಡು ಹೋಗಪ್ಪಾ” ಎಂದಳು.

“ ಬೇಡ. ಏನೂ ಹೆದರಿಕೆ ಇಲ್ಲ. ನೀವು ಇಲ್ಲಿ ಒಬ್ಬರೇ ಇರುವುದು ಹೇಗೆ ? ಅದು ಸಾಧ್ಯವಿಲ್ಲ.” ಎಂದು ಶೀನಪ್ಪ ಹೊರಟೇ ಬಿಟ್ಟ.

ಮಾರನೆಯ ದಿನ ಬೆಳಗ್ಗೆ ಹೊತ್ತು ಹುಟ್ಟಿ ಎರಡು ಗಳಿಗೆ ಆಗುವಾಗ ಶೀನಪ್ಪ ಪಂಡಿತರನ್ನು ಕರೆದುಕೊಂಡು ಬಂದ. ಬಂದಾಗ ಮನೆಯನ್ನು ಶ್ಮಶಾನ ಮೌನ ಕವಿದಿತ್ತು. ಆ ಮೌನವನ್ನು ಭೇದಿಸಿ ಆಗಾಗ ಸೀತಮ್ಮನ ಹೃದಯದ್ರಾವಕವಾದ ಅಳು ಕೇಳುತ್ತಿತ್ತು.

ಶಾರದೆಯ ಕಥೆ ಮುಗಿದಿತ್ತು.

ಶೀನಪ್ಪನಿಗೆ ಹುಚ್ಚೇ ಹಿಡಿದಂತಾಯಿತು. ಒಳಗೆ ಹೋದ. ಶಾರದೆ ಹಾಗೇ ಬಾಳೆಯೆಲೆಯ ಮೇಲೆ ಮಲಗಿದ್ದಳು ಕಣ್ಣು ಮುಚ್ಚಿತ್ತು. ಕಂಡು ‘ ಅಯ್ಯೋ, ಶಾರದಾ ! ’ ಎಂದು ಒಂದು ಸಲ ಚೀರಿ ನೆಲಕ್ಕೆ ಕುಸಿದುಬಿದ್ದ.

ಯಾರು ಯಾರೋ ಬಂದರು. ಮನೆಯ ಹತ್ತಿರದ ಮಾವಿನಮರವನ್ನು ಕಡಿದು ಚಿತೆ ಮಾಡಿದರು. ಶಾರದೆ, ಶೀನಪ್ಪನ ಆರಾಧ್ಯದೇವತೆ ಅದರ ಮೇಲೆ ಮಲಗಿ ಉರಿದು ಹೋದಳು.

ಕುಸಿದು ಬಿದ್ದ ಶೀನಪ್ಪ, ಎದ್ದು ಬಂದು ಉರಿಯುತ್ತಿದ್ದ ಚಿತೆಯನ್ನು ಶೂನ್ಯವದನದಿಂದ ನೋಡುತ್ತ ನಿಂತ.

‘ ಮುಗಿಯಿತು. ಎಲ್ಲ ಮುಗಿಯಿತು ’ ಎಂದು ಯಾರಿಗೂ ಹೇಳದೆ ಕೇಳದೆ ಹಾಗೆಯೇ ಅಲ್ಲಿಂದ ಹೊರಟು ಬಿಟ್ಟ.

ಅಯ್ಯೋ ಶಾರದೆ, ಶಾರದೆ, ಶಾರದೆ.

ಶಾರದೆ ಹೋದಳು ನಿಜ. ಆದರೆ ಶೀನಪ್ಪನ ಮನಸ್ಸಿನಲ್ಲಿ ಉಳಿದಳು. ಅಂದಿನಿಂದ ಒಂದು ದಿನವೂ ಅವನ ಮನಸ್ಸಿನಲ್ಲಿ ಅವಳ ನೆನಪು ಮಾಸಲಿಲ್ಲ.

ಆ ಕಣ್ಣು, ಆ ತುಂಟನಗೆ, ಆ ಸರಸ ಮಾತು—ಅವನ ಮನಸ್ಸಿನಲ್ಲಿ ಉಳಿದುವು.

ಶಾರದೆ ಇಲ್ಲದೆ ಆಗಲೇ ಹತ್ತು ವರುಷ.

ಈ ಎಲ್ಲ ನೆನಪೂ ಹಠಾತ್ತಾಗಿ ನುಗ್ಗಿ ಬಂದು ಶೀನಪ್ಪನ ಕಣ್ಣಲ್ಲಿ ನೀರು ತುಂಬಿತು. ಉಸ್ ಎಂದು ದೀರ್ಘವಾಗಿ ನಿಟ್ಟುಸಿರು ಬಿಟ್ಟು ಕಣ್ಣೊರಸಿಕೊಂಡ.

ಒಲೆಯ ಮೇಲಿದ್ದ ಕಷಾಯದ ನೆನಪು ಬಂತು. ಹೋಗಿ ತೆಗೆದುಕೊಂಡು ಬಂದು ಮೂರನೆಯ ಒಂದು ಭಾಗವನ್ನು ಅಲ್ಲಿ ಮಲಗಿದ್ದ ಆ ಅನಾಥೆಗೆ ಕುಡಿಸಿದ.

ಹಣೆಯ ಮೇಲೆ ಕೈಯಿಟ್ಟು ನೋಡಿದ. ಜ್ವರದ ಕಾವು ತಗ್ಗಿತ್ತು. ಕೊಂಚ ಬಿಸಿಯಿತ್ತು ಅಷ್ಟೆ. ಮುಖ ಮೊದಲಿಗಿಂತ ಹೆಚ್ಚು ಗೆಲುವಾಗಿತ್ತು.

“ ಪಂಡಿತರ ಮದ್ದು ನಾಟುತ್ತಿದೆ. ಅಬ್ಬಾ, ಬದುಕಿದೆ ” ಎಂದು ಸಮಾಧಾನದಿಂದ ಉಸಿರೆಳೆದ ಶೀನಪ್ಪ.

ಇಷ್ಟು ಹೊತ್ತಿಗೆ ಹೊತ್ತು ಮೂಡಿ ಏಳೆಂಟು ಗಳಿಗೆ ಏರಿತ್ತು. ಮಳೆ ನಿಂತು ಹೊಳವಾಗಿತ್ತು. ಸೂರ್ಯನೂ ಕೂಡಾ ಮೋಡದಿಂದೀಚೆಗೆ ಬಂದು ಜಗತ್ತಿಗೆ ತನ್ನ ಸಂದರ್ಶನವನ್ನು ನೀಡುತ್ತಿದ್ದ.

ಯಾರೋ ಬಾಗಿಲು ತಟ್ಟಿದ ಹಾಗಾಯಿತು. ಶೀನಪ್ಪ ಹೋಗಿ ಬಾಗಿಲು ತೆರೆದ.

ನಾರಣಪ್ಪ! ನೋಡಿ ಶೀನಪ್ಪನಿಗೆ ಆಶ್ಚರ್ಯವಾಯಿತು. ನಾರಣಪ್ಪ ಅವನ ಮನೆಯೊಳಕ್ಕೆ ಕಾಲಿಡದೇ ಬಹಳ ದಿನಗಳಾಗಿದ್ದುವು.

“ ಬನ್ನಿ ದೊಡ್ಡಪ್ಪ, ಬನ್ನಿ” ಎಂದು ಒಳಕ್ಕೆ ಕರೆದುಕೊಂಡು ಹೋದ.

ನಾರಣಪ್ಪ ಕಂಭಕ್ಕೊರಗಿ ಕುಳಿತುಕೊಂಡು, “ಮಗೂ ಶೀನಾ, ಊರಲ್ಲೆಲ್ಲ ಏನೇನೋ ಪುಕಾರು. ನಿನ್ನ ಮನೆಗೆ ಯಾರು ಬಂದರು ? ಏನು ಕಥೆ ? ನಡೆದದ್ದಾದರೂ ಏನು, ಹೇಳು. ನೀನು ಯಾವ ಸುಳಿಯೊಳಗೆ ಸಿಕ್ಕಿಬಿದ್ದೆಯೋ ಎಂದು ಮನಸ್ಸು ಗಾಬರಿಯಾಗಿತ್ತು. ತಡೆಯುವುದಕ್ಕೇ ಆಗಲಿಲ್ಲ. ಬಂದು ಬಿಟ್ಟೆ. ಹೇಳು ” ಎಂದ.

ನಾರಣಪ್ಪನ ಮಾತು ಹೃದಯದಿಂದ ಬಂದದ್ದು, ಶೀನಪ್ಪನ ಹೃದಯಕ್ಕೆ ನಾಟಿತು. “ ನಾನೇ ಬಂದು ನಿಮಗೆ ನಡೆದದ್ದನ್ನೆಲ್ಲ ತಿಳಿಸಬೇಕೆಂದಿದ್ದೆ. ಪುರ

ಸೊತ್ತೇ ಆಗಲಿಲ್ಲ. ಅವಳು ಅಲ್ಲಿ ಜ್ಞಾನವಿಲ್ಲದೆ ಮಲಗಿದ್ದಾಳೆ. ಪಾಪ. ಹೇಗೆ ಬಿಟ್ಟು ಬರಲಿ ? ”

“ ಅವಳು ಅಂದೆಯಲ್ಲ ಶೀನ. ಅವಳು ಯಾರು, ಅವಳ ಹೆಸರೇನು ?”

“ ಅವಳು ಯಾರೋ, ಅವಳ ಹೆಸರೇನೋ ನನಗೆ ತಿಳಿಯದು ” ಎಂದು ಶೀನಪ್ಪ ನಡೆದದ್ದನ್ನೆಲ್ಲ ವಿವರವಾಗಿ ಹೇಳಿದ.

ಶೀನಪ್ಪನು ಹೇಳಿದ ಕಥೆಯನ್ನು ಕೇಳುತ್ತ ಕೇಳುತ್ತ ನಾರಣಪ್ಪನ ಕಣ್ಣು ಹನಿಗೂಡುತ್ತಿತ್ತು. ಕಥೆ ಮುಗಿದ ಮೇಲೆ ಕಣ್ಣೊರಸಿಕೊಂಡು,

“ ಶೀನಾ, ನೀನು ಹೇಳಿದ ಪ್ರತಿಯೊಂದು ಅಕ್ಷರವನ್ನೂ ನಾನು ನಂಬುತ್ತೇನೆ. ನಿನ್ನ ಹೃದಯ ದೊಡ್ಡದು. ನೀನು ಮಾಡಿದ ಕೆಲಸವೂ ದೊಡ್ಡದು. ನಿನ್ನ ಉದ್ದೇಶ ನಿರ್ದುಷ್ಟವಾದದ್ದು, ಪವಿತ್ರವಾದದ್ದು. ಆದರೆ ಜಗತ್ತು ಅದನ್ನು ನಂಬುವುದಿಲ್ಲ.”

ಇದನ್ನು ಕೇಳಿ ಶೀನಪ್ಪ ಆಶ್ಚರ್ಯದಿಂದ ಮೂಕನಾಗಿ ನಿಂತ. ಒಂದು ಕ್ಷಣ ಒಂದು ಅಕ್ಷರವೂ ಅವನ ಬಾಯಿಯಿಂದ ಹೊರಡಲಿಲ್ಲ. ಆಮೇಲೆ ಯಾಂತ್ರಿಕವಾಗಿ,

“ ಜಗತ್ತು ನಂಬುವುದಿಲ್ಲ ? ” ಎಂದು ತನ್ನ ದೊಡ್ಡಪ್ಪನ ಮಾತನ್ನೇ ಪುನರುಚ್ಚರಿಸಿದ ಶೀನಪ್ಪ— ದಿಗ್ಭ್ರಾಂತನಾಗಿ.

“ ಈಗಲೇ ನಿನ್ನ ವಿಚಾರವಾಗಿ ಊರಿನವರು ನಾನಾ ವಿಧವಾಗಿ ಆಡಿಕೊಳ್ಳುತ್ತಿದ್ದಾರಪ್ಪಾ. ಸ್ವಲ್ಪ ಜೋಕೆಯಿಂದಿರು ಮಗೂ.”

“ ನಾನು ಅಂಥಾದ್ದು ಏನು ಮಾಡಿದೆ ದೊಡ್ಡಪ್ಪಾ ? ಬೀದಿ ಬಾಗಿಲಲ್ಲಿ ಬಂದು ಬಿದ್ದ ಆ ಅನಾಥೆಯನ್ನು ಸಾಯಲಿ ಎಂದು ಬಿಡಬೇಕಾಗಿತ್ತೆ? ಅವಳನ್ನು ಒಳಕ್ಕೆ ತಂದು ಬದುಕಿಸಲು ಪ್ರಯತ್ನಿಸಿದ್ದು ಅಪರಾಧವೇ ? ”

“ ನಿನ್ನ ಉದ್ದೇಶವನ್ನು ಅರ್ಥಮಾಡಿಕೊಳ್ಳುವವರಿಗೆ ಇದು ಅಪರಾಧವಲ್ಲ. ಆದರೆ ನಮ್ಮ ಅಂತರಂಗ ಎಷ್ಟು ಜನಕ್ಕೆ ತಿಳಿಯುತ್ತದೆ ? ತಿಳಿಯುವ ಆಶೆಯಾದರೂ ಎಷ್ಟು ಜನಕ್ಕೆ ಇದೆ ? ನಿಜ ಸಂಗತಿಯನ್ನು ಅರಿಯದವರು ನಿನ್ನ ಈ ವರ್ತನೆಗೆ ಎಷ್ಟು ಅಪಾರ್ಥ ಹಚ್ಚಬಹುದು ಎಂಬುದನ್ನು ನೀನು ಊಹಿಸಬಲ್ಲೆ. ಆ ರೀತಿಯ ಅಪವಾದವನ್ನು ಆಗಲೇ ಜನ ನಿನ್ನ ಮೇಲೆ

ಹೊರಿಸುತ್ತಿದ್ದಾರೆ."

"ದೊಡ್ಡಪ್ಪಾ, ನನಗೆ ಒಂದೂ ಅರ್ಥವಾಗುವುದಿಲ್ಲ. ನಾನು ನಮ್ಮೂರಿನವರಿಗೆ ಅಂಥ ಅಪಕಾರ ಏನು ಮಾಡಿದ್ದೇನೆ? ನನ್ನ ಮೇಲೆ ಯಾಕೆ ಜನಕ್ಕೆ ಅಷ್ಟು ವೈರ?"

"ಇದು ವೈರದ ಪ್ರಶ್ನೆಯಲ್ಲ. ಧರ್ಮದ ಪ್ರಶ್ನೆಯೂ ಅಲ್ಲ."

"ಹಾಗಾದರೆ?"

"ಇದು ಕೇವಲ ರೂಢಿಯ ಪ್ರಶ್ನೆ. ರೂಢಿಗೆ ವಿರುದ್ಧವಾದುದನ್ನು ಸಮಾಜ ಸಹಿಸುವುದಿಲ್ಲ, ಶೀನ."

"ಅನಾಥರಿಗೆ ಸಹಾಯ ಮಾಡುವುದು, ಆರ್ತರಿಗೆ ರಕ್ಷಣೆ ಕೊಡುವುದು ಹಾಗಾದರೆ ರೂಢಿಗೆ ವಿರುದ್ಧವೇ?"

"ಅಲ್ಲ. ಆದರೆ ಈ ಅನಾಥೆ ಹೆಂಗಸು. ಪ್ರಾಯದ ಹೆಂಗಸು. ಗರ್ಭಿಣಿ. ನೀನು ತರುಣ, ಮದುವೆಯಾಗದವನು. ಒಂದಕ್ಕೆ ಒಂದು ಸೇರಿಸಿ ಒಂದು ಕಥೆ ಕಟ್ಟುವುದು ಎಷ್ಟು ಸುಲಭ? ಅದೂ ಅಲ್ಲದೆ, ಹೆಂಗಸು ಗಂಡಸು ಹತ್ತಿರ ಬಂದಾಗ, ಒಂದು ಕಡೆ ಸೇರಿದಾಗ ನಿನ್ನ ಹಾಗೆ ಶುದ್ಧ ಬುದ್ಧಿಯನ್ನೂ ಆಚಾರ ಶುದ್ಧಿಯನ್ನೂ ಇಟ್ಟುಕೊಳ್ಳಬಲ್ಲವರೂ ಅಪೂರ್ವ. ಇಂಥ ಸಂದರ್ಭದಲ್ಲಿ ಸುತ್ತುಮುತ್ತಲಿನವರ ಸಂಶಯ ಕೆರಳಿದರೆ, ದುಷ್ಟ ಕುತೂಹಲ ಕೆಲಸ ಮಾಡ ತೊಡಗಿದರೆ ಏನು ಆಶ್ಚರ್ಯ?"

ತನ್ನ ಕೃತಿಗೆ ಎಂಥ ಅಪಾರ್ಥ ಜನ ಹಚ್ಚುತ್ತಿದ್ದಾರೆ ಎಂಬುದನ್ನು ಯೋಚಿಸಿದಾಗ ಶೀನಪ್ಪನ ಎದೆ ನಡುಗಿತು.

"ಹಾಗಾದರೆ ಈ ಜನರನ್ನು ಮೆಚ್ಚಿಸುವುದಕ್ಕಾಗಿ ನಾನು ಪ್ರಜ್ಞೆಯಿಲ್ಲದೇ ಬಿದ್ದಿರುವ ಆ ಅನಾಥೆಯನ್ನು ಬೀದಿಗೆಸೆದುಬಿಟ್ಟು ಕೈತೊಳೆದುಕೊಳ್ಳಬೇಕೆ?" ಶೀನಪ್ಪ ಬಹಳ ಗಡುಸಾಗಿ ನುಡಿದ.

"ತಾಳ್ಮೆಗೆಟ್ಟು ಉಪಯೋಗವಿಲ್ಲ, ಶೀನಾ. ಇವಳನ್ನು ಬೀದಿಗೆಸೆದು ಬಿಡು ಎಂದು ನಾನು ಯಾವ ನರಕಕ್ಕೆ ಹೋಗಲಿ?"

"ಹಾಗಾದರೆ ನಾನೇನು ಮಾಡಬೇಕು, ದೊಡ್ಡಪ್ಪಾ?"

"ಇಂಥ ಪ್ರಸಂಗದಲ್ಲಿ ಯಾರು ಏನು ಮಾಡಬೇಕು ಎಂದು ಯಾರೂ

ಹೇಳಲಾರರು. ಅವರವರ ಆತ್ಮಸಾಕ್ಷಿ ಏನು ಹೇಳುತ್ತದೋ ಹಾಗೆ ಮಾಡಬೇಕು. ಬಂದದ್ದನ್ನು ಅನುಭವಿಸಬೇಕು."

"ಅದು ಸರಿಯಾದ ಮಾತು. ನಾನು ಹಾಗೇ ಮಾಡುತ್ತೇನೆ."

"ಅಪ್ಪಾ ಶೀನ, ನೀನು ಒಂದು ಚಕ್ರವ್ಯೂಹದಲ್ಲಿ ಸಿಕ್ಕಿಬಿದ್ದಿದ್ದೀಯೆ. ಇದರ ಪರಿಣಾಮ ಏನಾಗುತ್ತದೋ ದೇವರೇ ಬಲ್ಲ. ಉಗಿದರೆ ತುಪ್ಪ ಕೆಡುತ್ತದೆ, ನುಂಗಿದರೆ ಗಂಟಲು ಸುಡುತ್ತದೆ ಅಂದ ಹಾಗೆ. ಒಂದು ಲೋಕ ವಿರುದ್ಧ, ಇನ್ನೊಂದು ಪರಲೋಕ ವಿರುದ್ಧ. ಹೇಗೆ ಮಾಡಿದರೂ ಕಷ್ಟ."

"ಕಷ್ಟ ಬಹಳ ಕಷ್ಟ—ನನಗೂ ಅರ್ಥವಾಗುತ್ತದೆ, ದೊಡ್ಡಪ್ಪಾ. ಲೋಕಾಪವಾದದ ಚಿತ್ರಹಿಂಸೆ ದೊಡ್ಡವರಿಗೂ ತಪ್ಪಲಿಲ್ಲ. ಪರಮ ಪತಿವ್ರತೆಯಾದ ಸೀತಾಮಾತೆಯನ್ನೂ ಅದು ಕಾಡಿ ಕಾಡಿಗೆ ಈಡು ಮಾಡಿತು. ನಾನೇನೋ ಅಷ್ಟು ದೊಡ್ಡವನಲ್ಲ. ಆದರೂ ದೊಡ್ಡವರ ಹೆಸರು ಹೇಳುತ್ತ ನಾನೂ ಅನುಭವಿಸುತ್ತೇನೆ. ಇನ್ನೇನು ಮಾಡಲಿ?"

"ನಿನಗೂ ಅಗ್ನಿಪರೀಕ್ಷೆ ಕಾದಿದೆ ಮಗೂ; ಅದನ್ನು ಸಹಿಸುವ ಶಕ್ತಿ ನಿನಗೆ ಬರಲಿ."

"ನೀವಾದರೂ ನನ್ನನ್ನು ನಂಬುತ್ತೀರಲ್ಲ ದೊಡ್ಡಪ್ಪಾ?"

"ನಂಬುತ್ತೇನೆ, ಸಂದೇಹ ಬೇಡ. ಆದರೆ ಈ ಊರಿನಲ್ಲಿ ನಿನ್ನನ್ನು ನಂಬುವವನು, ಮನಃಪೂರ್ವಕವಾಗಿ ನಂಬುವವನು ನಾನೊಬ್ಬನೇ ಅಂತ ಕಾಣುತ್ತದೆ. ಅದೇ ನನ್ನ ದೊಡ್ಡ ಚಿಂತೆ."

"ಅಷ್ಟು ಸಾಕು ನಿಮ್ಮ ಆಶೀರ್ವಾದವೊಂದಿರಲಿ; ದೇವರು ಮೆಚ್ಚಲಿ."

"ದೇವರು ಮೆಚ್ಚುತ್ತಾನೆ. ಆದರೆ ನನ್ನ ಆಶೀರ್ವಾದದಿಂದ ಏನೂ ಉಪಯೋಗವಾಗುವುದಿಲ್ಲ. ಹತ್ತು ಜನದ ಮುಂದೆ ಒಬ್ಬ ಏನೂ ಮಾಡಲಾರ. ಅದಕ್ಕೇ ಅಂತ ಕಾಣುತ್ತದೆ ಶಂಕರಾಚಾರ್ಯರು 'ಲೋಕಾಪವಾದಾದ್ಭಯಂ' ಅಂತ ಹೇಳಿದ್ದು" ಎಂದು ನಾರಣಪ್ಪ ಎದ್ದು ನಿಲ್ಲಲು ಶೀನಪ್ಪ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ,

"ಈ ದಿನ ನೀವು ನನಗೆ ತಂದೆಯಿಲ್ಲ ಎಂಬ ಕೊರತೆಯನ್ನು ನಿವಾರಿಸಿದಿರಿ. ನಿಮ್ಮ ಪ್ರೀತಿಗೆ ಯೋಗ್ಯವಲ್ಲದ ಯಾವ ಕೆಲಸವನ್ನೂ ನಾನು ಮಾಡು

ವುದಿಲ್ಲ - ನಿಮ್ಮ ಪಾದದಾಣೆ" ಅಂದ.

ನಾರಣಪ್ಪ ಅದಕ್ಕೆ ಉತ್ತರ ಕೊಡಲಿಲ್ಲ. ಶೀನಪ್ಪನ ಮುಖದ ಮೇಲೆ ಒಂದು ಹನಿ ನೀರು ಬಿತ್ತು.

ಶೀನಪ್ಪ ಕತ್ತೆತ್ತಿ ನೋಡಿದ. ನಾರಣಪ್ಪನ ಕಣ್ಣಿಂದ ದಳದಳನೆ ನೀರು ಸುರಿಯುತ್ತಿತ್ತು.

ನಾರಣಪ್ಪ ಮತ್ತೆ ಮಾತಾಡಲಿಲ್ಲ.

ಉಟ್ಟ ಪಂಚೆಯ ಸೆರಗಿನಿಂದ ಕಣ್ಣೊರಸಿಕೊಂಡು ಲಗುಬಗೆಯಿಂದ ಹೊರಟು ಹೋದ.

ಅವನ ಹಿಂದಿನಿಂದ ಶೀನಪ್ಪ ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಕೇಳಿಸಿತು.

ನಾರಣಪ್ಪ ಹಿಂತಿರುಗಿ ನೋಡಲಿಲ್ಲ.

## ೫

ಮಧ್ಯಾಹ್ನವಾಗುತ್ತ ಬಂದಹಾಗೆ ಆಕಾಶದ ಮುಖದ ಬಿಗಿ ಕೊಂಚ ಸಡಿಲಿತು. ಸೂರ್ಯನೂ ಕೂಡಾ ಮೋಡದ ಮರೆಬಿಟ್ಟು ಹೊರಗೆ ಬಂದು ತನ್ನ ಕಣ್ಣು ತೆರೆದ.

ಆದರೂ ಅಲ್ಲಿ ಅವಳು ಹಾಗೆಯೇ ಮಲಗಿದ್ದಳು—ಗಾಢನಿದ್ರೆಯಲ್ಲಿರುವ ಹಾಗೆ. ಶೀನಪ್ಪ ಹುರಿಯಕ್ಕಿ ಗಂಜಿಯನ್ನು ಸಿದ್ಧಪಡಿಸಿಕೊಂಡು ಅವಳು ಎಚ್ಚರಾಗುವುದನ್ನೇ ಕಾದು ಕುಳಿತಿದ್ದ.

"ಇದೇನು, ಹೊತ್ತು ನೆತ್ತಿಗೇರಿತು. ಆದರೂ ಪಂಡಿತರು ಹೇಳಿದಂತೆ ಇನ್ನೂ ಅವಳಿಗೆ ಪ್ರಜ್ಞೆ ಬರಲಿಲ್ಲವಲ್ಲ? ಪಂಡಿತರು ಸಂದೇಹವೇನಾದರೂ ಇದ್ದರೆ ಹಾಗೆ ಖಡಾಖಂಡಿತವಾಗಿ ಹೇಳುತ್ತಿರಲಿಲ್ಲ." ಎಂದು ಶೀನಪ್ಪನ ಹೃದಯ ತುಡಿಯುತ್ತಿತ್ತು.

ಹಣೆಗೆ ಕೈ ಹಚ್ಚಿನೋಡಿದ. ಬಿಸಿ ಇರಲಿಲ್ಲ. ಕೊಂಚ ಬೆಚ್ಚಗೆ ಇತ್ತು ಅಷ್ಟೆ. "ಅಬ್ಬಾ ಜ್ವರವಂತೂ ತಗ್ಗಿತಲ್ಲ" ಎಂದು ತನ್ನಷ್ಟಕ್ಕೆ ನುಡಿದ.

ಕ್ಷಣಕ್ಷಣವೂ ಒಂದು ಯುಗವಾಗಿ ಸಾಗಿತು. ಕ್ಷಣಕ್ಷಣಕ್ಕೂ ಮನಸ್ಸಿನ ತವಕ ಹೊತ್ತಿತ್ತು. ಭಯ ಕವಿಯುತ್ತಿತ್ತು.

ಕೊನೆಗೂ! ಆಹಾ: ಅವಳ ಮೈ ಕೊಂಚ ಅಲುಗಿತು. ತುಟಿ ಕೊಂಚ ತೆರೆಯಿತು; ಅಲುಗಿತು. ಕಣ್ಣುರೆಪ್ಪೆಗಳು ಒಂದು ಸಲ ಕೊಂಚ ಆಡಿದುವು. ಮತ್ತೆ ಸ್ತಬ್ಧ.

ಕೈಗೆ ಬಂದದ್ದು ಮಿಂಚಿ ಮಾಯವಾದ ಹಾಗೆ.

ಮತ್ತೆ ಅಷ್ಟು ಹೊತ್ತು ಪಾನ-ಕೊಳದ ಮೇಲಿನ ಪರೆಗೆ ಬಂದ ರತ್ನ ಖಳಕ್ಕನೆ ಕೆಳಕ್ಕೆ ಜಾರಿ ಮತ್ತೆ ತಳವನ್ನು ಸೇರಿದ ಹಾಗೆ.

ಮತ್ತೆ ಅರಿವು ಬರುವ ಚಿಹ್ನೆ. ಸಣ್ಣಗೆ ನರಳಿದ ಸದ್ದು ಅವಳ ಗಂಟಲಿಂದ ಹೊರಟಿತು. ಉಸ್ ಎಂದು ನಿಟ್ಟುಸಿರು.

ಅಬ್ಬಾ, ದೇವರು ದೊಡ್ಡವನು. ಪಂಡಿತರ ಮಾತು ಸತ್ಯ.

ಅವಳು ಕಣ್ಣು ತೆರೆದಳು; ಮುಚ್ಚಿದಳು; ಮತ್ತೆ ತೆರೆದಳು.

ಅಗೋ, ಕಣ್ಣು ತೆರೆದೇ ಇದೆ.

ಕಣ್ಣು ತೆರೆದು ಸುತ್ತಲೂ ನೋಡಿದಳು.—ಈ ಹೊಸ ಪ್ರಪಂಚವನ್ನೆಲ್ಲ ಒಂದೇ ನೋಟದಲ್ಲಿ ಏಕಾಗ್ರೀಕರಣ ಮಾಡಿಬಿಡುವ ಹಾಗೆ.

ಮೇಲೆ, ಕೆಳಗೆ, ಸುತ್ತಮುತ್ತ ; ಬಾಗಿಲ ಕಡೆಗೆ, ಕಿಟಕಿಯ ಕಡೆಗೆ, ನೆಲದ ಕಡೆಗೆ, ಸೂರಿನ ಕಡೆಗೆ ಕಣ್ಣು ಹರಿಯಿತು, ಹಿಂದೆ ಸರಿಯಿತು.

ಅವಳು ಏನೋ ಜ್ಞಾಪಿಸಿಕೊಳ್ಳಲು ಯತ್ನಿಸುತ್ತಿರುವಂತೆ, ಯಾವುದೋ ಕಳೆದ ವಸ್ತುವನ್ನು ಕಷ್ಟಪಟ್ಟು ಹುಡುಕುತ್ತಿರುವಂತೆ, ಮನಸ್ಸನ್ನೆಲ್ಲ ಕೆದಕಿ, ಬೆದಕಿ ತನಗೆ ಬೇಕಾದದ್ದನ್ನು ಹೊರ ತೆಗೆಯಲು ಯತ್ನಿಸುವಂತೆ ತೋರಿತು.

ಅಲ್ಲಿ ಇಲ್ಲಿ ಸುತ್ತಾಡಿದ ಅವಳ ಕಣ್ಣು ಕೊನೆಗೆ ಶೀನಪ್ಪನ ಮುಖದಲ್ಲಿ ಬಂದು ನೆಟ್ಟಿತು. ಚಿಕ್ಕ ಮಗುವಿನ ಮುಗ್ಧದೃಷ್ಟಿ. ತಳವನ್ನೆಲ್ಲ ತೆರೆದು ತೋರುವ ನಿರ್ಮಲ ಕಾಸಾರದಂಥ ಕಣ್ಣು. ದಿವ್ಯತೀರ್ಥದಲ್ಲಿ ಮಿಂದ ಅನುಭವ ಶೀನಪ್ಪನಿಗೆ.

ಎಷ್ಟು ಹೊತ್ತು ಹಾಗೆ ಅವಳು ನೋಡುತ್ತಿದ್ದಳೋ. ಶೀನಪ್ಪನಂತೂ ಮುಗ್ಧನಾಗಿ ತಾನು ಸಾವಿನ ದವಡೆಯಿಂದ ಸೆಳೆದು ತಂದವಳಲ್ಲಿ ಕ್ರಮೇಣ ಜೀವರಸ ತುಂಬುತ್ತಿರುವ ಪವಾಡವನ್ನು ನೋಡುತ್ತ ಮೈಮರೆತಿದ್ದ.

“ ಆಹ, ಈಗ ನೆನಪಿಗೆ ಬಂತು. ನೀವೇ ಅಲ್ಲವೆ ಬೀದಿಯಲ್ಲಿ ಬಿದ್ದ ನನ್ನನ್ನು ಒಳಕ್ಕೆ ತಂದು ಕಾಪಾಡಿದ ಪುಣ್ಯಾತ್ಮರು ? ” ಎಂದಳು.

“ ಅದರಲ್ಲಿ ವಿಶೇಷವೇನು ತಾಯಿ ? ಯಾರೇ ಆಗಲಿ ಮನುಷ್ಯರಾದವರು ಮಾಡಬೇಕಾದ ಕೆಲಸವನ್ನು ನಾನು ಮಾಡಿದೆ— ಅಷ್ಟೆ. ”

“ ಆದರೆ ಈ ಜಗತ್ತಿನಲ್ಲಿ ಮನುಷ್ಯರ ಸಂಖ್ಯೆ ಎಷ್ಟು ಕಡಿಮೆ ! ” ಎಂದು ತನ್ನ ಜೀವನದ ನೂರಾರು ಅನುಭವಗಳನ್ನು ನೆನಸಿಕೊಂಡಂತೆ ನುಡಿದು ಬಿಸುಸುಯ್ದಳು.

“ ಅವೆಲ್ಲಾ ಇರಲಿ ಅಮ್ಮಾ, ಈಗ ನೀವು ಕೊಂಚ ಆಹಾರ ತೆಗೆದುಕೊಳ್ಳಬೇಕು. ಪಂಡಿತರು ಹಾಗೆ ಹೇಳಿದ್ದಾರೆ ” ಎಂದು ಗಂಜಿಯ ಲೋಟವನ್ನು ಕೈಗೆ ತೆಗೆದುಕೊಂಡ, ಶೀನಪ್ಪ.

“ ಪಂಡಿತರು ? ಯಾವ ಪಂಡಿತರು ? ” ಧ್ವನಿ ಮಂದವಾಗಿ, ಕೊಂಚ ಗಾಬರಿಯಿಂದೆಂಬಂತೆ ಬಂತು.

" ನಿಮಗೆ ಜ್ವರದಲ್ಲಿ ಪ್ರಜ್ಞೆ ಇರಲಿಲ್ಲ, ಆಗ ಪಂಡಿತರು, ನಮ್ಮ ಉಪ್ಪುಂದರ ಪಂಡಿತರು ಬಂದು ನಾಡಿ ನೋಡಿ ಔಷಧವನ್ನು ಹೇಳಿ ಹೋಗಿದ್ದರು."

" ಅಯ್ಯೋ, ನಿಮಗೆ ಎಷ್ಟು ತೊಂದರೆ ಕೊಟ್ಟೆ. ಈ ಪಾಪಿಯಿಂದ ಎಷ್ಟು ಜನಕ್ಕೆ ತೊಂದರೇನೋ ? "

" ಹಾಗೆಲ್ಲ ಹೇಳಬೇಡಿ. ಈಗ ಮೊದಲು ಈ ಗಂಜಿ ಕುಡಿಯಿರಿ. " ಎಂದು ಶೀನಪ್ಪ ಗಂಜಿಯ ಲೋಟವನ್ನು ಬಾಯಿಗೆ ಹಿಡಿದ.

" ಬೇಡ, ಬೇಡ ; ನಾನೇ ಕುಡಿಯುತ್ತೇನೆ. ನೋಡಿ, ನನಗೇನಾಗಿದೆ ? " ಎಂದು ಅವಳು ಏಳಲು ಪ್ರಯತ್ನಪಟ್ಟಳು ; ಆಗಲಿಲ್ಲ.

" ಹಾಗೆಲ್ಲ ಮಾಡಿ ಇನ್ನಷ್ಟು ಆಯಾಸಮಾಡಿಕೊಳ್ಳಬೇಡಿ. ಕುಡಿಯಿರಿ " ಎಂದ. ಮತ್ತೆ ಮರುಮಾತಾಡದೆ ಅವಳು ಗಂಜಿಯನ್ನು ಕುಡಿದಳು.

ಗಂಜಿ ಕುಡಿದ ಮೇಲೆ ಅವಳಿಗೆ ಕೊಂಚ ಶಕ್ತಿ ಬಂದಂತೆ ತೋರಿತು. ಮುಖಕ್ಕೆ ಕೊಂಚ ಕಳೆ ಬಂತು. ಅಸ್ಪಷ್ಟವಾಗಿ, ದುರ್ಬಲವಾಗಿ ತೇಲುತ್ತಿದ್ದ ಮಾತಿನಲ್ಲೂ ಕೊಂಚ ಲವಲವಿಕೆ ಕಂಡಿತು.

" ಈಗ ಹೇಗನ್ನಿಸುತ್ತದೆ ? ಸ್ವಲ್ಪವಾದರೂ ತ್ರಾಣ ಬಂದ ಹಾಗೆ ಅನ್ನಿಸುತ್ತದೆಯೋ ? " ಎಂದು ಶೀನಪ್ಪ ಕೇಳಿದ.

" ಆ ಗಂಜಿ ಕುಡಿದ ಮೇಲೆ ಹೊಸ ಶಕ್ತಿ ಬಂದ ಹಾಗೆ ಆಗಿದೆ. " ಎಂದು ಅವಳು ಸುತ್ತಲೂ ನೋಡಿ " ಮನೆಯವರು ಯಾರೂ ಕಾಣಿಸುವುದಿಲ್ಲವಲ್ಲ ? " ಎಂದಳು.

" ಎಂದರೆ ನಾನು ಈ ಮನೆಯವನಲ್ಲ ಅಂತಲೋ ?" ಎಂದು ಶೀನಪ್ಪ ನಸುನಕ್ಕ.

" ಹಾಗಲ್ಲ ಇನ್ನು ಯಾರೂ ಕಾಣಿಸಲಿಲ್ಲ. ಅದಕ್ಕೆ ಕೇಳಿದೆ. "

" ನಾನೇ ಈ ಮನೆ ಅಮ್ಮ ; ಇಲ್ಲಿ ಇನ್ನು ಯಾರೂ ಇಲ್ಲ. "

" ಹಾಗಾದರೆ ನಾನು ಜ್ಞಾನತಪ್ಪಿ ಮಲಗಿದ್ದಾಗ ನೀವೇ ನನ್ನ ಚಾಕರಿ ಮಾಡಿದಿರಾ ? "

" ನಾನೇ ಅಲ್ಲ ; ನಮ್ಮ ನಾಗಿಗೂ ಆ ಪುಣ್ಯದ ಅರ್ಧ ಭಾಗ ಸಲ್ಲುತ್ತದೆ."

" ನಾಗಿ ಯಾರು ? ನಿಮ್ಮ ಹೆಂಡತಿಯೇ ? ಅವರೆಲ್ಲಿ ? "

ನಾಗಿ—ತನ್ನ ಹೆಂಡತಿ. ಶೀನಪ್ಪನಿಗೆ ನಗು ತಡೆಯಲಾಗಲಿಲ್ಲ.

ಇದನ್ನು ಕಂಡು ಅವಳು ಕಕ್ಕಾವಿಕ್ಕಿಯಾದಳು. ಆಗ ಶೀನಪ್ಪ

" ನಾಗಿ ನನ್ನ ಹೆಂಡತಿಯಲ್ಲ—ನಮ್ಮ ಒಕ್ಕಲು ; ಅರುವತ್ತು ವರುಷದ ತರುಣಿ. "

" ತಿಳಿಯದೆ ಹೇಳಿದೆ—ಕ್ಷಮಿಸಿ. "

" ಕ್ಷಮಿಸುವುದು ಇದರಲ್ಲಿ ಏನಿದೆ? ನನಗೆ ಹೆಂಡತಿ ಮಕ್ಕಳು ಯಾರೂ ಇಲ್ಲ ಅಮ್ಮ ; ನಾನು ಒಬ್ಬಂಟಿಗ. ನಾಗಿ ನನ್ನ ಸಹಾಯಕ್ಕೆ ಬಂದಳು. ಬಹಳ ಒಳ್ಳೇ ಮುದುಕಿ "

ಇದನ್ನು ಕೇಳಿ ಸ್ವಲ್ಪ ಹೊತ್ತು ಅವಳು ಏನೋ ಯೋಚಿಸುತ್ತಿರುವಂತೆ ತೋರಿತು. ಕೊನೆಗೆ

" ನನ್ನನ್ನು ಮನೆಗೆ ತಂದು ನೀವು, ದೇವರಂಥ ಮನುಷ್ಯರು, ನಿಮ್ಮ ತಲೆಯ ಮೇಲೆ ನೀವೇಕಲ್ಲುಹಾಕಿಕೊಂಡಿರಿ. ಅಯ್ಯೋ ಎಂಥ ಕೆಲಸವಾಯಿತು?" ಎನ್ನುತ್ತ ಅವಳು ಸಣ್ಣಗೆ ಅಳತೊಡಗಿದಳು.

ಶೀನಪ್ಪನಿಗೆ ಆಶ್ಚರ್ಯವಾಯಿತು. ಇವಳು ಏಕೆ ಇದ್ದಕ್ಕಿದ್ದ ಹಾಗೆ ಹೀಗೆ ಅಳುತ್ತಿದ್ದಾಳೆ? ಒಂದು ಕ್ಷಣ ಶೀನಪ್ಪನಿಗೆ ಏನು ಹೇಳಬೇಕೆಂದೇ ತೋಚಲಿಲ್ಲ.

" ತಾಯಿ, ಸುಮ್ಮನೆ ಏಕೆ ಅಳುತ್ತೀರಿ ? ನನ್ನಿಂದ ಏನು ಅಪಚಾರವಾಯಿತು ? " ಎಂದು ಕೇಳಿದ, " ಅಥವಾ ತಲೆನೋವೆ ? "

ಅವನ ಆ ಪ್ರಶ್ನೆಯನ್ನು ಗಮನಿಸದೆ ಅವಳು,

" ಈ ಪಾಪಿ ಎಲ್ಲಿ ಹೋದರೂ ಹೀಗೇ ಆಯಿತಲ್ಲ ? ನನ್ನಿಂದ ಯಾರಿಗೂ ಸುಖವಿಲ್ಲ. ನನ್ನನ್ನು ಕಂಡು ಅಯ್ಯೋ ಪಾಪ ಎಂದು ಕನಿಕರ ತೋರಿದವರು ಏಳೇಳು ಕೆರೆಯ ನೀರು ಕುಡಿಯಬೇಕು. " ಎಂದು ಮತ್ತೆ ಮೃದುವಾಗಿ ಅಳುತ್ತ ಶೀನಪ್ಪನ ಕಡೆ ದೃಷ್ಟಿ ತಿರುಗಿಸಿ,

" ನೀವು ನನ್ನನ್ನು ಬದುಕಿಸಬಾರದಾಗಿತ್ತು " ಎಂದು ಮುಖವನ್ನು ತನ್ನ ಎರಡೂ ಕೈಗಳಿಂದ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅತ್ತಳು.

ಏನು ಹೇಳುವುದು ಏನು ಮಾಡುವುದು ಅಂತ ತೋಚದೆ ಶೀನಪ್ಪ ದಿಗ್ಭ್ರಾಂತನಾಗಿ ಕುಳಿತ. ಅವಳೇ ಮತ್ತೆ ಮಾತಾಡಿದಳು :

"ಸುಮ್ಮನೆ ಹೀಗೆ ಅಳುತ್ತ ನಿಮಗೆ ಗಾಬರಿಹಿಡಿಸಬಾರದು ನಾನು. ಆದರೆ

ನನ್ನಿಂದ ನಿಮಗೆ ಆಗಲೇ ಅಪಖ್ಯಾತಿ ಬಂದಿರಬೇಕು ಇನ್ನು ಮುಂದೆ ಏನೇನು ಆಗಬಾರದ್ದು ಆಗುವುದೋ ದೇವರೇ ಬಲ್ಲ. ನಾನು ಇಲ್ಲಿ ಇರಬಾರದು. ”

“ ನಿಮಗೆ ಸರಿಯಾಗಿ ಮಾತನಾಡುವ ತ್ರಾಣವೂ ಇಲ್ಲ. ಸುಮ್ಮನೆ ಏನೇನೋ ಮನಸ್ಸಿಗೆ ಹಚ್ಚಿಕೊಂಡು ಸಂಕಟಪಡಬೇಡಿ. ಹೋದ ಶಕ್ತಿ ತಿರುಗಿ ಬರಲಿ. ಆಮೇಲೆ ಇಲ್ಲಿಂದ ಹೋಗುವುದೋ ಬಿಡುವುದೋ ನಿರ್ಧಾರಮಾಡ ಬಹುದು. ನೀವು ಅಳುವುದು, ಕೊರಗುವುದು ಕಂಡರೆ ನನ್ನ ಮನಸ್ಸಿಗೆ ಬಹಳ ಸಂಕಟವಾಗುತ್ತದೆ.”

“ ನಾನು ಬಹಳ ಅನುಭವಿಸಿದ್ದೇನೆ, ಈ ಜಗತ್ತು ಎಂಥದು ಅಂತ ನನಗೆ ಸರಿಯಾಗಿ ತಿಳಿದಿದೆ; ನನ್ನಂಥ ನಿರ್ಗತಿಕಳಾದ ಹೆಂಗಸನ್ನು ಮನೆಯಲ್ಲಿಟ್ಟು ಕೊಳ್ಳುವುದು ಬೆಂಕಿಯನ್ನು ಮಡಿಲಲ್ಲಿ ಇಟ್ಟುಕೊಂಡ ಹಾಗೆ: ನಿಮ್ಮಂಥ ಸಜ್ಜ ನರಿಗೆ ನನ್ನಿಂದ ಅಪವಾದ ಬರುತ್ತದೆ. ಅದು ಕೂಡದು, ಕೂಡದು ” ಎಂದಳು. ಅವಳ ಮಾತಿನಲ್ಲಿ ಉದ್ವೇಗವಿತ್ತು; ಆಗಬಾರದ್ದು ಏನೋ ಆಗುತ್ತಿದೆ, ಅದನ್ನು ತಡೆಯಬೇಕು ಎಂಬ ಕಾತರವಿತ್ತು.

ಆಮೇಲೆ ಕೊಂಚ ಹೊತ್ತು ಬಿಟ್ಟು ಅವಳೇ ಮತ್ತೆ ಹೇಳಿದಳು: “ ನನಗೆ ಈಗ ಬೇಕಾದಷ್ಟು ತ್ರಾಣ ಬಂದಿದೆ. ನಾನು ಹೊರಟುಹೋಗುತ್ತೇನೆ. ನೋಡಿ, ನನಗೇನು ಆಗಿದೆ ? ” ಎಂದು ಕುಳಿತುಕೊಳ್ಳಲು ಪ್ರಯತ್ನಪಟ್ಟಳು. ಆದರೆ ಆಗಲಿಲ್ಲ. ಹಾಗೇ ಕುಸಿದು ಮತ್ತೆ ಮಲಗಿದಳು.

ಇದನ್ನು ಕಂಡು ಶೀನಪ್ಪ, “ ಅಮ್ಮಾ, ವ್ಯರ್ಥವಾಗಿ ಆಯಾಸಮಾಡಿ ಕೊಳ್ಳಬೇಡಿ. ಈಗ ಯಾವ ಚಿಂತೆಯೂ ಬೇಡ. ನಿಮಗೆ ಸರಿಯಾಗಿ ಹುಶಾ ರಾಗಲಿ, ಮೊದಲು. ಈಗ ಆ ವಿಷಯವನ್ನು ಬಿಟ್ಟುಬಿಡಿ. ” ಎಂದು ಅವಳ ಮುಖದ ಕಡೆಗೆ ನೋಡುತ್ತ “ ಅಲ್ಲದೆ, ನನಗೆ ಬರುವ ಅಪವಾದವನ್ನು ಕುರಿತು ಚಿಂತಿಸಬೇಡಿ. “ ಮನುಷ್ಯಮಾತ್ರನಾದವನು ಮಾಡಬೇಕಾದ ಕೆಲಸ ವನ್ನು ಮಾಡಿದ್ದರಿಂದ ನನಗೆ ಅಪವಾದ ಬಂದರೆ ಬರಲಿ ಬಿಡಿ; ತಪ್ಪುಮಾಡಿದರೆ ಮಾತ್ರ ನಾವು ಅಂಜಬೇಕು. ಅಂಥ ಯಾವ ತಪ್ಪನ್ನೂ ನಾನು ಮಾಡಿಲ್ಲ. ದೇವರು ಮೆಚ್ಚುವ ಕೆಲಸಮಾಡುತ್ತಿರುವಾಗ ಜನ ಮೆಚ್ಚುತ್ತಾರೋ ಇಲ್ಲವೋ ಎಂತ ಯೋಚಿಸುವುದು ಸರಿಯಲ್ಲ. ನಾನಂತೂ ಹಾಗೆ ಯೋಚಿಸುವುದಿಲ್ಲ. ನೀವು ಸುಮ್ಮನೆ ಮನಸ್ಸು ಕೆಡಿಸಿಕೊಳ್ಳಬೇಡಿ.” ಎಂದ.

“ ಇಲ್ಲ, ಇಲ್ಲ; ಜನರ ವಿರೋಧ ಎಂಥದು ಅಂತ ನಿಮಗೆ ಇನ್ನೂ ತಿಳಿದಿಲ್ಲ.”

“ ಅದು ಹೇಗಾದರೂ ಇರಲಿ ; ನೀವು ಈಗ ಇಲ್ಲಿಂದ ಹೊರಟು ಹೋಗುತ್ತೇನೆ ಎಂಬ ಮಾತನ್ನು ಮತ್ತೆ ಆಡಬಾರದು. ತಿಳಿಯಿತೆ ? ” ಎಂದ. ಶೀನಪ್ಪನ ಧ್ವನಿಯಲ್ಲಿ ದೃಢತೆಯಿತ್ತು. ನಿರ್ಧಾರದ ಬಿಗಿಯಿತ್ತು.

ಅವಳು ಕೊಂಚ ಹೊತ್ತು ಹಾಗೇ ಕಣ್ಣು ಮುಚ್ಚಿ ಮಲಗಿದ್ದಳು. ಮತ್ತೆ ಅವಳು ಕಣ್ಣು ತೆರೆದಾಗ ಶೀನಪ್ಪ

“ ಇಷ್ಟೆಲ್ಲಾ ಮಾತು ಆಯಿತು. ಆದರೆ ನಿಮ್ಮ ಹೆಸರೇನು, ನೀವು ಯಾರು ಎಲ್ಲಿಂದ ಬಂದಿರಿ ಎನ್ನುವುದೇ ಇನ್ನೂ ತಿಳಿದಿಲ್ಲ ” ಎಂದ.

“ನನ್ನ ಹೆಸರನ್ನೇನೊ ಬೇಗ ಹೇಳಿಬಿಡಬಹುದು. ಆದರೆ ನಾನು ಯಾರು ಏನು ಎಲ್ಲಿಂದ ಬಂದೆ, ಏಕೆ ಬಂದೆ — ಅದೆಲ್ಲ ದೊಡ್ಡ ಕಥೆ — ; ಅದು ಹಾಗಿರಲಿ , ನಿಮ್ಮ ಹೆಸರೇನು ? ನಿಮ್ಮ ಮುಖ ನೋಡಿದ ಕೂಡಲೇ ನನಗೆ ನೀವು ಚಿರಕಾಲದ ಬಂಧುಗಳ ಹಾಗೆ ಕಂಡಿತು. ಹೆಸರು ತಿಳಿಯುವ ಕುತೂಹಲ ಹುಟ್ಟಲೇ ಇಲ್ಲ. ”

“ ನನ್ನ ಹೆಸರು ಶ್ರೀನಿವಾಸ ಜೋಯಿಸ : ಶೀನಪ್ಪ ಎಂದು ಕರೆಯುತ್ತಾರೆ. ”

“ ಶೀನಪ್ಪ — ಶ್ರೀನಿವಾಸ ಜೋಯಿಸ ” ಆ ಮಾತನ್ನೇ ಒಂದೆರಡು ಸಲ ಅವಳು ಮೆಲುಕು ಹಾಕುವಂತೆ ತೋರಿತು. ಅನಂತರ ಒಂದು ಕ್ಷಣ ಬಿಟ್ಟು,

“ ಜೋಯಿಸರೇ, ನಾನು ಪದ್ಮಾವತಿ—ಪದ್ಮಾ” ಎಂದಳು. “ ನಮ್ಮ ತಂದೆಯೇನೋ ಒಳ್ಳೇ ಹೆಸರನ್ನೇ ಇಟ್ಟರು. ಆದರೆ ಅದು ಕೆಡುವುದಕ್ಕೆ ಎಷ್ಟು ಬೇಕೋ ಅಷ್ಟೂ ಆಯಿತು.” ಈ ಮಾತು ಹೇಳುವಾಗ ಅವಳ ಕಂಠ ಬಿಗಿದಿತ್ತು; ಕಣ್ಣು ಹನಿಗೂಡುತ್ತಿತ್ತು.

“ ಪದ್ಮಾವತಿಯಮ್ಮ” ಎಂದು ಶೀನಪ್ಪ ಏನೋ ಹೇಳಲು ಶುರು ಮಾಡಿದ ಕೂಡಲೇ ಅವಳು ತಡೆದು,

“ ಪದ್ಮಾ ಅನ್ನಿ. ಅಷ್ಟೇ ಸಾಕು, ಸಾಕಲ್ಲವೆ ? ನನ್ನನ್ನು ಎಲ್ಲರೂ ಕರೆಯುವುದು ಹಾಗೆಯೇ ” ಎಂದಳು.

“ ಹೂ, ಹಾಗೇ ಆಗಲಿ ; ಪದ್ಮಾ, ನೀವು ಸುಮ್ಮನೆ ಚಿಂತೆ ಮಾಡಬೇಡಿ. ಕಾಹಿಲೆ ವಾಸಿಯಾಗಲಿ ; ಆಮೇಲೆ ಮುಂದಿನ ಯೋಚನೆ ಮಾಡುವಾ. ಅಲ್ಲಿಯ

ತನಕ ಇದು ನಿಮ್ಮ ಮನೆಯೇ ಎಂದು ತಿಳಿಯಿರಿ."

ಪದ್ಮಾ ಈ ಮಾತಿಗೆ ಯಾವ ಉತ್ತರವನ್ನೂ ಕೊಡಲಿಲ್ಲ.

ಹೊತ್ತು ನೆತ್ತಿಗೇರಿತ್ತು. ಶೀನಪ್ಪನಿಗೆ ಇನ್ನೂ ಸ್ನಾನವಿಲ್ಲ; ಸಂಧ್ಯಾವಂದನೆಯಿಲ್ಲ; ಊರ ದೇವರು ಗದಾಂಬೇಶ್ವರನ ಪೂಜೆ ಆಗಬೇಕು. ಇನ್ನು ಎದ್ದು ಹೋಗಿ ಆ ಕೆಲಸವನ್ನೆಲ್ಲ ಮುಗಿಸಿಬರಬೇಕೆಂದು ಶೀನಪ್ಪನು ಯೋಚಿಸುತ್ತಿರುವಾಗ ಪದ್ಮಾ

"ನನ್ನ ವಿಚಾರವಾಗಿ ನಾನು ನಿಮಗೆ ಏನೂ ಹೇಳಲಿಲ್ಲ. ಈ ಪಾಪಿ ಜನ್ಮದ ಕಥೆ ದೊಡ್ಡದು. ಅದನ್ನು ನೆನಸಿಕೊಂಡಾಗಲೆಲ್ಲ ನನಗೆ ಯಾಕೆ ಸಾವು ಬರಬಾರದು ಎನ್ನಿಸುತ್ತದೆ. ಆದರೆ ಸಾವು ಬರುವುದಿಲ್ಲ. ಬಾಳು ತಪ್ಪುವುದಿಲ್ಲ. ಏನು ಮಾಡಲಿ?"

"ತಾಯಿ, ನೀವು ಯಾರು ಅಂತ ಈಗಲೇ ನನಗೆ ಗೊತ್ತಾಗಿದೆಯಲ್ಲ. ನಿಮ್ಮ ಜೀವನದ ವಿವರಗಳನ್ನು ತಿಳಿಯಬೇಕೆಂಬ ಕುತೂಹಲವೇನೋ ನನಗಿದೆ. ಆದರೆ ಅದರಿಂದ ನಿಮಗೆ ದುಃಖವಾಗುವುದಾದರೆ ಬೇಡ."

"ಇಲ್ಲ. ನನ್ನ ಕಥೆಯನ್ನು ನೀವು ಕೇಳಲೇ ಬೇಕು. ನನ್ನನ್ನು ಕಾಪಾಡಿದವರು ನೀವು ನನಗೆ ತಂದೆಗೆ ಸಮ. ನಿಮ್ಮಲ್ಲಿ ನನ್ನ ದುಃಖ ತೋಡಿಕೊಳ್ಳದೇ ಇನ್ನು ಯಾರಲ್ಲಿ ತೋಡಿಕೊಳ್ಳಲಿ? ನಿಮಗೆ ಪುರಸೊತ್ತಿದ್ದರೆ ಈಗಲೇ ಹೇಳಿಬಿಡುತ್ತೇನೆ. ಹೇಳಲೋ?"

"ಬೇಡ. ಈಗ ಬೇಡ. ಆಗಲೇ ನೀವು ಬಹಳ ಮಾತಾಡಿದ್ದೀರಿ. ನಾನು ಯೋಚನೆಯಿಲ್ಲದೇ ಮಾತು ಬೆಳಸಿದೆ. ನಿಮಗೆ ಬಹಳ ಆಯಾಸವಾಗಿರಬೇಕು, ಕೊಂಚ ಹಾಯಾಗಿ ಮಲಗಿಕೊಳ್ಳಿ. ನಾನೂ ಸ್ನಾನ ಪೂಜೆ ಮುಗಿಸಿಕೊಂಡು ಬರುತ್ತೇನೆ" ಎಂದ ಶೀನಪ್ಪ.

ಇಷ್ಟರಲ್ಲಿ ನಾಗಿ ಬಂದಳು.

ಶೀನಪ್ಪ ಅವಳನ್ನು ಕಂಡು "ನಾಗಿ, ಒಳ್ಳೆಯ ಸಮಯಕ್ಕೆ ಬಂದೆ. ಇಲ್ಲೇ ಕೂತಿರು. ನಾನು ಹೋಗಿ ದೇವರ ಪೂಜೆ ಮಾಡಿ ಬರುತ್ತೇನೆ" ಎಂದು ಹೆಗಲಿನ ಮೇಲೆ ಪಂಚೆ ಹಾಕಿಕೊಂಡು ದೇವಾಲಯದ ಕಡೆ ಹೊರಟ.

"ಆಗಲಿ, ಒಡೇರೆ" ಎಂದು ನಾಗಿ ಪದ್ಮಾವತಿಯ ಬಳಿ ಬಂದು ಕುಳಿತಳು.

## ೬

ಆ ದಿನವೆಲ್ಲ ಮಳೆ ಹೊಳವಾಗಿತ್ತು. ಮಳೆ ನಿಂತರೆ ಸಾಕು; ಶಖೆ, ಧಗೆ. ಮೈಯೆಲ್ಲ ಕಾರಂಜಿಯಾಗಿ ಬೆವರು ಚಿಮ್ಮುತ್ತದೆ. ಮಳೆ ನಿಲ್ಲುವುದನ್ನೇ ಕಾಯುತ್ತಿದ್ದ ಊರವರಿಗೆಲ್ಲ ಕೈ ತುಂಬ ಕೆಲಸ. ಒಂದು ಕ್ಷಣವೂ ಪುರಸೊತ್ತಿಲ್ಲ. ಬೆಳಗಿನಿಂದ ಸಂಜೆಯ ವರೆಗೆ ದುಡಿತ. ದುಡಿತ ಒಂದೆರಡು ಬಗೆಯದಲ್ಲ, ಹಲವು ಪರಿಯದು. ಮನೆ ಹೊದೆಸುವುದು; ಉಳುವುದು; ಗದ್ದೆಗೆ ಗೊಬ್ಬರ ಹೊರುವುದು; ಗೊಬ್ಬರ ಚೆಲ್ಲುವುದು; ಅಗೆ ಕೀಳುವುದು, ನೆಟ್ಟಿ; ಗದ್ದೆಯಂಚು ಸರಿಮಾಡುವುದು; ಮನೆಯೆಲ್ಲ ಬರಿದು, ಊರ ಜನವೆಲ್ಲ ಗದ್ದೆಯಲ್ಲಿ.

ಸಂಜೆಯಾಯಿತು; ಆದರೂ ಶಖೆ ತಗ್ಗಲಿಲ್ಲ. ಗಾಳಿ ಸ್ತಬ್ಧವಾಗಿತ್ತು. ಆಕಾಶದಲ್ಲಿ ಮೋಡಗಳೇನೋ ದಟ್ಟವಾಗಿಯೇ ಕವಿದಿದ್ದುವು. ಮಳೆರಾಯನ ಇನ್ನೊಂದು ಧಾಳಿಗೆ ಇದು ಪೂರ್ವ ಸಿದ್ಧತೆ.

ಶಖೆ ವಿಪರೀತವಾಯಿತು. ಮನೆಯೊಳಗಿದ್ದರೂ ತಾಪ; ಮೈಯನ್ನು ಬೆವರಿನೊಳಗೆ ನೆನಸಿ ಇಟ್ಟ ಹಾಗೆ ಉಟ್ಟ ಬಟ್ಟೆ ಮೈಗಂಟಿಕೊಳ್ಳುತ್ತದೆ. ವಿವರಿಸಬಾರದ ಒಂದು ಬಗೆಯ ಅಶಾಂತಿ, ಅಸಮಾಧಾನ.

ನೋಡ ನೋಡುತ್ತಿದ್ದಂತೆಯೇ ಸಂಜೆ ಕಳೆದು ಕತ್ತಲಾಯಿತು.

ಪೂಜೆ ಮುಗಿಸಿ ಬಂದ ಶೀನಪ್ಪ ಒಂದಷ್ಟು ಊಟ ಮಾಡಿ, ಪದ್ಮಾಗೆ ಔಷಧಿ, ಗಂಜಿ ಕೊಟ್ಟು ಗದ್ದೆಯ ಕಡೆಗೆ ಹೋಗಬೇಕಾಯಿತು. ಸಂಜೆ ವರೆಗೂ ಅಲ್ಲೇ ಕೆಲಸವಾಯಿತು. ಹೊತ್ತು ಮುಳುಗುತ್ತಲೇ ಬಂದು ಮತ್ತೊಮ್ಮೆ ಸ್ನಾನಮಾಡಿ, ಸಂಧ್ಯಾವಂದನೆ ಮುಗಿಸಿ, ದೇವರ ಕೋಣೆಗೆ ಹೋಗಿ ದೀಪ ಹಚ್ಚಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿ ಲಾಟೀನು ಹಚ್ಚಿ ಹೊರಕ್ಕೆ ತಂದ.

ಪದ್ಮಾ ಹಾಸಿಗೆಯ ಮೇಲೆ ಗೋಡೆಗೊರಗಿ ಕುಳಿತಿದ್ದಳು. ಕೋಣೆಯಲ್ಲೆಲ್ಲ ಕತ್ತಲು.

“ಈಗ ಹೇಗಿದ್ದೀರಿ?” ಎಂದು ಶೀನಪ್ಪ ಕೇಳಿದ.

ಅವಳು ಆ ಮಾತಿಗೆ ಉತ್ತರ ಕೊಡದೆ, “ನೋಡಿ, ಶೀನಪ್ಪನವರೇ,

ನೀವು ನನಗಿಂತ ವಯಸ್ಸಿನಲ್ಲಿ ದೊಡ್ಡವರು. ನಾನು ಎಲ್ಲಾ ರೀತಿಯಿಂದಲೂ ನಿಮಗೆ ಚಿಕ್ಕವಳು. ನನ್ನನ್ನು 'ನೀವು' ಅಂತ ನೀವು ಕರೆಯಬಾರದು. 'ನೀನು' ಅಂತಲೇ ಹೇಳಿ. 'ನೀವು' ಅಂದರೆ ನಾನು ಮಾತಾಡುವುದೇ ಇಲ್ಲ" ಎಂದಳು, ನಸುನಗುತ್ತ.

"ಸರಿ, ಪದ್ಮಾ: ಹಾಗೇ ಆಗಲಿ. ಈಗ ಹೇಗಿದ್ದೀಯೆ?" ಎಂದ.

"ನೋಡಿ, ಈಗ ಎದ್ದು ಕುಳಿತಿದ್ದೇನೆ. ನೀವು ಮನೆಯಲ್ಲಿ ಇಲ್ಲದೇ ಇದ್ದಾಗ ತೋಟದಲ್ಲೆಲ್ಲ ಸುತ್ತಾಡಿ ಬಂದೆ. ಜ್ವರ ಇಲ್ಲ; ಏನೂ ಇಲ್ಲ. ಎಲ್ಲ ಗುಣ."

"ನೀವು–ಅಲ್ಲ, ನೀನು ತೋಟದಲ್ಲಿ ಏಕೆ ತಿರುಗಾಡಿದ್ದು? ಜ್ವರ ಬಂದವರು ಗಾಳಿಯಲ್ಲಿ ಹಾಗೆಲ್ಲ ತಿರುಗಾಡುವುದು ಸರಿಯಲ್ಲ. ಈಗಿನ ಔಷಧ ಕುಡಿದಾಯಿತೇ?"

"ಓಹೋ, ಔಷಧ ಕುಡಿದೆ. ಇನ್ನು ಗಂಜಿ ಕುಡಿಯುತ್ತೇನೆ. ನೀವು ಮಾಡಿ ಹಾಕುವುದು, ನಾನು ತಿನ್ನುವುದು; ಅಲ್ಲವಾ?" ಎಂದು ನಸುನಗುತ್ತ "ಹೀಗೆ ಎಷ್ಟು ದಿನ ಇರುವುದು? ಈಗ ನನಗೆ ನಡೆಯುವುದಕ್ಕೆ ಆಗುತ್ತದೆ. ನಾಳೆ ಬೆಳಗ್ಗೇ ಹೊರಟುಬಿಡುತ್ತೇನೆ. ಅಪ್ಪಣೆ ಕೊಡಬೇಕು" ಎಂದಳು; ಕೊನೆಯ ಮಾತು ಬಹು ಗಂಭೀರವಾಗಿ ಬಂತು.

"ಮತ್ತೆ ಮತ್ತೆ ಅದೇ ಮಾತನ್ನು ಹೇಳುತ್ತೀ, ಪದ್ಮಾ; ನಾನು ಅದಕ್ಕೆ ಏನು ಉತ್ತರ ಕೊಡಬೇಕು?" ಎಂದು ಶೀನಪ್ಪ ಅತ್ಯಂತ ವ್ಯಸನದಿಂದ ನುಡಿದ.

ಅವಳು ಏನೋ ಯೋಚಿಸುತ್ತಿರುವಂತೆ ಕಂಡಿತು. ಶೀನಪ್ಪನೂ ಕೊಂಚ ಹೊತ್ತು ಸುಮ್ಮನಿದ್ದು,

"ಅಪ್ಪಣೆ ಕೊಡಬೇಕು ಅಂದೆ. ನಾನು ಅಪ್ಪಣೆ ಕೊಡದೆ ನೀನು ಹೋಗುವುದಿಲ್ಲವೊ?"

"ಇಲ್ಲ."

"ಏಕೆ? ಈಗಲೇ ಹೊರಟುಬಿಡಬಹುದಲ್ಲ?"

"ನನ್ನಾಣೆ, ನೀವು ಸಿಟ್ಟುಮಾಡಬಾರದು. ನಿಮಗೆ ದುಃಖವುಂಟು ಮಾಡಿ ನಾನು ಹೋಗಲಾರೆ. ನೀವು ಸಂತೋಷದಿಂದ ಅಪ್ಪಣೆ ಕೊಡಬೇಕು.

ಹೋಗಿ ಬಾ ಎಂದು ಹರಸಬೇಕು—ಆಮೇಲೆ ನಾನು ಹೊರಡುವುದು.”

“ಈ ಮಾತು ನಿಜವೇ?”

“ನಿಜ.”

“ಹಾಗಾದರೆ, ನಿನಗೆ ಸಂಪೂರ್ಣ ವಾಸಿಯಾಗಿ, ಹೆರಿಗೆ ಆಗಿ ಬಾಣಂತನ ಮುಗಿದ ಮೇಲೆಯೇ ನನ್ನ ಅಪ್ಪಣೆ ಸಿಗುವುದು.”

“ಎಂದರೆ ತವರುಮನೆಗೆ ಬಂದ ಮಗಳ ಹಾಗೆ ನಾನು ಇಲ್ಲಿ ಇರಬೇಕು. ನೀವು ನನ್ನ ಸೇವೆ ಮಾಡಬೇಕು—ಅಲ್ಲವೆ? ನಿಮಗೆ ಈ ಎಲ್ಲ ತಾಪತ್ರಯ ಬೇಡ, ನಿಮ್ಮ ದಮ್ಮಯ್ಯ.”

“ತಾಪತ್ರಯ ಏನೂ ಇಲ್ಲ ಪದ್ಮಾ; ನಮ್ಮ ನಾಗಿ ಇದ್ದಾಳೆ; ಒಳಗಿನ ಕೆಲಸಕ್ಕೆ ಯಾರನ್ನಾದರೂ ನೇಮಿಸಿಕೊಳ್ಳುತ್ತೇನೆ. ಮತ್ತೇನು ತೊಂದರೆ?”

“ಸ್ವಾಮಿ, ನಿಮಗೆ ಏನೂ ತಿಳಿಯುವುದಿಲ್ಲ. ನಾಲ್ಕು ಜನ ಏನೆಂದಾರು ಅಂತ ಯೋಚನೆಯೇ ನಿಮಗೆ ಇಲ್ಲವಲ್ಲ!”

“ಎಷ್ಟೋ ವಿಷಯ ತಿಳಿಯುವುದಕ್ಕಿಂತ ತಿಳಿಯದಿರುವುದೇ ಮೇಲು ಪದ್ಮಾ. ನಾಲ್ಕು ಜನದ ಮಾತು ನಾಲ್ಕು ತರ. ಹೃದಯದ ಮಾತು ಮಾತ್ರ ಯಾವಾಗಲೂ ಒಂದೇ” ಎಂದ ಶೀನಪ್ಪ. “ನಿನಗೆ ಇಲ್ಲಿಂದ ಓಡಿ ಹೋಗಲು ಅಷ್ಟು ಆತುರವೇಕೆ? ಎಂದು ಕೇಳಬಹುದಾಗಿತ್ತು. ಆದರೆ ನಿನ್ನ ವಿಚಾರ ನನಗೆ ಏನೂ ತಿಳಿಯದು. ನಾನು ಇಷ್ಟು ಮಾತ್ರ ಹೇಳಬಹುದು: ನಿನ್ನ ಇಷ್ಟಕ್ಕೆ ವಿರುದ್ಧವಾಗಿ ನೀನು ಇಲ್ಲಿ ನಿಲ್ಲಬೇಕೆಂದು ನನ್ನ ಇಚ್ಛೆಯಲ್ಲ. ಹೊರಡುವಷ್ಟು ತ್ರಾಣ ಬಂದ ಮೇಲೆ ನೀನು ನಿಮ್ಮ ಮನೆಗೆ ಹೋಗಬಹುದು. ಅಥವಾ ನಿಮ್ಮ ಮನೆಯವರಿಗೆ ಸಮಾಚಾರ ತಿಳಿಸಬಹುದು.”

ಮನೆಯವರು ಎಂಬ ಮಾತು ಕೇಳಿದಾಗ ಅವಳಿಗೆ ಕರುಳನ್ನು ಕಿವುಚಿದಂತಾಯಿತು. ಯಾವಾವುದೋ ನೆನಪುಗಳು ಬಂದು ಬೆಂಕಿಯ ಬಾಣಗಳಂತೆ ಹೃದಯವನ್ನು ಇರಿದುವು.

“ನಮ್ಮ ಮನೆಯವರು ಸರಿಯಾಗಿದ್ದಿದ್ದರೆ ನನಗೆ ಇಂಥಾ ಗತಿ ಏಕೆ ಬರುತ್ತಿತ್ತು?” ಎಂದು ಒಮ್ಮೆ ಬಿಕ್ಕಿದಳು.

“ಎಂದರೆ ನಿಮ್ಮ ಮನೆಯವರು, ನಿಮ್ಮ ಯಜಮಾನರು......” ಎಂದು ಶೀನಪ್ಪ ಮಾತನ್ನು ಅಲ್ಲಿಗೇ ನಿಲ್ಲಿಸಿದ.

" ಅವರು ಇದ್ದಾರೋ, ಇಲ್ಲವೋ—ಅದೇ ನನಗೆ ಸರಿಯಾಗಿ ತಿಳಿಯದು. ಅವರು ಇದ್ದಾರೆ ಎಂದುಕೊಂಡೇ ಅವರ ಕಡೆಗೆ ಹೊರಟೆ. ಮಧ್ಯೆ ಏನೇನೋ ನಡೆಯಿತು. ಈಗ ಮನಸ್ಸಿನಲ್ಲಿ ಸಂದೇಹ ಹುಟ್ಟಿದೆ. ಏನಾಗಿದೆಯೋ ಅಂತ—"

" ಎಂದರೆ ? "

" ಅದಕ್ಕೇ ನನ್ನ ಕಥೆ ಬಹಳ ದೊಡ್ಡದು ಅಂತ ನಿಮಗೆ ಹೇಳಿದ್ದು. ಅದು ಬಹಳ ಕಗ್ಗಂಟಾದ ಕಥೆ. ಎಲ್ಲವನ್ನೂ ಹೇಳದೆ ಏನೂ ತಿಳಿಯದು. ಅದನ್ನು ಹೇಳಲಾ ? ನಿಮಗೆ ಪುರಸೊತ್ತಿದ್ದರೆ—"

" ಇನ್ನೇನು ಕೆಲಸ ? ಕೆಲಸವೆಲ್ಲ ಮುಗಿದ ಹಾಗೆ. ಒಲೆ ಹೊತ್ತಿಸಿ ನೀರಿಟ್ಟು ಬರುತ್ತೇನೆ. ತೊಂದರೆಯಾಗದಿದ್ದರೆ ಹೇಳು ಕೇಳುತ್ತೇನೆ."

" ತೊಂದರೆ ಏನೂ ಇಲ್ಲ. ಎಲ್ಲವನ್ನೂ ನಿಮಗೆ ಹೇಳುವ ತನಕ ನನಗೆ ಸಮಾಧಾನವಿಲ್ಲ "

" ಆಗಲಿ, ಬಂದುಬಿಟ್ಟೆ."

ಶೀನಪ್ಪ ಅಡಿಗೆ ಮನೆಗೆ ಹೋಗಿ ಅನ್ನಕ್ಕೆ ಎಸರಿಟ್ಟು ಬಂದ. ಅವನು ಬಂದ ಕೂಡಲೇ ಪದ್ಮಾ ಎದ್ದು ಹೋಗಿ ಅವನ ಕಾಲು ಮುಟ್ಟಿ ನಮಸ್ಕಾರ ಮಾಡಿದಳು.

" ಇದು ಯಾಕೆ ? ಈ ನಮಸ್ಕಾರ ? " ಎಂದು ಕೇಳಿದ.

" ಅದು ಹಾಗೇ." ಎಂದು ಹೋಗಿ ಗೋಡೆಗೊರಗಿ ಕುಳಿತಳು.

ಶೀನಪ್ಪನು ಸ್ವಲ್ಪ ದೂರದಲ್ಲಿ ಕುಳಿತ.

ಅವಳು ತನ್ನ ಕಥೆಯನ್ನು ಹೇಳಲು ಶುರುಮಾಡಿದಳು.

" ನಾನು ನಿಮಗೆ ಈಗ ಹೇಳುತ್ತಿರುವುದು ಕಥೆಯಲ್ಲ, ನಡೆದ ಸಂಗತಿ. ನೀವು ಸಜ್ಜನರು. ನಿಮ್ಮ ಮುಂದೆ ನನ್ನ ಅಂತರಂಗವನ್ನು ತೆರೆದಿಡಲು ಯತ್ನಿಸುತ್ತೇನೆ. ಮುಚ್ಚುಮರೆಯಿಲ್ಲದೆ ಎಲ್ಲವನ್ನೂ ಹೇಳಿಬಿಡಬೇಕೆಂದು ಮನಸ್ಸು. ಆದರೆ ಎಷ್ಟೋ ಸಲ ನಮ್ಮ ಮನಸ್ಸೇ ನಮಗೆ ತಿಳಿಯುವುದಿಲ್ಲ. ನಾವು ಯಾಕೆ ಹೀಗೆ ಮಾಡಿದೆವು, ಹಾಗೆ ಮಾಡಲಿಲ್ಲ ಎಂಬುದಕ್ಕೆ ಎಷ್ಟೋ ಸಲ ಕಾರಣವೇ ಸಿಗುವುದಿಲ್ಲ. ಕಷ್ಟಪಟ್ಟು ಒಂದು ಕಾರಣವನ್ನು ಕಂಡುಹಿಡಿದರೂ ಅದು ಎಷ್ಟರ ಮಟ್ಟಿಗೆ ನಿಜ ಅಂತ ಹೇಳುವುದು ಕಷ್ಟವಾಗುತ್ತದೆ. ಅಷ್ಟು

ಬಿಟ್ಟರೆ ಉಳಿದದ್ದೆಲ್ಲ ಸತ್ಯ; ಅದಕ್ಕೆ ಉಪ್ಪು ಹುಳಿ ಖಾರ ಸ್ವಲ್ಪವೂ ಹಚ್ಚಿಲ್ಲ ಅಂತ ನೀವು ತಿಳಿಯಬೇಕು.

"ಸತ್ಯವಲ್ಲದೆ ಬೇರೆ ಏನು ಹೇಳುವುದೂ ನಿನಗೆ ಸಾಧ್ಯವಿಲ್ಲ ಎಂತ ನನಗೆ ತೋರುತ್ತದೆ."

"ಸರಿ ಆದರೆ ಯಾರನ್ನೂ ಅಷ್ಟು ಬೇಗ ನಂಬಬಾರದು, ಶೀನಪ್ಪನವರೇ. ಈ ಜಗತ್ತು ಬಹಳ ವಿಚಿತ್ರವಾದದ್ದು." ಎಂದು ಒಮ್ಮೆ ನಿಟ್ಟುಸುರು ಬಿಟ್ಟು ತನ್ನ ಮಾತು ಮುಂದುವರಿಸಿದಳು:—

"ನಾನು ಹುಟ್ಟಿದ್ದು ಹಾಲಾಡಿಯ ಹತ್ತಿರದ ಹಲಸೂರಿನಲ್ಲಿ. ನಮ್ಮೂರಿಗೂ ಹಾಲಾಡಿಗೂ ಎರಡೇ ಮೈಲಿ ದೂರ. ನಮ್ಮ ಹಳ್ಳಿ ಗುಡ್ಡದ ಬುಡದಲ್ಲಿದೆ. ಹಳ್ಳಿಯ ಮುಂದೇ ನಮ್ಮ ಹಾಲಾಡಿ ಹೊಳೆ ಹರಿಯುತ್ತದೆ. ಊರು ಸಣ್ಣದು; ಎಂಟು ಹತ್ತು ಮನೆಗಳಿಗಿಂತ ಜಾಸ್ತಿ ಇಲ್ಲ."

"ನಮ್ಮ ತಂದೆ ವೆಂಕಟರಮಣ ಉಡುಪರು ತಕ್ಕ ಮಟ್ಟಿಗೆ ಶ್ರೀಮಂತರೇ. ಮನೆಯ ಸುತ್ತಲೂ ಹತ್ತು ಮುಡಿ ಗದ್ದೆ; ಒಂದೆರಡು ತೆಂಗಿನ ತೋಟ. ನಮ್ಮ ತಾಯಿ ಸರಸ್ವತಮ್ಮ. ಆ ಇಬ್ಬರ ಮುದ್ದಿನ ಮಗಳು ನಾನು. ನನ್ನ ಬೆನ್ನ ಹಿಂದೆ ಹುಟ್ಟಿದವ ನನ್ನ ತಮ್ಮ ಚಂದ್ರಶೇಖರ."

"ನನ್ನ ತಂದೆ ತಾಯಿಗಳು ಈಗ ಇಲ್ಲ. ನಮ್ಮ ತಂದೆ ತೀರಿ ಹೋಗಿ ಆಗಲೇ ಎಂಟು ಹತ್ತು ವರ್ಷ. ನಮ್ಮ ತಾಯಿ ಮೊನ್ನೆ ಮೊನ್ನೆ ಐದಾರು ತಿಂಗಳ ಕೆಳಗೆ ತೀರಿಕೊಂಡಳು. ತಂದೆತಾಯಿಗಳ ಲಾಲನೆ ಪಾಲನೆಯಲ್ಲಿ ಕಳೆದ ಬಾಲ್ಯವನ್ನು ನೆನಸಿಕೊಂಡರೆ ಅಳು ಬರುತ್ತದೆ. ಸಾವಿರಾರು ಸವಿಸವಿ ನೆನಪುಗಳು ಹಕ್ಕಿಗಳಂತೆ ಬಂದು ಮನಸ್ಸಿನಲ್ಲಿ ಕುಳಿತು ಹಾಡುತ್ತವೆ."

"ಬಾಲ್ಯದಲ್ಲಿ ಕಂಡ ಸುಖ ಮತ್ತೆ ಜೀವನದಲ್ಲಿ ಕಾಣುವುದಿಲ್ಲ ಅಂತ ತೋರುತ್ತದೆ."

"ನಿನ್ನ ಮಾತು ನಿಜ ಪದ್ಮಾ. ವಯಸ್ಸು ಬಂದ ಕೂಡಲೇ ಜೀವನ ಬಹಳ ತೊಡಕಾಗಿ ಬಿಡುತ್ತದೆ. ಬಾಲ್ಯದ ಸರಳ ಸೌಂದರ್ಯ ಮಾಯವಾಗಿ ಆಮೇಲೆ ಅದರ ನೆನಪು ಮಾತ್ರ ಮನಸ್ಸಿನಲ್ಲಿ ಉಳಿಯುತ್ತದೆ" ಎಂದು ಶೀನಪ್ಪ ತನ್ನ ಅನುಭವದ ಸಹಿ ಹಾಕಿದ ಅವಳ ಮಾತಿಗೆ.

ಅವಳು ಕೊಂಚ ಸುಮ್ಮನಿದ್ದು ಮತ್ತೆ ತನ್ನ ಮಾತು ಮುಂದುವರಿಸಿದಳು.

“ಹೊಳೆಯ ದಡದಲ್ಲಿ, ಮರಗಳ ನೆರಳಿನಲ್ಲಿ, ಹಸು ಎಮ್ಮೆ ಕೋಣ ಗಿಳಿ ಗುಬ್ಬಿ ಕಾಗೆ ಕೋಳಿಗಳ ಸಹವಾಸದಲ್ಲಿ, ಮಳೆಗಾಲ ಚಳಿಗಾಲ ಸೆಖೆಗಾಲಗಳ ಚಕ್ರದ ಮೇಲೆ ಕುಳಿತು ಹಾಗೇ ಬಾಲ್ಯ ಕಳೆಯಿತು. ನಮ್ಮ ತಂದೆಗೆ ನನ್ನ ಮೇಲೆ ಬಹಳ ಪ್ರೀತಿ. ಏನು ಬೇಕೋ ಅದನ್ನು ತಂದುಕೊಡುತ್ತಿದ್ದರು. ಊಟ, ತಿಂಡಿ, ವಸ್ತ್ರ—ಯಾವುದಕ್ಕೂ ಕೊರತೆಯಿರಲಿಲ್ಲ. ಎಲ್ಲಕ್ಕಿಂತ ಹೆಚ್ಚಿನದು—ಅದು ನನ್ನ ಈಗಿನ ಅನುಭವ—ಪ್ರೀತಿ, ಅನ್ಯೋನ್ಯ. ನಮ್ಮ ತಂದೆ ತಾಯಿ ಒಂದು ಸಲವಾದರೂ ಜಗಳವಾಡಿದ್ದು ನನಗೆ ನೆನಪಿಲ್ಲ. ಅವರು ಯಾವಾಗಲೂ ನಸುನಗುತ್ತ ಇದ್ದರು. ಮನೆಯಲ್ಲಿ ಸದಾ ಸಂತೋಷವೇ. ಜೀವನವೆಂದರೆ ಬೆಳುದಿಂಗಳಲ್ಲಿ ದೋಣಿಯಲ್ಲಿ ಕುಳಿತು ನದಿಯ ತೆರೆಗಳ ಕೂಡ ಸರಸವಾಡುತ್ತ ಸಾಗಿದ ಹಾಗೆ ಎಂದು ಆಗ ತೋರುತ್ತಿತ್ತು. ನಮ್ಮ ತಂದೆ ತಾಯಿ ಅತ್ತದ್ದು ನಾನು ಕಂಡದ್ದು ಒಂದೇ ಒಂದು ಸಲ.

“ಅದು ನನ್ನ ಮದುವೆಯ ಕಾಲದಲ್ಲಿ.

“ಮದುವೆಯಾದಾಗ ನನಗೆ ಹತ್ತು ವರ್ಷವಿದ್ದಿರಬೇಕು. ಮಗಳನ್ನು ದೂರ ಕೊಡಬಾರದು ಎಂತ ನಮ್ಮೂರಿಗೆ ಮೂರೇ ಮೂರು ಮೈಲಿ ದೂರವಿರುವ ಕುಂಡಲಾಪುರದಲ್ಲಿ ಸಂಬಂಧ ನಿಶ್ಚಯಿಸಿದರು. ಆಗ ನನಗೆ ಏನೂ ತಿಳಿಯದು. ಹೊಸ ಸೀರೆ, ಆಭರಣ, ಊಟ, ಉಪಚಾರ, ಆರತಿ ಅಕ್ಷತೆ, ಪುರೋಹಿತರು, ಮಂತ್ರ, ಹೋಮ ಹೊಗೆ—ಇಷ್ಟು ಮಾತ್ರ ನನಗೆ ನೆನಪು. ನಾಲ್ಕನೆಯ ದಿನ ಹೆಣ್ಣೊಪ್ಪಿಸಿ ಕೊಡುವಾಗ ನಮ್ಮ ತಂದೆ ತಾಯಿ ಇಬ್ಬರೂ ಅತ್ತರು. ನನಗೆ ಇನ್ನೂ ನೆನಪಿದೆ: ನಮ್ಮ ತಂದೆ ಬಿಕ್ಕಿ ಬಿಕ್ಕಿ ಅತ್ತರು. ಆ ಚಿತ್ರ ನನ್ನ ಕಣ್ಣ ಮುಂದೇ ಇದೆ. ಆಗಲೇ ನರೆಯುತ್ತಿರುವ ಕೂದಲು; ಎತ್ತರವಾದ ಹಣೆ. ನೀಳವಾದ ಮುಖ. ಕಣ್ಣಿಂದ ಧಾರೆಧಾರೆಯಾಗಿ ಕಂಬನಿ ಸುರಿಯುತ್ತಿತ್ತು. ನಮ್ಮ ತಾಯಿಯೂ ಅಳುತ್ತಿದ್ದಳು. ಆದರೆ ನಿಧಾನವಾಗಿ, ನಿಶ್ಶಬ್ದವಾಗಿ.

“ಅವರು ಅಳುತ್ತಿರುವುದನ್ನು ಕಂಡು ನಾನೂ ಅತ್ತೆ. ನಮ್ಮ ತಂದೆ ಏನೇನೋ ಹೇಳಿದರು. ನನಗೆ ಯಾವುದೂ ಅರ್ಥವಾಗಲಿಲ್ಲ. ನನಗೆ ಅರ್ಥವಾದದ್ದು ಅವರ ದುಃಖ, ಆ ದುಃಖಕ್ಕೆ ಕಾರಣವಾದ ಅವರ ಪ್ರೀತಿ.

“ಕೂಡಲೇ ನಾನೇನೂ ಗಂಡನ ಮನೆಗೆ ಹೋಗಬೇಕಿರಲಿಲ್ಲ. ‘ಕೊಟ್ಟ ಹೆಣ್ಣು ಕುಲದ ಹೊರಗೆ’ ಎಂಬುದನ್ನು ನೆನಸಿಯೇ ನಮ್ಮ ತಂದೆ ಅಷ್ಟು

ಅತ್ತಿದ್ದು ಅಂತ ಕಾಣುತ್ತದೆ. ಹೀಗೇ ಯಥಾಪ್ರಕಾರ ದಿನಗಳು ಉರುಳಿದುವು. ಕೊನೆಗೆ ನಾನು ದೊಡ್ಡವಳಾದೆ! ಗಂಡನ ಮನೆಗೆ ಹೋಗುವ ಕಾಲ ಬಂತು.

"ಗಂಡನ ಹೆಸರನ್ನು ಹೆಂಡತಿ ಹೇಳಬಾರದು. ಆದರೆ ನನ್ನ ಯಜಮಾನರ ಹೆಸರನ್ನು ನಿಮಗೆ ಹೇಳಬೇಕು. ಏನು ಮಾಡಲಿ?" ಅಂತ ಅವಳು ಕೊಂಚ ಯೋಚಿಸಿ,

"ಅವರದ್ದು ರಾಮದೇವರ ಹೆಸರು. ಅದಕ್ಕೆ ಚಂದ್ರನನ್ನು ಸೇರಿಸಿ ಶಾಸ್ತ್ರಿ ಎಂಬ ಮನೆತನದ ಹೆಸರನ್ನು ಕೂಡಿಸಬೇಕು" ಎಂದಳು.

"ಎಂದರೆ ರಾಮಚಂದ್ರಶಾಸ್ತ್ರಿ ಅಂತಲೇ ಹೆಸರು?"

"ಹೌದು" ಎಂದು ಅವಳು, ಮತ್ತೆ ತನ್ನ ಕಥೆಯನ್ನು ಮುಂದುವರಿಸಿದಳು:

"ಅವರ ಮನೆಯಲ್ಲಿ ಅವರು ಮತ್ತು ಅವರ ತಾಯಿ ಅಲ್ಲದೆ ಬೇರೆ ಯಾರೂ ಇರಲಿಲ್ಲ. ಅತ್ತೆ ನನ್ನನ್ನು ತಮ್ಮ ಸ್ವಂತ ಮಗಳಂತೆಯೇ ಕಂಡರು. ಅವರದು ಬಹಳ ಮಡಿವಂತಿಕೆಯ ಮನೆತನ. ದಿನವೂ ಏನಾದರೂ ಪೂಜೆ, ಪುರಸ್ಕಾರ ನಡೆಯುತ್ತಲೇ ಇರಬೇಕು. ಯಾವಾಗಲೂ ಬ್ರಾಹ್ಮಣರಿಗೆ ಭೋಜನ, ದಕ್ಷಿಣೆ; ಸುವಾಸಿನಿಯರಿಗೆ ಸಂತರ್ಪಣೆ, ಬಾಗಿನ. ಮೊದಮೊದಲು ಎಲ್ಲ ಹೊಸದಾಗಿ ಕೊಂಚ ಗಾಬರಿಯಾಯಿತು. ಒಂದೆರಡು ವರ್ಷಗಳಲ್ಲೇ ಹೊಸ ಜೀವನಕ್ಕೆ ನನ್ನ ಮನಸ್ಸು ಒಗ್ಗಿತು. ಅದೇ ನನ್ನ ಮನೆ ಎಂದು ತಿಳಿಯುವಂತಾಯಿತು.

"ನಮ್ಮ ತಂದೆಯೂ ಆಗಾಗ ತಾವೇ ಬಂದು ಕರೆದುಕೊಂಡು ಹೋಗುತ್ತಿದ್ದರು, ಇಲ್ಲವೋ ಚಂದ್ರಶೇಖರನನ್ನು ಕಳಿಸಿ ಕರೆಸಿಕೊಳ್ಳುತ್ತಿದ್ದರು. ನಡೆಯಬೇಕಾದ ತೊಂದರೆಯೂ ಇರಲಿಲ್ಲ. ಹಾಲಾಡಿಯಿಂದ ದೋಣಿ ಕಟ್ಟಿಸಿಕೊಂಡು ಬಂದರೆ ಒಂದು ಗಳಿಗೆಯಲ್ಲಿ ಕೂಂಡಲಾಪುರಕ್ಕೆ ಬರಬಹುದು, ಹೋಗಬಹುದು.

"ನಾವು ಗಂಡ ಹೆಂಡತಿ ಬಹಳ ಅನ್ಯೋನ್ಯವಾಗಿಯೇ ಇದ್ದೆವು. ಒಂದು ದಿನ ಕೂಡ ಅವರು ನನಗೆ ಕೆಟ್ಟ ಮಾತು ಆಡಲಿಲ್ಲ. ತಿಳಿಗೇಡಿಯಾದ ನಾನೇ ಎಷ್ಟೋ ಸಲ ತಪ್ಪಿ ನಡೆದುದುಂಟು; ಸಿಟ್ಟು ಮಾಡಿಕೊಂಡದ್ದುಂಟು; ಆದರೆ ಅವರದು ಸದಾ ಶಾಂತಸ್ವಭಾವ. ನಿಧಾನವಾದ ಮಾತು.

"ಮೊದಮೊದಲು ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ನನಗೆ

ಆಗಲಿಲ್ಲ. ನನ್ನ ಹತ್ತಿರವಿದ್ದಾಗಲೂ ಕೂಡ ಅವರ ಮನಸ್ಸು ಇನ್ನೆಲ್ಲೋ ಇದ್ದ ಹಾಗೆ ತೋರುತ್ತಿತ್ತು. ಒಂದು ಸಲ ಸ್ವಲ್ಪ ಧೈರ್ಯ ತಂದುಕೊಂಡು ನಾನೇ ಕೇಳಿದೆ; 'ಅದೇನು ಅಷ್ಟು ಚಿಂತೆ ನಿಮಗೆ? ಮನಸ್ಸು ಬಿಚ್ಚಿ ಏಕೆ ಮಾತಾಡುವುದಿಲ್ಲ?' ಅದಕ್ಕೆ ಅವರು ಸುಮ್ಮನೆ ನಕ್ಕರು. ಉತ್ತರ ಏನೂ ಹೇಳಲಿಲ್ಲ.

"ಅವರಿಗೆ ಆಸ್ತಿ ತಕ್ಕಮಟ್ಟಿಗೆ ಇತ್ತು. ಆದರೆ ಖರ್ಚು ವಿಪರೀತ ಎಂದು ನನಗೆ ತೋರುತ್ತಿತ್ತು. ಮನೆಯಲ್ಲಿ ಯಾರಾದರೂ ಎಂಟು ಹತ್ತು ಜನ ಊಟಕ್ಕೆ ಇದ್ದೇ ಇರುತ್ತಿದ್ದರು. ಯಾರು ಯಾರೋ ದೂರದ ಸಂಬಂಧಿಕರು ಬಂದು ತಿಂಗಳುಗಟ್ಟಲೆ ಇದ್ದು, ಹೋಗುವಾಗ ಧೋತ್ರ, ಸೀರೆ, ಕುಪ್ಪಸ ತೆಗೆದುಕೊಂಡು ಹೋಗುತ್ತಿದ್ದರು.

"ನಮ್ಮ ಅತ್ತೆಯವರಿಗೆ ವ್ಯವಹಾರ ಏನೂ ತಿಳಿಯುವುದಿಲ್ಲ ಎಂದು ನನಗೆ ಕ್ರಮೇಣ ಗೊತ್ತಾಯಿತು. ಅವರು ಕೈಯೆತ್ತಿ ಕೊಡಲು ಶುರುಮಾಡಿದರೆ ಅದು ಇದು ಅಂತಲೇ ಇರಲಿಲ್ಲ. ಅದೂ ತಮ್ಮ ತವರಿನ ಕಡೆಯವರು ಬಂದರು ಎಂದರೆ ತೀರಿತು; ದಿನವೂ ಪಂಚಭಕ್ಷ್ಯ ಪರಮಾನ್ನ ಆಗಲೇ ಬೇಕು.

"ಈ ದಾನ, ಈ ಧರ್ಮ ಅವರ ಮನೆಯಲ್ಲಿ ಪರಂಪರೆಯಿಂದ ಬಂದದ್ದು. ಕುರುಡರು, ಕುಂಟರು, ಮೂಕರು, ಭಿಕ್ಷುಕರು, ದೇಶಾವರದವರು– ಈ ಎಲ್ಲರಿಗೂ ಶಾಸ್ತ್ರಿಗಳ ಮನೆಗೆ ಹೋದರೆ ಒಂದು ತುತ್ತು ಅನ್ನಕ್ಕೆ ಕೊರತೆಯಿಲ್ಲ ಎಂದು ತಿಳಿದಿತ್ತು. ಊರಿನವರು ಕೂಡಾ ಯಾರಾದರೂ ಹೊರಗಿನವರು ಮಧ್ಯಾಹ್ನದ ಹೊತ್ತು ಬಂದರೆ ನಮ್ಮ ಮನೆಯನ್ನು ತೋರಿಸುತ್ತಿದ್ದರು.

"ನಮ್ಮ ಮಾವನವರ ಕಾಲದಲ್ಲಿ ಅವರಿಗೆ ಬಹಳ ಆಸ್ತಿ ಇತ್ತಂತೆ ಅವರು ಸಾಯುವ ಹೊತ್ತಿಗೆ ಆಸ್ತಿಯ ಅರ್ಧ ಭಾಗ ಕರಗಿತ್ತು. ಅವರ ಕಾಲದಲ್ಲಿ ಹೇಗೆ ವಿತರಣೆ ನಡೆಯುತ್ತಿತ್ತೋ ಅದೇ ರೀತಿ ತಮ್ಮ ಮಗನ ಕಾಲದಲ್ಲೂ ನಡೆಯಬೇಕು ಅಂತ ನಮ್ಮ ಅತ್ತೆಯವರ ಆಶೆ. ಅದು ನಡೆಯುವುದು ಹೇಗೆ ಅಥವಾ ಅದು ನಡೆಯುವುದು ಸಾಧ್ಯವೇ ಅಂತ ಅವರು ಎಂದೂ ಯೋಚಿಸಲಿಲ್ಲ.

"ಒಂದು ದಿವಸ ಏನಾದರೂ ಸ್ವಲ್ಪ ಹೆಚ್ಚು ಕಡಿಮೆಯಾದರೆ ಸಾಕು ದಿನವೆಲ್ಲ ಅಳುತ್ತ ಅನ್ನ ಆಹಾರವಿಲ್ಲದೆ ಮಲಗುತ್ತಿದ್ದರು. ತಾಯಿಯ ಮನಸ್ಸಿಗೆ ನೋವಾಗಬಾರದು ಎಂತಲೋ ಏನೋ ನಮ್ಮ ಯಜಮಾನರೂ ಯಾವ

ದಕ್ಕೂ ಕಡಿಮೆ ಮಾಡುತ್ತಿರಲಿಲ್ಲ.

"ದಿನದಿಂದ ದಿನಕ್ಕೆ ಹೀಗೆ ನಡೆದುಕೊಂಡು ಹೋಗುತ್ತಿತ್ತು. ಯಾರಿಗೂ ಯಾವ ಕೊರತೆಯೂ ಕಾಣಿಸಲಿಲ್ಲ. ವ್ರತ, ನಿಯಮ, ಊಟ, ಉಪಚಾರ—ಎಲ್ಲ ಯಥಾಪ್ರಕಾರ. ಒಂದೊಂದು ಸಲ ಅವರ ಮುಖದ ಮೇಲೆ ವ್ಯಸನ ಕವಿಯುತ್ತಿತ್ತು; ಒಂದೆರಡು ದಿನ ಅವರು ಯಾರ ಹತ್ತಿರವೂ ಸರಿಯಾಗಿ ಮಾತಾಡುತ್ತಿರಲಿಲ್ಲ ಮತ್ತೆ ಯಥಾಪ್ರಕಾರ ಹಸನ್ಮುಖರಾಗಿಯೇ ಇರುತ್ತಿದ್ದರು.

"ಹೀಗೆ ಆರೇಳು ವರ್ಷ ಕಳೆಯಿತು. ನಮ್ಮ ಅತ್ತಿಗೆ ನನಗೆ ಮಗುವಾಗಲಿಲ್ಲ ಎಂಬ ಕೊರತೆ ಕಾಡಹತ್ತಿತು. ನನಗೆ ಒಂದೆರಡು ಸಲ ಗರ್ಭ ಹೋಯಿತು. ಆದರೆ ಮಗು ಆಗಲಿಲ್ಲ. ಒಂದು ಸಲ ಮಗು ಹುಟ್ಟಿತು. ಕಣ್ಣು ಬಿಡುವಷ್ಟರಲ್ಲೇ ಕಣ್ಣು ಮುಚ್ಚಿತು. ಆದಕ್ಕೆ ಮತ್ತೆ ವ್ರತ, ಹೋಮ, ಬ್ರಾಹ್ಮಣರ ಸಂತರ್ಪಣೆ ನನ್ನನ್ನೂ ಅತ್ತೆಯನ್ನೂ ಕಟ್ಟಿಕೊಂಡು ಅವರು ತೀರ್ಥಕ್ಷೇತ್ರಗಳನ್ನೆಲ್ಲ ಸುತ್ತಿದರು: ಉಡುಪಿ, ಗೋಕರ್ಣ, ಧರ್ಮಸ್ಥಳ ಸುಬ್ರಹ್ಮಣ್ಯ—ಹೀಗೆ. ಸರ್ಪಶಾಪವಿದೆ ಎಂದು ಸರ್ಪಸಂಸ್ಕಾರವೂ ನಡೆಯಿತು. ದಿನದಿನಕ್ಕೆ ಖರ್ಚು ಹೆಚ್ಚುತ್ತಿತ್ತು.

"ನನ್ನವರ ವ್ಯವಹಾರದಲ್ಲೆಲ್ಲ ಏನೋ ಅಸಹಜತೆ ನನಗೆ ಕಾಣತೊಡಗಿತು. ಅವರ ಮನಸ್ಸಿನ ಮೇಲೆ ಯಾವುದೋ ಹೊರಲಾರದ ಹೊರೆಯ ಭಾರ ದಿನದಿನಕ್ಕೆ ಹೆಚ್ಚುತ್ತಿರುವಂತೆ ಕಂಡಿತು. ನಾನು ಎಷ್ಟು ಸಲ ಕೇಳಿದರೂ ನಕ್ಕು ನನ್ನ ಮಾತನ್ನು ಹಾರಿಸಿಬಿಡುತ್ತಿದ್ದರು. 'ಏನೂ ಇಲ್ಲ, ಸುಮ್ಮನೆ ಚಿಂತೆ ಮಾಡಬೇಡ.' ಎಂದು ನನ್ನ ಕಣ್ಣಿಗೆ ಮಣ್ಣೆರಚಿಕೊಂಡೇ ಬಂದರು.

"ಖರ್ಚಿನ ಚಿಂತೆ ನನಗೆ ದಿನದಿನಕ್ಕೆ ಹೆಚ್ಚುತ್ತಿತ್ತು. ವರಮಾನ ತಮ್ಮ ಖರ್ಚಿಗೆ ಖಂಡಿತ ಸಾಲುವುದಿಲ್ಲ ಎಂದು ನನಗೆ ಗೊತ್ತಿತ್ತು. ಹಾಗಾದರೆ ಇದೆಲ್ಲ ಹೇಗೆ ಜರುಗುತ್ತಿದೆ ಎಂದು ನಾನು ಆಳವಾಗಿ ಯೋಚಿಸಬೇಕಾಗಿ ಬಂತು. ನಮಗೆ ಬರುತ್ತಿದ್ದ ಭತ್ತ ನಮ್ಮ ಮತ್ತು ಅಥಿತಿಗಳ ಊಟಕ್ಕೂ ಸಾಕಾಗಿ ಇನ್ನೂ ಸ್ವಲ್ಪ ಮಿಕ್ಕುತ್ತಿತ್ತು. ಆದರೆ ಉಳಿದ ಖರ್ಚಿಗೆ ಎಲ್ಲಿಂದ ದುಡ್ಡು ಬರುತ್ತದೆ ? ಅವರು ಸಾಲಮಾಡುತ್ತಿದ್ದಾರೆಯೇ ? ಸಾಲಮಾಡುತ್ತ ಬಂದರೆ ಮೂಲ ಎಷ್ಟು ದಿನ ಉಳಿದೀತು ? ಈ ಯೋಚನೆ ಬಂದು ನಾನು ಕಂಗಾಲಾದೆ.

“ ಒಂದು ಸಲ ಅವರು ಹೊರಕ್ಕೆ ಹೋದವರು ಎರಡು ದಿನ ಮನೆಗೆ ಬರಲಿಲ್ಲ. ಎಲ್ಲಿ ಹೋದರು ಏನಾಯಿತು ಎಂದು ನಮಗೆ ಯಾರಿಗೂ ತಿಳಿಯಲಿಲ್ಲ ಮೂರನೆಯ ದಿನ ಅವರು ಮರಳಿ ಬಂದಾಗ ಅವರ ಮುಖದಲ್ಲಿ ಕಾಂತಿಯೇ ಇರಲಿಲ್ಲ. ಅವರು ಬಂದ ಮೇಲೆ ಅವರ ತಾಯಿ ‘ಎಲ್ಲಿ ಹೋಗಿದ್ದೆಯಪ್ಪಾ, ಹೋಗುವುದಾದರೆ ಹೇಳಿಹೋಗಬಾರದೇನೋ ! ’ ಎಂದರು. ಅವರು ಆ ಮಾತಿಗೆ ಏನೂ ಉತ್ತರ ಹೇಳದೆ,

‘ ಅಮ್ಮಾ , ನಮ್ಮ ಅರ್ಧ ಆಸ್ತಿ ಮಾರಬೇಕಾಗಿ ಬಂದಿದೆ ’ ಎಂದರು. ಅದನ್ನು ಕೇಳಿ ನನ್ನ ಎದೆ ಒಡೆಯಿತು.

‘ ಏಕೆ ಮಾರಬೇಕು ? ಏನಾಯಿತು ? ’ ಎಂದು ಅತ್ತೆ ಕೇಳಿದರು.

‘ ಸಾಲ ತೀರಿಸಬೇಕು. ಬೇರೆ ದಾರಿ ಇಲ್ಲ.’

‘ ಸಾಲ ? ಸಾಲವೇಕೆ ಮಾಡಿದೆಯಪ್ಪಾ ? ’

“ ಇದರಿಂದ ಅವರಿಗೆ ಕೊಂಚ ಸಿಟ್ಟು ಬಂತು ಅಂತ ಕಾಣುತ್ತೆ.

‘ ಸಾಲ ಹೇಗಾಯಿತು ಅಂತ ಕೇಳುತ್ತೀಯಲ್ಲ ಅಮ್ಮಾ ; ಅಪ್ಪನ ಕ್ರಿಯೆಯ ಕಾಲಕ್ಕೆ ಶುರುವಾದ ಸಾಲ ದಿನದಿನಕ್ಕೆ ಬೆಳೆಯುತ್ತ ಬಂತು. ಈಗ, ಈ ಸ್ಥಿತಿ ಬಂತು. ಯಾವುದಾದರೂ ಖರ್ಚು ಕಡಿಮೆ ಮಾಡುವ ಎಂದರೆ ನೀನು ಅದಕ್ಕೆ ಒಪ್ಪುತ್ತಿರಲಿಲ್ಲ. ನಿನ್ನ ಮನಸ್ಸಿಗೆ ಏಕೆ ನೋವು ಮಾಡಲಿ ಅಂತ ನಾನೂ ಕಬ್ಬಿನಾಲೆಗೆ ಕೈ ಕೊಟ್ಟೆ. ಈಗ ಉಪಾಯವಿಲ್ಲ ’ ಎಂದರು.

“ ಅತ್ತೆಯವರಿಗೆ ಇದನ್ನು ಕೇಳಿ ಬಹಳ ದುಃಖವಾಯಿತು. ವ್ಯವಹಾರ ಅವರಿಗೆ ಏನೂ ತಿಳಿಯದು. ನಡೆದುಕೊಂಡು ಬಂದ ಹಾಗೇ ನಡೆಯಬೇಕು ಅಂತ ಅಷ್ಟು ತಿಳಿದಿದ್ದರಲ್ಲದೆ ಆದರಿಂದ ಸಾಲವಾಗಿ ಮನೆ ಮಠ, ತೊಳೆದು ಹೋಗಬಹುದು ಅಂತ ಅವರಿಗೆ ಎಂದೂ ಅನ್ನಿಸಿರಲಿಲ್ಲ. ಆದ ಕಾರಣ ಅವರು

‘ ಮಗು, ಇಂಥ ಮಾತು ಆಡುತ್ತೀಯೋ. ನಾನೇನೊ ಅರಿಯದ ಹೆಂಗಸು. ನನಗೆ ಅದೆಲ್ಲ ಹೇಗೆ ಗೊತ್ತಾಗಬೇಕಪ್ಪಾ; ನೀನು ನನಗೆ ಇರುವ ಸಂಗತಿಯನ್ನು ತಿಳಿಸಬಾರದಾಗಿತ್ತೆ ?’ ಎಂದರು. ಅದಕ್ಕೆ ನಮ್ಮ ಯಜಮಾನರು ಉತ್ತರ ಕೊಡಲಿಲ್ಲ. ಎದ್ದು ಹೊರಟುಹೋದರು.

“ ಇದು ಇಷ್ಟಕ್ಕೆ ಮುಗಿಯುವಂಥದಲ್ಲ ಎಂದು ನನ್ನ ಮನಸ್ಸು ನನಗೆ

ಹೇಳಿತು. ದಿನದಿನಕ್ಕೆ ಅವರ ಮುಖದ ಕಾಂತಿ ಕುಂದುತ್ತ ಹೋಯಿತು. ಕಣ್ಣು ಗುಳಿ ಬಿತ್ತು; ದೇಹ ಬಡಕಲಾಗುತ್ತ ಬಂತು. ಇದನ್ನು ನೋಡುತ್ತ ನೋಡುತ್ತ ನನ್ನ ಮನಸ್ಸಿನ ಯಾತನೆ ದಿನದಿನಕ್ಕೆ ಹೆಚ್ಚಿತು.

"ಅಂಗಡಿ ಶೀನ ಭಂಡಾರಿ, ಆಗಾಗ ಮನೆಗೆ ಬಂದು ಹೋಗುತ್ತಿದ್ದ. ಮೊದಲು ಆಗಾಗ ಬರುತ್ತಿದ್ದ ಹಗಲು ವೇಷದ ಸುಬ್ಬ ಈಗ ಅನೇಕ ಸಲ ಬರ ತೊಡಗಿದ. ಒಂದು ಸಲ ಅವನೂ ನಮ್ಮ ಯಜಮಾನರೂ ಮಾತಾಡುತ್ತಿದ್ದುದು ಅಕಸ್ಮಾತ್ತಾಗಿ ನನ್ನ ಕಿವಿಗೆ ಬಿತ್ತು. ಶೀನ ಭಂಡಾರಿ ಹೇಳುತ್ತಿದ್ದ: 'ನೋಡಿ ಶಾಸ್ತ್ರಿಗಳೇ, ಇನ್ನು ಹೆಚ್ಚು ದಿನ ತಡೆಯುವುದಕ್ಕೆ ಆಗುವುದಿಲ್ಲ. ಇನ್ನು ಒಂದು ತಿಂಗಳೊಳಗೆ ಎಲ್ಲ ಚುಕ್ತಾ ಮಾಡಿದರೆ ಸರಿ, ಇಲ್ಲವಾದರೆ ನನ್ನನ್ನು ಆಮೇಲೆ ದೂರಿಕೊಳ್ಳಬೇಡಿ'

"ಇತ್ತ ಮನೆಯಲ್ಲಿ ಮೊದಲಿನ ವಿಜೃಂಭಣೆ ತಗ್ಗಿತು. ಅತ್ತೆಯವರು ಎಲ್ಲದರಲ್ಲೂ ಅನಾಸಕ್ತರಾದರು. ಅವರ ಜೀವನದ ಧಾಟಿಯೇ ಬದಲಾಯಿತು. ಊಟ ಮಾಡಿದರೆ ಮಾಡಿದರು; ಬಿಟ್ಟರೆ ಬಿಟ್ಟರು. ಯಾವ ದಿನ ಯಾವ ವ್ರತ ಎಂತ ಸದಾ ಜಾಗ್ರತರಾಗಿದ್ದವರು ಈಗ ಯಾವಾಗಲೂ ಪ್ರೈ ಮರೆತವರಂತೆ ಕಂಡರು. ಅದು ಬೇಕು ಇದು ಬೇಕು, ಆ ಪೂಜೆ ಆಗಬೇಕು— ಈ ಯಾವ ಮಾತೂ ಇಲ್ಲ. ಆಗಲೇ ವಯಸ್ಸಾಗಿದ್ದವರು ದಿನದಿನಕ್ಕೆ ಕೃಶರಾಗತೊಡಗಿದರು. ಅವನ್ನು ಕಂಡು ನನ್ನ ಕರುಳು ಕಿವುಚಿದಂತಾಯಿತು.

"ಊರಲ್ಲೆಲ್ಲ ಏನೇನೋ ಸುದ್ದಿಗಳು. 'ಶಾಸ್ತ್ರಿಯವರು ದಿವಾಳಿ ತೆಗೆಯುತ್ತಾರೆ' ಅಂತ ಕೆಲವರು. 'ಶೀನ ಭಂಡಾರಿಯಲ್ಲಿ ಸಾಲ ತೆಗೆದರೆ ಇನ್ನೇನು' ಅಂತ ಕೆಲವರು. 'ಇರುವ ದುಡ್ಡನ್ನೆಲ್ಲ ಮೂರೆಲೆ ಆಟಕ್ಕೆ ಸುರಿದರೆ ಇನ್ನೇನು ?' ಅಂತಲೂ ಕೆಲವರು ಪಿಸುಗುಟ್ಟಿದರು. ನಾವು ಮಾಡಿದ ದಾನ ಧರ್ಮ ಇವುಗಳನ್ನು ಕುರಿತು ಯಾರೂ ಮಾತಾಡಲಿಲ್ಲ.

"ಮತ್ತೊಂದು ಸಲ ಅವರು ಎರಡು ದಿನಗಳ ಕಾಲ ಎಲ್ಲೋ ಕಣ್ಮರೆಯಾದರು. ಮರಳಿ ಬಂದಾಗ ಅವರ ಮುಖ ಕಪ್ಪಿಟ್ಟಿತ್ತು. ಆಗ ನಾನು ಧೈರ್ಯ ತಂದುಕೊಂಡು

'ನೀವು ಎಲ್ಲಿ ಹೋಗಿದ್ದಿರಿ ?' ಎಂತ ಕೇಳಿದೆ.

'ಗಂಗೊಳ್ಳಿಗೆ.'

‘ ಅಷ್ಟು ದೂರ ಯಾಕೆ ಹೋದಿರಿ ? ’

‘ ಅದೃಷ್ಟ ಪರೀಕ್ಷೆಗೆ.’

‘ ಎಂದರೆ ?’

‘ ಮೂರೆಲೆಯ ಜೂಜಾಟಕ್ಕೆ.’

‘ ಅಲ್ಲಿಗೂ ಇಳಿದಿರಾ ?’

‘ ಬೇರೆ ದಾರಿ ಇಲ್ಲ.’

‘ ಈ ಚಟ ಇತ್ತೀಚೆಯದೋ ಅಥವಾ ಬಹಳ ಕಾಲದ್ದೋ ?’

‘ ಅದೆಲ್ಲ ನಿನಗೇಕೆ ? ’ ಎಂದು ಎದ್ದು ಹೊರಟುಹೋದರು.

“ ಇವರು ನಾಲಿಸಾಡಿದ್ದು ಮೊದಲೋ, ಜೂಜಾಟಕ್ಕೆ ಕೈ ಹಾಕಿದ್ದು ಮೊದಲೋ ಅಂತ ಯೋಚಿಸಿದೆ. ತಿಳಿಯಲಿಲ್ಲ.

“ ಹೇಗೋ ದಿನ ಕಳೆಯುತ್ತಿತ್ತು. ಮನೆಯಲ್ಲಿ ಯಾರಿಗೂ ಸುಖವಿಲ್ಲ. ಮನಃಸಮಾಧಾನವಿಲ್ಲ. ಅತ್ತೆಯವರು ಇಂದೋ ನಾಳೆಯೋ ಅಂತ ದಿನ ಕಾಯುತ್ತಿದ್ದರು. ಅವರು ವ್ಯಗ್ರರಾಗಿ ಎಲ್ಲೆಲ್ಲೋ ಸುತ್ತುತ್ತಿದ್ದರು. ನನ್ನ ಪಾಡಂತೂ ನಾಯಿ ಪಾಡು. ನನಗೆ ಈ ಸಂದರ್ಭದಲ್ಲಿ ಏನು ಮಾಡಬೇಕು ಅಂತ ಎಷ್ಟು ಯೋಚಿಸಿದರೂ ಒಂದು ದಾರಿಯೂ ತೋರಲಿಲ್ಲ. ನಮ್ಮ ತಂದೆಯಾದರೂ ಇದ್ದಿದ್ದರೆ ಒಂದು ಮಾತು ಕೇಳಬಹುದಾಗಿತ್ತು. ನನ್ನ ತಾಯಿ ನಮ್ಮ ತಂದೆ ತೀರಿದ ಬಳಿಕ ಅರ್ಧಕ್ಕರ್ಧ ಇಳಿದುಹೋಗಿದ್ದಳು. ದಿನದಿನಕ್ಕೆ ಅವಳ ಆರೋಗ್ಯ ಕೆಡುತ್ತಿತ್ತು: ದೇಹಶಕ್ತಿ ಕುಂದುತ್ತಿತ್ತು. ನನ್ನ ತಮ್ಮನಿಗೆ ಮದುವೆಯಾಗಿ ಹೆಂಡತಿ ಮನೆಗೆ ಬಂದಿದ್ದರೂ ಅವನು ಇನ್ನೂ ಹುಡುಗ. ನಾನು ದಿಕ್ಕುಗಾಣದೆ ಹೋದೆ. ಏನಾದರೂ ಹೇಳೋಣ ಅಂತ ಅವರ ಹತ್ತಿರ ಹೋದರೆ ಅವರು ಮಾತೇ ಆಡುತ್ತಿರಲಿಲ್ಲ. ತಡೆಯಲಾರದ ದುಃಖವನ್ನು ತಡೆ ಹಿಡಿದವರಂತೆ ಅವರು ಮುಖ ತಗ್ಗಿಸಿ ತಿರುಗುತ್ತಿದ್ದರು. ಎಂದೂ ಸಿಟ್ಟು ಮಾಡದೆ ಇದ್ದವರು ಈಗ ಸಿಡಿಮಿಡಿಗೊಳ್ಳುತ್ತಿದ್ದರು.

“ ಇದೇ ಸಮಯಕ್ಕೆ ಸರಿಯಾಗಿ ನಾನು ಮತ್ತೆ ಗರ್ಭಿಣಿಯಾದೆ. ಆರೋಗ್ಯ ಸರಿಯಿಲ್ಲದಿದ್ದರೂ ನಮ್ಮ ತಾಯಿ ತಾನೇ ಅಲ್ಲಿಗೆ ಬಂದು ನನ್ನನ್ನು ಕರೆದುಕೊಂಡು ಹೋದಳು. ‘ಈ ಸಮಯದಲ್ಲಿ ಅವರನ್ನು ಬಿಟ್ಟು ಹೋಗಲು ನನಗೆ ಇಷ್ಟವಿರಲಿಲ್ಲ. ಆದರೆ ಮನೆಯಲ್ಲಿ ಮಾಡುವವರು ಯಾರು ? ಮನ

ಸ್ಸಿಲ್ಲದೆ ಇದ್ದರೂ ಬೇರೆ ಉಪಾಯ ಕಾಣದೆ ನಾನು ತವರುಮನೆಗೆ ಹೋದೆ. ನಮ್ಮ ಅತ್ತೆಯವರು ಕಣ್ಣಿನಲ್ಲಿ ನೀರು ತಂದುಕೊಂಡು, 'ಗಂಡು ಮಗುವನ್ನು ಹಡೆದು ಬಾ, ಮಗಳೆ' ಎಂದು ಹರಸಿದರು." ಎಂದು ಅವಳು ಕೊಂಚ ಸುಮ್ಮನಾದಳು.

ಆಗ ಶೀನಪ್ಪ, "ಪದ್ಮಾ, ನಿನಗೆ ಬಹಳ ಆಯಾಸವಾಗಿರಬೇಕು. ತುಂಬ ಮಾತಾಡಿದೆ. ಸ್ವಲ್ಪ ವಿಶ್ರಮಿಸಿಕೋ" ಎನ್ನುತ್ತ ಅಡಿಗೆ ಮನೆಗೆ ಹೋದ.

ಇಲ್ಲಿ ಪದ್ಮಾವತಿಯ ಮನಸ್ಸು ಒಂದೇ ಸಮನೆ ಕೆಲಸ ಮಾಡುತ್ತಿತ್ತು. ಈ ವರೆಗಿನ ಅವಳ ಜೀವನವೃತ್ತ ಸರಳ, ಸುಲಭ, ಹೇಳುವುದು ಕಷ್ಟವಲ್ಲ. ಕಠಿನವಾದ ಭಾಗ ಬರುವುದು ಇನ್ನು ಮುಂದೆ. ಅದನ್ನು ಹೇಗೆ ಹೇಳಲಿ ಎಂದು ಯೋಚಿಸುತ್ತ ಕುಳಿತಳು.

ಇಷ್ಟು ಹೊತ್ತಿಗೆ ಸುತ್ತಲೂ ಗಾಢಾಂಧಕಾರ ಕವಿದಿತ್ತು. ಶಖೆ. ಗಾಯಿರಲಿಲ್ಲ. ಸೀಮೆಯೆಣ್ಣೆಯ ದೀಪದ ಸುತ್ತಲೂ ಮಳೆಯ ಹುಳುಗಳು ಕುಣಿದು ಮುಸುಕುತ್ತಿದ್ದುವು. ತನ್ನ ಜೀವನದಲ್ಲಿ ಇಷ್ಟೆಲ್ಲ ನಡೆಯಿತೇ ಎಂದು ಈಗ ಇಲ್ಲಿ ಈ ಕತ್ತಲಲ್ಲಿ ಒಬ್ಬಳೇ ಕುಳಿತು ಯೋಚಿಸುತ್ತಿದ್ದ ಪದ್ಮಳಿಗೆ ಆಶ್ಚರ್ಯ. ಎಲ್ಲ ಮುಗಿಯಲೂ ಇಲ್ಲ, ಮತ್ತೆ. ಆ ಕಥೆ ಇನ್ನೂ ನಡೆಯುತ್ತಿದೆ. ಅನಿರೀಕ್ಷಿತವಾದ ತಿರುವುಮುರುವುಗಳಲ್ಲಿ ಏರುತಗ್ಗುಗಳಲ್ಲಿ ಹಾದು ಜೀವನದ ಹೊಳೆ ಎತ್ತಲೋ ಸಾಗುತ್ತಿದೆ. ಇದರ ಗುರಿ ಯಾವುದು, ಗಮ್ಯ ಯಾವುದು?

ಶೀನಪ್ಪ ಗಂಜಿ ಮಾಡಿ ಲೋಟದಲ್ಲಿ ಹಾಕಿಕೊಂಡು ಹೊರಕ್ಕೆ ತಂದ. ಲೋಟವನ್ನು ಅವಳ ಕೈಗೆ ಕೊಡುತ್ತ

"ಹೇಗಿದೆ ನೋಡು, ಸಿಹಿ ಸಾಕೋ ಸಾಲದೋ?"

"ಬಹಳ ರುಚಿಯಾಗಿದೆ," ಎಂದಳು ಪದ್ಮಾ, ಗಂಜಿಯನ್ನು ಕುಡಿಯುತ್ತ.

ಗಂಜಿ ಕುಡಿದು ಮುಗಿಸಿ "ನಾನೊಂದು ಮಾತು ಕೇಳಲೇ?" ಎಂದಳು.

"ಕೇಳು. ಏನು ಬೇಕಾದರೂ ಕೇಳು; ಅದಕ್ಕೇನಂತೆ?"

"ನೀವು ಏಕೆ ಮದುವೆ ಮಾಡಿಕೊಳ್ಳಲಿಲ್ಲ?"

"ಅದು ಒಂದು ದೊಡ್ಡ ಕಥೆ; ಬೇಕಾದರೆ ಇನ್ನೊಂದು ಸಲ ಹೇಳುತ್ತೇನೆ. ಆದರೆ ಮುಖ್ಯ ವಿಷಯ ಇದು: ನನಗೆ ಮದುವೆ ನಿಶ್ಚಯವಾಗಿತ್ತು– ನನ್ನ ಸೋದರತ್ತೆಯ ಮಗಳು ಶಾರದೆಯೊಡನೆ. ಮದುವೆ ಆಗುವಷ್ಟರಲ್ಲಿ ಅವಳು ತೀರಿಹೋದಳು. ಅವಳ ಮರಣ ಭಯಂಕರವಾದ ರೀತಿಯಲ್ಲಿ ನಡೆಯಿತು. ಸಿಡುಬಿನಿಂದ ಮುಖ ವಿಕೃತವಾಗಿ ಪಡಬಾರದ ಕಷ್ಟ ಪಟ್ಟು ಅವಳು ಕಣ್ಣು ಮುಚ್ಚಿದಳು. ಆ ದೃಶ್ಯವನ್ನು ಕಂಡ ನನಗೆ ಮತ್ತೆ ಮದುವೆ ಎಂದರೆ ಮೈ ಉರಿಯುತ್ತಿತ್ತು. ಆ ಯೋಚನೆಯನ್ನೇ ಬಿಟ್ಟುಬಿಟ್ಟೆ."

ಈ ಮಾತನ್ನು ಕೇಳಿ ಅವಳು ಕೊಂಚ ಸುಮ್ಮನಿದ್ದು, ಅನಂತರ

"ನೀವು ಹೀಗೆ ಮಾಡಿದ್ದು ಸರಿಯಾಯಿತೇ? ಒಬ್ಬೊಂಟಿಗನ ಬಾಳು ಬಹಳ ಕಷ್ಟವಲ್ಲವೆ? ಅನುವು, ಆಪತ್ತು, ಸುಖದುಃಖಗಳಿಗೆ ಆಗುವವರು ಯಾರೂ ಬೇಡವೆ?"

"ಬೇಕು–ನಿಜ. ಆದರೆ ಎಲ್ಲವೂ ನಾವು ಬಯಸಿದಂತೆ, ಯೋಚಿಸಿದಂತೆ ಆಗುವುದಿಲ್ಲ. ಅಲ್ಲವೇ, ಪದ್ಮಾ? ಎಲ್ಲ ಇದ್ದೂ ಏನೂ ಇಲ್ಲದಂತೆ ಆಗುವುದಿಲ್ಲವೆ? ನಿನಗೇ ಈಗ ಏನು ಕಡಿಮೆಯಿತ್ತು? ಎಲ್ಲವೂ ಸರಿಯಾದಂತೇ ಇತ್ತು. ಆದರೆ ಇದ್ದಕ್ಕಿದ್ದಂತೆಯೇ ಎಲ್ಲವೂ ತಲೆಕೆಳಗಾಗಲಿಲ್ಲವೆ?"

"ಹೌದು, ಆ ಮಾತು ನಿಜ. ಆದರೆ ಎಲ್ಲರಿಗೂ ಎಲ್ಲ ಕಾಲದಲ್ಲೂ ಹಾಗೇ ಆಗುತ್ತದೆಯೇ? ಎಷ್ಟು ಜನ ಜಗತ್ತಿನಲ್ಲಿ ಸುಖವಾಗಿಲ್ಲ?"

"ಆದರೆ ಕೆಲವರು ಸುಖ ಪಡೆಯುವುದಕ್ಕಾಗಿ ಹುಟ್ಟಿರುವುದಿಲ್ಲ. ನವೆಯುವುದಕ್ಕೆ, ನೋಯುವುದಕ್ಕೆ, ಪಡಬಾರದ ಪಾಡು ಪಡುವುದಕ್ಕೆ ಹುಟ್ಟಿರುತ್ತಾರೆ ಅಂತ ನನಗೆ ತೋರುತ್ತದೆ. ಅಂಥವರಲ್ಲಿ ನೀನೂ ಒಬ್ಬಳು. ಬಹುಶಃ ನಾನೂ ಒಬ್ಬ ಅಂತ ಕಾಣುತ್ತದೆ" ಎಂದ. ಶೀನಪ್ಪ ತನ್ನ ಮನಸ್ಸಿನಲ್ಲಿ ಆಗಾಗ ಮಾಡುತ್ತಿದ್ದ ಕೆಲವು ಅಸ್ಪಷ್ಟ ವಿಚಾರಗಳಿಗೆ ಮಾತಿನ ರೂಪ ಕೊಡಲು ಯತ್ನಿಸುತ್ತಿದ್ದ.

"ನೀವು ಹೇಳುವುದು ನಿಜ. ಆದರೆ ಆಗುವುದು ಆಗಬೇಕು; ಅದು ಹಾಗೇ ಆಗಬೇಕು, ಹೀಗೇ ನಡೆಯಬೇಕು ಅಂತ ಹೇಳಲು ನಾವು ಯಾರು?"

"ದೈವೇಚ್ಛೆ ಒಂದು ಕಡೆ; ಅದು ಇಂಥದೇ ಅಂತ ತಿಳಿದಿದ್ದರೆ ತೊಂದರೆಯಿಲ್ಲ. ಆದರೆ ಅದರ ಜಾಡು ನಮಗೆ ತಿಳಿಯುವುದಿಲ್ಲ. ಇತ್ತ ನಮ್ಮ

ಇಚ್ಛೆಯೂ ಇದೇ. ಇವೆರಡೂ ಸೇರಿದರೆ ಎಲ್ಲ ಸಲೀಸಾಗುವುದು. ಇಲ್ಲವೋ ಜೀವನವೇ ಕಿಚ್ಚಿನ ಹೊಳೆಯಾಗುವುದು" ಎಂದು ಶೀನಪ್ಪ ಹೇಳುತ್ತಿರಲು ಅವಳು ಏನೋ ಅನ್ಯಮನಸ್ಕಳಾಗಿ ಎತ್ತಲೋ ನೋಡುತ್ತಿದ್ದಳು.

ಮನೆಯಲ್ಲಿ ಪ್ರಶಾಂತ ಮೌನ. ಹೊರಗೂ ಮೌನ. ಊರಗದ್ದಲವೆಲ್ಲ ಯಾವಾಗಲೋ ಅಡಗಿ ಹೋಗಿರಬೇಕು. ದೂರದಲ್ಲಿ ನಾಯಿಯೊಂದು ಬಗುಳುತ್ತಿತ್ತು. ಶಖೆ ತಗ್ಗಿ ತಂಗಾಳಿ ಸುಳಿಯುತ್ತಿತ್ತು.

ಸ್ವಲ್ಪ ಹೊತ್ತು ಹಾಗೇ ಸುಮ್ಮನಿದ್ದು ಪದ್ಮಾ ಮತ್ತೆ ಬಾಯಿ ತೆರೆದಳು:–

"ನನ್ನ ಹೆರಿಗೆಯ ದಿನ ಹತ್ತಿರವಾಗುತ್ತ ಇದ್ದ ಹಾಗೇ ನಮ್ಮ ಅತ್ತೆ ತೀರಿಕೊಂಡರು. ಕೊನೆಯ ದಿನಗಳಲ್ಲಿ ಅವರ ಹತ್ತಿರ ಇದ್ದು ಸೇವೆ ಮಾಡುವ ಭಾಗ್ಯ ನನಗೆ ದೊರೆಯಲಿಲ್ಲ. ಅವರ ಅಂತ್ಯ ಕ್ರಿಯೆಗಳನ್ನು ನಮ್ಮ ಮನೆಯವರು ವಿಜೃಂಭಣೆಯಿಂದ ನೆರವೇರಿಸಿದರು.

"ಗಂಡು ಮಗು ಹುಟ್ಟಿತು. ನಾಮಕರಣದ ದಿನ ಅವರು ಬಂದರು. ಬಹಳ ಬಡವಾಗಿದ್ದರು. ಪಕ್ಕೆ ಮೂಳೆಯೆಲ್ಲ ಕಾಣಿಸುತ್ತಿತ್ತು. ಮುಖ ಕಳೆಗುಂದಿತ್ತು. ಕಣ್ಣು ಗುಳಿ ಬಿದ್ದಿತ್ತು. ನೋಟ ನನ್ನ ಕರಳು ಬಾಯಿಗೆ ಬಂತು.

"ಆ ದಿನ ಸಾಯಂಕಾಲ ನಾನೊಬ್ಬಳೇ ಕುಳಿತಿದ್ದಾಗ ಅವರು ಹತ್ತಿರ ಬಂದು,

'ಪದ್ಮಾ' ಎಂದರು. ಕರುಣೆ ತುಂಬಿದ ಪ್ರೀತಿ ಸೂಸುವ ಮಾತು.

"ನಾನು ಕತ್ತೆತ್ತಿ ನೋಡಿದೆ.

ಅವರ ಕಣ್ಣು ಮಂಜಾಗಿತ್ತು. ನಡುಗುತ್ತಿರುವ ದನಿಯಲ್ಲಿ ಅವರು

'ಪದ್ಮಾ' ನಮ್ಮ ಆಸ್ತಿ ಮನೆ ಎಲ್ಲ ಹೋಯಿತು. ನಾವು ಈಗ ನಿರ್ಗತಿಕರಾದೆವು. ನಾನು ಕೆಟ್ಟೆ. ನಿನ್ನ ತಲೆಯ ಮೇಲೂ ಚಪ್ಪಡಿ ಎಳೆದೆ'

"ಒಂದು ಕ್ಷಣ ನನಗೆ ನನ್ನ ಕಿವಿಯನ್ನೇ ನಂಬಲು ಆಗಲಿಲ್ಲ. ಆ ವರ್ತಮಾನ ಅಷ್ಟು ಅನಿರೀಕ್ಷಿತವಾಗಿತ್ತು. ಸ್ವಲ್ಪ ಹೊತ್ತು ಬಿಟ್ಟು ಅವರೇ

"ಸಾಲ ಇನ್ನೂ ಇವೆ; ಸಾಲಗಾರರು ನನ್ನನ್ನು ಜೈಲಿಗೂ ಅಟ್ಟಬಹುದು."

ಈ ಮಾತು ಕೇಳಿಯಂತೂ ನಾನು ಕುಸಿದು ಹೋದೆ.

ನಾನು ಏನು ಹೇಳಬೇಕು ? ಕೇಳ ಬೇಕಾದ ಮಾತು ಸಾವಿರವಿತ್ತು.

ಆದರೆ ಕೇಳಲು ಬಾಯಿ ಬರಲಿಲ್ಲ.

‘ ನನಗೆ ಈಗ ದೇಶಾಂತರ ಹೋಗದೆ ದಾರಿಯಿಲ್ಲ.’ ಎಂದರು.

‘ ನೀವು ದೇಶಾಂತರ ಹೋದರೆ ನನ್ನ ಗತಿಯೇನು ? ’

‘ ನೀನು ಹೆದರಬೇಡ, ಪದ್ಮಾ . ನಾನು ಎಲ್ಲಾದರೂ ಹೋಗಿ ನಾವು ಜೀವಿಸುವುದಕ್ಕೆ ತಕ್ಕ ಏರ್ಪಾಟು ಮಾಡಿ ಬರುತ್ತೇನೆ. ’

‘ ಅಯ್ಯೊ, ನೀವಿಲ್ಲದೆ ನಾನು ಹೇಗೆ ಇರಲಿ ? ’

‘ ನಿನ್ನ ಬಾಣಂತನ ಮುಗಿವಷ್ಟರಲ್ಲಿ ನಾನು ಬಂದುಬಿಡುತ್ತೇನೆ. ಖಂಡಿತವಾಗಿ ಬೇರೆ ದಾರಿ ಇಲ್ಲ ಪದ್ಮಾ . ಬುದ್ಧಿಯಿಲ್ಲದೆ ನಾನು ಕೆಟ್ಟೆ, ನಿನ್ನನ್ನು ಬಾವಿಗೆ ತಳ್ಳಿದೆ ’ ಎನ್ನುತ್ತ ಗೋಳೋ ಎಂದು ಅತ್ತರು.

“ನನಗೆ ಏನು ಹೇಳಬೇಕೋ ತೋಚಲಿಲ್ಲ. ಏನೋ ಅನಾಹುತ ಸಂಭವಿಸುತ್ತದೆ ಎಂದು ನನಗೆ ಬಹಳ ದಿನಗಳಿಂದ ಅನ್ನಿಸುತ್ತಿದ್ದರೂ ಈ ರೀತಿ ಸರ್ವನಾಶ ಆಗಬಹುದೆಂದು ನಾನು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ಸುಖದಲ್ಲಿ ಹುಟ್ಟಿ ಸುಖದಲ್ಲಿ ಬೆಳೆದು ಕಷ್ಟಗಳನ್ನೇ ಕಂಡರಿಯದವರು ಅವರು. ಈಗ ಬೀದಿಯ ಭಿಕಾರಿಯಾಗಿ ಊರೂರು ಅಲೆಯುವ ಪಾಡು ಬಂತೆ? ಇಲ್ಲ, ಊರಲ್ಲೇ ಇದ್ದುಬಿಡಿ ಅಂತ ಹೇಗೆ ಹೇಳಲಿ? ಮನೆ ಮಠ ಆಸ್ತಿ ಏನೂ ಇಲ್ಲದೆ ಬದುಕುವುದಾದರೂ ಹೇಗೆ? ಅಥವಾ ಊರು ಬಿಟ್ಟು ಹೋದರೂ ಇವರು ಏನು ಮಾಡಬಲ್ಲರು ? ಯಾವ ಕೆಲಸವನ್ನೂ ಮಾಡಿ ಅರಿಯದ ಇವರು ಏನು ಮಾಡಬಲ್ಲರು? ನಾನು ದಿಗ್ಭ್ರಾಂತಳಾದೆ.

‘ ಅಯ್ಯೋ, ದೇವರೆ, ನಮಗೆ ಇದೆಂಥ ಗತಿ ಕೊಟ್ಟೆ!’ ಎಂದು ಹಲುಬಿದೆ. ಅವರು ಹಾಗೆ ಕೊಂಚ ಕುಳಿತಿದ್ದು,

‘ ನಾಳೆ ಬೆಳಗ್ಗೆ ನಾನು ಹೊರಡುತ್ತೇನೆ. ಚಿಂತೆ ಮಾಡಬೇಡ. ಬೇಗ ಹಿಂತಿರುಗಿ ಬಂದುಬಿಡುತ್ತೇನೆ ’ ಎಂದರು.

‘ ಎಲ್ಲಿಗೆ ಹೋಗುತ್ತೀರಿ ? ಏನು ಮಾಡುತ್ತೀರಿ ? ಬೇಡ, ನೀವು ಹೋಗಬೇಡಿ. ಗೇಣಿ ಗದ್ದೆಯನ್ನಾದರೂ ಮಾಡಿಕೊಂಡು ಇಬ್ಬರೂ ಕಷ್ಟಪಟ್ಟು ಬದುಕೋಣ. ನೀವು ದೇಶಾಂತರ ಹೋಗುವುದು ಖಂಡಿತ ಬೇಡ ’ ಎಂದೆ.

‘ ಇಲ್ಲ, ಪದ್ಮಾ ; ಅದು ಸಾಧ್ಯವಿಲ್ಲ. ನನ್ನ ಮೇಲೆ ಶೀನ ಭಂಡಾರಿ

ವಾರಂಟು ಹೊರಡಿಸಿದ್ದಾನೆ. ಜೈಲಿಗೆ ಹೋಗಿ ಮಾನ ಕಳೆದುಕೊಳ್ಳಲೇ ?'

'ಹಾಗಾದರೆ ಏನು ಮಾಡುತ್ತೀರಿ ?'

'ಘಟ್ಟದ ಮೇಲೆ ಹೋಗುತ್ತೇನೆ. ನನ್ನ ಸಂಗಡ ಸುಬ್ಬನೂ ಬರುತ್ತಾನೆ. ಅಡಿಕೆ ಸಂಭಾವನೆ ಮಾಡಿ ಸ್ವಲ್ಪ ದುಡ್ಡು ಸಂಪಾದಿಸಿಕೊಂಡು ಬಂದು ಋಣ ತೀರಿಸುತ್ತೇನೆ. ಆ ವರೆಗೆ ನಾನು ಇಲ್ಲಿ ಇರುವ ಹಾಗೇ ಇಲ್ಲ, ಪದ್ಮಾ. ನಿನ್ನನ್ನು ಬಿಟ್ಟು ಹೋಗುವುದು ನನಗೆ ಎಷ್ಟು ಸಂಕಟ ಎಂದು ಹೇಳಲಾರೆ. ಏನು ಮಾಡಲಿ ?' ಎಂದರು.

"ಸುಬ್ಬನ ಹೆಸರು ಕೇಳಿ ನನಗೆ ಕೊಂಚ ದಿಗಿಲಾಯಿತು. ಅವನು ಊರ ಸೋಮಾರಿಗಳಲ್ಲಿ ಪ್ರಮುಖ. ಅವನಿಗೆ ಹೆಂಡತಿ ಮಕ್ಕಳು ತಂದೆ ತಾಯಿ ಬಂಧು ಬಳಗ ಯಾರೂ ಇರಲಿಲ್ಲ. ಅದು ಹೇಗೆ ಜೀವಿಸುತ್ತಿದ್ದನೋ ದೇವರೇ ಬಲ್ಲ. ಆಗಾಗ ಮೇಳಗಳನ್ನು ಸೇರಿ ಹಾಸ್ಯಗಾರನ ಪಾತ್ರ ವಹಿಸುತ್ತಿದ್ದ. ನವರಾತ್ರಿ ಸಮಯದಲ್ಲಿ ಹಗಲು ವೇಷ ಹಾಕಿಕೊಂಡು ಊರೂರು ಸುತ್ತುತ್ತಿದ್ದ. ಬುದ್ಧಿವಂತ; ಹಾಸ್ಯದಲ್ಲಿ ಗಟ್ಟಿಗನು; ಸಭಿಕರಿಗೆ ಸವಿಯಾಗಿ ಮಾತನಾಡ ಬಲ್ಲ; ಆದರೆ ಜವಾಬುದಾರಿ ಇಲ್ಲದ ಮನುಷ್ಯ. ಅವನ ಸಂಗಡ ಇವರು ಹೋಗುತ್ತಾರೆ ಎಂದು ಕೇಳಿ ನನಗೆ ಹೆದರಿಕೆಯಾಯಿತು. ಸುಬ್ಬನೇ ನಮ್ಮ ಮನೆಯವರ ವಿನಾಶಕ್ಕೆ ಕಾರಣ ಎಂದೂ ಜನ ಹೇಳುತ್ತಿದ್ದರು.

'ಸುಬ್ಬನ ಸಂಗಡ ಹೋಗುತ್ತೀರಾ? ಅವನನ್ನು ನಂಬುವುದೇ ?' ಎಂದು ಕೇಳಿದೆ.

"ನನ್ನ ಮಾತನ್ನು ಕೇಳಿ ಕೊಂಚ ಅಸಮಾಧಾನದಿಂದ ಅವರು 'ಊರಿನ ಜನ ಏನು ಬೇಕಾದರೆ ಹೇಳಲಿ, ನನ್ನ ಮಟ್ಟಿಗೆ ಸುಬ್ಬ ಬಹಳ ನಂಬಿಕೆಯ ಮನುಷ್ಯ ? ಆ ಬಗ್ಗೆ ಚಿಂತೆ ಬೇಡ' ಎಂದರು.

"ಏಕೋ, ಅವರು ಮೋಸ ಹೋಗಿದ್ದಾರೆ ಅಂತ ನನಗೆ ಅನಿಸುತ್ತಿತ್ತು. ಆದರೆ ಏನು ಮಾಡಲಿ ಯಾವ ರೀತಿಯಿಂದ ಅವರಿಗೆ ತಿಳಿ ಹೇಳಲಿ? ಅಂತೂ ಅವರು ಊರು ಬಿಟ್ಟು ಹೋಗಬಾರದು ಅಂತ ಮಾತ್ರ ನನ್ನ ಅಂತರಂಗ ಹೇಳುತ್ತಿತ್ತು. ಅದರಿಂದ ಒಳ್ಳೆಯದಾಗುವುದಿಲ್ಲ, ಅಂತಲೂ ನನಗೆ ಅನ್ನಿಸುತ್ತಿತ್ತು. ಆದರೆ ಅವರಿಗೆ ಮತ್ತೆ ಯಾವ ಉಪಾಯ ಸೂಚಿಸಲಿ ?

"ನನಗೆ ಮಾತು ಕಟ್ಟಿಹೋಯಿತು. ಗೊಳೋ ಎಂದು ಬಿಕ್ಕಿಬಿಕ್ಕಿ

ಅತ್ತೆ. ಅವರೂ ಅತ್ತರು.

“ಪದ್ಮಾ, ಅಳಬೇಡ. ನೀನೇ ನನ್ನ ಧೈರ್ಯ, ನನ್ನ ಸರ್ವಸ್ವ. ನಿನಗಾಗಿ ನಾನು ಬದುಕುತ್ತೇನೆ. ದುಡಿಯುತ್ತೇನೆ. ನನಗಾಗಿ ನೀನು ಸ್ವಲ್ಪ ದಿನ ಇಲ್ಲೇ ನಿಮ್ಮ ತವರುಮನೆಯಲ್ಲಿ ಇರು. ನಾನು ಬೇಗ ಬಂದುಬಿಡುತ್ತೇನೆ?’ ಎಂದು ಎದ್ದು ನಿಂತರು.

“ನಾನು ಅಳುತ್ತಲೇ ಇದ್ದೆ. ಅವರು ಹೊರಟು ಹೋದರು.

“ನನಗೆ ಅರ್ಧ ಜೀವವೇ ಹೋದಂತಾಯಿತು. ಮರುದಿನವೇ ಊರಲ್ಲೆಲ್ಲ ಇದೇ ಸುದ್ದಿ: ಶಾಸ್ತ್ರಿ ದಿವಾಳಿ ತೆಗೆದು ಊರು ಬಿಟ್ಟು ಓಡಿ ಹೋದ ಅಂತ. ನಾನಾ ವಿಧವಾಗಿ ಜನ ಆಡಿಕೊಳ್ಳುತ್ತಿದ್ದುದು ನನ್ನ ಕಿವಿಗೆ ಬೀಳುತ್ತಿತ್ತು. ಯಾರೂ ಅವರ ವಿಷಯವಾಗಿ ಒಂದು ಸಹಾನುಭೂತಿಯ ಮಾತು ಆಡಿದ್ದು ನಾನು ಕೇಳಲಿಲ್ಲ. ನಮ್ಮಿಂದ ಸಹಾಯ ಪಡೆದವರು, ನಮ್ಮಲ್ಲಿ ಊಟ ಮಾಡುತ್ತ ಇದ್ದವರು ಎಲ್ಲರೂ ಈಗ ನಮ್ಮ ಯಜಮಾನರ ವಿರುದ್ಧವಾಗಿ ಮಾತಾಡತೊಡಗಿದರು. ‘ಕೂತುಂಡರೆ ಕುಡಿಕೆ ಹಣ ಸಾಲದು’ ಅಂತ ಗಾದೆ ಹೇಳಿದರು ಕೆಲವರು. ‘ಏನೋ ಸ್ವಲ್ಪ ಆಸ್ತಿಯಿದೆ ಅಂತ ಅಷ್ಟು ಅಹಂಕಾರ ಪಡಬಾರದು. ಮನೆಯನ್ನೇ ಧರ್ಮಛತ್ರ ಮಾಡಿದರೆ ಮತ್ತೇನಾಗುತ್ತದೆ?’ ಎಂದು ಅನೇಕರು ಹೇಳಿದರು. ‘ಕೆಟ್ಟ ಸಹವಾಸ. ದುರ್ಜನ ಸಹವಾಸ ಮಾಡಿದವರು ಮತ್ತೆ ಉದ್ಧಾರವಾಗುವುದುಂಟೆ’ ಎಂದರು ಬಹಳ ಜನ. ‘ಅವರೂ ಪಾಪ; ಒಳ್ಳೆಯವರು. ಯಾರಿಗೂ ಕೇಡು ಬಯಸಿದವರಲ್ಲ. ದಾನ ಧರ್ಮ ಮಾಡಿದವರು’ ಎಂದ ಜನ ಮಾತ್ರ ಬಹಳ ಸ್ವಲ್ಪ ಮಂದಿ.

“ಮಾರನೆಯ ದಿನ ನಮ್ಮ ತಾಯಿಗೆ ಈ ಸುದ್ದಿ ತಿಳಿದು ಅವಳು ತತ್ತರಿಸಿ ಹೋದಳು.

‘ಮಗಳೆ, ನಿನಗೆ ಎಂಥ ಗತಿ ಬಂತಮ್ಮ’ ಎಂದು ಅತ್ತಳು. ‘ರಾಮಚಂದ್ರ ಇಲ್ಲೇ ಇರಬಹುದಾಗಿತ್ತಲ್ಲ, ನಮ್ಮ ಮನೆಯಲ್ಲೇ. ಏಕೆ ದುಡುಕಿ ಊರು ಬಿಟ್ಟ’ ಎಂದಳು.

‘ಮಾನವಂತರು ಹೊರಟಿದ್ದಾರಮ್ಮ. ಜೈಲಿಗೆ ಹೋಗಿ ಅವಮಾನ ಪಡಬಾರದು, ಎಲ್ಲಾದರೂ ಹೋಗಿ ಸಂಪಾದನೆ ಮಾಡಿ ತರುತ್ತೇನೆ ಅಂತ ಹೋದರು. ಹೋಗಿಯೇ ಬಿಟ್ಟರು’ ಎಂದು ಅತ್ತೆ. ತಾಯಿಯೂ ಅತ್ತಳು. ನಾವು

ಮತ್ತೇನು ಮಾಡಬಲ್ಲೆವು ” ಎಂದು ಪದ್ಮಾ ಸುಮ್ಮನಾದಳು. ಅವಳ ಕಂಠ ಗದ್ಗದವಾಗಿತ್ತು. ಕಣ್ಣಿನಲ್ಲಿ ನೀರು ತುಂಬಿತ್ತು.

“ ಪದ್ಮಾ, ಸ್ವಲ್ಪ ಸಮಾಧಾನ ತಂದುಕೋ. ನೀನು ಬಹಳ ಹೊತ್ತು ಮಾತಾಡಿದ್ದೀಯೆ. ನಿನಗೆ ಸ್ವಲ್ಪ ವಿಶ್ರಾಂತಿ ಬೇಕು. ನಾನು ಊಟಮಾಡಿ ಬರುತ್ತೇನೆ ” ಎಂದು ಶೀನಪ್ಪ ಅಡಿಗೆ ಮನೆಯ ಕಡೆಗೆ ನಡೆದ.

ರಾತ್ರಿ ಹತ್ತು ಗಳಿಗೆ ಆಗಿದ್ದಿರಬಹುದು. ದಟ್ಟವಾದ ಕತ್ತಲು. ಆಗಾಗ ಮಿಂಚು ಥಳಥಳಿಸಿ ಕತ್ತಲನ್ನು ಕೊರೆಯುತ್ತಿತ್ತು.

ಪದ್ಮಾ ಹಾಗೇ ಒರಗಿಕೊಂಡು ಸೂರಿನ ಕಡೆ ನೋಡುತ್ತಿದ್ದಳು. ಕಳೆದ ದಿನಗಳ ವಿಚಿತ್ರ ಅನುಭವಗಳೆಲ್ಲ ಕಣ್ಣಿನ ಮುಂದೆ ಭೂತಾಕಾರದಲ್ಲಿ ನರ್ತಿಸುತ್ತಿದ್ದುವು. ಕಣ್ಣಿಂದ ನೀರು ಧಾರೆಧಾರೆಯಾಗಿ ಸುರಿಯುತ್ತಿತ್ತು.

## ೭

ಶೀನಪ್ಪ ಊಟ ಮಾಡುತ್ತಿದ್ದಾಗ ಅವಳು ಹಾಗೇ ಯೋಚಿಸುತ್ತ ಕುಳಿತಿದ್ದಳು. ತನ್ನ ಜೀವನ ಏಕೆ ಹೀಗಾಯಿತು ಎಂದು ಅವಳು ಬಹಳ ಸಲ ಚಿಂತಿಸಿದ್ದಳು. ಆದರೆ ಕಾರಣ ಮಾತ್ರ ಎಂದೂ ಸೂಚಿಸಿರಲಿಲ್ಲ. ಎಲ್ಲವೂ ಅನಿರೀಕ್ಷಿತವಾಗಿಯೇ ಸಂಭವಿಸಿತ್ತು. ಮನುಷ್ಯರ ಕೈವಾಡ ಕಂಡಲ್ಲೂ ಅದರ ಹಿಂದೆ ಇನ್ನಾವುದರದ್ದೋ ಸೂತ್ರ ಆಡುತ್ತಿರುವ ಹಾಗೆ ಅವಳಿಗೆ ಅನೇಕ ಸಲ ಅನ್ನಿಸಿತ್ತು. ಬಯ್ಯುವವರು, ಆಡಿಕೊಳ್ಳುವವರು, ಕನಿಕರಪಡುವವರು, ಸಹಾನುಭೂತಿ ತೋರಿಸುವವರು—ಎಲ್ಲರೂ ಮನುಷ್ಯ ಶಕ್ತಿಯನ್ನು ಮೀರಿದ ಇನ್ನಾವುದೋ ಶಕ್ತಿಯ ಕೈದಾಳಗಳಾಗಿರುವ ಹಾಗೆ, ತಮಗೆ ತಿಳಿಯದೆ ಯಾವುದೋ ಪ್ರವಾಹದಲ್ಲಿ ತೇಲಿ ಹೋಗುತ್ತಿರುವ ಹಾಗೆ ಅವಳಿಗೆ ತೋರುತ್ತಿತ್ತು. ಇದನ್ನೆಲ್ಲ ಯೋಚಿಸಿದಾಗ ತನ್ನ ಸಂಕಟದ ಪರಿಧಿ ಹಿಗ್ಗುತ್ತ ಹೋಗುತ್ತಿರುವ ಹಾಗೆ ಭಾಸವಾಗುತ್ತಿತ್ತು. ತನ್ನ ಬಾಳಿನ ಬೆಂಕಿಯ ಒಳಯೊಳಗೆ ಶೀನಪ್ಪನೂ ಬಂದು ಸೇರಿಕೊಂಡ—ಆಕಸ್ಮಾತ್ತಾಗಿ. ಇದರಿಂದ ತನ್ನ ಪಾಡಿಗೆ ತಾನು ಇದ್ದುಕೊಂಡಿದ್ದ ಆ ಸಜ್ಜನ ಏನೇನು ಪಾಡು ಪಡಬೇಕಾಗುವುದೋ ಎಂದು ಯೋಚಿಸಿದಾಗಲೆಲ್ಲ ಅವಳ ಹೃದಯವನ್ನು ಹಿಂಡಿದಂತೆ ಆಗುತ್ತಿತ್ತು.

ಸತ್ಯವನ್ನೇ ಹೇಳಬೇಕೆಂದು ಹೊರಟಿದ್ದಳು. ಆದರೆ ಮನುಷ್ಯ ತನ್ನ ಆತ್ಮದ ಮುಂದೆ ಕೂಡಾ ಸಂಪೂರ್ಣ ಸತ್ಯವನ್ನು ಹೇಳಬಲ್ಲನೆ? ಆ ಸತ್ಯದ ಸಂಪೂರ್ಣ ಜ್ಞಾನ ಅವನಿಗಿರುವುದೇ ಎಂದು ಅವಳು ಯೋಚಿಸುತ್ತಿರುವಾಗ ಶೀನಪ್ಪ ಊಟ ಮುಗಿಸಿಕೊಂಡು ಬಂದ.

"ನಿದ್ದೆ ಬರುತ್ತಿದ್ದರೆ ಮಲಗಿಕೊಂಡು ಬಿಡು, ಪದ್ಮಾ; ನಾಳೆ ಉಳಿದದ್ದನ್ನು ಹೇಳಬಹುದು" ಎಂದು ಶೀನಪ್ಪ, "ನಾಗಿ ಏಕೆ ಇನ್ನೂ ಬರಲಿಲ್ಲ!" ಎಂದು ಆಶ್ಚರ್ಯ ವ್ಯಕ್ತಪಡಿಸಿದ.

ಅಷ್ಟರಲ್ಲೇ 'ಒಡೇರೇ' ಎಂದು ಯಾರೋ ಬಾಗಿಲು ತಟ್ಟಿದರು. "ಓಹೋ, ನಾಗಿ ಬಂದೇ ಬಿಟ್ಟಳು" ಎನ್ನುತ್ತ ಶೀನಪ್ಪ ಹೋಗಿ ಬಾಗಿಲು ತೆರೆದ.

ನಾಗಿ ಒಳಗೆ ಬಂದವಳೇ ತನ್ನ ಸಂಚಿಯನ್ನು ಬಿಚ್ಚಿ ಎಲೆ ಅಡಕೆ ಹೊಗೆ

ಸೊಪ್ಪಿನ ತುಂಡನ್ನು ಬಾಯೊಳಗಿಟ್ಟು ಮೆಲುಕಾಡುತ್ತ ಒಂದು ಮೂಲೆಯಲ್ಲಿ ಕುಳಿತು,

"ಅಮ್ಮಾ, ಈಗ ಹೇಗಿದ್ದೀರಿ?" ಎಂದು ಕೇಳಿದಳು.

"ಹುಷಾರಾಗಿದ್ದೇನೆ, ನಾಗಿ. ಜ್ವರ ಏನೂ ಇಲ್ಲ" ಎಂದು ಪದ್ಮಾ ಶೀನಪ್ಪನ ಕಡೆಗೆ ತಿರುಗಿ, "ನಿದ್ದೆಯೇನೂ ಬರುತ್ತಿಲ್ಲ. ಹೇಗೂ ಈ ಗೋಳಿನ ಕಥೆ ಶುರು ಮಾಡಿ ಆಗಿದೆ, ಮುಗಿಸಿಬಿಡುತ್ತೇನೆ" ಎಂದಳು.

"ಹಾಗೇ ಆಗಲಿ" ಎನ್ನುತ್ತ ಶೀನಪ್ಪ ಕೇಳಲು ಸಿದ್ಧವಾಗಿ ಕುಳಿತು ಕೊಂಡು ಎಲೆ ಅಡಕೆಯ ಡಬ್ಬವನ್ನು ಹತ್ತಿರಕ್ಕೆ ಎಳೆದುಕೊಂಡ.

ಪದ್ಮಾ ತನ್ನ ಕಥೆಯನ್ನು ಮುಂದುವರಿಸಿದಳು: "ಅವರು ಹೊರಟು ಹೋದ ಮೇಲೆ ನನ್ನ ಮನಸ್ಸಿಗೆ ಒಂದು ಕ್ಷಣವೂ ಶಾಂತಿಯಿರಲಿಲ್ಲ. ಸದಾ ಅವರದೇ ಚಿಂತೆ. ಎಲ್ಲಿ ಹೋದರೋ, ಹೇಗಿದ್ದಾರೋ, ಯಾವ ಪಾಡು ಪಡುತ್ತಿದ್ದಾರೋ ಎಂದು. ಊಟ ಮಾಡುವಾಗ ಅವರಿಗೆ ಊಟವಾಯಿತೋ ಇಲ್ಲವೋ ಎಂಬ ಯೋಚನೆ ಬಂದು ಬಾಯಿಗಿಟ್ಟ ತುತ್ತು ಗಂಟಲೊಳಕ್ಕೆ ಇಳಿಯುತ್ತಿರಲಿಲ್ಲ. ನಾನು ಕಷ್ಟಪಡುವುದನ್ನು ಕಂಡು ನಮ್ಮ ತಾಯಿಯೂ ಕೊರಗ ತೊಡಗಿದಳು. ನಮ್ಮ ತಂದೆ ತೀರಿದ ಮೇಲೆ ಅರ್ಧಕ್ಕರ್ಧ ಕುಗ್ಗಿ ಹೋಗಿದ್ದ ನಮ್ಮ ತಾಯಿ ಇನ್ನಷ್ಟು ಕುಗ್ಗಿದಳು; ದಿನದಿನಕ್ಕೆ ಕೃಶಳಾಗತೊಡಗಿದಳು

"ತಿಂಗಳು ಕಳೆಯಿತು. ಆರು ತಿಂಗಳಾಯಿತು. ಅವರು ಬರಲಿಲ್ಲ. ಅವರ ಕಡೆಯಿಂದ ಯಾವುದೂ ಸುದ್ದಿಯಿಲ್ಲ."

"ಒಂದು ವರ್ಷವಾಯಿತು. ಎರಡು ವರ್ಷವಾಗುತ್ತ ಬಂತು. ಆದರೂ ಅವರು ಬರಲೂ ಇಲ್ಲ. ಅವರ ಕಡೆಯಿಂದ ಸಮಾಚಾರವೂ ಇಲ್ಲ. ಆ ಎರಡು ವರ್ಷ ಹೇಗೆ ಕಳೆಯಿತೋ ನನಗೇ ಆಶ್ಚರ್ಯ. ದಿನ ಒಂದು ಯುಗವಾಗಿ ಕಳೆಯಿತು.

"ಮನಸ್ಸಿನಲ್ಲಿ ನಾನಾ ವಿಧವಾದ ಶಂಕೆ, ಅಧೈರ್ಯ. ಏನೋ ಇಂಥದು ಎಂದು ಹೇಳಲಾಗದ ಭಯ. ಉಂಡ ಅನ್ನ ಮೈಗೆ ಹಿಡಿಯದು; ರಾತ್ರಿ ಕಣ್ಣಿಗೆ ಕಣ್ಣು ಹತ್ತದು. ನಿದ್ದೆ ಬಂದರೂ ಕೆಟ್ಟ ಕನಸು.

"ಆದರೂ ದಿನದ ಮೇಲೆ ದಿನ ಕಳೆಯುತ್ತದೆ. ಬದುಕು ಸಾಗುತ್ತದೆ, ಸಾವು ಬರುವುದಿಲ್ಲ. ಮನೆಯಲ್ಲಿ ನನ್ನ ಅತ್ತಿಗೆಗೆ ನಾನು ಅಲ್ಲೇ ಇದ್ದದ್ದು;

ಅಷ್ಟು ಹಿತವಲ್ಲ ಎಂದು ನನಗೆ ತೋರುತ್ತಿತ್ತು. ಚಂದ್ರಶೇಖರ ಎಂದಿನಂತೆಯೇ ಇದ್ದ. ನನ್ನ ತಾಯಿ ಇದ್ದದ್ದು ಅದೇ ನನಗೆ ದೊಡ್ಡ ಆಧಾರ. ಅಮ್ಮ ಕಣ್ಣು ಮುಚ್ಚಿದರೆ ನನಗೇನು ಗತಿ ಅಂತ ಆಗಾಗ್ಗೆ ನಾನು ಯೋಚಿಸಿ ನಡುಗುತ್ತಿದ್ದೆ.

"ಒಂದು ದಿನ ಯಾರೋ ಮನೆಗೆ ಬಂದವರು ಸುಬ್ಬು ಊರಿಗೆ ಬಂದಿದ್ದಾನೆ ಎಂದರು. ಅದನ್ನು ಕೇಳಿ ನನ್ನ ಮನಸ್ಸಿನಲ್ಲಿ ಹೊಸ ಆಶೆ ಮೂಡಿತು. ಹಾಗಾದರೆ ಅವರೂ ಬಂದಿರಬಹುದಲ್ಲ? ಬಂದಿದ್ದರೆ ಇನ್ನೂ ಇಲ್ಲಿಗೆ ಯಾಕೆ ಬರಲಿಲ್ಲ ಎಂದು ಆಶೆಯ ಜೊತೆಗೆ ಚಿಂತೆಯೂ ಶುರುವಾಯಿತು. ಅವನು ಬಂದ–ಇವರು ಬರಲಿಲ್ಲ. ಎಂದರೆ? ಮುಂದಿನದನ್ನು ಯೋಚಿಸಲಾರದೆ ಆ ದಿನವೆಲ್ಲ ಅಳುತ್ತ ಕುಳಿತೆ.

"ಮಳೆಗಾಲ ಕಳೆದಿತ್ತು. ನವರಾತ್ರಿಯ ಸಮಯ. ಆಗಾಗ ಮಾತ್ರ ಮಳೆ ಹನಿ ಹಾಕಿ ಹೋಗುತ್ತಿತ್ತಲ್ಲದೆ ಸದಾ ಕಾಲ ಹೊಯ್ಯುತ್ತಿರಲಿಲ್ಲ. ಗದ್ದೆಗಳಲ್ಲಿ ಪೈರು ಮಾಗಿತ್ತು; ಕೆಲವು ಕಡೆ ಕೊಯ್ಲೂ ಶುರುವಾಗಿತ್ತು.

"ಆ ದಿನ ಸಂಜೆ ಹೊತ್ತು ಮುಳುಗಿತ್ತು. ಸುತ್ತಲೂ ಮಸಕುಮಸಕಾಗಿತ್ತು. ಯಾವುದೂ ಸರಿಯಾಗಿ ಕಾಣುತ್ತಿರಲಿಲ್ಲ. ನಮ್ಮ ಮನೆಯ ಹಿಂಬದಿಯಲ್ಲಿ ಒಂದು ದಿಣ್ಣೆ; ದಿಣ್ಣೆಯ ಮೇಲೆ ಸಣ್ಣದೊಂದು ಹಾಡಿ; ಆಚೆಗೆ ನಾಲ್ಕೈದು ಗದ್ದೆಗಳು, ನಮ್ಮ ಕರುವೊಂದು ಹೊತ್ತು ಮುಳುಗಿದ್ದರೂ ಬಾರದೆ ಇದ್ದದ್ದನ್ನು ಕಂಡು ನಾನು ಅದನ್ನು ಹುಡುಕಿಕೊಂಡು ದಿಣ್ಣೆಯೇರಿ ಗದ್ದೆಗೆ ಇಳಿದಿದ್ದೆ. ಗದ್ದೆಯ ಅಂಚಿನ ಮೇಲೆ ಹಾಡಿಯ ಮರಗಳ ನೆಳಲು ಬಿದ್ದು ಕತ್ತಲು ಕೊಂಚ ದಟ್ಟವಾಗಿತ್ತು.

"ಅಂಚಿನ ಮೇಲೆ ನಡೆದು ಒಂದೆರಡು ಮಾರು ದೂರ ನಾನು ಹೋಗಿರಬಹುದು ಅಷ್ಟರಲ್ಲಿ ಯಾರೋ 'ಪದ್ಮಾ' ಎಂದು ಕೂಗಿದರು. ಹಿಂತಿರುಗಿ ನೋಡಿದೆ ಯಾರೂ ಕಾಣಿಸಲಿಲ್ಲ. ಎದೆ ನಡುಗಿತು. ಯಾರು ನನ್ನನ್ನು ಅಲ್ಲಿ 'ಪದ್ಮಾ' ಎಂದು ಕರೆಯುತ್ತಿರಬಹುದು ಎಂದು ಭಯದಿಂದ ನಡುಗುತ್ತಿರಲು 'ಪದ್ಮಾ' ಹೆದರಬೇಡ; ನನ್ನ ಗುರುತು ಹತ್ತಲಿಲ್ಲವೆ?' ಎಂದು ಕೇಳುತ್ತ ಯಾರೋ ಕತ್ತಲಿಂದ ಹೊರಬಂದರು. ನನ್ನ ಕೈಕಾಲು ನಡುಗುತ್ತಿತ್ತು. ಕೂಗಿಕೊಳ್ಳಬೇಕೆಂದು ಬಾಯಿ ತೆರೆದರೆ ಮಾತೇ ಹೊರಡಲಿಲ್ಲ.

"ಆದರೂ ಆ ಕಡೆಯೇ ನೋಡುತ್ತಿದ್ದೆ. ಯಾರೋ ನನ್ನ ಕಡೆಗೇ ಬರು

ತ್ತಿದ್ದರು. ಮಬ್ಬುಗತ್ತಲಲ್ಲಿ ಯಾವುದೂ ಸರಿಯಾಗಿ ಕಾಣುತ್ತಿರಲಿಲ್ಲ. ಸಂನ್ಯಾಸಿಗಳಂತೆ ಯಾರೋ ಕಪನಿ ಹಾಕಿ ಕೊಂಡಿದ್ದರು. ಮುಖದ ತುಂಬ ಗಡ್ಡ—ಇಷ್ಟು ಮಾತ್ರ ತಿಳಿದು ನನ್ನ ಭಯ ಇನ್ನಷ್ಟು ಹೆಚ್ಚಿತು.

" ಆ ರೂಪ ನನಗೆ ತೀರ ಹತ್ತಿರ ಬಂತು. ನಾನು ಹೆದರಿ ಹಿಮ್ಮೆಟ್ಟಿದೆ. ಅದನ್ನು ಕಂಡು ' ಪದ್ಮಾ, ನಾನು, ನಾನು, ಗುರುತು ಹತ್ತಲಿಲ್ಲವೆ ? ನಿನ್ನ ಗಂಡ ' ಎಂದರು.

" ಗುರುತು ಹತ್ತಲಿಲ್ಲ. ಆದರೆ ಆ ಧ್ವನಿ; ಹೌದು, ಅವರದೇ—ಸಂದೇಹವಿಲ್ಲ. ಆ ವೇಷವನ್ನು ಕಂಡು ನನಗೆ ಸಹಿಸುವುದಾಗಲಿಲ್ಲ. ' ಅಯ್ಯೋ ' ಎನ್ನುತ್ತ ಅವರ ಕಾಲ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅತ್ತೆ, ಮಾತು ಹೊರಡಲಿಲ್ಲ.

" ಒಂದು ಕ್ಷಣ ಅವರು ಮಾತಾಡಲಿಲ್ಲ. ಅವರೂ ಅಳುತ್ತಿದ್ದಿರಬೇಕು. ಬಿಕ್ಕುತ್ತಿದ್ದುದು ನನಗೆ ಸ್ಪಷ್ಟವಾಗಿ ಕೇಳುತ್ತಿತ್ತು.

' ಪದ್ಮಾ, ಪದ್ಮಾ, ಪದ್ಮಾ, ಅಳಬೇಡ ' ಎಂದು ಅವರು ನನ್ನನ್ನು ಮೇಲಕ್ಕೆತ್ತಿ ತಬ್ಬಿಕೊಂಡರು. ಆ ವಿಚಿತ್ರ ಸನ್ನಿವೇಶದಲ್ಲೂ ನನಗೆ ಏನೋ ಅಪೂರ್ವ ಸಂತೋಷವಾಯಿತು. ಕಣ್ಣೊರಸಿಕೊಂಡು,

' ಇದೇನು ಹೀಗೆ, ಈ ವೇಷ ? ನನಗೆ ಎಷ್ಟು ಹೆದರಿಕೆಯಾಯಿತು ಅಂತೀರಿ ! ' ಎಂದೆ.

' ನೀನು ಹೆದರಿದ್ದೂ ಸಹಜವೇ. ಈ ವೇಷ ; ಈ ಕತ್ತಲು ; ಅಲ್ಲದೆ ಅನಿರೀಕ್ಷಿತ ' ಎಂದರು.

' ಈ ವೇಷ ? ಏಕೆ ? ' ಎಂದೆ.

' ಇದೊಂದು ವೇಷ ಅಷ್ಟೆ. ಸಂನ್ಯಾಸ ತೆಗೆದುಕೊಂಡೆನೆಂದು ತಿಳಿದೆಯಾ ?' ಎಂದರು.

'ಏನೋ ಯಾರಿಗೆ ಗೊತ್ತು? ಬೇಗ ಬರುತ್ತೇನೆಂದು ಹೇಳಿ ಹೋದವರು ಎರಡು ವರ್ಷವಾಗುತ್ತ ಬಂದರೂ ಬರಲಿಲ್ಲ. ಒಂದು ಸುದ್ದಿಯೇ, ಸಮಾಚಾರವೇ—ಯಾವುದೂ ಇಲ್ಲ. ನಾನು ಇನ್ನೇನು ತಿಳಿಯಬೇಕು ? ನೀವು ಇಷ್ಟು ನಿರ್ದಯರಾಗುತ್ತೀರಿ ಎಂದು ನಾನು ಯೋಚಿಸಿರಲಿಲ್ಲ. ನಾನು ಜೀವದಿಂದಿರುವುದನ್ನೇ ನೀವು ಮರೆತಿದ್ದೀರೋ ಎಂದು ನನಗೆ ಹೆದರಿಕೆ ಹುಟ್ಟಿತ್ತು'ಎಂದೆ.

" ಅವರು ಹಾಗೇ ಸ್ವಲ್ಪ ಹೊತ್ತು ನಿಂತಿದ್ದು ' ಪದ್ಮಾ, ನನ್ನ ಗ್ರಹಚಾರ ಬಹಳ ಕೆಟ್ಟದ್ದು. ನನ್ನನ್ನು ಕೈಹಿಡಿದು ನೀನೂ ಕೆಟ್ಟೆ. ಏನು ಮಾಡಲಿ ಹೇಳು. ಬೇಗ ಬಂದು ನಿನ್ನನ್ನು ಕಂಡು ಧೈರ್ಯ ಹೇಳಿಯಾದರೂ ಹೋಗಬೇಕೆಂದು ಬಹಳ ಪ್ರಯತ್ನ ಪಟ್ಟೆ. ಆಗಲಿಲ್ಲ.' ಎಂದು ತಾವು ಪಟ್ಟ ಕಷ್ಟವನ್ನು ಸಂಕ್ಷೇಪವಾಗಿ ಹೇಳಿದರು.

"ಅವರು ಊರೂರು ಅಲೆದರಂತೆ. ಹಾಲಾಡಿಯಿಂದ ಶಂಕರನಾರಾಯಣ, ಅಲ್ಲಿಂದ ಹೊಸಂಗಡಿ; ಹುಲಿಕಲ್ಲು ಘಾಟಿಯ ಮೂಲಕ ಮೈಸೂರು ಸೀಮೆಗೆ ಹೋದರು. ಆಗಲೇ ಅವರಿಗೆ ಹೋದ ಜೀವ ಮರಳಿ ಬಂದ ಹಾಗೆ ಆಯಿತು. ಜೈಲಿನ ಕೆಟ್ಟ ಕನಸು ಕಳೆದು ಕೊಂಚ ಧೈರ್ಯ ಬಂತು. ಅಲ್ಲಿಂದ ಹಾಗೇ ನಡೆದುಕೊಂಡೇ ಕಳೂರುಕಟ್ಟೆಗೆ ಹೋದರು. ಎಲ್ಲಿ ಹೋದರೂ ದುರದೃಷ್ಟ ಬೆನ್ನು ಬಿಡಲಿಲ್ಲ. ಊಟ ಮಾಡಿದ ದಿನವೆಷ್ಟೊ, ಮಾಡದ ದಿನವೆಷ್ಟೊ! ಅವರು ಸುಬ್ಬ ಇಬ್ಬರೂ ಸೇರಿ ಅಡಿಕೆ ಸಂಭಾವನೆ ಮಾಡಿ ಅಷ್ಟು ಹಣ ಕೂಡಿಸಿದರು. ಆ ದುಡ್ಡಿನಿಂದ ವ್ಯಾಪಾರಕ್ಕೆ ಶುರುಮಾಡಿದರು.

' ಪದ್ಮಾ, ನನ್ನ ವ್ಯಾಪಾರ ಶುರುವಾಗಿ ಈಗೀಗ ಒಂದು ಹದಕ್ಕೆ ಬರುತ್ತಿದೆ. ಏನೋ ಅಷ್ಟು ವ್ಯಾಪಾರ ಆಗುತ್ತಿದೆ. ಕೈಗೆ ದುಡ್ಡು ಹತ್ತಬೇಕಾದರೆ ಇನ್ನೂ ಎರಡು-ಮೂರು ತಿಂಗಳು ಆಗಬೇಕು. ನೀನು ಎಷ್ಟು ಕೊರಗಿದ್ದೀಯೋ, ಚಿಂತೆಯಿಂದ ಎಷ್ಟು ಸೊರಗಿದ್ದೀಯೋ ಎಂದು ಯಾವಾಗಲೂ ಚಿಂತೆ

'ಈಗ ನಿನ್ನನ್ನು ನೋಡಿಕೊಂಡು ಹೋಗಲು ಬಂದೆ. ನಾನು ಬಂದದ್ದು ಯಾರಿಗೂ ಗೊತ್ತಾಗಬಾರದು ಅಂತ ಈ ವೇಷದಲ್ಲಿ ಬಂದದ್ದು. ಇನ್ನು ಎರಡೇ ತಿಂಗಳು. ನಿನ್ನನ್ನು ಕರೆದು ಕೊಂಡು ಹೋಗುತ್ತೇನೆ ' ಎಂದರು.

' ಎರಡು ತಿಂಗಳು ಅಂತ ಹೇಳುತ್ತೀರಿ. ಬರುವುದು ಇನ್ನು ಎಷ್ಟು ವರ್ಷಗಳ ಮೇಲೋ. ನಾನು ಇಲ್ಲಿ ಹೇಗೆ ಇರಬೇಕು-ಹೇಳಿ.' ಎಂದೆ.

'ಖಂಡಿತ ಹಾಗೆ ಚಿಂತೆ ಮಾಡಬೇಡ, ಪದ್ಮಾ. ಇನ್ನು ಯಾವ ತೊಂದರೆಯೂ ಇಲ್ಲ. ನನ್ನ ಗ್ರಹಚಾರ ಈಗ ಸರಿಯಾಗಿದೆ. ಇನ್ನೆರಡು ತಿಂಗಳು, ವ್ಯಾಪಾರ ಸರಿಯಾಗಿ ನಡೆಯುತ್ತದೆ. ಬಂದು ನಿನ್ನನ್ನು ಕರೆದು ಕೊಂಡು ಹೋಗುತ್ತೇನೆ ' ಎಂದು ಭರವಸೆ ಕೊಟ್ಟರು.

"ಇಷ್ಟು ಹೊತ್ತಿಗೆ ಸರಿಯಾಗಿ ಕತ್ತಲಾಗಿತ್ತು. ಗದ್ದೆಯ ಆ ಕಡೆ ಮೂಳೆ

ಯಲ್ಲಿ ಕರು ‘ ಅಂಬಾ’ ಎಂದು ಕೂಗಿತು. ಅದೂ ನನ್ನ ಕರೆಯನ್ನು ಕೇಳಿ ಹತ್ತಿರ ಬಂತು.

“ ಅವರು ‘ ಪದ್ಮಾ , ಕತ್ತಲಾಯಿತು; ನೀನು ಮನೆಗೆ ಹೋಗು. ನಾನು ನಾಳೆ ಬೆಳಗ್ಗೆ ನಸುಕಿನಲ್ಲೇ ಹೊರಟು ಹೋಗುತ್ತೇನೆ. ಇನ್ನು ಎರಡೇ ತಿಂಗಳಲ್ಲಿ ಹಿಂತಿರುಗಿ ಬರುತ್ತೇನೆ ’ ಎಂದರು.

‘ ಬೇಡ, ನೀವು ಹೋಗಬೇಡಿ ಇಷ್ಟು ಬೇಗ. ಎರಡು ದಿನವಾದರೂ ಇದ್ದು ಹೋಗಿ. ನಮ್ಮ ತಾಯಿಗೆ ಸಂತೋಷವಾಗುತ್ತದೆ.’

‘ ಇಲ್ಲ ಪದ್ಮಾ . ನಾನು ಬಂದದ್ದು ಯಾರಿಗೂ ತಿಳಿಯಬಾರದು ಅದಕ್ಕಾಗಿಯೇ ಈ ವೇಷದಲ್ಲಿ ಬಂದದ್ದು . ಬಲವಂತ ಮಾಡಬೇಡ’ ಎಂದರು.

‘ ಹಾಗಾದರೆ, ಈ ರಾತ್ರಿಯಾದರೂ ಮನೆಗೆ ಬಂದು ಊಟಮಾಡಿ, ರಾತ್ರಿ ಕಳೆದು ಹೊರಟು ಹೋಗಿ ’ ಎಂದೆ.

“ ಅವರು ಸ್ವಲ್ಪ ಯೋಚನೆ ಮಾಡಿ ‘ ಹಾಗೇ ಆಗಲಿ, ಪದ್ಮಾ . ಆದರೆ ನಾನು ಅಂತ ಯಾರಿಗೂ ಹೇಳಬೇಡ ಯಾರೋ ಗೋಸಾವಿ ಅಂತ ತಿಳಿಯಲಿ. ಬೆಳಗ್ಗೆ ಎದ್ದು ಹೋಗುತ್ತೇನೆ. ’ ಎಂದರು.

“ಗೋಸಾವಿ ಎಂದ ಮಾತು ಕೇಳಿ ನನಗೆ ಬಹಳ ಸಂಕಟವಾಯಿತು.

‘ ನೀನು ಮನೆಗೆ ಹೋಗು, ನಾನು ಆಮೇಲೆ ಬರುತ್ತೇನೆ ’ ಎಂದರು.

“ ನಾನು ಕರುವನ್ನಟ್ಟಿಕೊಂಡು ಮನೆಗೆ ಹೋದೆ. ನನಗೆ ಏನೋ ಒಂದು ಬಗೆಯ ಅಪೂರ್ವ ಸಂತೋಷವಾಗಿತ್ತು. ಜಡವಾಗಿದ್ದ ಮನಸ್ಸು ಕುದುರೆಯಂತೆ ಕುಣಿಯುತ್ತಿತ್ತು.

“ಸ್ವಲ್ಪ ಹೊತ್ತು ಬಿಟ್ಟು ಅವರೂ ಬಂದರು. ಪರದೇಶಿ ಬೈರಾಗಿ; ರಾತ್ರಿ ಇಲ್ಲೇ ಇದ್ದು ಹೋಗುತ್ತೇನೆ ’ ಎಂದು ಕೇಳಿಕೊಂಡರು. ಅವರು ಬಹಳ ಚೆನ್ನಾಗಿ ನಟಿಸಿದರು ‘ ಅಬ್ಬಾ ’ ಎಷ್ಟು ನಟನೆ ಕಲಿತಿದ್ದಾರೆ’ ಎಂದುಕೊಂಡೆ. ಕತ್ತಲು. ಕಂದೀಲಿನ ಬೆಳಕು. ಅವರು ಒಂದು ಮೂಲೆಯಲ್ಲಿ ಕೂತಿದ್ದರು. ಯಾರಿಗೂ ಗುರುತು ಹತ್ತಲಿಲ್ಲ ಅವರು ಏನೂ ಹೇಳದೆ ಇದ್ದಿದ್ದರೆ ನನಗೂ ಗುರುತು ಹತ್ತುತ್ತಿರಲಿಲ್ಲ.

“ ಒತ್ತೊತ್ತಿ ಬರುತ್ತಿದ್ದ ದುಃಖವನ್ನು ನುಂಗಿಕೊಂಡು ನಾನೇ ಅವರಿಗೆ ಬಡಿಸಿದೆ– ಹೊರಗೆ ಜಗಲಿಯ ಮೇಲೆ. ಮನೆ ಅಳಿಯನಿಗೆ ಹೊರಗೆ ಜಗ

ಲಿಯ ಮೇಲೆ ಊಟ–ಎಂದು ಯೋಚಿಸಿದಾಗ ನನಗೆ ಬಹಳ ಸಂಕಟವಾಯಿತು. 'ವಿಧಿ ಮನುಷ್ಯನನ್ನು ಯಾವ ರೀತಿ ಆಡಿಸುತ್ತದೆ ಎಂದುಕೊಂಡೆ. ಊಟವಾಯಿತು; ಎಲ್ಲರೂ ಮಲಗಿಕೊಂಡರು.

"ನನಗೆ ಬೇಗ ನಿದ್ದೆ ಬರಲಿಲ್ಲ. ಮನಸ್ಸಿನಲ್ಲಿ ಏನೇನೋ ಚಿಂತೆಗಳು. ಆದರೂ ಅವರನ್ನು ಕಂಡ ಸಂತೋಷದಲ್ಲಿ ಎಲ್ಲವೂ ಮರೆಯಿತು. ಮನಸ್ಸು ಗಾಳಿ ತುಂಬಿದ ಹಾಯಿಯಂತೆ ಆಯಿತು."

"ಸುಮಾರು ಮಧ್ಯರಾತ್ರಿಯ ಸಮಯವಾಗಿರಬಹುದು. ಎಲ್ಲರಿಗೂ ನಿದ್ರೆ ಬಂದಿರಬೇಕು. ನನ್ನ ತಮ್ಮ, ಅತ್ತಿಗೆ ಕೋಣೆಯಲ್ಲಿ ಮಲಗಿದರು. ನಾನು ಪಡಸಾಲೆಯಲ್ಲಿ ಮಲಗಿದ್ದೆ. ನಮ್ಮ ತಾಯಿ ಪಡಸಾಲೆಯ ಪಕ್ಕದ ಒಳ ಮನೆಯಲ್ಲಿ ಮಲಗಿದ್ದಳು. ಸಾಮಾನ್ಯವಾಗಿ ಬಹಳ ರಾತ್ರಿ ವರೆಗೂ ನಿದ್ದೆ ಹತ್ತದಿದ್ದ ನಮ್ಮ ತಾಯಿಗೆ ಆ ದಿನ ಕೊಂಚ ಬೇಗ ನಿದ್ದೆ ಬಂದಿರಬೇಕು. ಸಣ್ಣಗೆ ಅವಳು ಗೊರಕೆ ಹೊಡೆಯುವುದು ಕೇಳುತ್ತಿತ್ತು.

"ಮನೆಯ ಹೊರಗೆ ಬಲವಾದ ಪಾಗಾರ– ಹೆಬ್ಬಾಗಿಲು ಇದದ್ದರಿಂದ ಒಳಗೆ ಯಾವ ರೀತಿಯ ಭೀತಿಗೂ ಅವಕಾಶವಿರಲಿಲ್ಲ. ಹಾಗೆ ನಾನು ಸುಮ್ಮನೆ ಬಾಗಿಲು ಮುಂಪಕ್ಕೆ ಮಾಡಿಕೊಂಡಿದ್ದೆ–ಚಿಲಕ ಹಾಕಿರಲಿಲ್ಲ.

"ಯಾರೋ ಮೆಲ್ಲನೆ ಬಾಗಿಲು ತೆರೆದ ಹಾಗಾಯಿತು. ನನ್ನ ಎದೆ ಡವಗುಟ್ಟ ತೊಡಗಿತ್ತು. ಸರಿಯಾಗಿ ಕಣ್ಣು ತೆರೆದು ನೋಡಿದೆ ಬಾಗಿಲು ತೆರೆದು ಹಾಗೇ ಮುಚ್ಚಿತು. ನನಗೆ ಹೆದರಿಕೆಯಾಯಿತು. ಇನ್ನೇನು ನಾನು ಕೂಗಿಕೊಳ್ಳಬೇಕು. ಅಷ್ಟರಲ್ಲಿ 'ಪದ್ಮಾ ಹೆದರಬೇಡ, ನಾನು' ಎಂದರು.

"ಅವರು ಬಂದರು. ಆಗುವುದು ಆಗಿಹೋಯಿತು. ನನ್ನ ನಿಜವಾದ ಯಾತನೆ ಶುರುವಾದದ್ದು ಆ ರಾತ್ರಿಯಿಂದಲೇ ಎನ್ನಬೇಕು. ಆದರೆ ಅವರದ್ದೇ ತಪ್ಪು ಎಂದು ನಾನು ಹೇಳಲಾರೆ. ಅಂತೂ ನಡೆದದ್ದು ನಡೆದು ಹೋಯಿತು. ಆಗ ಯಾವ ಚಿಂತೆಯೂ ನನ್ನನ್ನು ಕಾಡಲಿಲ್ಲ. ಮನಸ್ಸು ಶಾಂತವಾಗಿತ್ತು. ಎಲ್ಲವೂ ಒಳ್ಳೆಯದಾಗುವುದು, ನನ್ನ ಕಷ್ಟ ಕೊನೆಗೊಳ್ಳುವುದು ಎಂಬ ಭರವಸೆ ಮನಸ್ಸಿನಲ್ಲಿ ಬೆಳಕು ಚೆಲ್ಲಿತ್ತು.

"ಆದರೆ ಅನ್ನಿಸಿದ್ದು ಒಂದು, ಆದದ್ದು ಇನ್ನೊಂದು.

"ಅವರು ಬಂದು ಹೋದ ಸಂಗತಿ ಯಾರಿಗೂ ಗೊತ್ತಾಗಲಿಲ್ಲ. ನಮ್ಮ ತಾಯಿಗೆ ಕೂಡಾ ಅದನ್ನು ನಾನು ಹೇಳಲಿಲ್ಲ. ಅವರು ಬಂದು ಹೋದ ಸಂತೋ

ಷವನ್ನು ಯಾರಿಗಾದರೂ ಹೇಳಬೇಕೆಂದು ಹೃದಯ ತುಡಿಯುತ್ತಿತ್ತು. ಬಹಳ ಕಷ್ಟಪಟ್ಟು ತಡೆದುಕೊಂಡೆ. ಆದರೆ ಎಲ್ಲವನ್ನೂ ನಮ್ಮ ತಾಯಿಗೆ ಬಿಚ್ಚಿ ಹೇಳಬೇಕಾದ ಪ್ರಸಂಗ ಬರುತ್ತದೆಂದು ಆಗ ಭಾವಿಸಿರಲಿಲ್ಲ.

" ಎರಡು ತಿಂಗಳೇನು ಮಹಾ, ಬಹಳ ಬೇಗ ಕಳೆದು ಹೋಗುತ್ತದೆಂದು ಎಣಿಸಿದೆ. ಅಷ್ಟರಲ್ಲೇ ಅವರು ಬರುತ್ತಾರೆ. ನನ್ನನ್ನು ಕರೆದುಕೊಂಡು ಹೋಗುತ್ತಾರೆ. ಮತ್ತೆ ಯಾವ ತೊಂದರೆಯೂ ಇಲ್ಲ. ಮತ್ತೆ ಮೊದಲಿನ ಹಾಗೆಯೇ ಜೀವನ ಸುಗಮವಾಗುತ್ತದೆ, ಸುಖಮಯವಾಗುತ್ತದೆ ಎಂದು ಕನಸು ಕಾಣುತ್ತಿದ್ದೆ. ಚಿಂತೆಯಿಂದ ಸೊರಗಿದ ಮೈ ಕೊಂಚ ತುಂಬಿಕೊಳ್ಳ ತೊಡಗಿತು. ಕಾಂತಿಗುಂದಿದ್ದ ಮುಖದಲ್ಲಿ ಹೊಸ ತೇಜಸ್ಸು ಕಂಡಿತ್ತು."

ಎರಡು ತಿಂಗಳಾಯಿತು ನಾನು ಮತ್ತೆ ಮುಟ್ಟಾಗಲಿಲ್ಲ. ಇನ್ನೇನು ಬಂದೇ ಬರುತ್ತಾರೆ ಎಂದು ದಿನವೂ ತಲೆ ಬಾಗಿಲ ಬಳಿ ನಿಂತು ದಿನಕ್ಕೆ ಹತ್ತು ಸಲ ದಿಗಂತದ ಕಡೆಗೆ ನೋಡುತ್ತಿದ್ದೆ. ಅವರು ಬರಲಿಲ್ಲ. ಎರಡು ತಿಂಗಳಾಗಿ ಹತ್ತು ದಿವಸ.

" ನಾನು ಬಹಳ ಗಾಬರಿಯಾದೆ. ಹಿಂದೆಂದೂ ಅನುಭವಿಸದ ಒಂದು ಹೊಸ ಬಗೆಯ ಭೀತಿ ನನ್ನ ಮನಸ್ಸನ್ನು ಆವರಿಸಿತು. ಅವರು ಬಾರದೆ ಹೋದರೆ ಮುಂದೇನು ಗತಿ ? ನನ್ನ ಗತಿ, ನಿಂತ ಗರ್ಭದ ಗತಿ ? ಯೋಚಿಸಿ ಯೋಚಿಸಿ ನನಗೆ ಕಣ್ಣು ಕತ್ತಲೆ ಬರುವಂತಾಯಿತು. ನನ್ನ ಈ ಗುಟ್ಟನ್ನು ನಾನೇ ಹೊತ್ತುಕೊಳ್ಳುವುದು ಕಷ್ಟವಾಯಿತು. ನಡೆದದ್ದೆಲ್ಲವನ್ನೂ ನಮ್ಮ ತಾಯಿಗೆ ಹೇಳಿ ಗೋಳೋ ಎಂದು ಅತ್ತೆ.

" ನಾನು ಹೇಳಿದ್ದನ್ನು ಕೇಳಿ ನಮ್ಮ ತಾಯಿಯ ಮುಖ ಕಳೆಗುಂದಿತು. ನನ್ನ ಮನಸ್ಸನ್ನು ಆವರಿಸಿದ್ದ ಭಯವೇ ಅವಳ ಮನಸ್ಸಿಗೂ ನುಗ್ಗಿತು. ಆದರೆ ಅವಳು ನನ್ನನ್ನು ಸಮಾಧಾನ ಪಡಿಸುವುದಕ್ಕಾಗಿ, ' ಪದ್ಮಾ, ಹೆದರ ಬೇಡ, ಮಗೂ. ರಾಮಚಂದ್ರ ಬಂದೇ ಬರುತ್ತಾನೆ; ಬಹಳ ದೂರದಲ್ಲಿರು ವವ. ಏನು ತೊಂದರೆಯಾಯಿತೋ ಯಾರು ಬಲ್ಲವರು?' ಎಂದಳು. ಅವಳು ಹೇಳಿದ ಮಾತಿನಲ್ಲಿ ಅವಳಿಗೇ ನಂಬಿಕೆ ಇಲ್ಲ ಎಂದು ನನಗೆ ತೋರಿತು.

' ಅದು ಸರಿ ಅಮ್ಮಾ ; ಆದರೆ ಅವರು ಬಾರದೆ ಹೋದರೆ, ಅಥವಾ ಒಂದೆರಡು ವರ್ಷ ಬಿಟ್ಟು ಬಂದರೆ– ಆಗ, ಅಮ್ಮಾ , ನನ್ನ ಗತಿಯೇನು ? '

ಎಂದು ಬಿಕ್ಕಿಬಿಕ್ಕಿ ಅಳತೊಡಗಿದಳು."

ಶೀನಪ್ಪ ಮತ್ತು ನಾಗಿ ಮುಗ್ಧರಾಗಿ ಕೇಳುತ್ತಿದ್ದರು.

ಸ್ವಲ್ಪ ಹೊತ್ತು ಪ್ರಶಾಂತವಾದ ರಾತ್ರಿಯಲ್ಲಿ ಅವಳು ಬಿಕ್ಕಿ ಬಿಕ್ಕಿ ಅಳುತ್ತಿದ್ದ ಸದ್ದಲ್ಲದೇ ಬೇರೇನೂ ಕೇಳಿಸಲಿಲ್ಲ.

ಅನಂತರ ಸ್ವಲ್ಪ ಸೈರಣೆ ತಂದುಕೊಂಡು ಪದ್ಮಾ ಮಾತಾಡತೊಡಗಿದಳು:

"ದಿನವೂ ನನಗೆ ಅವರ ಬರುವನ್ನು ಕಾಯುವುದೇ ಕೆಲಸವಾಯಿತು. ಮೊದಲೇ ಕ್ಷೀಣಳಾಗಿದ್ದ ನಮ್ಮ ತಾಯಿ ದಿನದಿನಕ್ಕೆ ಸೊರಗುತ್ತ ಬಂದಳು. ಮೂಳೆ ಮೂಳೆಯಲ್ಲ ಎದ್ದು ಕಾಣತೊಡಗಿತು. ಹೀಗೆ ಅವಳು ಸವೆಯುತ್ತಿರುವುದನ್ನು ಕಂಡು ನಾನೇ ಕಾರಣವೆಂಬುದನ್ನು ನೆನೆದು ನಾನು ಎಷ್ಟು ಅತ್ತೆನೋ ದೇವರೇ ಬಲ್ಲ. ಹೇಗಾದರೂ ಈ ಒಂದು ಗಂಡಾಂತರದಿಂದ ಪಾರು ಮಾಡು ಎಂದು ದೇವರನ್ನು ದಿನವೂ ಬೇಡಿಕೊಳ್ಳುತ್ತಿದ್ದೆ.

"ಗರ್ಭಚಿಹ್ನೆಗಳು ಸ್ಪಷ್ಟವಾಗಿ ಕಾಣತೊಡಗಿದುವು. ಅವರು ಬರಲಿಲ್ಲ. ಮನೆಯಲ್ಲಿ ನನ್ನ ತಮ್ಮ ಮತ್ತು ಅತ್ತಿಗೆ ಇಬ್ಬರೂ ನನ್ನನ್ನು ತಾತ್ಸಾರದಿಂದ ನೋಡತೊಡಗಿದರು. ನಮ್ಮ ತಾಯಿ ಚಂದ್ರಶೇಖರನನ್ನು ಕರೆದು ನಡೆದದ್ದನ್ನೆಲ್ಲ ಹೇಳಿದರೂ ಅವನು ನಂಬಲಿಲ್ಲ. 'ಸಾಕಮ್ಮ, ಒಳ್ಳೇ ಕಥೆ ಹೇಳಿದೆ; ಭಿಕಾರಿಯಾದದ್ದು ಸಾಲದು ಅಂತ ಇದನ್ನು ಬೇರೆ ಮಾಡಿಕೊಂಡಳೋ. ಮುಗಿಯಿತು ನಮ್ಮ ಕಥೆ. ಇನ್ನು ನಾವು ಊರಲ್ಲಿ ಮುಖ ಎತ್ತಿಕೊಂಡು ತಿರುಗುವುದು ಹೇಗೆ? ಈ ಸಹವಾಸವೇ ಸಾಕು' ಎಂದುಬಿಟ್ಟ.

"ಆ ದಿನ ಹಾಸಿಗೆ ಹಿಡಿದು ಮಲಗಿದ ನಮ್ಮ ತಾಯಿ ಮತ್ತೆ ಹಾಸಿಗೆ ಬಿಟ್ಟು ಏಳಲಿಲ್ಲ.

"ನಿಜವಾದ ಕಾರಣವನ್ನು ಹೇಳುವ ಹಾಗೂ ಇರಲಿಲ್ಲ. ಹೇಳಿದರೆ ನಂಬುವ ಹಾಗೂ ಇರಲಿಲ್ಲ. ಊರಿನಲ್ಲಿ ಗುಸುಗುಸು ಪಿಸುಪಿಸು ಶುರುವಾಯಿತು. ನಾನಾ ವಿಧವಾದ ಕಥೆಗಳು ಹುಟ್ಟಿಕೊಂಡುವು. ಕಥೆಗೆ ಮರಿಕಥೆ. ನಾನು ಗರ್ಭಿಣಿ ಎಂಬುದೊಂದು; ನನ್ನ ಗಂಡ ಊರಲಿಲ್ಲ ಎಂಬುದೊಂದು ಈ ಎರಡು ವಿಷಯ ಬಿಟ್ಟರೆ ಜನರಿಗೆ ಇನ್ನಾವ ಸಮಾಚಾರವೂ ತಿಳಿಯದು. ಅಪವಾದ ಬರುವುದಕ್ಕೆ ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು? ನಾನು ನೀತಿ

ಗೆಟ್ಟವಳು, ಭ್ರಷ್ಟೆ, ಬಜಾರಿ, ಹಾದರಗಿತ್ತಿ ಎಂದು ಅನೇಕ ಜನ ಕರೆದು ತೃಪ್ತಿ ಪಟ್ಟುಕೊಂಡರು. ನನ್ನ ಹೆಸರು ಕೆಟ್ಟಿತು. ನಾನು ಮುಖ ಎತ್ತಿಕೊಂಡು ತಿರುಗುವ ಹಾಗೇ ಇರಲಿಲ್ಲ. ನಮ್ಮೂರಿಂದ ಕುಂಡಲಾಪುರದ ವರೆಗೂ ಇದೇ ಮಾತಾಯಿತು.

ಈ ಲೋಕಾಪವಾದದ ಮುಂದೆ ನಾನು ಏನು ಮಾಡಬೇಕು; ನಾನು ಮನೆ ಬಿಟ್ಟು ಹೊರಡುವುದನ್ನು ಬಿಟ್ಟೆ. ಮನೆಯೊಳಗೇ ಇದ್ದು ನನ್ನ ದುರ್ದೈವವನ್ನು ನೆನೆದು ಶೋಕ ಸಂಕಟವನ್ನು ಅನುಭವಿಸುತ್ತ ದಿನಗಳನ್ನು ಕಳೆಯುತ್ತಿದ್ದೆ. ದಿನದಿನಕ್ಕೆ ನನ್ನ ದುಃಖ ಹೆಚ್ಚುತ್ತಿತ್ತು. ಎಲ್ಲ ಕಡೆಗಳಿಂದಲೂ ವಾಗ್ಬಾಣ ಬಂದು ನನ್ನ ಹೃದಯವನ್ನು ಇರಿಯುತ್ತಿತ್ತು. ನನಗೆ ಬೇಕಾದವರು, ನನ್ನಲ್ಲಿ ಕರುಣೆ ತೋರಿದವರು, ನಮ್ಮ ಆಳುಗಳು, ಒಕ್ಕಲು ಎಲ್ಲರೂ ನನ್ನನ್ನು ನೋಡಿ ನಕ್ಕರು, ತಿರಸ್ಕರಿಸಿದರು. ತಿರಸ್ಕಾರದ ವ್ಯಂಗ್ಯದ, ಕೊಂಕು ನುಡಿಗಳು ಕಿವಿಯ ಹತ್ತಿರ ಸದಾ ಕಾಲವೂ ಸಮುದ್ರದ ತೆರೆಗಳಂತೆ ಮೊರೆಯುತ್ತಿದ್ದುವು. ಕನಸಿನಲ್ಲೂ ಕೂಡಾ ಅಪಹಾಸ್ಯ ಮಾಡುವ ಮುಖಗಳು ಬಂದು ನನ್ನನ್ನು ಅಣಕಿಸುತ್ತಿದ್ದುವು. ನಿದ್ದೆ ಬಾರದು, ಊಟದಲ್ಲಿ ರುಚಿಯಿಲ್ಲ. ನನ್ನನ್ನು ಕಂಡರೆ ನನಗೇ ಅಸಹ್ಯ ಹುಟ್ಟುವಂತಾಯಿತು. ಅಪವಾದದ ಮಾತು ಕೇಳಿ ಕೇಳಿ ಆ ಮಾತುಗಳೇ ನಿಜವಿರಬಹುದೋ ಎಂತಲೂ ಒಂದೊಂದು ಸಲ ನನಗೆ ಭ್ರಾಂತಿ ಹುಟ್ಟುವಂತಾಯಿತು.

"ನನ್ನ ಮೊರೆಯನ್ನು ಯಾರು ಕೇಳಬೇಕು? ನಾನು ನಿರಪರಾಧಿ. ಅದನ್ನು ದೇವರು ಮತ್ತು ಅವರು—ಇಬ್ಬರಲ್ಲದೆ ಇನ್ನಾರೂ ತಿಳಿಯರು. ಉಳಿದವರು ತಿಳಿಯುವಂತೆ ನಾನು ಏನು ಮಾಡಬೇಕು? ನಾನು ಹೇಳುವ ಮಾತಿಗೆ ಸಾಕ್ಷಿ ಇಲ್ಲ ರುಜುವಾತಿಲ್ಲ. ನನಗೆ ಹುಚ್ಚೇ ಹಿಡಿದಂತಾಯಿತು. ಎಷ್ಟೋ ಸಲ ರಾತ್ರಿ ಹೊತ್ತು ನಿದ್ದೆ ಬಾರದೆ ಸುಮ್ಮನೆ ಕಣ್ಣೀರು ಸುರಿಸುತ್ತಾ ಹಾಸಿಗೆಯ ಮೇಲೆ ಕುಳಿತಿದ್ದಾಗ ಆ ಊರನ್ನೇ ಬಿಟ್ಟು ಎಲ್ಲಿಗಾದರೂ ದೂರ ದೂರ ಓಡಿ ಹೋಗಬೇಕು ಅನ್ನಿಸುತ್ತಿತ್ತು. ಇನ್ನೂ ಎಷ್ಟೋ ಸಲ ಈ ಜಗತ್ತನೇ ಬಿಟ್ಟು ಹೋಗಬೇಕು ಅನ್ನಿಸುತ್ತಿತ್ತು. ಆತ್ಮಹತ್ಯೆಯ ವಿಚಾರವೂ ಬಂತು. ಆದರೆ ಅದಕ್ಕೆ ತಕ್ಕ ಧೈರ್ಯ ನನ್ನಲ್ಲಿಲ್ಲ ಎಂದು ತಿಳಿದಾಗ ನಾನು ದಿಗ್ಭ್ರಾಂತಳಾಗಿ ಗೋಳೋ ಎಂದು ಅಳುತ್ತಿದ್ದೆ. ಒಂದು ದಿನ ಧೈರ್ಯ

ಮಾಡಿ ಮನೆಯ ಹತ್ತಿರದ ಕೆರೆಗೆ ಬೀಳಬೇಕೆಂದು ಕೆರೆಯ ದಂಡೆಯ ವರೆಗೂ ಹೋದೆ. ಆದರೆ ಎಷ್ಟು ದೃಢ ಮನಸ್ಸು ಮಾಡಿದರೂ ಕೆರೆಯೊಳಕ್ಕೆ ಹಾರಿಕೊಳ್ಳಲು ಆಗದೇ ನಿರಾಶಳಾಗಿ ನನ್ನನ್ನೇ ನಾನು ಶಪಿಸಿಕೊಳ್ಳುತ್ತ ಹಿಂದಕ್ಕೆ ಬಂದೆ.

"ನನಗೆ ಇದ್ದ ಒಂದೇ ಒಂದು ಆಶ್ರಯ ನಮ್ಮ ತಾಯಿ. ಯಾರು ಏನೇ ಅಂದರೂ ಅವಳು ಕೊನೆಯ ತನಕವೂ ನನ್ನಲ್ಲಿ ಸಂಶಯ ತಳೆಯಲಿಲ್ಲ. ಅವಳು ನಾನು ನಿರಪರಾಧಿಯೆಂದು ಸ್ಥಾಪಿಸಲು ಬಹಳ ಪ್ರಯತ್ನಪಟ್ಟಳು. ಅವಳ ಮಾತನ್ನು ಯಾರೂ ನಂಬಲಿಲ್ಲ. ಅವಳ ಮಗನೂ ಕೂಡಾ ನಂಬದೆ ಹೋದ. ಅವಳ ಪ್ರಯತ್ನದಿಂದ ಊರಿನವರ ಸಂಶಯಕ್ಕೆ ಪುಷ್ಟಿ ದೊರೆಯಿತಲ್ಲದೆ ಅದರ ನಿವಾರಣೆ ಆಗಲಿಲ್ಲ. ನಮ್ಮ ತಾಯಿ ಹೃದಯವನ್ನೇ ಕಿತ್ತು ಹೊರಗಿಟ್ಟಂತೆ ನಿಜ ಸ್ಥಿತಿಯನ್ನು ಹೇಳಿದರೂ ಕೇಳಿದವರು ಅದು ಕಾಗಕ್ಕನ ಗುಬ್ಬಕ್ಕನ ಕಥೆ ಎಂದು ನಕ್ಕರು. ಇದರಿಂದ ನಮ್ಮ ತಾಯಿಯ ದುಃಖ ಅಸಹನೀಯವಾಯಿತು. ಆಗಲೇ ಸವೆಯುತ್ತ ಬಂದಿದ್ದ ಅವಳ ದೇಹ ಇನ್ನಷ್ಟು ಸವೆಯಿತು. ಹಾಸಿಗೆ ಹಿಡಿದವಳು, ಹಿಡಿದೇ ಬಿಟ್ಟಳು. ಊಟ ಅವಳಿಗೆ ಸೇರಲಿಲ್ಲ. ನಿದ್ದೆ ಹತ್ತುತ್ತಿರಲಿಲ್ಲ. ಪ್ರತಿಯೊಂದು ದಿನವೂ ಅವಳಿಗೊಂದು ಚಿತ್ರಹಿಂಸೆಯಂತಾಯಿತು. ಅವಳ ಕೊರಗನ್ನು ಕಂಡು ನನ್ನ ಕೊರಗನ್ನೂ ಮರೆತು ನಾನು ನಮ್ಮ ತಾಯಿಯ ಆರೈಯನ್ನು ಮಾಡತೊಡಗಿದೆ. ಆದರೆ ಯಾವುದೂ ಉಪಯೋಗವಾಗಲಿಲ್ಲ. ಒಂದು ದಿನ ಸಂಜೆ ಹೊತ್ತು ಮಾತ ಮಾತಾಡುತ್ತಲೇ ಅವಳು ಕಣ್ಣು ಮುಚ್ಚಿದಳು.

'ಮಗೂ ಪದ್ಮಾ; ನಿನ್ನನ್ನು ದೇವರೇ ಕಾಪಾಡಬೇಕು. ದೇವರೇ ಈ ಮಗುವನ್ನು ಸಂರಕ್ಷಣೆ ಮಾಡಪ್ಪಾ' ಎಂದು ಹೇಳುತ್ತಾ ನಮ್ಮ ತಾಯಿ ಕಣ್ಣು ಮುಚ್ಚಿದಳು. ಸಾಯುವ ಮೊದಲು ಅವಳು ನನ್ನ ತಮ್ಮ ಮತ್ತು ನನ್ನನ್ನು ಕರೆದು 'ನನ್ನ ಒಂದು ಮಾತು ನಡಸಿಕೊಡುತ್ತೀಯಾ, ಚಂದ್ರು' ಎಂದು ಕೇಳಿದಳು. ಅವಳ ಅಂತ್ಯಕಾಲ ಸಮೀಪಿಸಿತ್ತೆಂದು ಎಲ್ಲರಿಗೂ ತಿಳಿದಿತ್ತು ಚಂದ್ರಶೇಖರ

'ಆಗಲಿ ಅಮ್ಮಾ, ಹೇಳು; ನಡಸಿಕೊಡುತ್ತೇನೆ' ಎಂದ.

'ಖಂಡಿತವಾಗಿ' ಎಂದು ತಾಯಿ ಕೇಳಿದಳು.

'ಖಂಡಿತವಾಗಿಯೂ' ಎಂದು ಚಂದ್ರಶೇಖರ ಉತ್ತರ ಕೊಟ್ಟ.

" ಅಮ್ಮ ಸ್ವಲ್ಪ ಸುಮ್ಮನಿದ್ದು ' ಪದ್ಮಾವತಿಯನ್ನು ಕೈ ಬಿಡಬೇಡ. ಅವಳು ನಿರಪರಾಧಿ. ಅವಳ ರಕ್ಷಣೆ ಮಾಡು' ಎಂದಳು.

" ಚಂದ್ರಶೇಖರನೇನೋ ಅದಕ್ಕೆ ಹೂಗುಟ್ಟಿದ. ಆದರೆ ಅವನು ಅದಕ್ಕೆ ಒಪ್ಪಿದ್ದು ಮನಸ್ಸಿಲ್ಲದೆಯೇ ಎಂದು ನನಗೆ ತೋರಿತು.

" ತಾಯಿ ಸತ್ತ ಮೇಲೆ ನನಗೆ ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದ ಹಾಗೆ ಆಯಿತು. ನನ್ನ ಬಗ್ಗೆ ಸಹಾನುಭೂತಿ ತೋರಿಸುವವರು ನನಗಾಗಿ ಇನ್ನೇನಿಲ್ಲದಿದ್ದರೂ ಒಂದು ಹನಿ ಕಣ್ಣೀರು ಸುರಿಸುವವರು ಒಬ್ಬರೂ ಇಲ್ಲ ಎಂದಾಗ ನನಗೆ ದಟ್ಟ ಕಾಡಿನಲ್ಲಿ ಹುಲಿ, ಚಿರತೆಗಳ ಮಧ್ಯೆ ಒಬ್ಬಳನ್ನೇ ಕಣ್ಣು ಕಟ್ಟಿ ಬಿಟ್ಟ ಹಾಗೆ ಆಯಿತು. ಊರಲ್ಲೆಲ್ಲ ಗೇಲಿ, ಮನೆಯಲ್ಲಿ ತಿರಸ್ಕಾರ. ನಾನು ಬದುಕಿ ಇರುವುದು ಹೇಗೆ ?

" ಮನೆಯೊಳಗೆ ನನಗೆ ಕಾಸಿನ ಕಿಮ್ಮತ್ತೂ ಇಲ್ಲದಂತಾಯಿತು. ತಾಯಿ ಇದ್ದಾಗ ಆಗಾಗ ವ್ಯಕ್ತವಾಗುತ್ತಿದ್ದ ತಿರಸ್ಕಾರ, ನಿಂದೆ, ಮೂದಲಿಕೆ ಈಗ ದಿನನಿತ್ಯದ ಮಾತಾಯಿತು. ಮನೆ ನರಕವಾಯಿತು. ಒಬ್ಬ ಕೆಲಸದ ಆಳಿಗೆ ಸಿಗುತ್ತಿದ್ದ ಗೌರವ ನನಗೆ ನನ್ನ ತಮ್ಮ—ಅತ್ತಿಗೆಯರಿಂದ ದೊರೆಯಲಿಲ್ಲ. ಚಂದ್ರಶೇಖರ ನನ್ನ ಕಡೆ ಕಣ್ಣೆತ್ತಿ ನೋಡುತ್ತಿರಲಿಲ್ಲ. ಅತ್ತೆ ಇದ್ದಾಗ ಹೆಚ್ಚು ಮಾತನಾಡದೆ ಮೌನವಾಗಿ ತನ್ನ ತಾತ್ಸಾರ ವ್ಯಕ್ತಪಡಿಸುತ್ತಿದ್ದ ಅತ್ತಿಗೆ ಮಾತ್ರ ಈಗ ತನ್ನ ನಿಜ ಸ್ವರೂಪವನ್ನು ತೋರಿಸಿದಳು. ನನಗಿಂತ ಬಹಳ ಚಿಕ್ಕವಳಾಗಿದ್ದರೂ ಅವಳು ತೋರಿಸುತ್ತಿದ್ದ ವಾಕ್ಚಾತುರ್ಯವನ್ನು ಕಂಡು ನನಗೆ ಬಹಳ ಆಶ್ಚರ್ಯವಾಯಿತು. ಅವಳು ಆಡಿದ ಮಾತನ್ನೆಲ್ಲ ನೆನಸಿಕೊಂಡರೆ ಈಗಲೂ ನನ್ನ ಮೈ ಉರಿಯುತ್ತದೆ. ನಾನು ನಿಜವಾಗಿಯೂ ಹಾದರ ಮಾಡಿದರೂ ಮನುಷ್ಯರಾದವರು ಅಂಥ ಮಾತುಗಳನ್ನಾಡಿ ಚಿತ್ರಹಿಂಸೆ ಮಾಡಬಹುದೇ ? ಎಂದು ನಾನು ಬಹಳ ಯೋಚಿಸಿದ್ದೇನೆ- ಶಾಂತವಾಗಿ ಆದರೆ ಮನುಷ್ಯತ್ವವುಳ್ಳವರು ಯಾರೂ ಅವಳು ಆಡಿದಂಥ ಮಾತುಗಳನ್ನು ಆಡಲಾರರು ಅಂತ ಈಗಲೂ ನನಗೆ ಅನ್ನಿಸುತ್ತದೆ. ಆ ಮಾತುಗಳನ್ನೆಲ್ಲ ಹೇಳಿ ನನ್ನ ಬಾಯಿಯನ್ನು ಹೊಲಸು ಮಾಡಿಕೊಳ್ಳಲು ನನಗೆ ಇಷ್ಟವಿಲ್ಲ. ಅಂತೂ ಅಲ್ಲಿ ಇರುವುದು ನನಗೆ ದಿನದಿನಕ್ಕೆ ಅಸಾಧ್ಯ ಎನ್ನಿಸುತ್ತ ಬಂತು. ಅವರು 'ತೊಲಗು' ಅಂತ ಹೇಳಲಿಲ್ಲ. ಹಾಗೆ ಹೇಳಿದ್ದರೇ ಬಹುಶಃ ಒಳ್ಳೆಯದಾಗುತ್ತಿತ್ತು. ಹಾಗೆ

ಹೇಳದೆ ನನ್ನ ಕರುಳನ್ನು ಕೊಯ್ದರು. ಊರಿನವರಿಂದ ಭಲೇ ಎನ್ನಿಸಿಕೊಳ್ಳುತ್ತ ನಾನು ಆ ಮನೆಯನ್ನು ಬಿಟ್ಟು ತೊಲಗುವಂತೆ ಮಾಡಿದರು. ಆ ಮನೆಯ ಋಣ ನನಗೆ ಇನ್ನು ಇಲ್ಲ. ನಾನು ಹುಟ್ಟಿ ಬೆಳೆದ ಮನೆ; ನನ್ನ ತಂದೆ, ತಾಯಿ ತಮ್ಮ ಪ್ರೀತಿಯ ಅಮೃತವನ್ನು ನನಗೆ ಉಣಬಡಿಸಿದ ಮನೆ ಇನ್ನು ನನಗೆ ಇಲ್ಲ" ಎಂದು ಪದ್ಮಾ ಒತ್ತಿ ಬರುತ್ತಿದ್ದ ತನ್ನ ದುಃಖವನ್ನು ನುಂಗಿಕೊಂಡು ನಿಟ್ಟುಸಿರು ಬಿಟ್ಟಳು.

"ಅಮ್ಮಾ, ನೀವು ಪಟ್ಟ ಕಷ್ಟ ನನ್ನ ವೈರಿಗೂ ಬೇಡ." ಎಂದು ನಾಗಿ ಕಣ್ಣೀರನ್ನು ಒರಸಿಕೊಂಡಳು.

"ನಿರಪರಾಧಿಗಳಿಗೂ ಇಂಥ ಶಿಕ್ಷೆ ಕೊಡುವ ದೇವರು ಎಂಥ ದೇವರು ?" ಎಂದು ಶೀನಪ್ಪ ತನ್ನ ದುಃಖವನ್ನು ರೋಷವಾಗಿ ವ್ಯಕ್ತಪಡಿಸಿದ.

ಎಲ್ಲರೂ ಸ್ವಲ್ಪ ಹೊತ್ತು ಸುಮ್ಮನಿದ್ದರು.

ಅನಂತರ ಪದ್ಮಾವತಿ ತನ್ನ ಕಥೆಯನ್ನು ಮತ್ತೆ ಶುರುಮಾಡಿದಳು:

"ಏನು ಮಾಡಲಿ ದೇವರೆ, ಎಲ್ಲಿಗೆ ಹೋಗಲಿ ? ಈ ಮನೆಯಲ್ಲಂತೂ ಇರುವ ಹಾಗಿಲ್ಲ. ಇನ್ನು ಎಲ್ಲಿಗೆ ಹೋಗಬೇಕು ? ನನಗೆ ಹಾಳುಬಾವಿಯೇ ಗತಿ ಎಂದು ಯೋಚಿಸುತ್ತ ಮನಸ್ಸನ್ನು ಕಲ್ಲು ಮಾಡಿಕೊಳ್ಳುತ್ತಿದ್ದೆ.

"ಇಷ್ಟರಲ್ಲಿ ಆರು ತಿಂಗಳು ಆಗುತ್ತ ಬಂದಿತ್ತು. ಜನಾಪವಾದದಂತೆ ನಾನು ಹೊತ್ತ ಹೊರೆಯೂ ಬೆಳೆಯುತ್ತಿತ್ತು.

"ಅವರ ಸುದ್ದಿಯೇ ಇಲ್ಲ. ನನ್ನನ್ನು ಇಂಥ ಕಷ್ಟಕ್ಕೆ ಗುರಿ ಮಾಡಿ ಹೊರಟು ಹೋದರಲ್ಲ. ಎಂಥ ಗಂಡ ಇವರು — ಎಂದು ಎಷ್ಟೋ ಸಲ ನನ್ನ ಮನಸ್ಸು ಬೆಂಕಿಯಾಗುತ್ತಿತ್ತು. ಆದರೆ ಮರುಕ್ಷಣವೇ ಅವರೂ ಎಂಥ ಕಷ್ಟಕ್ಕೆ ಸಿಕ್ಕಿಬಿದ್ದಿದ್ದಾರೋ ಎಂದು ಮನಸ್ಸು ಕರಗುತ್ತಿತ್ತು.

"ಹೀಗಿರಲು ಒಂದು ದಿನ ಹಗಲುವೇಷದ ಸುಬ್ಬ ಆಕಸ್ಮಾತ್ತಾಗಿ ನಮ್ಮ ಮನೆಗೆ ಬಂದ. ಆ ದಿನ ನನ್ನ ತಮ್ಮ, ಅತ್ತಿಗೆ ನಮ್ಮೂರ ರಾಮಭಟ್ಟರ ಮನೆಯ ಉಪನಯನದ ಊಟಕ್ಕೆ ಹೋಗಿದ್ದರು ನಾನೊಬ್ಬಳೇ ಮನೆಯಲ್ಲಿದ್ದೆ. ಸುಬ್ಬನನ್ನು ನಾನು ನೋಡಿದ್ದು ಕೆಲವು ಸಲ ಕುಂಡಲಾಪುರದ ನಮ್ಮ ಮನೆಯಲ್ಲಿ. ನಮ್ಮ ಮನೆಯವರ ಸ್ನೇಹಿತ ಎನ್ನುವಷ್ಟಲ್ಲದೇ ನನಗೆ

ಮತ್ತೇನೂ ಅವನ ವಿಷಯ ತಿಳಿಯದು. ಊರಿನವರೇನೋ ಅವನ ವಿಷಯವಾಗಿ ನಾನಾ ರೀತಿ ಆಡಿಕೊಳ್ಳುತ್ತಿದ್ದರು. ಜನರು ಆಡುವುದರಲ್ಲಿ ಯಾವಾಗಲೂ ಸತ್ಯದ ಒಂದು ಅಂಶ ಇದ್ದರೆ ಕಲ್ಪನೆಯ ಅಂಶ ಹತ್ತು ಅಂತ ನನಗೆ ಈಗ ತೋರುತ್ತದೆ.

“ ಹೇಗೂ ಇರಲಿ, ಅವನ ಮುಖವನ್ನು ನೋಡಿದ ಕೂಡಲೇ ನನಗೆ ಇವನನ್ನು ನಂಬಬಹುದು ಎನ್ನಿಸಿತು; ಮರುಕ್ಷಣವೇ ನಂಬುವುದು ಕಷ್ಟ ಎಂದು ತೋರಿತು. ಅಂಥ ಮುಖ ಅದು. ಏನೋ ವಿಶೇಷವಿದೆ ಈ ಮುಖದಲ್ಲಿ ಎಂದು ಮಾತ್ರ ಯಾರಿಗಾದರೂ ಅನ್ನಿಸಬೇಕು. ನಗುವ ಕಣ್ಣು, ಎದ್ದು ಕಾಣುವ ಮೂಗು, ಎತ್ತರವಾದ ಹಣೆ.

“ ಅದನ್ನು ಕಂಡ ಕೂಡಲೇ ನನಗೆ ಅವನು ನಮ್ಮ ಮನೆಯವರ ಸಮಾಚಾರ ತಂದಿರಬೇಕು ಎನ್ನಿಸಿ ಮನಸ್ಸು ಕಾತರವಾಯಿತು.

“ ಬಂದವನು ಅವನೇ ಮಾತಿಗೆ ಶುರುಮಾಡಿದ :—

‘ ನಾನು ಶಾಸ್ತ್ರಿಗಳ ಕಡೆಯಿಂದ ಬಂದೆ. ನೀವು ಹೇಗಿದ್ದೀರಿ ? ’ ಎಂದು ಕೇಳಿದ.

‘ ನಾನು ? ನನಗಿನ್ನೂ ಸಾವು ಬಂದಿಲ್ಲ—ಅಷ್ಟೆ. ಊರಲ್ಲಿ ಮುಖ ತೋರಿಸಲಾರದ ಸ್ಥಿತಿ ಬಂತು. ಆಗ ಬಂದವರು ಎರಡೇ ತಿಂಗಳಲ್ಲಿ ಬರುತ್ತೇನೆಂದು ಹೇಳಿ ಹೋದರು ಇನ್ನೂ ಬರಲಿಲ್ಲ. ಇಲ್ಲಿ ನನ್ನ ಮಾನ ಮೂರು ಕಾಸಿನದಾಯಿತು. ನಮ್ಮ ತಾಯಿಯೂ ತೀರಿದಳು. ನನಗೆ ಇನ್ನು ಹೊಳೆಯೋ ಬಾವಿಯೋ ಗತಿ ’ ಎಂದೆ—ದುಃಖ ತಡೆಯಲಾರದೆ.

“ ಅದಕ್ಕೆ ಸುಬ್ಬ, ‘ ಅಳಬೇಡಿ ಅಮ್ಮ ; ಶಾಸ್ತ್ರಿಗಳು ಬರಬೇಕೆಂತಲೇ ಮಾಡಿದ್ದರು. ಆದರೆ ಇಲ್ಲಿಂದ ಹಿಂತಿರುಗಿದವರಿಗೆ ಭಾರಿ ಜ್ವರ ಶುರುವಾಯಿತು. ಏನೇನು ಮಾಡಿದರೂ ಬೇಗ ವಾಸಿಯಾಗಲಿಲ್ಲ. ಸ್ವಲ್ಪ ನಡೆದಾಡುವ ಶಕ್ತಿ ಬಂದು ಈಗ ಒಂದು ತಿಂಗಳಾಯಿತು. ವ್ಯಾಪಾರವೂ ಹದಗೆಟ್ಟಿತು. ನಿಮ್ಮನ್ನು ಬಂದು ಕರೆದುಕೊಂಡು ಹೋಗಬೇಕು ಅಂತ ಯಾವಾಗಲೂ ಹೇಳುತ್ತಿದ್ದರು. ಅದೇ ಅವರಿಗೆ ಚಿಂತೆ.’ ಎಂದ.

“ಅವರಿಗೆ ಹುಷಾರಿಲ್ಲ ಎಂದು ಕೇಳಿ ನನಗೆ ಅವರ ಮೇಲಿದ್ದ ಕೋಪವೆಲ್ಲ ಮಾಯವಾಯಿತು. ‘ ಈಗ ಅವರು ಹೇಗಿದ್ದಾರೆ ? ’ ಎಂದು ಕೇಳಿದೆ.

‘ ಈಗ ಹುಶಾರಾಗಿದ್ದಾರೆ, ಆದರೆ ದೂರ ಪ್ರಯಾಣ ಮಾಡುವ ಹಾಗಿಲ್ಲ. ಅದಕ್ಕಾಗಿಯೇ ನನ್ನನ್ನು ಇಲ್ಲಿಗೆ ಕಳಿಸಿದ್ದಾರೆ.’

‘ ಸರಿ, ನನ್ನ ಕಥೆಯೆಲ್ಲ ನೀವು ಕೇಳಿರಬೇಕಲ್ಲ ? ’ ಎಂದೆ.

‘ ಕೇಳಿದೆ, ಎಲ್ಲ ಕೇಳಿದೆ. ಈ ಜಗತ್ತು ಬಹಳ ಕೆಟ್ಟದ್ದಮ್ಮಾ,’ ಅಂದ.

‘ ಹಾಗಾದರೆ ನಾನೀಗ ಏನು ಮಾಡಬೇಕೆಂತ ಹೇಳಿದ್ದಾರೆ? ’ ಎಂದು ಕೇಳಿದೆ.

‘ ಶಾಸ್ತ್ರಿಗಳಿಗೆ ಕೊಲ್ಲೂರಿನ ದೇವಸ್ಥಾನದಲ್ಲಿ ಒಂದು ಕೆಲಸ ಸಿಕ್ಕಿದೆ. ಅವರು ಇನ್ನು ಮೂರು ನಾಲ್ಕು ದಿನಗಳಲ್ಲಿ ಗಾಡಿಯಲ್ಲಿ ಅಲ್ಲಿಗೆ ಬಂದಿರುತ್ತಾರೆ. ನಿಮ್ಮನ್ನು ಕರೆದುಕೊಂಡು ಬರಲು ನನಗೆ ಹೇಳಿದ್ದಾರೆ ’ ಎಂದ.

“ ಈ ಮಾತು ಕೇಳಿ ಒಂದು ಕ್ಷಣ ನಾನು ಮೂಕಳಾದೆ. ಇದು ನಿಜವೋ, ಸುಳ್ಳೋ ; ಈ ಮಾತು ನಂಬ ಬಹುದೋ ಬಾರದೋ ? ಆದರೆ ಆ ಊರಿನಲ್ಲಿ ಯಾರಿಗೂ ಬೇಡವಾಗಿ ಇರುವುದಕ್ಕಿಂತ ಇನ್ನು ಏನೇ ಆದರೂ ಒಳ್ಳೆಯದು ಅಂತ ನನಗೆ ತೋರಿತು. ಸುಬ್ಬನೇ ಹೇಳಿದ : ‘ ನೀವು ಏನೂ ಯೋಚನೆ ಮಾಡಬೇಡಿ ಅಮ್ಮ ; ಶಾಸ್ತ್ರಿಗಳು ಅಂದರೆ ನನಗೆ ಅಣ್ಣನ ಹಾಗೆ. ಇಲ್ಲಿಂದ ಕೊಲ್ಲೂರಿಗೂ ತಕ್ಕಷ್ಟು ದೂರವಿದೆ; ಆದರೆ ನಾವು ಇಲ್ಲಿಂದ ದೋಣಿಯ ಮೂಲಕ ಗಂಗೊಳ್ಳಿಗೆ ಹೋದರೆ ಆಮೇಲೆ ಕೊಲ್ಲೂರಿಗೆ ಮೂವತ್ತೇ ಮೈಲಿ. ಮೂರು ದಿನದ ದಾರಿ. ಅಂಥ ಕಾಲ ಬಂದರೆ ಗಾಡಿ ಕೂಡಾ ಮಾಡಿಕೊಳ್ಳ ಬಹುದು ’ ಎಂದ.

“ ಈ ಮಾತನ್ನ ನಂಬದೆ ಇರಲು ನನಗೆ ಯಾವ ಕಾರಣವೂ ತೋರ ಲಿಲ್ಲ. ಪ್ರಯಾಣ ನನಗೆ ನನ್ನ ಆಗಿನ ಸ್ಥಿತಿಯಲ್ಲಿ ಬಹಳ ಕಷ್ಟವಾಗಬಹುದು. ಆದರೆ ಯಾವ ಕಷ್ಟವೇ ಆಗಲಿ, ಈ ಊರಿನಲ್ಲಿ ಜನರ ಅಪವಾದದ ಬೆಂಕಿಯಲ್ಲಿ ಬೇಯುವುದಕ್ಕಿಂತ ಮೇಲು ಅಂತ ಅನ್ನಿಸಿತು. ಹೇಗಾದರೂ ಮಾಡಿ ಅವರ ಕಾಲ ಬಳಿ ಹೋಗಿ ಬಿದ್ದರೆ ಸಾಕು ಅಂದುಕೊಂಡೆ. ಸರಿ, ಹೋಗುವುದು ಸರಿ, ಬೇರೆ ದಾರಿಯೇ ಇಲ್ಲ ಎಂದು ನಿರ್ಧರಿಸಿದೆ.

‘ ಆಗಲಿ, ನಾನು ಬರುತ್ತೇನೆ. ಹೊರಡುವುದು ಯಾವಾಗ ? ’ ಎಂದು ಕೇಳಿದೆ.

‘ ನಾಳೆ ಬೆಳಗ್ಗೆ ಕತ್ತಲು ಕತ್ತಲು ಇರುವಾಗಲೇ ಹಾಲಾಡಿಯಲ್ಲಿ

ದೋಣಿ ಹತ್ತಿಬಿಡುವ. ಮಧ್ಯಾಹ್ನದ ಹೊತ್ತಿಗೆ ಗಂಗೊಳ್ಳಿಗೆ ಹೋಗುತ್ತದೆ. ನಾನು ಎಲ್ಲ ವ್ಯವಸ್ಥೆ ಮಾಡಿ ಬೆಳಗ್ಗೆ ಅಷ್ಟು ಹೊತ್ತಿಗೇ ಬಂದುಬಿಡುತ್ತೇನೆ. ನೀವು ಸಿದ್ಧವಾಗಿರಿ' ಎಂದ.

'ಆಗಲಿ' ಎಂದೆ. ಅವನು ಹೊರಟು ಹೋದ.

“ರಾತ್ರಿಯೆಲ್ಲ ಅದೇ ಯೋಚನೆ: ಪರ ಪುರುಷನ ಸಂಗಡ ಹೋಗುವುದು ಸರಿಯೇ? ಅಂತ. ಅವರೆ ಬೇರೆ ದಾರಿ ಕಾಣಲಿಲ್ಲ. ಇಡೀ ಮುಳುಗಿದವನಿಗೆ ಚಳಿಯೇನು, ಮಳೆಯೇನು? ಆಗುವುದಾಗಲಿ; ದೇವರು ಮಾಡಿದ ಹಾಗೆ ಆಗಲಿ—ಎಂದುಕೊಂಡೆ. ಏಕೋ ಸುಬ್ಬ ಸುಳ್ಳು ಹೇಳಿದ ಅಂತ ನನಗೆ ಅನ್ನಿಸಲಿಲ್ಲ.

“ಈ ಮಾತನ್ನು ನಾನು ಯಾರಿಗೂ ಹೇಳಲಿಲ್ಲ. ನನ್ನವರು ಎನ್ನುವವರು ನನಗೆ ಯಾರೂ ಉಳಿದಿರಲಿಲ್ಲ. ನಾನು ಬೆಳಗ್ಗೆ ಬಹಳ ಬೇಗ ಎದ್ದೆ. ಬೆಳ್ಳಿ ಮೂಡಿತ್ತು. ಕೋಳಿ ಇನ್ನೂ ಕೂಗಿರಲಿಲ್ಲ. ನನ್ನ ತಮ್ಮ ಮತ್ತು ಅತ್ತಿಗೆ ಇನ್ನೂ ಎದ್ದಿರಲಿಲ್ಲ. ಮನೆಯೆಲ್ಲ ಶಾಂತವಾಗಿತ್ತು. ಮೆಲ್ಲನೆ ಬಾಗಿಲು ತೆರೆದು ಹೊರಬಿದ್ದೆ.

“ಸ್ವಲ್ಪ ಹೊತ್ತಿನಲ್ಲೇ ಸುಬ್ಬನೂ ಬಂದು 'ದೋಣಿ ಸಿದ್ಧವಾಗಿದೆ' ಎಂದ. ಬೇಗ ಬೇಗ ಕಾಲು ಹಾಕುತ್ತ ಹಾಡಿಗೆ ಬಂದು ಅಲ್ಲಿ ದೋಣಿ ಹತ್ತಿದೆವು.

“ಗಾಳಿ ಸೊಗಸಾಗಿ ಅನುಕೂಲವಾಗಿ ಬೀಸುತ್ತಿತ್ತು. ಹಾಯಿದೋಣಿ ಸುಯ್ಯೆಂದು ನೀರನ್ನು ಬಗೆದು ಮುಂದೋಡುತ್ತಿತ್ತು. ನಾನು ನನ್ನ ಚಿಂತೆಯಲ್ಲಿ ಮುಳುಗಿದ್ದೆ ಸುಬ್ಬನೂ ಮಾತಾಡುತ್ತಿರಲಿಲ್ಲ ಗಾಳಿ ತುಂಬಿದ ಹಾಯಿ ಪಟಪಟಿಸುತ್ತಿತ್ತು. ಗಾಳಿ ಸುಯ್ಯೆಂದು ಬೀಸುತ್ತಿತ್ತು.

“ನನ್ನ ಮನಸ್ಸೂ ದೋಣಿಯೊಂದಿಗೆ ವೇಗವಾಗಿ ಓಡುತ್ತಿತ್ತು. ಉರಿಯುತ್ತಿರುವ ಮನೆಯಿಂದ ತಪ್ಪಿಸಿಕೊಂಡು ಬಂದ ಹಾಗೆ ಅನ್ನಿಸುತ್ತಿತ್ತು. ನನ್ನವರ ಪಾದವನ್ನು ಸೇರಬೇಕು; ಈ ಅಪಹಾಸ್ಯದಿಂದ, ಈ ಅಪವಾದದಿಂದ ತಪ್ಪಿಸಿಕೊಳ್ಳಬೇಕು; ನಾನು ನಿರಪರಾಧಿ ಅಂತ ಸಿದ್ಧವಾಗಬೇಕು— ಎಂಬ [illegible] ನನ್ನಲ್ಲಿ ನಾನು ಸುಬ್ಬನನ್ನು ಕಟ್ಟಿಕೊಂಡು ಓಡಿಹೋದೆ ಎಂದು ಊರಿನವರು ಹೇಳುತ್ತಾರೆಂದೂ ಅವರು ಆಡಿಕೊಳ್ಳುವುದಕ್ಕೆ

ಇನ್ನಷ್ಟು ವಿಷಯ ಸಿಕ್ಕುತ್ತದೆಂದೂ ನಾನು ಬಲ್ಲೆ. ಆದರೆ ಅದು ನನಗೆ ಯಾವ ವಿಧವಾದ ಆತಂಕವನ್ನು ಕೊಡಲಿಲ್ಲ. ನನ್ನವರ ಹತ್ತಿರ ಹೋಗುತ್ತಿದ್ದೇನೆ ಎಂಬ ನಂಬಿಕೆ ನನ್ನ ಮನಸ್ಸಿಗೆ ಬಹಳ ಉಲ್ಲಾಸ ಕೊಟ್ಟಿತ್ತು.

" ಗಾಳಿ ಅನುಕೂಲವಾಗಿದ್ದದ್ದು ಗಂಗೊಳ್ಳಿಗೆ ಇನ್ನು ಐದಾರು ಮೈಲಿ ಇದೆ ಅನ್ನುವಾಗ ಸ್ತಬ್ಧವಾಯಿತು. ದೋಣಿಯವರು ಗಳವನ್ನು ತೆಗೆದು ಕೊಂಡು ಒತ್ತಿದರು. ದೊಡ್ಡ ದೋಣಿ ಒಹು ನಿಧಾನವಾಗಿ ಹೋಗತೊಡಗಿತು ಗಾಳಿ ಚೆನ್ನಾಗಿದ್ದರೆ ನಾವು ಬಹಳ ಬೇಗ ಗಂಗೊಳ್ಳಿಯನ್ನು ಸೇರಬಹುದಾಗಿತ್ತು. ಈಗ ಗಾಳಿ ನಿಂತದ್ದರಿಂದ ನಾವು ಗಂಗೊಳ್ಳಿ ತಲುಪಿದಾಗ ಹೊತ್ತು ನೆತ್ತಿಗೇರಿ ಒಂದು ಮೂರು ಪಶ್ಚಿಮಕ್ಕೆ ತಿರುಗಿತ್ತು.

" ಗಂಗೊಳ್ಳಿಯಲ್ಲಿ ದೋಣಿಯಿಂದಿಳಿದು ಸುಬ್ಬನ ಗುರುತಿನವರೊಬ್ಬರ ಮನೆಗೆ ಹೋದೆವು. ಆ ಮನೆಗೆ ಹತ್ತಿರವಾಗುತ್ತಿದ್ದಾಗ ಸುಬ್ಬ ಹೇಳಿದ: ' ನೋಡಿ ಅಮ್ಮಾ, ಇದು ನನ್ನ ಗುರುತಿನವರೊಬ್ಬರ ಮನೆ. ಒಬ್ಬರು ಅಂದರೆ ಗಂಡಸರಲ್ಲ, ಹೆಂಗಸರು. ಅವಳು ಗರತಿಯೇನೋ ಅಲ್ಲ. ಆದರೆ ಬಹಳ ಒಳ್ಳೆಯವಳು. ಅಂಥ ಗುಣವಂತಳನ್ನು ನಾನು ಇನ್ನೆಲ್ಲೂ ಕಂಡಿಲ್ಲ. ನೀವು ಏನೂ ತಿಳಿದುಕೊಳ್ಳಬಾರದು ' ಎಂದ.

' ಯಾರಾದರೆ ನನಗೇನು ? ಒಂದು ಗಳಿಗೆ ಇದ್ದು ಹೋಗುವುದಕ್ಕೆ ಎಲ್ಲಾದರೆ ಏನು ? ' ಎಂದೆ.

" ಅಲ್ಲಿಗೆ ಹೋದ ಮೇಲೆ ನನಗೆ ಅವಳ ಹೆಸರು ಗಂಗೆ ಅಂತ ತಿಳಿಯಿತು. ಅವಳ ಒಳ್ಳೆಯತನವನ್ನೂ ಸದಾಚಾರವನ್ನೂ ಕಂಡು ನನಗೆ ಬಹಳ ಆಶ್ಚರ್ಯವಾಯಿತು. ಒಂದೆರಡು ಗಳಿಗೆ ಕಳೆಯುವಷ್ಟರಲ್ಲೇ ಅವಳಲ್ಲಿ ನನಗೆ ನನ್ನ ಸೋದರಿಯಲ್ಲಿರುವಷ್ಟು ಪ್ರೀತಿ ಬೆಳೆಯಿತು. ಅವಳು ನನಗೆ ಬಹಳ ಉಪಚಾರ ಮಾಡಿದಳು. ಅವಲಕ್ಕಿ-ಮೊಸರು, ಬಾಳೆ ಹಣ್ಣು ತರಿಸಿಕೊಟ್ಟಳು. ' ಅಡಿಗೆ ಮಾಡಿಕೊಳ್ಳಿ ' ಎಂದಳು. ನಾನೇ ' ಬೇಡ ' ಅಂದೆ

" ಸುಬ್ಬನಿಗೂ ಅವಳಿಗೂ ಇದ್ದ ಸಲಿಗೆಯನ್ನು ಕಂಡು ನನಗೆ ಕೊಂಚ ಆಶ್ಚರ್ಯವಾಯಿತು. ಆದರೆ ಅದೆಲ್ಲ ನನಗೇಕೆ ? ಎಂದು ಸುಮ್ಮನಾದೆ.'

" ನಾವು ಹೊರಡುವುದಕ್ಕೆ ಸಿದ್ಧವಾದಾಗ ನಾಲ್ಕೈದು ಗಳಿಗೆ ಹೊತ್ತು ಇದ್ದಿರಬಹುದು. ' ನಾವು ಈವತ್ತು ಬಹಳ ದೂರ ನಡೆಯುವುದು ಬೇಡ;

ಇಲ್ಲಿಂದ ಸುಮಾರು ನಾಲ್ಕು ಮೈಲಿ ದೂರದಲ್ಲಿ ತ್ರಾಸಿ ಎಂಬ ಊರಿದೆ. ನನ್ನ ಗುರುತಿನವರೊಬ್ಬರ ಮನೆ ಅಲ್ಲಿ ಇದೆ. ಈ ರಾತ್ರಿ ಅಲ್ಲಿಯೇ ಕಳೆದು ನಾಳೆ ಬೆಳಗ್ಗೆ ಮತ್ತೆ ಹೊರಡುವಾ' ಎಂದು ಸುಬ್ಬ ಹೇಳಿದ. ಆ ಕಡೆ ನಾನು ಎಂದೂ ಹೋದವಳಲ್ಲ. ಹಲವು ಕಡೆ ಸುತ್ತಾಡಿದ ಸುಬ್ಬನಿಗೆ ಆ ಪ್ರದೇಶವೆಲ್ಲ ಬಹಳ ಚೆನ್ನಾಗಿ ತಿಳಿದಿರುವ ಹಾಗೆ ತೋರಿತು.

"ಒಂದೆರಡು ಮೈಲು ನಡೆಯುವುದರಲ್ಲೇ ನನಗೆ ಬಹಳ ಆಯಾಸವಾಯಿತು. ಆದರೂ ನಿಧಾನವಾಗಿ ಹೆಜ್ಜೆಯಿಡುತ್ತ ಉಸ್ಸೆನ್ನುತ್ತ ನಡೆಯುತ್ತಿದ್ದೆ. ಇದನ್ನು ಕಂಡ ಸುಬ್ಬ 'ನಿಮಗೆ ನಡೆಯುವುದು ಬಹಳ ಕಷ್ಟವಾಗುತ್ತದೆ ಎಂದು ಕಾಣುತ್ತದೆ. ಇಲ್ಲಿಂದ ಕಂಭದಕೋಣೆಯೆಂಬ ಊರಿಗೆ ಸುಮಾರು ಹತ್ತು ಮೈಲಿ ಆಗುತ್ತದೆ. ಅಲ್ಲಿತನಕ ಹೇಗಾದರೂ ನಡೆದುಕೊಂಡು ಹೋಗಬೇಕು. ಅಲ್ಲಿಂದ ಕೊಲ್ಲೂರಿಗೆ ಗಾಡಿ ಮಾಡಿದರೆ ಆಯಿತು' ಎಂದ.

"ಹೋಗುತ್ತ ದಾರಿಯಲ್ಲಿ ಸುಬ್ಬ ಮಾತಾಡುತ್ತಿದ್ದ ತನ್ನ ವಿಷಯವಾಗಿ. ಅವನು ಮಾತು ಆಡುತ್ತಿದ್ದರೆ ಕೇಳಬೇಕು ಅನ್ನಿಸುತ್ತದೆ. ಅಷ್ಟು ಪಸಂದಾಗಿ ಅವನ ಬಾಯಿಂದ ಮಾತು ಹೊರಡುತ್ತದೆ. ತಾನು ಸೇರಿ ಕೆಲಸ ಮಾಡಿದ ಮೇಳಗಳು, ಅಲ್ಲಿನ ಪಾತ್ರಧಾರಿಗಳು, ತಾನು ಹಾಕಿದ ಪಾತ್ರಗಳು–ಈ ಎಲ್ಲವನ್ನೂ ಕುರಿತು ನಗು ಬರುವ ಹಾಗೆ ಮಾತಾಡುತ್ತಿದ್ದ. ಅವನ ಮಾತು ಕೇಳುತ್ತ ಕೇಳುತ್ತ ನಡಿಗೆಯ ಶ್ರಮ ಕೊಂಚ ತಗ್ಗಿದಂತಾಯಿತು.

"ರಸ್ತೆಯ ಎರಡೂ ಕಡೆ ದಟ್ಟವಾಗಿ ಬೆಳೆದ ಮರಗಳು. ಮರದ ನೆರಳಿನಲ್ಲಿ ನಡೆಯುತ್ತಿದ್ದುದರಿಂದ ಆಯಾಸ ತೀರ ಜಾಸ್ತಿಯಾಗಲಿಲ್ಲ. ಹೊತ್ತು ಇಳಿಯುತ್ತ ಹೋದ ಹಾಗೆ ಗಾಳಿಯೂ ತಣ್ಣಗೆ ಬೀಸತೊಡಗಿತು. ಬೇಸಗೆಯ ಅಸಾಧ್ಯ ಬಿಸಿಲು ತಗ್ಗಿದ ಮೇಲೆ ಹೋದ ಜೀವ ಮರಳಿ ಬಂದ ಹಾಗೆ ಆಯಿತು.

"ನಾವು ತ್ರಾಸಿಗೆ ಹತ್ತಿರ ಹತ್ತಿರವಾಗುತ್ತಿದ್ದ ಹಾಗೆ ಸುಬ್ಬ 'ಅಮ್ಮಾ' ಎಂದ. ಮಾತಿನಲ್ಲಿ ಹಾಸ್ಯವಿರಲಿಲ್ಲ. ಮುಖ ಗಂಭೀರವಾಗಿತ್ತು, 'ನೋಡಿ, ನನ್ನ ನಡತೆ ಸರಿಯಿಲ್ಲ ಅಂತ ಊರೇ ಹೇಳುತ್ತದೆ. ಆ ಮಾತಿನಲ್ಲಿ ಸತ್ಯದ ಅಂಶವೂ ಉಂಟು. ಆದರೆ ನಾನು ಜನ ತಿಳಿಯುವಷ್ಟು ಕೆಟ್ಟವನಲ್ಲ' ಎಂದ

'ನೀವು ಏಕೆ ಹೀಗೆ ಹೇಳುತ್ತೀರಿ? ನೀವು ನಮ್ಮ ಯಜಮಾನರಿಗೆ

ಬೇಕಾದವರು. ಅವರ ನಂಬಿಕೆಗೆ ಪಾತ್ರರಾದವರು. ನನಗೆ ಅಷ್ಟು ಸಾಕು' ಎಂದೆ. ಇವನು ಏಕೆ ಈ ಮಾತು ಎತ್ತಿದ ಎಂದು ಮನಸ್ಸಿನಲ್ಲಿ ಸಂಶಯ ಮೂಡಿತು. ನನ್ನ ಮಾತಿಗೆ ಸುಬ್ಬ

'ಅದು ಸರಿ ಅಮ್ಮ; ನಿಮ್ಮ ಯಜಮಾನರು ನನಗೆ ಅಣ್ಣನ ಹಾಗೆ: ನೀವು ನನಗೆ ತಾಯಿಗೆ ಸಮಾನ. ಆದ್ದರಿಂದಲೇ ನಾನು ಈ ಮಾತು ಹೇಳಿದ್ದು. ಉಳಿದವರು ಏನು ಬೇಕಾದರೆ ಹೇಳಲಿ, ನಮಗೆ ಬೇಕಾದವರು ನಮ್ಮ ವಿಷಯದಲ್ಲಿ ತಪ್ಪು ತಿಳಿಯಬಾರದಲ್ಲವೆ?' ಎಂದ

'ನಾನಂತೂ ನಿಮ್ಮ ವಿಷಯ ತಪ್ಪು ತಿಳಿದಿಲ್ಲ. ತಿಳಿಯುವುದಕ್ಕೆ ಕಾರಣವೂ ಇಲ್ಲ.' ಎಂದೆ.

'ಆದರೂ ಇರುವ ಮಾತನ್ನು ಹೇಳಿಬಿಡುತ್ತೇನೆ. ನನಗೆ ಒಂದು ದೊಡ್ಡ ದುರಭ್ಯಾಸವಿದೆ. ಅದು ಕುಡಿತ. ಎಷ್ಟು ಕಷ್ಟಪಟ್ಟರೂ ಅದನ್ನು ಬಿಡಲು ಸಾಧ್ಯವಾಗಲಿಲ್ಲ. ಕುಡಿದಾಗ ಏನು ಮಾಡುತ್ತೇನೋ ಬಿಡುತ್ತೇನೋ ನನಗೆ ತಿಳಿಯುವುದಿಲ್ಲ. ಈಗ ನೋಡಿ ನಿನ್ನೆಯಿಂದ ನಾನು ಕುಡಿದಿಲ್ಲ. ಕುಡಿಯಬೇಕು ಎನ್ನಿಸುತ್ತಿದೆ; ಆದರೂ ಕಷ್ಟಪಟ್ಟು ತಡೆದುಕೊಂಡಿದ್ದೇನೆ. ಎಷ್ಟೇ ತಡೆದರೂ ಹತೋಟಿ ಮೀರಿ ಕುಡಿಯಬಹುದು. ಆಗ ನಾನು ಏನು ಮಂಗಾಟ ಮಾಡುವೆನೋ ಹೇಳುವುದು ಕಷ್ಟ. ಹಾಗೇನಾದರೂ ನಾನು ಶುರುಮಾಡಿದರೆ ಒಂದು ಚೊಂಬು ತಣ್ಣೀರು ನನ್ನ ಮುಖಕ್ಕೆ ಚೆಲ್ಲಿಬಿಡಿ, ತಾಯಿ; ಹೆದರಬೇಡಿ. ಎಲ್ಲವೂ ಸರಿಹೋಗುತ್ತದೆ' ಎಂದ.

"ಈ ಮಾತು ಕೇಳಿ ನನಗೆ ಹೆದರಿಕೆಯಾಯಿತು. ನನ್ನ ನಿಸ್ಸಹಾಯಕಸ್ಥಿತಿಯನ್ನು ನೆನೆದು ನಡುಗಿದೆ. 'ದೇವರೇ, ನೀನೇ ಗತಿ ನನಗೆ' ಎಂದುಕೊಂಡು ಮುಂದೆ ಹೆಜ್ಜೆಯಿಟ್ಟೆ.

"ನಾವು ತ್ರಾಸಿಗೆ ಬರುವಾಗ ಹೊತ್ತು ಮುಳುಗುವ ಸಮಯ. ಎರಡೂ ಕಡೆ ನಿರ್ಜನ ಪ್ರದೇಶವಿದ್ದ ರಸ್ತೆಯ ಮೇಲೆ ನಡೆದು ಬರುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ಹಸುರು ತುಂಬಿದ, ತೆಂಗಿನ ಮರಗಳು ಆಕಾಶದೆತ್ತರಕ್ಕೆ ಬೆಳೆದು ನಿಂತಿದ್ದ ಸಣ್ಣ ಹಳ್ಳಿ ಕಾಣಿಸಿತು. ಸಮುದ್ರದ ಮೊರೆತ ಹತ್ತಿರದಲ್ಲೇ ಕೇಳಿಸಿತು. ಆ ಊರನ್ನು ಕಂಡಾಗ ನನ್ನ ಮನಸ್ಸೇಕೋ ಬಹಳ ಹರ್ಷಗೊಂಡಿತು. 'ಊರು ಸಮುದ್ರದ ತೀರದ ಮೇಲೇ ಇದೆ. ನೀವು ಆ ಊರನ್ನು ನೋಡಿರ

ಬಹುದು.' ಎಂದು ನಾನು ಶೀನಪ್ಪನ ಕಡೆ ನೋಡಿದೆ

" ಹೌದು, ನೋಡಿದ್ದೇನೆ, ಬಹಳ ಸೊಗಸಾದ ಊರು " ಎಂದ.

" ಗಾಳಿ ಬಹು ಚೆನ್ನಾಗಿ ಬೀಸುತ್ತಿತ್ತು. ಬೇಸಗೆಯ ಶಖೆ ಕೊಂಚವೂ ಕಾಣಿಸಲಿಲ್ಲ ಪ್ರಯಾಣದ ಆಯಾಸವೆಲ್ಲ ಕ್ಷಣಾರ್ಧದಲ್ಲಿ ಮರೆಯಾಯಿತು.

" ಊರು ಸಣ್ಣದು. ರಸ್ತೆಯ ಪಕ್ಕದಲ್ಲೇ ಎರಡು ಮೂರು ಅಂಗಡಿಗಳಿದ್ದುವು. ರಸ್ತೆಯಿಂದ ನಾಲ್ಕು ಮಾರು ದೂರದಲ್ಲೇ ಒಂದು ಮನೆ. ಸುಬ್ಬ ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗಿ

' ಭಟ್ಟರೇ ' ಎಂದು ಕರೆದ.

' ಓ, ಓ ' ಎನ್ನುತ್ತ ಭಟ್ಟರು ಹೊರಕ್ಕೆ ಬಂದು

' ಓಹೋ ಯಾರು ಸುಬ್ಬಣ್ಣನೋ ? ಏನು ಬಹಳ ಅಪರೂಪ ಇತ್ತಲಾಗಿ ಯಾವ ಮೇಳದಲ್ಲೂ ಕಾಣಲಿಲ್ಲ ' ಎಂದರು. ಅದಕ್ಕೆ ಸುಬ್ಬ, ' ಇಲ್ಲ ಭಟ್ಟರೇ, ಊರೇ ಬೇಜಾರಾಗಿ ಗಟ್ಟಕ್ಕೆ ಹೋಗಿದ್ದೆ. ಮೊನ್ನೆ ಮೊನ್ನೆ ಬಂದೆ' ಎಂದ.

ಆಗ ಭಟ್ಟರು ನನ್ನನ್ನು ಕಂಡು

' ಇವರು ಯಾರು ? ' ಎಂದರು.

' ಇವಳು ನನ್ನ ತಂಗಿ '

' ಇತ್ತಲಾಗಿ ಯಾವ ಕಡೆ ಹೊರಟದ್ದು ? ' ಎಂದು ಭಟ್ಟರು ಕೇಳಲು ಸುಬ್ಬ ' ಕೊಲ್ಲೂರಿಗೆ ' ಎಂದು ಆ ಮಾತನ್ನು ಮರೆಸಲು ' ಭಟ್ಟರೇ, ಈ ರಾತ್ರಿ ನಮಗಿಬ್ಬರಿಗೆ ಊಟ ಆಗಬೇಕು, ಮಲಗುವುದಕ್ಕೆ ಸ್ಥಳ ಬೇಕು. ಬೆಳಿಗ್ಗೆ ಎದ್ದು ಹೋಗುತ್ತೇವೆ ' ಎಂದ. ಭಟ್ಟರು ' ಅದಕ್ಕೇನಂತೆ, ಅವಶ್ಯವಾಗಿ ' ಎಂದು ತಕ್ಕ ವ್ಯವಸ್ಥೆ ಮಾಡಲು ಒಳಗೆ ಹೋದರು.

" ಅವರು ತಮ್ಮ ಮನೆಯವರಿಗೆ ವಿಷಯ ತಿಳಿಸಿ ಬಂದ ಮೇಲೆ ಇಬ್ಬರೂ ಯಕ್ಷಗಾನದ ಬೇರೆ ಬೇರೆ ಮೇಳಗಳನ್ನೂ ಆಟಗಳನ್ನೂ ಕುರಿತು ಮಾತಾಡುತ್ತ ಕುಳಿತರು. ನಾನು ಚಾವಡಿಯ ಒಂದು ಮೂಲೆಯಲ್ಲಿ ಮುದುರಿ ಕುಳಿತುಕೊಂಡೆ.

" ನನಗೆ ಆಯಾಸವೂ ಆಗಿತ್ತು, ಹಸಿವೆಯೂ ಚೆನ್ನಾಗಿ ಆಗಿತ್ತು. ಊಟವಾದ ಮೇಲೆ ಭಟ್ಟರು ಎರಡು ಚಾಪೆಗಳನ್ನು ತಂದು ಚಾವಡಿಯಲ್ಲಿ

ಹಾಸಿ ' ಮಲಗಿಕೊಳ್ಳಿ ' ಎಂದರು. ಭಟ್ಟರು ದೀಪವನ್ನು ತೆಗೆದುಕೊಂಡು ಒಳಕ್ಕೆ ಹೋದ ಮೇಲೆ ಸುಬ್ಬ

' ನೋಡಿ ಅಮ್ಮಾ, ಈ ಚೆಂಬಿನಲ್ಲಿ ತಂಬಾ ನೀರಿದೆ. ನಾನು ಸ್ವಲ್ಪ ಹೊರಗೆ ಹೋಗಿ ಬರುತ್ತೇನೆ' ಎಂದು ಹೊರಟು ಹೋದ. ಅವನು ಕುಡಿಯುವುದಕ್ಕೆ ಹೋಗಿರಬೇಕು ಅಂತ ನನಗೆ ತೋರಿತು. ಕುಡಿದು ಬಂದು ಏನೆಲ್ಲಾ ಮಾಡುತ್ತಾನೋ ಎಂದು ಮತ್ತೆ ಹೆದರಿಕೆ ಹುಟ್ಟಿತು. ಆಯಾಸವಾಗಿದ್ದರೂ ಕೂಡಾ ನಿದ್ದೆ ಬರಲಿಲ್ಲ. ಬಹಳ ಹೊತ್ತು ಕಣ್ಣು ತೆರೆದುಕೊಂಡೇ ಮಲಗಿದ್ದೆ. ಈ ಮಹಾರಾಯನ ಸಂಗಡ ಇನ್ನೂ ಎರಡು ಮೂರು ದಿನ ಕಳೆಯಬೇಕಲ್ಲ, ಹೇಗೆ ಕಳೆಯುವುದು ಎಂದು ಯೋಚಿಸಿದೆ.

“ ಹೀಗೆ ಯೋಚಿಸುತ್ತಿದ್ದಾಗಲೇ ಸ್ವಲ್ಪ ಜೊಂಪು ಹತ್ತಿರಬೇಕು ಏಕೋ ಥಟಕ್ಕನೆ ಎಚ್ಚರವಾಯಿತು. ಕಣ್ಣು ಬಿಟ್ಟು ನೋಡಿದರೆ ಸುಬ್ಬ ಕುಡಿದು ಅಮಲೇರಿ ಜೋಲಿ ಹೊಡೆಯುತ್ತಾ ಬರುತ್ತಿದ್ದ. ಆ ದಿವಸ ಆಕಾಶದಲ್ಲಿ ಮೋಡವಿರಲಿಲ್ಲ: ಚಂದ್ರ ಪ್ರಕಾಶವೂ ಇತ್ತು. ಹಾಗಾಗಿ ಅವನು ಅಂಗಳದಲ್ಲಿ ಬರುತ್ತಿರುವಾಗಲೇ ನನಗೆ ಅವನ ಆಕಾರ ಸ್ಪಷ್ಟವಾಗಿ ಕಾಣಿಸಿತು. ನಾನೂ ಹಾಸಿಗೆಯಲ್ಲಿ ಎದ್ದು ಕುಳಿತು ಹತ್ತಿರದಲ್ಲೇ ಇದ್ದ ನೀರಿನ ಚೆಂಬನ್ನು ಕೈಗೆ ತೆಗೆದುಕೊಂಡೆ. ಅವನು ಚಾವಡಿ ಏರಿದ. ತನ್ನ ಚಾಪೆಯ ಕಡೆ ಹೋಗದೆ ನಾನಿದ್ದ ಕಡೆಗೇ ಬರತೊಡಗಿದ. ಅವನ ಆಗಿನ ಸ್ವರೂಪ ಕಂಡು ನನಗೆ ಬಹಳ ಹೆದರಿಕೆಯಾಯಿತು. ಆದರೆ ಎದೆ ಗಟ್ಟಿ ಮಾಡಿಕೊಂಡು ಎದ್ದು ನಿಂತು, ಅವನು ಹತ್ತಿರ ಬರುತ್ತಿದ್ದಾಗಲೇ ನೀರನ್ನು ಅವನ ಮುಖಕ್ಕೆ ರಪ್ಪೆಂದು ಬಡಿದೆ. ಕೂಡಲೇ ಅವನು ಹಿಮ್ಮೆಟ್ಟಿದ. ಸ್ವಲ್ಪ ದೂರ ಹೋಗಿ ನೆಲಕ್ಕೆ ಕುಸಿದು ಬಿದ್ದ. ಆಮೇಲೆ ತನ್ನ ಶಲ್ಯದಿಂದ ಮುಖವರೆಸಿಕೊಂಡು ' ನಾರಾಯಣ, ಗೋವಿಂದ ' ಎನ್ನುತ್ತ ತನ್ನ ಚಾಪೆಯ ಮೇಲೆ ಹೋಗಿ ಬಿದ್ದು ಬಿಟ್ಟ.

' ಅಬ್ಬಾ ಒಂದು ಕುತ್ತ ಕಳೆಯಿತು ' ಎಂದು ಸಮಾಧಾನದ ನಿಟ್ಟುಸಿರು ಬಿಟ್ಟು ನಾನು ಮಲಗಿಕೊಂಡೆ. ಮತ್ತೆ ಯಾವ ತೊಂದರೆಯೂ ಆಗಲಿಲ್ಲ.

“ ಬೆಳಗ್ಗೆ ನಾವು ಮತ್ತೆ ಪ್ರಯಾಣವನ್ನು ಆರಂಭಿಸಿದಾಗ ಸುಬ್ಬನ ಮುಖ ಕಪ್ಪಿಟ್ಟಿತ್ತು. ಹಿಂದಿನ ದಿನ ಅಷ್ಟು ಉತ್ಸಾಹದಿಂದ ಮಾತನಾಡು

ತ್ತಿದ್ದವನು ಇಂದು ಮೌನ. ರಾತ್ರಿಯ ತನ್ನ ನಡತೆಗಾಗಿ ಪಶ್ಚಾತ್ತಾಪ ಪಡುತ್ತಿರಬಹುದು ಎಂದು ಕೊಂಡೆ. ನಾನು ಕೂಡಾ ಅವನನ್ನು ಮಾತಾಡಿಸಲಿಲ್ಲ.

"ನಾವು ಹೊರಟದ್ದು ಕೊಂಚ ತಡವಾಗಿದ್ದದ್ದರಿಂದ ನಿಧಾನವಾಗಿ ನಡೆದುಕೊಂಡು ಮರವಂತೆಯ ಹತ್ತಿರ ಬರುವಷ್ಟರಲ್ಲೇ ಶಖೆ ತಡೆಯುವುದಕ್ಕಾಗುವುದಿಲ್ಲ ಎನ್ನುವಂತಿತ್ತು. ನಾನು ಯಾವಾಗಲೂ ಹೆಚ್ಚು ನಡೆದವಳಲ್ಲ. ಮೂರು ನಾಲ್ಕು ಮೈಲು ನಡೆಯುವಷ್ಟರಲ್ಲೇ ಸಾಕುಸಾಕಾಗಿ ಹೋಯಿತು. ಉಸ್ ಉಸ್ ಎನ್ನುತ್ತ ಏದುಸುರು ಬಿಡುತ್ತ ನಡೆಯುತ್ತಿದ್ದೆ.

"ಮರವಂತೆಯ ಪೇಟೆಯನ್ನು ತಲುಪಿದಾಗ ಸುಬ್ಬ ನನ್ನನ್ನು ನೋಡಿ 'ಅಮ್ಮಾ ಈಗ ಬಿಸಿಲು ಏರುತ್ತಿದೆ. ಬಿಸಿಲು ತಣಿಸಿಕೊಂಡೇ ನಾವು ಇಲ್ಲಿಂದ ಹೊರಡುವುದು ಒಳ್ಳೆಯದು. ಇಲ್ಲಿಂದ ಕಂಭದಕೋಣೆಗೆ ಐದಾರು ಮೈಲಿ ದೂರ ಅಷ್ಟೆ. ಈ ರಾತ್ರಿ ಕಂಭದಕೋಣೆ ಸೇರಿದರೆ ಸಾಕು.' ಎಂದ. ಮಾತಾಡುವಾಗ ತಲೆ ತಗ್ಗಿಸಿಕೊಂಡೇ ಮಾತಾಡುತ್ತಿದ್ದ.

"ನಾನು ಏಕೆ ಏನು ಎಂದು ಕೇಳದೆ ಅವನ ಹಿಂದೆ ನಡೆದೆ. ಅಲ್ಲಿ ಒಂದು ಅಂಗಡಿಯ ಪಕ್ಕದ ಕಟ್ಟೆಯಲ್ಲಿ ಹೋಗಿ ಕುಳಿತುಕೊಂಡೆವು. ಜಗಲಿ ತಂಪಾಗಿತ್ತು. ಥಳಥಳ ಹೊಳೆಯುತ್ತಿತ್ತು. ಅಲ್ಲಿ ಒಂದೆರಡು ಚಾಪೆಗಳೂ, ದಿಂಬೂ ಇದ್ದುವು.

"ಅಲ್ಲಿ ಹೋಗಿ ಕುಳಿತು ಪಕ್ಕದ ಮನೆಯವರಿಂದ ನೀರು ಕೇಳಿ ತೆಗೆದುಕೊಂಡು ಕುಡಿದ ಮೇಲೆ ಹೋದ ಜೀವ ಮತ್ತೆ ಬಂದ ಹಾಗೆ ಆಯಿತು.

"ಸುಬ್ಬ ಒಂದು ಮೂಲೆಯಲ್ಲಿ ಮುಖ ತಗ್ಗಿಸಿಕೊಂಡು ಕುಳಿತಿದ್ದ. ಏನೋ ಹೇಳಬೇಕು ಅಂತ ಇರುವ ಹಾಗೆ, ಆದರೆ ಹೇಗೆ ಹೇಳಲಿ ಅಂತ ಹಿಂದೆ ಮುಂದೆ ನೋಡುತ್ತಿರುವಂತೆ ತೋರಿತು. ಬಹುಶಃ ನಿನ್ನೆ ರಾತ್ರಿಯ ತನ್ನ ವರ್ತನೆಗಾಗಿ ಅವನು ನಾಚಿಕೆ ಪಟ್ಟಿರಬಹುದು. ಆ ಬಗ್ಗೆ ಏನೋ ಹೇಳಬೇಕೆಂದು ಪ್ರಯತ್ನಿಸುತ್ತಿರಬೇಕು ಎಂದು ನಾನು ಭಾವಿಸಿದೆ. ಆದರೆ ನಾನೇ ಯಾವ ಮಾತನ್ನೂ ಎತ್ತಲು ಹೋಗಲಿಲ್ಲ. ಅವನೇ ಹೇಳಲಿ ಅಂತ ಸುಮ್ಮನಿದ್ದೆ.

"ಸ್ವಲ್ಪ ಹೊತ್ತಾದ ಬಳಿಕ ಸುಬ್ಬ 'ಅಮ್ಮಾ' ನಿಮಗೆ ಒಂದು ಮಾತು ಹೇಳಬೇಕಾಗಿದೆ. ಹೇಳುವುದು ಹೇಗೆ ಅಂತ ಸಂಕೋಚ ಪಟ್ಟುಕೊಳ್ಳುತ್ತಿ

ದ್ದೇನೆ ' ಎಂದ.

' ಸಂಕೋಚ ಏಕೆ ? ಹೇಳಿ ' ಎಂದೆ.

" ಆದರೂ ಅವನು ಸ್ವಲ್ಪ ಹೊತ್ತು ಮಾತನಾಡಲಿಲ್ಲ. ಕೊನೆಗೆ, ಬೇರೆ ಯಾವ ಉಪಾಯವೂ ಕಾಣಲಿಲ್ಲ ಎನುವ ಹಾಗೆ

' ನನ್ನ ಹತ್ತಿರ ಸ್ವಲ್ಪ ದುಡ್ಡು ಇತ್ತು. ಅದೆಲ್ಲಾ ಖರ್ಚಾಗಿ ಹೋಯಿತು. ಮುಂದೆ ಹೇಗೆ ? ಅಂತ ಯೋಚಿಸುತ್ತಿದ್ದೇನೆ ' ಎಂದ.

" ದುಡ್ಡಿನ ವಿಷಯ ನಾನು ಯೋಚನೆ ಮಾಡಿರಲಿಲ್ಲ. ನನ್ನ ಹತ್ತಿರ ಒಂದು ಆಣೆಯೂ ಇರಲಿಲ್ಲ. ಏನು ಹೇಳಬೇಕೆಂದು ತೋಚದೆ,

' ನನ್ನ ಹತ್ತಿರ ದುಡ್ಡು ಏನೂ ಇಲ್ಲವಲ್ಲಪ್ಪಾ, ಏನು ಮಾಡುವುದು ? ' ಎಂದೆ.

' ಇನ್ನೂ ಎರಡು ದಿನ ಪ್ರಯಾಣ ಮಾಡಬೇಕು. ಗಾಡಿ ಬಾಡಿಗೆಗೆ ಆಗಬೇಕು. ಇವತ್ತು ಬೆಳಗ್ಗಿನಿಂದ ನನಗೆ ಅದೇ ಚಿಂತೆ ' ಎಂದ.

" ನಾನೂ ಸ್ವಲ್ಪ ಯೋಚಿಸಿದೆ. ಕೈಯಲ್ಲಿ ಎರಡು ಚಿನ್ನದ ಬಳೆಗಳಿದ್ದುದು ಜ್ಞಾಪಕಕ್ಕೆ ಬಂತು. ' ಈ ಒಂದು ಬಳೆ ತೆಗೆದುಕೊಳ್ಳಿ. ಇದನ್ನು ಮಾರಿದರೆ ನಮಗೆ ಬೇಕಾದಷ್ಟು ದುಡ್ಡು ಸಿಕ್ಕಬಹುದಲ್ಲವೇ ? ' ಎಂದೆ.

" ಬಳೆಯನ್ನು ಕಂಡು ಅವನ ಮುಖ ಸ್ವಲ್ಪ ಕಳೆಯೇರಿದಂತೆ ಕಂಡಿತು. ಆದರೆ ಅವನ ಮಾತಿನಲ್ಲಿ ಅದು ವ್ಯಕ್ತವಾಗಲಿಲ್ಲ.

' ಬಳೆ ಮಾರುವುದೇ ? ಅದು ಸರಿಯಲ್ಲ. ಬೇಡ.' ಎಂದ.

' ಸರಿ ತಪ್ಪು ಅಂತ ಯೋಚಿಸುವ ಕಾಲವೇ ಇದು ? ಹಾಗೆಲ್ಲ ಯೋಚನೆ ಮಾಡಬೇಡಿ. ಮಾರಿಬಿಡಿ. ನಾವು ಕೊಲ್ಲೂರು ಸೇರಬೇಕಲ್ಲ ? ' ಎಂದೆ.

' ಬಳೆ ಮಾರಿ ಬಿಟ್ಟು ಶಾಸ್ತ್ರಿಗಳ ಮುಖ ನಾನು ಹೇಗೆ ನೋಡಲಿ ? ' ಎಂದ.

' ನಾನೇ ಮಾರಿದೆ ಎಂದು ಹೇಳುತ್ತೇನೆ. ನೀವು ಆ ಬಗ್ಗೆ ಚಿಂತೆ ಮಾಡಬೇಡಿ.' ಎಂದೆ.

" ಅವನು ಕೂಡಲೇ ಬಳೆಯನ್ನು ತೆಗೆದುಕೊಳ್ಳದೇ ಕೊಂಚ ಹೊತ್ತು ಯೋಚಿಸಿ

' ನಾನು ಇದನ್ನು ಮಾರುವುದಿಲ್ಲ. ಇಲ್ಲೇ ಎಲ್ಲಾದರೂ ಅಡವಿಡುತ್ತೇನೆ.

ಆವೇಳೆ ಬಿಡಿಸಿಕೊಂಡರಾಯಿತು.' ಎಂದ.

'ಹಾಗೇ ಆಗಲಿ' ಎಂದೆ, ನಾನು.

“ಬಳೆ ತೆಗೆದುಕೊಂಡು ಅವನು ಹೊರಟು ಹೋದ. ಹೋಗಿ ಸ್ವಲ್ಪ ಹೊತ್ತಿನಲ್ಲೇ ಬಂದ.

'ಬಳೆ ಅಡವಿಟ್ಟು ಹತ್ತು ರೂಪಾಯಿ ತಂದಿದ್ದೇನೆ ಎಷ್ಟು ಖರ್ಚಾಗುತ್ತದೋ ನೋಡಿ ಉಳಿದದ್ದು ನಿಮಗೆ ಕೊಲ್ಲೂರಲ್ಲಿ ಕೊಡುತ್ತೇನೆ' ಎಂದ.

'ಹಾಗೇ ಆಗಲಿ' ಎಂದೆ.

“ಮಧ್ಯಾಹ್ನದ ಮೇಲೆ ಬಿಸಿಲು ಸಂಪೂರ್ಣವಾಗಿ ತಣಿದ ಮೇಲೆ ನಾವು ಮರವಂತೆಯನ್ನು ಬಿಟ್ಟು ಹೊರಟೆವು. ಬಿಸಿಲು ತಣಿದಿದ್ದರೂ ಶಕೆ ತಗ್ಗಿರಲಿಲ್ಲ. ಆಕಾಶದಲ್ಲಿ ಮೋಡ ಕವಿಯುತ್ತಿತ್ತು. 'ಈ ದಿವಸ ರಾತ್ರೆ ಭಾರಿ ಮಳೆ ಇದೆ' ಎಂದ ಸುಬ್ಬ. ನನಗೂ ಆ ಮಾತು ಹೌದೆನಿಸಿತು.

“ನಾವು ನಾಗೂರಿನ ಹತ್ತಿರ ಬರುವಾಗ ಹೊತ್ತು ಮುಳುಗಿದ್ದಿರಲಾರದು. ಆದರೂ ಕಪ್ಪು ಮೋಡಗಳ ದಟ್ಟಣೆಯಿಂದ ಮುಸಕುಮುಸಕಾಗಿತ್ತು.

'ಕಂಭದಕೋಣೆಗೆ ಇನ್ನು ಎರಡು ಮೈಲಿ ಮಾತ್ರ. ಮಳೆ ಬರುವಷ್ಟರಲ್ಲಿ ಆ ಊರು ಸಿಕ್ಕಿದರೆ ಸಾಕು. ಈ ಮಳೆ ಹಿಡಿದರೆ ಬಿಡುವಂಥದಲ್ಲ ಎಂದು ತೋರುತ್ತದೆ' ಎಂದ ಸುಬ್ಬ.

“ನಾನೂ ಸ್ವಲ್ಪ ಬೇಗಬೇಗ ಹೆಜ್ಜೆ ಹಾಕತೊಡಗಿದೆ. ಎಡಮಾವಿನ ಹೊಳೆಯನ್ನು ದಾಟುವಷ್ಟರಲ್ಲಿ ಸುತ್ತಲೂ ಗಾಢಾಂಧಕಾರ ಕವಿದಂತೇ ಆಗಿತ್ತು. ಇನ್ನೂ ಸ್ವಲ್ಪ ದೂರ ಹೋಗುವಷ್ಟರಲ್ಲಿ ಗುಡುಗಲು ಶುರುವಾಯಿತು.

'ಸ್ವಲ್ಪ ಬೇಗಬೇಗ ಕಾಲು ಹಾಕಿ' ಎಂದ ಸುಬ್ಬ.

“ನಾವು ಬೇಗಬೇಗ ನಡೆದು ಕೊನೆಗೂ ಕಂಭದಕೋಣೆಯನ್ನು ತಲುಪಿದೆವು. ಮಳೆ ಬರುವ ಲಕ್ಷಣಗಳೆಲ್ಲ ಇದ್ದರೂ ಮಳೆ ಮಾತ್ರ ಬರಲಿಲ್ಲ. ಅಲ್ಲಿ ಮುಸಾಫಿರ್‌ಖಾನೆಯಲ್ಲಿ ಹೋಗಿ ಸೇರಿಕೊಂಡೆವು.

ನನಗೆ ಬಹಳ ಬಾಯಾರಿಕೆ ಆಗಿತ್ತು. 'ಒಂದು ಸ್ವಲ್ಪ ನೀರು ಬೇಕಾಗಿತ್ತು' ಎಂದೆ. ಸುಬ್ಬ ತತ್‌ಕ್ಷಣ ಚೆಂಬು ತೆಗೆದುಕೊಂಡು ಹೋಗಿ ಕುಡಿಯುವ ನೀರು ತಂದುಕೊಟ್ಟ. ಮತ್ತೆ ಅವನು ಹೊರಕ್ಕೆ ಹೋಗಿ ಅಂಗಡಿಯಿಂದ ಸ್ವಲ್ಪ ಬಾಳೆಹಣ್ಣು ಸಕ್ಕರೆ ತಂದು ನನ್ನ ಮುಂದೆ ಇಟ್ಟು,

‘ ಇದನ್ನು ತೆಗೆದುಕೊಳ್ಳಿ. ನಾನು ಈಗಲೇ ಬಂದುಬಿಟ್ಟೆ. ಗಾಡಿ ವಿಚಾರಿಸಿಕೊಂಡು ಬರುತ್ತೇನೆ ’ ಎಂದು ಹೊರಟುಹೋಗಿಬಿಟ್ಟ.

“ ಅಲ್ಲಿ ಮುಸಾಫಿರ್ ಖಾನೆಯಲ್ಲಿ ನಾನೊಬ್ಬಳೇ ಕುಳಿತೆ. ಕತ್ತಲಾಯಿತು; ಮೋಡ ದಟ್ಟವಾಯಿತು. ಆಕಾಶದಲ್ಲಿ ಒಂದು ನಕ್ಷತ್ರವೂ ಕಾಣಿಸದು. ಗುಡುಗು ಗುಡುಗತೊಡಗಿತು; ಮಿಂಚು ಮಿಂಚತೊಡಗಿತು ದೂರದಲ್ಲಿ ಸಿಡಿಲು ಛಟಾರೆಂದು ಸಿಡಿಯಿತು. ಇದ್ದ ಎರಡು ಮೂರು ಅಂಗಡಿಗಳ ಬಾಗಿಲು ಮುಚ್ಚತೊಡಗಿದರು.

“ ನನ್ನ ಮನಸ್ಸಿನಲ್ಲಿ ಏನೋ ಒಂದು, ಇಂಥದೇ ಎಂದು ಹೇಳಲಾರದ ಭಯ ಮೂಡಿ ಎದೆ ಕತ್ತರಿಸತೊಡಗಿತು ಒಬ್ಬಳೇ. ಕತ್ತಲು. ಎಷ್ಟು ಹೊತ್ತು ಕಾದರೂ ಸುಬ್ಬ ಮರಳಿ ಬರಲಿಲ್ಲ. ಅವನು ಹಿಂತಿರುಗಿಬಾರದಿದ್ದರೆ ಮುಂದೇನು ಗತಿ ಎಂದುಕೊಂಡು ನಡುಗಿದೆ. ಆ ಊರಿಗೂ ನಾನು ಹೊಸಬಳು. ಈ ಪ್ರದೇಶವನ್ನು ಎಂದೂ ಕಂಡವಳಲ್ಲ. ಬೀದಿಯಲ್ಲಿ ಜನಸಂಚಾರವೂ ಇರಲಿಲ್ಲ. ಬೀದಿಯುದ್ದಕ್ಕೂ ಕತ್ತಲು ಕಪ್ಪುಗಟ್ಟಿದಂತಿತ್ತು. ಆಗಾಗ ಬರುತ್ತಿದ್ದ ಮಿಂಚಿನ ಬೆಳಕಿನಿಂದ ಕತ್ತಲೆ ಇನ್ನಷ್ಟು ಭಯಂಕರವಾಗಿ ತೋರಿತು.

“ ಹೀಗೆ ಎಷ್ಟು ಹೊತ್ತು ಕಳೆಯಿತೋ ಹೇಳುವುದು ಕಷ್ಟ. ಕ್ಷಣ ಕ್ಷಣಕ್ಕೂ ನನ್ನ ಮನಸ್ಸಿನ ಭಯ ಹೆಚ್ಚುತ್ತಿತ್ತು. ಎಷ್ಟು ಕಾದರೂ ಸುಬ್ಬ ಬರಲಿಲ್ಲ ‘ ಅಯ್ಯೋ ದೇವರೇ ಏನು ಮಾಡಲಿ ’ ಎಂದು ನನ್ನಷ್ಟಕ್ಕೇ ಮರುಗಿದೆ. ಇನ್ನೇನೂ ದಾರಿ ತೋರದೆ ಕತ್ತಲು ತುಂಬಿದ ಬೀದಿಯನ್ನೇ ನೋಡುತ್ತ ಕುಳಿತೆ. ಕತ್ತಲು, ಕತ್ತಲನ್ನು ಸೀಳುವ ಮಿಂಚು; ಗುಡುಗು; ಭೂಮಿಯನ್ನೇ ನಡುಗಿಸುವಂಥ ಸಿಡಿಲು—ಇವುಗಳ ನಡುವೆ ನಾನು ದಾರಿಗಾಣದೆ ಮುದುರಿಕುಳಿತಿದ್ದೆ.

“ ಸಣ್ಣಗೆ ಹನಿಯುತ್ತಿದ್ದ ಮಳೆ ಇಷ್ಟು ಹೊತ್ತಿಗೆ ಜೋರಾಗಿ ಬಾರಿಸ ತೊಡಗಿತ್ತು.

“ ಹೀಗೆ ಕೊಂಚ ಹೊತ್ತು ಕಳೆಯಲು, ಯಾರೋ ಇಬ್ಬರು ಓಡೋಡುತ್ತ ಬಂದು ಮುಸಾಫಿರಖಾನೆಯನ್ನು ಹೊಕ್ಕರು. ಅವರು ಹೊಕ್ಕ ಕೂಡಲೇ ಹೆಂಡದ ನಾತ ಮೂಗಿಗೆ ಬಂದು ಬಡಿಯಿತು. ನನಗೆ ಅಸಹ್ಯವಾಗಿ ವಾಂತಿ ಬರುವಂತಾಯಿತು. ಅವರು ಏನೇನೋ ತುರುಕು ಮಾತು ಆಡುತ್ತಿದ್ದರು.

ಮಾತು ತೊದಲುತ್ತಿದ್ದುದರಿಂದ ಅವರಿಗೆ ಬುದ್ಧಿ ಸ್ವಾಧೀನದಲ್ಲಿಲ್ಲ ಎನ್ನಿಸಿತು. ಅವರಿಂದಂತೂ ನನಗೆ ಇನ್ನಷ್ಟು ಹೆದರಿಕೆಯಾಯಿತು. ಮೂಲೆಯಲ್ಲಿ ಇನ್ನಷ್ಟು ಮುದುರಿ ಕುಳಿತುಕೊಂಡೆ.

"ಅವರು ಅಲ್ಲಿಂದ ತೊಲಗಿ ಹೋಗಬಹುದು ಎಂದುಕೊಂಡೆ. ಆದರೆ ಎಷ್ಟು ಹೊತ್ತಾದರೂ ಅವರು ಅಲ್ಲಿಂದ ಏಳಲಿಲ್ಲ. ಏನೇನೋ ಪದ ಹೇಳುತ್ತ ಬೀಡಿ ಸೇದುತ್ತ ಕುಳಿತರು. 'ದೇವರೇ, ಅವರು ನನ್ನನ್ನು ನೋಡದಿರಲಿ' ಎಂದು ದೇವರನ್ನು ಬೇಡಿಕೊಂಡೆ.

"ಆ ಮುಸಾಫಿರ್‌ಖಾನೆ ನೀವು ನೋಡಿರಬಹುದು. ಅದು ಬಹಳ ಸಣ್ಣದು. ಎರಡು ಸಣ್ಣ ಜಗಲಿಗಳು, ಮಧ್ಯೆ ಒಂದಷ್ಟು ಸ್ಥಳ—ಇಷ್ಟು ಬಿಟ್ಟರೆ ಬೇರೆ ಜಾಗವಿಲ್ಲ. ನಾನು ಒಂದು ಜಗಲಿಯ ಮೇಲೆ ಕುಳಿತಿದ್ದೆ; ಆ ಇಬ್ಬರು ಇನ್ನೊಂದು ಜಗಲಿಯ ಮೇಲೆ ಕುಳಿತಿದ್ದರು.

"ಹೆಂಡದ ನಾತ, ಬೀಡಿಯ ವಾಸನೆ; ನನಗೆ ನಿಜವಾಗಿಯೂ ವಾಂತಿ ಬರುವಂತೇ ಆಯಿತು. ಆ ಕಡೆಯ ಮೂಲೆಯಲ್ಲಿ ಕುಳಿತಿದ್ದವಳು ಮೆಲ್ಲಗೆ ಜಾರಿ ಬೀದಿಯ ಕಡೆಗೆ ಸರಿದೆ. ಎಷ್ಟು ಮೆಲ್ಲಗೆ ಎಂದರೂ ಕೊಂಚ ಸದ್ದಾಗಿರಬೇಕು. ಅದು ಅವರಿಗೆ ಕೇಳಿಸಿತೋ ಏನೋ. ಅವರ ಮಾತು ಇದ್ದಕ್ಕಿದ್ದಂತೆ ನಿಂತಿತು.

"ಇಷ್ಟು ಹೊತ್ತಿಗೆ ಒಂದು ದೊಡ್ಡ ಮಿಂಚು ಬಂದು ಬೀದಿಯನ್ನೂ, ಮುಸಾಫಿರ್‌ಖಾನೆಯನ್ನೂ ಒಂದು ಕ್ಷಣ ಬೆಳಗಿತು. ನಾನು ಅವರ ಕಡೆಯೇ ನೋಡುತ್ತಿದ್ದೆ. ಒಬ್ಬನ ಕಣ್ಣು ಆಗ ನನ್ನ ಮೇಲೆ ಬಿತ್ತು. ಕೂಡಲೇ ಅವನು ಏನೇನೋ ಮಾತಾಡುತ್ತ ಎದ್ದು ನಿಂತ.

"ನನಗೆ ಭಯದಿಂದ ಬುದ್ಧಿಯ ಸ್ವಾಧೀನವೇ ತಪ್ಪಿದಂತಾಯಿತು. ಆ ಇಬ್ಬರು ಕುಡುಕರಿಂದ ತಪ್ಪಿಸಿಕೊಳ್ಳಬೇಕು ಎಂಬ ಒಂದು ಯೋಚನೆಯಲ್ಲದೆ ಮನಸ್ಸಿನಲ್ಲಿ ಆಗ ಇನ್ನಾವ ಭಾವನೆಯೂ ಇರಲಿಲ್ಲ. ಒಂದು ಕ್ಷಣವೂ ತಡಮಾಡದೆ ಬೀದಿಗೆ ಧುಮುಕಿದೆ. ನನ್ನ ಶಕ್ತಿಗಿಂತ ಹೆಚ್ಚಾಗಿ ಇನ್ನಾವುದೋ ಶಕ್ತಿ ನನ್ನನ್ನು ಓಡಿಸುತ್ತಿತ್ತು ಅಂತ ಕಾಣುತ್ತದೆ. ಓಡುತ್ತಿದ್ದವಳು ಹಿಂದೆ ನೋಡಿದೆ; ಆಗ ಇನ್ನೊಮ್ಮೆ ಮಿಂಚು ಮಿಂಚಿತು. ಅವರಲ್ಲೊಬ್ಬ ತೂರಾಡುತ್ತ ನನ್ನ ಹಿಂದೆ ನನ್ನನ್ನು ಅಟ್ಟಿಸಿಕೊಂಡು ಬರುವುದು ಕಂಡಿತು. ನಾನು ಇನ್ನೂ ಜೋರಾಗಿ ಓಡತೊಡಗಿದೆ. ಮತ್ತೆ ಹಿಂದೆ ನೋಡಲಿಲ್ಲ.

“ ಸ್ವಲ್ಪ ದೂರ ಓಡಿದ ಮೇಲೆ ರಸ್ತೆಯಿಂದ ಪೂರ್ವಕ್ಕೆ ಗದ್ದೆಗಳ ನಡುವೆ ಒಂದು ದಾರಿ ಕಾಣಿಸಿತು. ರಸ್ತೆಯನ್ನು ಬಿಟ್ಟು ಆ ದಾರಿ ಹಿಡಿದೆ. ಓಡುತ್ತಲೇ ಇದ್ದೆ. ಅದು ಹೇಗೆ ಓಡಿದೆನೋ, ಏನೇನನ್ನು ದಾಟಿದೆನೋ ನನಗೆ ನೆನಪಿಲ್ಲ. ಒಂದು ಹಳ್ಳ ದಾಟಿದ್ದು ಮಾತ್ರ ಜ್ಞಾಪಕವಿದೆ. ಓಡುತ್ತಲೇ ಇದ್ದೆ.

“ ಮಳೆ ಧಾರೆಧಾರೆಯಾಗಿ ಸುರಿಯುತ್ತಿತ್ತು. ಗುಡುಗು ಗುಡುಗುತ್ತಿತ್ತು; ಮಿಂಚು ಮಿಂಚುತ್ತಿತ್ತು. ಮೈಯೆಲ್ಲ ಒದ್ದೆಯಾಗಿ ತಲೆಯಿಂದ ನೀರು ಹೊಳೆಯಂತೆ ಹರಿಯುತ್ತಿತ್ತು. ಎಷ್ಟೋ ಸಲ ಎಡವಿ ಬಿದ್ದೆ. ಎದ್ದು ಮತ್ತೆ ಓಡಿದೆ.

“ ಅದೆಷ್ಟು ದೂರ ಹೀಗೆ ಓಡಿದೆನೋ ಹೇಳಲಾರೆ. ನನ್ನ ಕಾಲು ಸೋತು ಓಡುವುದು ತೀರ ಅಸಾಧ್ಯವಾದಾಗ ಕೊಂಚ ನಿಂತು ಹಿಂದೆ ನೋಡಿದೆ. ಮತ್ತೆ ನಿಧಾನವಾಗಿ ನಡೆಯುತ್ತ ಮುಂದೆ ಮುಂದೆ ಹೋದೆ.

“ ಇಷ್ಟರಲ್ಲಿ ಯಾವುದೋ ಒಂದು ಊರು ಸಿಕ್ಕಿತು. ಒಂದು ಮನೆಯಲ್ಲಿ ಬೆಳಕು ಕಾಣಿಸಿತು. ಬಾಗಿಲು ತಟ್ಟಿದೆ; ‘ ಬದುಕಿಸಿರೋ ’ ಎಂದು ಕೂಗಿದೆ. ಬಾಗಿಲು ತೆರೆಯಲಿಲ್ಲ. ನನಗೆ ಅಸಾಧ್ಯ ಆಯಾಸವಾಗಿತು. ಒಂದು ಹೆಜ್ಜೆಯೂ ನಡೆಯುವುದು ಆಗುತ್ತಿರಲಿಲ್ಲ ಆದರೂ ಹಾಗೇ ಮುಂದುವರಿದೆ. ಆಮೇಲೆ ಏನಾಯಿತೋ ನನಗೆ ತಿಳಿಯದು ” ಎಂದಳು.

ಶೀನಪ್ಪ ಮತ್ತು ನಾಗಿ ಈ ಕಥೆಯನ್ನು ಮಾತಿಲ್ಲದೆ ಕೇಳುತ್ತ ಕೂತಿದ್ದರು. ಅವರಿಬ್ಬರ ಕಣ್ಣಲ್ಲೂ ನೀರು ತುಂಬಿತ್ತು. ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ವಿಚಿತ್ರವಾದ ಭಯಂಕರವಾದ ಮೌನ ಮನೆಯನ್ನೆಲ್ಲ ಆವರಿಸಿತ್ತು.

ಸ್ವಲ್ಪ ಹೊತ್ತು ಆದ ಮೇಲೆ ಶೀನಪ್ಪ, “ ಅಬ್ಬಾ, ಎಂಥ ಕಥೆ; ಇಂಥದು ನಡೆಯುತ್ತದೆ ಎಂದು ನಂಬುವುದೇ ಕಷ್ಟ. ಆದರೂ ನಡೆದಿದೆ. ಯಾರ ಅದೃಷ್ಟವಾದರೂ ಇಷ್ಟು ಕೆಡಬಾರದು” ಎಂದು ನಿಟ್ಟುಸಿರು ಬಿಟ್ಟ.

“ ತಪ್ಪು ಮಾಡದ ಇರುವವರಿಗೂ ಇಷ್ಟು ಶಿಕ್ಷೆ ಕೊಡಬಾರದು ದೇವರೇ ಎಂದಳು, ನಾಗಿ. ಅವಳ ಕಂಠ ಗದ್ಗದವಾಗಿತ್ತು.

ಆಗ ಶೀನಪ್ಪ, “ ರಾತ್ರಿ ಬಹಳ ಆಯಿತು, ಪದ್ಮಾ. ಇಷ್ಟು ಹೊತ್ತು ನೀನು ಮಾತಾಡಲು ಬಿಡಬಾರದಾಗಿತ್ತು. ದುಃಖದ ಕಥೆಯನ್ನು ಕೇಳುವಾಗಲೂ ಕೆಟ್ಟ ಕುತೂಹಲ ನಮಗೆ ” ಎಂದ.

"ಇಲ್ಲ, ನಾನು ಎಲ್ಲವನ್ನೂ ಹೇಳಿ ಮುಗಿಸಿದ್ದು ಒಳೆಯದೇ ಆಯಿತು. ನನ್ನ ಮನಸ್ಸಿಂದ ದೊಡ್ಡ ಹೊರೆಯನ್ನು ಇಳಿಸಿದಂತಾಯಿತು." ಎಂದಳು.

"ಇನ್ನು ನಾವು ಮಲಗುವಾ" ಎನ್ನುತ್ತ ಶೀನಪ್ಪ. "ಒಂದು ವಿಷಯ ಮರೆತೇ ಬಿಟ್ಟಿದ್ದೆ. ನಿಮ್ಮ ಆ ಮಗು ಏನಾಯಿತು?" ಎಂದು ಕೇಳಿದ.

ಮಗು ಎಂಬ ಶಬ್ದ ಕೇಳಿದ ಕೂಡಲೇ ಪದ್ಮಾ ಬಿಕ್ಕಿಬಿಕ್ಕಿ ಅಳತೊಡಗಿದಳು. 'ಅಯ್ಯೋ ಮಗು, ನನ್ನ ಕಂದ, ಅನಂತೂ...' ಎನ್ನುತ್ತ ಅವಳು ಎರಡು ಕೈಗಳಿಂದ ಮುಖ ಮುಚ್ಚಿಕೊಂಡು ಒಂದೇ ಸವನೇ ಅತ್ತಳು.

ಶೀನಪ್ಪ ಅಪ್ರತಿಭನಾದ. ಈ ಪ್ರಶ್ನೆ ತಾನು ಕೇಳಬಾರದಾಗಿತ್ತು ಎಂದು ಪಶ್ಚಾತ್ತಾಪ ಪಟ್ಟ. ಬಹುಶಃ ಮಗು ತೀರಿಕೊಂಡಿರಬೇಕು, ಅದರ ನೆನಪು ಬಂದು ಅಳುತ್ತಿದ್ದಾಳೆ—ಪಾಪ, ಎಂದು ಸಮಾಧಾನ ತಂದುಕೊಂಡ.

"ಪದ್ಮಾ, ಕಷ್ಟ ಬರುವುದು ಬಂದಿದೆ. ಸುಮ್ಮನೆ ಅತ್ತರೇನು ಫಲ? ಹೇಗಾದರೂ ಸಹಿಸಿಕೊಳ್ಳಬೇಕಲ್ಲವೇ?" ಎಂದು ಶೀನಪ್ಪ, "ಇನ್ನು ಮಲಗಿಕೋ, ಪದ್ಮಾ; ಬಹಳ ರಾತ್ರಿಯಾಯಿತು" ಎಂದ.

ಆದರೂ ಅವಳ ಅಳು ನಿಲ್ಲಲಿಲ್ಲ.

ಶೀನಪ್ಪನು ಚಾವಡಿಗೆ ಹೋಗಿ ಹಾಸಿಗೆ ಹಾಸಿಕೊಂಡು ಮಲಗಿದ. ಪಡಸಾಲೆಯ ಎದುರಿನಲ್ಲೇ ನಾಗಿ ತನ್ನ ಕಂಬಳಿ ಹಾಸಿ ಮಲಗಿದಳು. ಶೀನಪ್ಪನಿಗೆ ನಿದ್ದೆ ಹತ್ತುವ ವರೆಗೂ ಆಗಾಗ ಪದ್ಮಾ ಬಿಕ್ಕಿಬಿಕ್ಕಿ ಅಳುತ್ತಿದ್ದುದು ಕೇಳಿಸುತ್ತಿತ್ತು.

## ೮

ಎರಡು ಮೂರು ದಿನ ಹೀಗೆ ಕಳೆಯಿತು. ಒಂದು ದಿನ ಮತ್ತೆ ನಿರಂತರ ಧಾರೆಯಾಗಿ ಸುರಿಯ ತೊಡಗಿತ್ತು. ಉಳುವುದು, ಅಗೆ ಕೀಳುವುದು, ನೆಡುವುದು. ಬೆಳಗ್ಗಿನಿಂದ ಸಂಜೆಯ ವರೆಗೆ ಬಿಡುವಿಲ್ಲದ ಕೆಲಸ.

ಪದ್ಮಾವತಿಯ ದೇಹಸ್ಥಿತಿ ದಿನದಿನಕ್ಕೆ ಉತ್ತಮಗೊಳ್ಳುತ್ತಿತ್ತು ಈಗ ಜ್ವರ ಇಲ್ಲ. ಪಂಡಿತರು ಇನ್ನೊಂದು ಔಷಧ ಹೇಳಿದ್ದರು. ಅದರ ಉಪಯೋಗ ನಡೆಯುತ್ತಿತ್ತು. ಪದ್ಮಾವತಿ ಎದ್ದು ಅತ್ತಿತ್ತ ಓಡಾಡಲು ಸಮರ್ಥಳಾಗಿದ್ದಳು.

ನಿರ್ಗತಿಕಳಾಗಿ, ನಿಸ್ಸಹಾಯಕಳಾಗಿ, ನಿರ್ಜೀವಳಾಗಿ ತನ್ನ ಮನೆಗೆ ಅಕಸ್ಮಾತ್ತಾಗಿ ಬಂದಿದ್ದ ಈ ಅಜ್ಞಾತ ಸ್ತ್ರೀಯನ್ನು ಹೇಗಾದರೂ ಮಾಡಿ ಬದುಕಿಸಬೇಕು ಎಂಬ ಉದ್ದೇಶದಿಂದ ಏಕಮುಖವಾಗಿ ಪ್ರವಹಿಸುತ್ತಿದ್ದ ಆತನ ಮನಸ್ಸು ಈಗ ಹಗುರವಾಗಿ ಅತ್ತಿತ್ತ ಅಲೆದಾಡಲು ಸಮರ್ಥವಾಗಿತ್ತು.

ಆ ದಿನ ಅವನು ಎಂದಿನಂತೆ ಮಧ್ಯಾಹ್ನದ ಹೊತ್ತು ದೇವಸ್ಥಾನಕ್ಕೆ ಪೂಜೆ ಮಾಡಿ ಬರಲು ಹೋಗಿದ್ದಾಗ ಅವನ ಮನಸ್ಸಿನ್ನೆಲ್ಲ ಪದ್ಮಾ ತುಂಬಿದ್ದಳು. ಅವಳ ಕರುಣ ಕಥೆಯನ್ನು ಕೇಳಿದ ಅವನ ಮನಸ್ಸು ವಿಹ್ವಲವಾಗಿತ್ತು. ಹೇಗೋ ದೈವಲೀಲೆಯಿಂದ ಅವಳು ಒಂದು ವಿಚಿತ್ರವಾದ ಸುಳಿಯಲ್ಲಿ ಸಿಕ್ಕಿಬಿದ್ದಿದ್ದಳು. ಅವಳ ಗಂಡ ಎಂಥವನಿರಬಹುದು? ಈ ಸುಬ್ಬ ಎಂಬ ಪ್ರಾಣಿ ಯಾವ ಜಾತಿಯದು? ಅವಳ ಮಾತಿನಿಂದ ಏನೋ ಅಲ್ಪ ಸ್ವಲ್ಪ ಅವರಿಬ್ಬರ ವಿಚಾರವಾಗಿ ತಿಳಿದಿತ್ತಲ್ಲದೆ ಅವರ ಚರಿತ್ರದ ಸಂಪೂರ್ಣ ಚಿತ್ರ ಮೂಡಿರಲಿಲ್ಲ. ಇಬ್ಬರೂ ದುಷ್ಟರಲ್ಲ ಎಂಬಷ್ಟು ತಿಳಿದಿತ್ತು. ಆದರೆ ಇಬ್ಬರೂ ದೌರ್ಬಲ್ಯದ ಸಂಕೋಲೆಯಿಂದ ಬದ್ಧರಾದವರು. ಇತ್ತ ಅವಳು ನಿಷ್ಕಲ್ಮಷಳಾದರೂ ಹೆಂಗಸು. ಸಮಾಜದ ನಂಜುನಾಲಗೆಯ ಉರಿತಾಗಿ ಬಾಡಿ ಬೆಂದವಳು.

" ಪದ್ಮಾ! ಅಬ್ಬಾ ಎಂಥ ಹೆಂಗಸು ; ಎಂಥ ರೂಪ " ಎಂದುಕೊಂಡು

ಹಾಗೇ ಹಲ್ಲು ಕಚ್ಚಿ ಮನಸ್ಸನ್ನು ಬಿಗಿಹಿಡಿದ. ಅವಳು ಆ ದಿನ– ಅದು ಆಗಲೇ ಬಹಳ ದಿನಗಳ ಹಿಂದೆ ಅಂತ ಶೀನಪ್ಪನಿಗೆ ಆಗಲೇ ಅನ್ನಿಸತೊಡಗಿತ್ತು –ಅನಾಥಳಾಗಿ ಅವನ ಬಾಗಿಲು ಮುಂದೆ ಬಿದ್ದಿದ್ದಾಗ ಅವಳೊಬ್ಬ ನಿರ್ಭಾಗ್ಯ ಮಾನವ ಜೀವಿ–ಅವಳನ್ನು ಬದುಕಿಸುವುದು ತನ್ನ ಕರ್ತವ್ಯ ಎಂದು ಮಾತ್ರ ಶೀನಪ್ಪನಿಗೆ ಅನ್ನಿಸಿತ್ತಲ್ಲದೆ ಮನಸ್ಸಿನೊಳಕ್ಕೆ ಇನ್ನಾವ ಭಾವವೂ ನುಗ್ಗಿರಲಿಲ್ಲ. ಕಾಗೆ ಕುಕ್ಕುತ್ತಿರುವ ಕಪ್ಪೆಯ ಚೀತ್ಕಾರವನ್ನು ಕೇಳಿದಾಗ, ಅಕ್ಕಪಕ್ಕದ ಮಾಂಸಾಹಾರಿಗಳ ಮನೆಯಲ್ಲಿ ಕೋಳಿಯನ್ನು ಕೊಯ್ಯುತ್ತಿರುವಾಗ ಅದು ಮಾಡುತ್ತಿದ್ದ ಆರ್ತನಾದವನ್ನು ಕೇಳಿದಾಗ ಶೀನಪ್ಪನ ಹೃದಯ ಕರಗಿ ನೀರಾಗುತ್ತಿತ್ತು. ಆ ಯಾತನೆಯನ್ನು ನೋಡಿ ಕೇಳಿ ಸಹಿಸುವುದು ಅಸಾಧ್ಯ ಅನ್ನಿಸುತ್ತಿತ್ತು. ಎಷ್ಟೋ ಸಲ ಕಾಗೆಯನ್ನು ಅಟ್ಟಿಸಿಕೊಂಡು ಹೋಗಿ ಕಪ್ಪೆಯನ್ನು ಬದುಕಿಸಿದ್ದ. ಮಳೆಗಾಲದಲ್ಲಿ ನಟ್ಟಿಯಾದ ಮೇಲೆ ಬರುವ ಕೆಲಸವಿಲ್ಲದ ಕಾಲದಲ್ಲಿ ಊರ ಬಡವರ ಕಷ್ಟ ಸಹಿಸಲಸಾಧ್ಯವಾದಾಗ ಯಾರಾದರೊಬ್ಬರು ಬಂದು ಶೀನಪ್ಪನನ್ನು ಕಂಡು 'ಒಡೇರೇ, ಎರಡು ದಿನದಿಂದ ಊಟವಿಲ್ಲ. ಮಕ್ಕಳಿಗೆ ಒಂದು ತುತ್ತು ಕೂಳಿಲ್ಲ.' ಎಂದಾಗ ಅವನ ಮನಸ್ಸಿಗೆ ಅತ್ಯಂತ ಯಾತನೆಯಾಗುತ್ತಿತ್ತು. ಅವರ ಕಷ್ಟವನ್ನು ಪರಿಹರಿಸದೆ ಬದುಕುವುದು ಅಸಾಧ್ಯ ಎನ್ನಿಸುತ್ತಿತ್ತು. ಮನೆಯೊಳಗಿಂದ ಅಷ್ಟು ಅಕ್ಕಿಯನ್ನು ತಂದು ಕೊಟ್ಟುಬಿಡುತ್ತಿದ್ದ. ಹಾಗೆ ಕೊಟ್ಟಾಗಲೇ ಅವನಿಗೆ ತೃಪ್ತಿ. ಅವರಲ್ಲಿ ಅನೇಕರು ಆಮೇಲೆ ಈತನ ಗದ್ದೆಯಲ್ಲೋ ಮನೆಯಲ್ಲೋ ಕೆಲಸ ಮಾಡಿ ಋಣ ತೀರಿಸುತ್ತಿದ್ದರು. ಕೆಲವರು ಕೊಟ್ಟದನ್ನು ಹಾಗೇ ತಿಂದು ಹೋಗುತ್ತಿದ್ದರು. ಹಾಗಂತ ತನ್ನ ಧರ್ಮಬುದ್ಧಿಗೆ ಲಗಾಮು ಹಾಕಬೇಕೆಂದು ಶೀನಪ್ಪನಿಗೆ ಎಂದೂ ಅನ್ನಿಸಿರಲಿಲ್ಲ.

ಹಳೆಪೈಕರ ಈರ ಊರಲ್ಲೆಲ್ಲ ಬಹಳ ಖದೀಮ ಆಸಾಮಿ. ಆರಡಿ ಎತ್ತರದ ದಷ್ಟಪುಷ್ಟ ದೇಹ; ತಾರುಣ್ಯ. ಚೆನ್ನಾಗಿ ಕೆಲಸ ಮಾಡುವವನಾದ್ದರಿಂದ ಸ್ವಲ್ಪ ಅನುಕೂಲದಲ್ಲಿಯೇ ಇದ್ದ. ಆದರೆ ಬಿಸಿರಕ್ತ, ಅಹಂಕಾರ ಜಾಸ್ತಿ ಒಂದೇಟಿಗೇ ಜಗತ್ತನ್ನೆಲ್ಲ ಧ್ವಂಸಮಾಡಿಬಿಡಬಲ್ಲೆನೆಂಬ ಆತ್ಮ ವಿಶ್ವಾಸ. ಊರಲ್ಲಿ ಅವನನ್ನು ತಡೆಯುವವರು ಯಾರೂ ಇಲ್ಲ ಅನ್ನುವ ಹಾಗೆ ಮೆರೆಯುತ್ತಿದ್ದ. ಹಾಗೆಂತ ಯಾರಿಗೂ ಅನ್ಯಾಯ ಮಾಡಲು ಹೋಗುತ್ತಿರಲಿಲ್ಲ. ಯಾರಿಗೂ ತಗ್ಗಿ ನಡೆಯುತ್ತಿರಲಿಲ್ಲ.

ಅವನಿಗೂ ಊರ ಸೋಮಿಗೂ ಸ್ನೇಹ ಬೆಳೆಯಿತು. ಸೋಮಿ ಹದಿನೆಂಟರ ಹರೆಯದ ಹೆಣ್ಣು. ಮಹಾ ಬಿನ್ನಾಣಗಿತ್ತಿ. ಊರೆಲ್ಲ ತನ್ನ ಮುಂದೆ ಕಸಕ್ಕೂ ಕೀಳು ಅನ್ನುವ ಹಾಗೆ ಶಿಸ್ತು ಮಾಡಿಕೊಂಡು ತಲೆಯೆತ್ತಿಕೊಂಡೇ ನಡೆಯುತ್ತಿದ್ದಳು. ಗಟ್ಟಕ್ಕೆ ಹೋಗಿ ಮರಳಿಬಂದ ಅವಳ ಗಂಡ ಮಂಜನಿಗೆ ಇದು ತಿಳಿದು ಕಂಗಾಲಾದ. ಹೆಂಡತಿಗೆ ಬೆದರಿಕೆ ಹಾಕಿ ನೋಡಿದ, ಫಲವಾಗಲಿಲ್ಲ. ಕೊನೆಗೆ ಹಾಗೂ ಹೀಗೂ ಧೈರ್ಯ ಮಾಡಿಕೊಂಡು ಈರನನ್ನೇ ಎದುರಿಸಿ, "ಅಣ್ಣಾ, ಇದು ಚೆಂದಾಗಿಲ್ಲ" ಎಂದ. ಮಂಜ ಅಂಥ ಧೀರನೇನು ಅಲ್ಲ ಬಹಳ ಸಿಟ್ಟು ಬಂದಿದ್ದರೂ ಮೆತ್ತಗೇ ಮಾತಾಡಿದ್ದ. ಆದರೆ ಈರನಿಗೆ ಅಷ್ಟೇ ಸಾಕಾಯಿತು. ಮಂಜನನ್ನು ಸಿಕ್ಕಾಪಟ್ಟೆ ಬಡಿದು ಅರ್ಧ ಜೀವ ಮಾಡಿ ಬಿಟ್ಟು ಹೊರಟು ಹೋದ.

ಊರಲ್ಲಿ ಎಲ್ಲರೂ ಇದು ಪರಮ ಅನ್ಯಾಯ ಎಂದು ಹೇಳುತ್ತಿದ್ದರೂ ಯಾರಿಗೂ ಈರನನ್ನು ಕೇಳುವ ಧೈರ್ಯವಿರಲಿಲ್ಲ. ಇದನ್ನು ಕೇಳಿ ಶೀನಪ್ಪನಿಗೆ ಬಹಳ ದುಃಖವಾಯಿತು: ಮಂಜುನಾಥ ಬಡಪಾಯಿಯನ್ನು ಸುಮ್ಮ ಸುಮ್ಮನೆ ಹಾಗೆ ಇವನು ಹೊಡೆದನಲ್ಲ—ಅಂತ.

ಹಾಗೇ ನೇರವಾಗಿ ಈರನ ಮನೆಗೆ ನಡೆದ. ಈರ ಶೀನಪ್ಪನನ್ನು ಕಂಡು "ಏನು ಸ್ವಾಮಿಯವರು ಇಷ್ಟು ದೂರ ?" ಎಂದ.

"ಇನ್ನೇನೂ ಇಲ್ಲ, ಈರ. ನೀನು ಮಂಜನನ್ನು ನಿರ್ಜೀವವಾಗುವ ಹಾಗೆ ಹೊಡೆದೆ ಅಂತ ಕೇಳಿದೆ. ಪ್ರಾಣವಿಲ್ಲದವನನ್ನು ಹೊಡೆಯುವುದು ಪೌರುಷವಾ, ಈರ ?" ಎಂದು ಕೇಳಿದ.

"ಅದೆಲ್ಲ ನಿಮಗೆ ಯಾಕೆ ? ನಾನುಂಟು, ಅವನುಂಟು, ಅಷ್ಟಕ್ಕೆ ಬಂದರೆ ಪೋಲೀಸಿನವರು ಇದ್ದಾರೆ. ಅವರಿಗೆ ಉತ್ತರ ಹೇಳುತ್ತೇನೆ."

"ನೀನು ಮಾಡಿದ್ದು ನ್ಯಾಯವಲ್ಲ, ಈರ. ಅದಕ್ಕೋಸ್ಕರ ಹೇಳಿದೆ. ಬಲವಿದೆ ಅಂತ ಅನ್ಯಾಯ ಮಾಡಬಹುದೆ ?"

"ಅನ್ಯಾಯವೇ! ಅವನನ್ನು ಕೊಂದರೂ ಪಾಪವಿಲ್ಲ ?"

"ಏಕೆ ? ಸೋಮಿಯನ್ನು ಮದುವೆಯಾದದ್ದೇ ಅವನ ತಪ್ಪು ಅಂತಲೋ ನಿನ್ನ ಅಭಿಪ್ರಾಯ ?"

"ಈ ವಿಷಯ ನನ್ನ ಹತ್ತಿರ ಮಾತಾಡಬೇಡಿ, ಹೋಗಿ" ಎಂದ. ಈರನ ಮಾತಿನಲ್ಲಿ ಕ್ರೋಧ ಉಕ್ಕುತ್ತಿತ್ತು. ಆದರೂ ಶೀನಪ್ಪ,

“ನಾನೇನೋ ಹೋಗುತ್ತೇನೆ, ಈರ. ಆದರೆ ನೀನು ಶಕ್ತಿಯುಳ್ಳವ, ಒಳ್ಳೆ ಕೆಲಸಗಾರ ಸಭ್ಯನಾಗಿರಬೇಕು. ನೀನು ಮಾಡಿದ್ದು ಘಟಿಂಗರ ಕೆಲಸ; ಇದು ಸರಿಯಲ್ಲ” ಎಂದ.

ಇದನ್ನು ಕೇಳಿ ಈರನಿಗೆ ಕೋಪ ನೆತ್ತಿಗೇರಿತು.

“ಏನು ಘಟಿಂಗ ಅಂತೀಯ, ಬಿರಾಮ. ಹೋಗೋ ಬಾಯ್ಮುಚ್ಚಿಕೊಂಡು” ಎಂದು ಕಿರಿಚಿದ.

“ನೋಡು ಈರ; ನನ್ನನ್ನು ನೀನು ಬಯ್ದೆ. ಎತ್ತಿ ಹೊಡೆಯಲೂ ಬಹುದು. ಬೇಕಾದರೆ ಹೊಡೆದುಬಿಡು. ಇದರಿಂದ ನೀನು ಒಳ್ಳೆಯವನು ಅಂತ ಆಗುವುದಿಲ್ಲ. ದೇವರು ಮೆಚ್ಚುವ ಹಾಗೆ ಇರಬೇಕಪ್ಪಾ. ನೀನು ಮಾಡಿದ್ದು ನ್ಯಾಯವೇ ಅಂತ ಒಂದು ಕ್ಷಣ ಯೋಚಿಸು. ಅನ್ಯಾಯ ಮಾಡಿ ಅದರ ಫಲ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ” ಎಂದು ಶೀನಪ್ಪ ಹೊರಟು ಹೋದ.

ಈ ಮಾತಿನ ಪರಿಣಾಮ ಈರನ ಮೇಲೆ ಆಯಿತೋ ಇಲ್ಲವೋ ಶೀನಪ್ಪನಿಗೆ ತಿಳಿಯದು. ಆದರೆ ಕಾಲ ಇದ್ದ ಹಾಗೆ ಇರಲಿಲ್ಲ. ಆದೇ ವರ್ಷ ಈರ ನಾಲ್ಕೈದು ಜನ ಆಳುಗಳನ್ನು ಕಟ್ಟಿಕೊಂಡು ಸೇರೆಗಾರನಾಗಿ ಘಟ್ಟ ಹತ್ತಿದ. ಅವನು ಯೋಚಿಸಿದ ಹಾಗೆ ಯಾವುವೂ ನಡೆಯಲಿಲ್ಲ. ಆಳುಗಳು ಕಾಹಿಲೆ ಬಿದ್ದರು; ತುಂಬಾ ನಷ್ಟವಾಯಿತು. ಊರಿಗೆ ಹಿಂತಿರುಗಿದ ಮೇಲೆ ಈರನೂ ಕಾಹಿಲೆ ಬಿದ್ದು ಅರ್ಧವಾದ. ಬೇಸಾಯ ಸಾಗಿಸಲೂ ದುಡ್ಡು ಇರಲಿಲ್ಲ. ಊರಲ್ಲಿ ಯಾರನ್ನು ಕೇಳಿದರೂ ಯಾವ ಸಹಾಯವೂ ಸಿಕ್ಕಲಿಲ್ಲ. ಆರಡಿ ದೇಹವನ್ನು ಮೂರಡಿ ಮಾಡಿಕೊಂಡು ಕೊನೆಗೂ ಶೀನಪ್ಪನಿಗೇ ಶರಣು ಹೋದ.

“ಶೀನಪ್ಪನವರೇ, ನಾನು ನಿಮಗೆ ಆಡಬಾರದ ಮಾತು ಆಡಿದೆ. ಹಾಗೆ ಆಡಿದ್ದು ಪಾಪ ಅಂತ ಆಮೇಲೆ ಪಶ್ಚಾತ್ತಾಪ ಪಟ್ಟೆ. ಕ್ಷಮಿಸಬೇಕು” ಎಂದ.

“ಈರಾ, ಇದರಲ್ಲಿ ಕ್ಷಮಿಸುವುದು ಏನೂ ಇಲ್ಲ. ನೀನು ಯೋಗ್ಯ. ಏನೋ ಮನಸ್ಸು ಕೆಟ್ಟು ಹಾಗೆ ಮಾಡಿದೆ; ಹಾಗೆ ಆಡಿದೆ. ಅದೆಲ್ಲ ಈಗ ಏಕೆ ಹೇಳುತ್ತೀ?” ಎಂದು ಶೀನಪ್ಪ ಅವನ ಜೀರ್ಣದೇಹವನ್ನು ಕಂಡು, “ಏನಾಯಿತು ನಿನಗೆ? ಎಷ್ಟು ಸೊರಗಿಹೋಗಿದ್ದೀಯೆ!” ಎಂದ.

ಈರ ತನ್ನ ದುಃಖವನೆಲ್ಲ ತೋಡಿಕೊಂಡ, “ನೀವೇ ಕಾಯಬೇಕು!”

ಎಂದ. ಶೀನಪ್ಪನ ಹತ್ತಿರ ದುಡ್ಡು ಇರಲಿಲ್ಲ. ಆದರೂ ಏನೇನೋ ಕಷ್ಟಪಟ್ಟು ಇಪತ್ತೈದು ರೂಪಾಯಿ ತಂದುಕೊಟ್ಟ. ಈರ ಬೆಳೆ ಕೈಗೆ ಬಂದ ಮೇಲೆ ಅದನ್ನು ಹಿಂತಿರುಗಿಸಿದ. ಅಂದಿನಿಂದ ಈರನ ಗುಣವೇ ಬದಲಾಯಿಸಿತು. ಮದುವೆ ಮಾಡಿಕೊಂಡು, ಸಭ್ಯನಾದ. ಯಾವ ತೊಂದರೆ ಬಂದರೂ ಅವನು ಶೀನಪ್ಪನನ್ನು ವಿಚಾರಿಸದೆ ಏನೂ ಮಾಡುತ್ತಿರಲಿಲ್ಲ.

ಈ ಧರ್ಮಬುದ್ಧಿಯ ಹಿಂದೆ ಇದ್ದದ್ದು ಕರುಣೆ. ತನ್ನ ತನವನ್ನು ಇನ್ನುಳಿದವರಲ್ಲೂ ಕ್ರಿಮಿ ಕೀಟ ಪಶುಪಕ್ಷಿಗಳಲ್ಲೂ ಕಾಣುವ ಆ ಶಕ್ತಿಯೇ ಜೀವಕಾರುಣ್ಯದ ಮೂಲಸತ್ವ. ಅದು ಇದ್ದ ಮನುಷ್ಯನ ಬಾಳು ಈ ಜಗತ್ತಿನಲ್ಲಿ ಮುಳ್ಳಿನ ಹಾಸಿಗೆಯಾಗುತ್ತದೆ. ಅಂಥ ಬುದ್ಧಿ ಶೀನಪ್ಪನಿಗೆ ಸಹಜವಾಗಿತ್ತು. ನಾರಣಪ್ಪನಲ್ಲಿ ಹೆಂಡತಿಯ ಭಯದಿಂದ ಸುಪ್ತವಾಗಿದ್ದದ್ದು ಶೀನಪ್ಪನಲ್ಲಿ ವ್ಯಕ್ತವಾಗಿತ್ತು. ಈ ಔದಾರ್ಯ ದಿವಾಳಿಯಾಗುವುದಕ್ಕೆ ರಹದಾರಿ ಎಂಬ ಮಾತು ನಿಜವಾದರೂ ಶೀನಪ್ಪನಿಗೆ ಇನ್ನೂ ಆ ಸ್ಥಿತಿ ಪ್ರಾಪ್ತವಾಗಿರಲಿಲ್ಲ. ಜಗನ್ನಿಯಾಮಕ ಶಕ್ತಿ ತನ್ನ ಇನ್ನಾವುದೋ ದುರಂತನಾಟಕದಲ್ಲಿ ಮಗ್ನವಾಗಿರಬೇಕು.

ಹೀಗೆ ಪದ್ಮಾವತಿಯನ್ನು ಅವನು ಬದುಕಿಸಲು ಯತ್ನಿಸಿದ್ದು ತನಗೆ ಸಹಜವಾದ ಜೀವ ಕಾರುಣ್ಯದಿಂದ. ಆದರೆ ಎರಡು ಮೂರು ದಿನಗಳಲ್ಲೇ ಅವನಿಗೆ ಅವಳಲ್ಲಿ ಅತ್ಯದ್ಭುತವಾದ ಆತ್ಮೀಯತೆ ಬೆಳೆಯಿತು. ಇದು ಏಕೆ ಹೀಗಾಗುತ್ತಿದೆ ಎಂದು ಅವನಿಗೇ ಆಶ್ಚರ್ಯ. ಪದ್ಮ ತನಗೆ ಚಿರಪರಿಚಿತಳಾಗಿರುವಂತೆ, ಎಲ್ಲೋ ಕಂಡಿರುವ ಹಾಗೆ ಅನ್ನಿಸಿತ್ತು. ಆ ಮುಖ—ಅದು ತನಗೆ ಅಪರಿಚಿತ ಎಂದು ನಂಬುವುದೇ ಕಷ್ಟವೆನ್ನಿಸತೊಡಗಿತ್ತು. 'ರಮ್ಯವಾದುದನ್ನು ಕಂಡು' ಮಧುರವಾದ ಶಬ್ದಗಳನ್ನು ಕೇಳಿ ಸುಖಿಯಾದ ಮನುಷ್ಯನ ಮನಸ್ಸು ಕೂಡಾ ಪರ್ಯುತ್ಸುರವಾಗುತ್ತದೆ. ಏಕೆ? ಅದಕ್ಕೆ ಕಾಳಿದಾಸನು ಹೇಳುವ 'ಬಾವಸ್ಥಿರಾಣಿ ಜನನಾಂತರ ಸೌಹೃದಾನಿ'— ಅವೇ ಕಾರಣವಿರಬಹುದೇ?

ಏನೋ ಅಂತೂ ರೇಶ್ಮೆಯ ಮೃದುವಾದ ದಾರಗಳಿಂದ ಹೃದಯವನ್ನು ಕಟ್ಟಿದಂತೆ ಆಗತೊಡಗಿತ್ತು. ಮನೆಗೆ ಹೋದ ಕೂಡಲೇ ಪದ್ಮಾ ಅಲ್ಲಿ ಇರುವುದು ಸಹಜ. ಅವಳು ಅಲ್ಲಿ ಮೊದಲಿಂದಲೂ ಇದ್ದಾಳೆ ಎನ್ನುವ ಭಾವನೆ, ಅದು ಭ್ರಾಂತಿಯೇ ಆದರೂ, ನಿಜ ಎನ್ನುವಷ್ಟು ಮನಸ್ಸಿನಲ್ಲಿ ಬೇರು ಬಿಡತೊಡಗಿತ್ತು. ಈ ಭಾವನೆ ಎಂಥದು, ಇದು ಎಲ್ಲಿಗೆ ಕೊಂಡೊಯ್ಯಬಹುದು?

ಎಂದು ಒಂದು ಸಲ ಮನಸ್ಸು ನಡುಗಿದರೂ ಮರುಕ್ಷಣವೇ ಸವರಿಸಿಕೊಂಡು 'ಇದು ಸಹಜವಾದದ್ದು, ಮನುಷ್ಯ ಧರ್ಮ' ಎಂದು ಸಮಾಧಾನ ತಂದು ಕೊಂಡ.

ತಾನು ಭಾವಿಯಿಂದ ನೀರು ಸೇದಿದವನು ದೇವರ ವಿಗ್ರಹದ ಮುಂದೆ ಸುಮ್ಮನೆ ಕೂತಿದ್ದೇನೆ ಎಂಬುದರ ಅರಿವು ಆಗಲೇ ಅವನಿಗೆ ಬಂದದ್ದು. ಆ ದೇವಾಲಯ, ಅದರ ಸುತ್ತುಮುತ್ತ, ಆ ಮುಖಮಂಟಪ, ಆ ಗರ್ಭಗುಡಿ ಇವೆಲ್ಲ ಶೀನಪ್ಪನಿಗೆ ತನ್ನ ಜೀವನದ ಅಂಗಗಳಾಗಿ ಕಾಣುತ್ತಿದ್ದುವು. ಆ ಮಹಾಬಲೇಶ್ವರಲಿಂಗದಲ್ಲಿ ಏನೋ ಒಂದು ಆತ್ಮೀಯತೆ. ಎಲ್ಲಾದರೂ ಊರಿಗೆ ಹೋದಾಗ ದಿನನಿತ್ಯದ ಪೂಜೆಯ ಸಮಯದಲ್ಲಿ ಮನಸ್ಸು ಈ ದೇವಸ್ಥಾನದ ಕಡೆಗೇ ಓಡಿಬರುತ್ತಿತ್ತು.

ಸುತ್ತುಮುತ್ತಲೂ ದಟ್ಟವಾದ ಮರಗಳ ಗುಂಪು. ಹತ್ತಿರದಲ್ಲಿ ಮನೆ ಗಳಿಲ್ಲ. ದೇವಸ್ಥಾನದ ಸುತ್ತಲೂ ಎತ್ತರವಾದ ಪ್ರಾಗಾರ. ಒಳಗೆ ನಾನಾ ವಿಧವಾದ ಮರಗಳು; ಮರಗಳಲ್ಲಿ ಬಗೆಬಗೆಯ ಪಕ್ಷಿಗಳು. ಪ್ರಾಕಾರದೊಳಗೆ ಕಾಲಿಟ್ಟ ಕೂಡಲೇ ಎತ್ತರವಾದ ಧ್ವಜಸ್ತಂಭ. ವಿಶಾಲವಾದ ಚಾವಡಿ ಒಳಗೆ ದೊಡ್ಡ ದೊಡ್ಡ ಗಂಟೆಗಳು. ಹೆಬ್ಬಾಗಿಲಲ್ಲಿ, ಮುಖ ಮಂಟಪದಲ್ಲಿ ಉದ್ದಕ್ಕೂ ಸಾಲು ಸಾಲು ಗಂಟೆಗಳು. ಅವುಗಳನ್ನೆಲ್ಲ ಬಾರಿಸುತ್ತ ಹೋದರೆ ವಾತಾವರ ಣವೆಲ್ಲ ಪ್ರತಿಧ್ವನಿ ಕೊಡುತ್ತವೆ. ಬಾವಲಿಗಳು ಕಿಚಕಿಚಗುಟ್ಟುತ್ತವೆ. ಅರ್ಧ ಕತ್ತಲು ಅರ್ಧ ಬೆಳಕು ತುಂಬಿದ ಗರ್ಭಗುಡಿಯಲ್ಲಿ ಪ್ರಶಾಂತವಾದ ಮೌನ. ಗರ್ಭಗುಡಿಯೊಳಕ್ಕೆ ಹೋಗಿ ದೀಪ ಹಚ್ಚಿ ಇಟ್ಟು ಕುಳಿತರೆ ಮನ ಸ್ಸಿಗೆ ವಿಚಿತ್ರವಾದ ಶಾಂತಿ ಹರಿದುಬರುತ್ತದೆ. ಒಂದು ಕ್ಷಣಕಾಲವಾದೂ ಜಗತ್ತು ಮರೆತು ಜಗತ್ತನ್ನು ಮೀರಿದ್ದರ ನೆಳಲು ಮನಸ್ಸಿನ ಮೇಲೆ ಬೀಳು ತ್ತದೆ.

ಈ ಅನುಭವ, ದಿನದಿನಕ್ಕೆ ಪುನರಾವೃತ್ತಿಗೊಳ್ಳುವ ದಿವ್ಯದ ಈ ಅನು ಭೂತಿ ಶೀನಪ್ಪನ ಮನಸ್ಸನ್ನು ಯಾವಾಗಲೂ ಒಂದು ಹದದಲ್ಲಿಡುತ್ತದೆ. ಜೊಳ್ಳು ಬಿದ್ದ ತಂತಿಯನ್ನು ಬಿಗಿದು ಶ್ರುತಿ ಮಾಡಿ ಇಟ್ಟ ಹಾಗೆ. ಈ ದೇವರ ಪೂಜೆ ಒಂದು ದೃಷ್ಟಿಯಿಂದ ಶೀನಪ್ಪನಿಗೆ ಐಚ್ಛಿಕವಾಗಿರಲಿಲ್ಲ; ಪರಂ ಪರಾಗತವಾಗಿ ಬಂದು ಮಾಡಲೇಬೇಕಾದ, ಸರಕಾರದಿಂದ 'ತಸದೀಕು' ದೊರೆಯುವ ವೃತ್ತಿಯೂ ಆಗಿತ್ತು. ಆದರೆ ಒಂದು ದಿನವಾದರೂ ಶೀನಪ್ಪನಿಗೆ

ಭಾವನೆ ಬಂದಿರಲಿಲ್ಲ. ಊಟನಿದ್ದೆಗಳಷ್ಟೇ ಅತ್ಯಗತ್ಯವಾದ ಜೀವದ ಒಂದು ವ್ಯಾಪಾರವಾಗಿತ್ತು ಅವನಿಗೆ ಊರ ದೇವರ ಪೂಜೆ.

ಶೀನಪ್ಪ ಊರಲ್ಲಿ ಇಲ್ಲದೆ ಇದ್ದ ಕಾಲದಲ್ಲಿ ನಾರಣಪ್ಪನೋ ರಾಮಕೃಷ್ಣ ಜೋಯಿಸನೋ ದೇವರ ಪೂಜೆಯನ್ನು ಮಾಡುತ್ತಿದ್ದರು. ಒಂದು ಕಾಲದಲ್ಲಿ ಪ್ರಾಯದ ಹುಮ್ಮಸ್ಸಿನ ಕಾಲದಲ್ಲಿ ಶೀನಪ್ಪ ತಾಳಮದ್ದಲೆಯೆಂದು, ಭಾಗವತ ರಾಟವೆಂದು ಊರೂರು ಅಲೆಯುತ್ತಿದ್ದ. ಆ ಕಾಲದಲ್ಲಿ ಒಂದು ಸಲ ರಾಮ ಕೃಷ್ಣ ಶೀನಪ್ಪನನ್ನು ಕುರಿತು "ಶೀನಾ, ನೀನು ಊರಲ್ಲಿ ಇರುವುದೇ ಕಡಿಮೆ. ಈ ದೇವರ ಪೂಜೆಯ ತಾಪತ್ರಯ ನಿನಗೇಕೆ? ನನಗೆ ವಹಿಸಿಬಿಡು" ಅಂದಿದ್ದ. ಆದರೆ ಶೀನಪ್ಪ, "ಚಿಕ್ಕಪ್ಪಾ, ನನಗೆ ಈ ದೇವರ ಪೂಜೆ ಒಂದು ತಾಪತ್ರಯ ಎನ್ನಿಸುವುದಿಲ್ಲ. ಅದರಿಂದ ಮನಸ್ಸು ಪವಿತ್ರವಾಗುತ್ತದೆ. ಹೇಗೂ ಮಾಡುತ್ತ ಬಂದಿದ್ದೇನೆ. ನಾನೇ ಮಾಡುತ್ತೇನೆ" ಎಂದಿದ್ದ. ರಾಮಕೃಷ್ಣ ಜೋಯಿಸ ಮಾತ್ರ 'ಇವನು ಬರುವ ತಸದೀಕಿನಾಶೆಗೆ ಹೀಗೆ ಹೇಳುತ್ತಿದ್ದಾನೆ' ಎಂದು ತೀರ್ಮಾನಿಸಿದ್ದ ಇದರಿಂದ ಶೀನಪ್ಪನ ಬಗ್ಗೆ ಅವನ ಅತೃಪ್ತಿ ಇನ್ನಷ್ಟು ಹೆಚ್ಚಿತು.

ಶೀನಪ್ಪ ದೇವರ ಪೂಜೆಯನ್ನು ಮುಗಿಸಿ ಹಣೆಗೆ ಅಡ್ಡಗಂಧ ಹಚ್ಚಿ ಕೊಂಡು, ತಲೆಗೆ ಹೂವಿನ ಚೂರನ್ನು ಸಿಕ್ಕಿಸಿಕೊಂಡು ತೆಂಗಿಕಾಯಿ ಹೋಳು ಗಳನ್ನೂ ಪಂಚಪಾತ್ರೆ ಉದ್ಧರಣೆಗಳನ್ನೂ ಹರಿವಾಣದಲ್ಲಿಟ್ಟುಕೊಂಡು ಗರ್ಭ ಗುಡಿಯಿಂದ ಹೊರಬರುತ್ತಿದ್ದಾಗ ಅವನ ಚಿಕ್ಕಪ್ಪ ರಾಮಕೃಷ್ಣಜೋಯಿಸ ಎದುರಿನಲ್ಲಿ ಕಾಣಿಸಿಕೊಂಡ. ಬಂದವನೇ ಗಂಟೆಯನ್ನು ಬಲವಾಗಿ ಬಾರಿಸಿ, ದೇವರಿಗೆ ಸಾಷ್ಟಾಂಗ ಪ್ರಣಾಮಮಾಡಿ ತೀರ್ಥ ಪ್ರಸಾದ ಸ್ವೀಕರಿಸಿ,

"ಶೀನಾ, ಏನು ಮತ್ತೆ ವಿಶೇಷ"? ಎಂದ.

"ವಿಶೇಷವೇನೂ ಕಾಣೆ, ಚಿಕ್ಕಪ್ಪಾ. ನಟ್ಟಿ ಎಷ್ಟಾಯಿತು?" ಎಂದು ಶೀನಪ್ಪ ಕೇಳಿದ.

"ಏನೋ ಎರಡು ಮುಡಿ ನಟ್ಟಿಯಾಯಿತು. ಇನ್ನೂ ಐದು ಮುಡಿ ಆಗಬೇಕು, ಆಳು ಸಿಕ್ಕುವುದಿಲ್ಲ. ಒಬ್ಬೊಂಟಿಗ. ದೇವರೇ ಪಾರು ಮಾಡಬೇಕು."

"ನಾನ್ನಿನ್ನೂ ನಟ್ಟಿ ಶುರುಮಾಡಿಸಿಯೇ ಇಲ್ಲ. ನಾಳೆಯಿಂದಲಾದರೂ ಆ ಕೆಲಸ ಮಾಡದಿದ್ದರೆ ಬಾಯಿಗೆ ಮಣ್ಣೇ."

"ನಿನಗೇನು ಬಿಡು. ಬೇಕಾದಷ್ಟು ಆಳು ಸಿಗುತ್ತದೆ. ಈರನಿಗೆ ಹೇಳಿ

ದರೆ ಒಂದು ದಿನದಲ್ಲೇ ಇರುವ ನಾಲ್ಕು ಮುಡಿ ಗದ್ದೆಯ ನಟ್ಟಿ ಆದೀತು. ಊರಿಗೆ ಊರೇ ನಿನ್ನ ಬೆಂಬಲಕ್ಕಿದೆ" ಎಂದ ಚಿಕ್ಕಪ್ಪನ ಮಾತು ಕೇಳಿ ಶೀನಪ್ಪನಿಗೆ ಕಹಿ ಮದ್ದು ಕುಡಿದ ಹಾಗೆ ಆಯಿತು.

ಮತ್ತೆ ಅದೇ ಕುಹಕದ ಮಾತು! ಇದು ಏಕೆ ಇವನಿಗೆ ನನ್ನ ಮೇಲೆ ಇಷ್ಟು ರೊಚ್ಚು ಎಂದು ಶೀನಪ್ಪನಿಗೆ ಹೊಳೆಯಲಿಲ್ಲ. ಆ ಮಾತು ಅಲ್ಲಿಗೇ ನಿಂತಿತು.

ಅನಂತರ ರಾಮಕೃಷ್ಣ ಜೋಯಿಸನೇ "ಏನೋ ಶೀನ, ಊರಲ್ಲೆಲ್ಲ ನಿನ್ನ ವಿಷಯವಾಗಿ ಏನೇನೋ ಆಡಿಕೊಳ್ಳುತ್ತಿದ್ದಾರೆ. ನನಗೆ ಯಾವುದೂ ಸರಿಯಾಗಿ ತಿಳಿದಿಲ್ಲ. ಯಾರೋ ಹೆಂಗಸನ್ನು ಮನೆಯಲ್ಲಿ ತಂದಿಟ್ಟುಕೊಂಡಿದ್ದೀ ಅಂತ ಕೇಳಿದೆ. ಇದೆಲ್ಲ ಏನಪ್ಪಾ?" ಎಂದ. ಅವನ ಕೊನೆಯ ನುಡಿಯಲ್ಲಿ ಮಾಡಬಾರದ್ದನ್ನು ಮಾಡಿದವರನ್ನು ಆಕ್ಷೇಪಿಸುವ ಧರ್ಮ ರಕ್ಷಕನ ಧ್ವನಿ ಇತ್ತು.

ಆ ಧ್ವನಿಯಿಂದ ಶೀನಪ್ಪನಿಗೆ ಕೊಂಚ ಬೇಸರವಾದರೂ ಅದನ್ನು ತೋರಿಸದೆ ಮೃದುವಾಗಿ ಆದರೆ ಗಂಭೀರವಾಗಿ ಉತ್ತರ ಕೊಟ್ಟ:

"ನೋಡು ಚಿಕ್ಕಪ್ಪಾ, ಒಬ್ಬ ಹೆಂಗಸು ನನ್ನ ಮನೆಯಲ್ಲಿ ಇರುವುದು ನಿಜ. ಆದರೆ ಅವಳನ್ನು ನಾನು ತಂದು ಇಟ್ಟುಕೊಂಡಿಲ್ಲ. ಅನಾಥಳಾಗಿ ಬಂದು ಮನೆಯ ಬಾಗಿಲ ಮುಂದೆ ಬಿದ್ದಿದ್ದಳು. ಒಳಗೆ ತಂದು ಉಪಚರಿಸಿದೆ. ಜ್ವರ ಬರುತ್ತಿತ್ತು. ಈಗ ಗುಣವಾಗಿದೆ."

"ಅಲ್ಲದೆ ಅವಳ ಹೊಟ್ಟೆ ಮುಂದಕ್ಕೆ ಬಂದಿದೆ ಎಂತಲೂ ಕೇಳಿದೆ."

ಗರ್ಭಿಣಿ ಅನ್ನುವುದನ್ನು ಬಿಟ್ಟು, ಲಘುವಾಗಿ ಹೊಟ್ಟೆ ಮುಂದಕ್ಕೆ ಬಂದಿದೆ ಎಂದು ಹಿರಿಯನಾದ ಅವನು ಹೇಳಿದ್ದನ್ನು ಕೇಳಿ ಶೀನಪ್ಪನಿಗೆ ಬಹಳ ದುಃಖವಾಯಿತು.

"ನೀನು ಹೇಳಿದ್ದು ಸರಿ, ಚಿಕ್ಕಪ್ಪಾ; ಅವಳು ಗರ್ಭಿಣಿ. ಆದ್ದರಿಂದ ಅವಳ ಬಗ್ಗೆ ಇನ್ನಷ್ಟು ಕನಿಕರ ಹುಟ್ಟಬೇಕು—ಅಲ್ಲವೇ?"

"ಅದೆಲ್ಲಾ ಸರಿ, ಶೀನಾ, ಆದರೆ ಊರಿನವರು ಈ ಕಥೆಯನ್ನೆಲ್ಲ ನಂಬುತ್ತಾರೆಂದು ತಿಳಿದೆಯಾ? ನಿನಗೊಂದು ಭ್ರಾಂತಿ."

"ಇದು ಕಥೆಯಲ್ಲವಲ್ಲ, ಚಿಕ್ಕಪ್ಪಾ; ಇರುವ ಸಂಗತಿ. ಅದನ್ನು ಜನ ನಂಬದಿದ್ದರೆ ನಾನೇನು ಮಾಡಲಿ?"

"ಏನೋ ಅಪ್ಪಾ; ಯಾರೋ ಹೆಂಗಸನ್ನು ತಂದು ಮನೆಯಲ್ಲಿಟ್ಟು

ಕೊಳ್ಳುವುದು ಅಂತೂ ಸರಿಯಲ್ಲ. ಬೇಕಾದರೆ ಮದುವೆ ಮಾಡಿಕೊಳ್ಳಬಾರದೆ?"

"ಮದುವೆಗೂ ಇದಕ್ಕೂ ಏನು ಸಂಬಂಧ? ಅನಾಥಳಾಗಿ ಸಾಯಬಿದ್ದವಳಿಗೆ ಆಶ್ರಯ ಕೊಟ್ಟರೆ ಅದು ತಪ್ಪು ಅಂತಾದರೆ ತಪ್ಪು ಮಾಡುವುದೇ ಸರಿ ಅನ್ನಬೇಕಾಗುತ್ತದೆ."

"ಸರಿ ಅಂದರೆ ಆಗಲಿಲ್ಲಪ್ಪ. ನಮ್ಮ ಬ್ರಾಹ್ಮಣ ಸಮಾಜ ಏನು ಹೇಳುತ್ತದೆ ಅದನ್ನು ಕೇಳದೆ ಇರುವುದಕ್ಕೆ ಯಾರಿಗೆ ಸಾಧ್ಯ? ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ನಡೆಯುವುದು ಶಕ್ಯವಲ್ಲ."

"ಅನಾಥ ರಕ್ಷಣೆ ಧರ್ಮಶಾಸ್ತ್ರಕ್ಕೆ ವಿರುದ್ಧವೇ? ಅದು ಯಾವ ಶಾಸ್ತ್ರದಲ್ಲಿದೆ?"

"ಅನಾಥ ರಕ್ಷಣೆ ಅಂತ ನೀನು ಹೇಳುತ್ತೀ. ಆದರೆ ಪರಸ್ತ್ರೀಯನ್ನು ಮನೆಯಲ್ಲಿಟ್ಟುಕೊಳ್ಳುವುದು ಶಾಸ್ತ್ರವಿರುದ್ಧ ಅಂತ ಸಮಾಜ ಹೇಳುತ್ತದೆ."

"ಇನ್ನೊಬ್ಬರ ಬಾಯಿಗೆ ನಾನು ಹೇಗೆ ಬೀಗ ಹಾಕಲಿ? ನನ್ನ ಮಟ್ಟಿಗೆ ಹೇಳುವುದಾದರೆ ನಾನು ಮಾಡಿದ್ದು ಅಧರ್ಮವಲ್ಲ, ದೇವರು ಮೆಚ್ಚುವ ಕೆಲಸ"

"ದೇವರು ಮೆಚ್ಚುವ ಕೆಲಸ ಇದು ಹೌದೋ ಅಲ್ಲವೋ. ಜನ ಮೆಚ್ಚುವ ಕೆಲಸವಂತೂ ಇದು ಖಂಡಿತ ಅಲ್ಲ. ನೀನು ಈಗಲೇ ಇದಕ್ಕೆ ಏನಾದರೂ ಮಾಡದಿದ್ದರೆ ಬಹಳ ಕಷ್ಟಪಡಬೇಕಾಗುತ್ತದೆ."

"ನಾನು ಏನು ಮಾಡಬೇಕು ಅಂತೀಯ–ಹಾಗಾದರೆ?"

"ಅವಳನ್ನು ಮನೆಯಿಂದ ತೊಲಗಿಸಿಬಿಟ್ಟು ಶುದ್ಧಿ ಮಾಡಿಕೊಳ್ಳುವುದು."

"ಇಲ್ಲವಾದರೆ?"

"ಸಮಾಜ ನಿನಗೆ ಬಹಿಷ್ಕಾರ ಹಾಕಬಹುದು."

"ಬಹಿಷ್ಕಾರ?"

"ಹೌದು, ಬಹಿಷ್ಕಾರ, ನೀನು ಜಾತಿಭ್ರಷ್ಟನಾಗಬೇಕಾಗುತ್ತದೆ."

"ಅಂಥ ಪಾಪಕೃತ್ಯ ನಾನು ಮಾಡಿಲ್ಲವಲ್ಲ."

"ಮಾಡಿಲ್ಲ ಎಂಬುದು ನೀನು ಹೇಳುವ ಮಾತು. ಸಮಾಜದ ಹಿರಿಯರು ನೀನು ಮಾಡಿದ್ದು ಅಧರ್ಮ ಅಂತ ಹೇಳಬಹುದು." ಎಂದು ರಾಮಕೃಷ್ಣ ಕೊಂಚ ಸುಮ್ಮನಾಗಿ

"ಈ ದೇವಸ್ಥಾನದ ಪೂಜೆ ನೀನು ಮಾಡಬಾರದು– ಜಾತಿಗೆಟ್ಟವ

ಸೀನು ಎಂದು ತೀರ್ಮಾನಿಸ ಬಹುದು ”

ಈ ಮಾತನ್ನು ಕೇಳಿ ಶೀನಪ್ಪ ದಿಗ್ಭ್ರಾಂತನಾದ. ಬಾಯಿಂದ ಮಾತು ಹೊರಡಲಿಲ್ಲ.

“ ಬಹಿಷ್ಕಾರ. ಜಾತಿಗೇಡು. ದೇವರ ಪೂಜೆ ಮಾಡಬಾರದು ” ಎಂದು ಶೀನಪ್ಪ ಆ ಮೂರು ಮಾತನ್ನು ತನ್ನಷ್ಟಕ್ಕೆ ಎಂಬಂತೆ ಪುನರುಚ್ಚಾರ ಮಾಡಿದ.

“ ಹೌದು, ಶೀನಾ, ಬಹಿಷ್ಕಾರ ಹಾಕುತ್ತಾರೆ. ಎಲ್ಲ ಯೋಚನೆ ಮಾಡು” ಎನ್ನುತ್ತ ರಾಮಕೃಷ್ಣಜೋಯಿಸ ಇನ್ನೊಂದು ಸಲ ಗಂಟೆ ಬಾರಿಸಿ ಹೊರಟು ಹೋದ.

ಶೀನಪ್ಪ ಮನೆಗೆ ಬಂದು ಊಟಮಾಡಿ ಹಾಗೇ ಸ್ವಲ್ಪ ಚಾಪೆಯ ಮೇಲೆ ಒರಗಿಕೊಂಡ ; ಕಣ್ಣು ಮುಚ್ಚಿಕೊಂಡ. ಹೊರಗೆ ಸಣ್ಣಗೆ ಮಳೆ ಸುರಿಯುತ್ತಿತ್ತು. ಮೋಡ ಕವಿದೇ ಇತ್ತು.

ಕಣ್ಣು ಮುಚ್ಚಿದರೂ ಶೀನಪ್ಪನ ಮನಸ್ಸು ಮುಚ್ಚಿಕೊಳ್ಳಲೇ ಇಲ್ಲ. ತನ್ನ ಚಿಕ್ಕಪ್ಪ ಹೇಳಿ ಹೋದ ಮಾತುಗಳೇ ಮನಸ್ಸಿನಲ್ಲಿ ನಾಟಿಹೋಗಿದ್ದುವು. ಬಹಿಷ್ಕಾರದ ವರೆಗೂ ಸಮಾಜದ ಕೋಪ ಹೋಗಬಲ್ಲದು ಎಂದು ಅವನು ಯೋಚಿಸಿರಲಿಲ್ಲ. ಬಹಿಷ್ಕಾರವೆಂದರೆ ಸಮಾಜ ಜೀವನಕ್ಕೆ ಸಂಪೂರ್ಣವಾಗಿ ಎರವಾದ ಹಾಗೆ. ಮದುವೆ, ಮುಂಜಿ, ಊಟ, ಉಪಚಾರ–ಯಾವುದರಲ್ಲೂ ಭಾಗಿಯಾಗುವ ಹಾಗಿಲ್ಲ. ಇವನ ಮನೆಯಲ್ಲಿ ಸಜಾತಿಯವರು ಊಟಮಾಡುವ ಹಾಗಿಲ್ಲ ; ಇನ್ನೊಬ್ಬರ ಮನೆಗೆ ಇವನು ಹೋಗುವ ಹಾಗಿಲ್ಲ. ಯೋಚಿಸಿದಂತೆಲ್ಲ ಶೀನಪ್ಪನ ಮನಸ್ಸಿನಲ್ಲಿ ಭಯ ಭೂತಾಕಾರವಾಗಿ ಬೆಳೆಯ ತೊಡಗಿತು.

ಇದಕ್ಕೇನು ದಾರಿ ಎಂದು ಎಷ್ಟು ಯೋಚಿಸಿದರೂ ಅವನಿಗೆ ಬಗೆಹರಿಯಲಿಲ್ಲ. ತನ್ನ ಚಿಕ್ಕಪ್ಪ ಸೂಚಿಸಿದ ದಾರಿಯಲ್ಲಿ ಅವನ ಮನಸ್ಸು ಕೂಡಾ ಹೋಗಲು ನಿರಾಕರಿಸಿತು. ಬಂದದ್ದು ಬರಲಿ, ಈ ಅನಾಥೆಯ ಕೈ ಬಿಡಬಾರದು ಎಂಬ ಭಾವನೆ ಮಾತ್ರ ಅವನ ಮನಸ್ಸಿನಲ್ಲಿ ದೃಢವಾಗುತ್ತಿತ್ತು.

ನಿರಪರಾಧಿಯಾದ ಪದ್ಮಳಿಗೆ ಸಹಿಸಲಾರದ ಶಿಕ್ಷೆ. ಆ ನಿರಪರಾಧಿಯ ಸಹಾಯಕ್ಕೆ ಹೋದ ಅಪರಾಧಕ್ಕಾಗಿ ತನಗೆ ಶಿಕ್ಷೆ. ಇದು ಯಾವ ನ್ಯಾಯ ? ಯಾವ ಧರ್ಮಶಾಸ್ತ್ರಕ್ಕೆ ಇದು ಸಮ್ಮತ ? ಜೀವಕಾರುಣ್ಯ, ಅನುಕಂಪ,

ಪರೋಪಕಾರ ಇವಕ್ಕೆ ಏನೂ ಬೆಲೆಯಿಲ್ಲವೆ? ಸಾಯುತ್ತಿರುವವಳು ಬಾಗಿಲು ತಟ್ಟಿದರೆ ಮಾತಾಡದೆ ಕೂತವನು ಸಜ್ಜನನೆ? ಅವನ ಕಾರ್ಯ ಧರ್ಮಶಾಸ್ತ್ರಕ್ಕೆ ಸಮ್ಮತವೆ?

ಪ್ರಶ್ನೆಗಳ ಮಾಲೆಮಾಲೆಯೇ ಶೀನಪ್ಪನ ಮುಂದೆ. ಆದರೆ ಒಂದಕ್ಕೂ ಉತ್ತರ ಸಿಕ್ಕಲಿಲ್ಲ.

ನಾರಣಪ್ಪನೂ ಹಾಗೆಯೇ ಹೇಳಿದ್ದ: "ನಿನ್ನ ಮಾತನ್ನು ನಾನು ನಂಬುತ್ತೇನೆ. ಉಳಿದವರು ನಂಬುವುದಿಲ್ಲ."

ಉಳಿದವರು ನಂಬುವಂತೆ ಮಾಡುವುದು ಹೇಗೆ? ಒಂದೇ ನಂಬುತ್ತಾರೆ; ಇಲ್ಲ, ನಂಬುವುದಿಲ್ಲ. ನಂಬುವಂತೆ ಮಾಡಲು ಸಾಧ್ಯವೆ?

ಈ ಹೆಂಗಸಿಗೂ ನನಗೂ ಏನೂ ಸಂಬಂಧವಿಲ್ಲ. ಅವಳ ಗರ್ಭಧಾರಣೆಗೆ ನಾನು ಕಾರಣನಲ್ಲ ಅಂತ ರುಜುವಾತುಪಡಿಸುವುದು ಹೇಗೆ? ಅದನ್ನು ರುಜು ವಾತುಪಡಿಸಿದರೂ ಅವಳನ್ನು ಮನೆಯಲ್ಲಿಟ್ಟುಕೊಂಡುದು ಕೇವಲ ಭೂತ ದಯೆಯಿಂದ. ಅದರಲ್ಲಿ ಕಾಮಸಂಬಂಧ ಏನೂ ಇಲ್ಲ ಎಂಬುದನ್ನು ಸಿದ್ಧಪಡಿ ಸುವುದು ಸಾಧ್ಯವೆ?

ಶೀನಪ್ಪನ ಮನಸ್ಸನ್ನು ಈ ಪ್ರಶ್ನೆಗಳು ಕೆದಕಿ ಕೆರಳಿಸುತ್ತಿರುವಾಗಲೇ ಒಬ್ಬ ಹುಡುಗ ಬಂದು "ವಿಶ್ವನಾಥ ಉಪಾಧ್ಯಾಯರು ನಿಮಗೆ ಬರಹೇಳಿ ದ್ದಾರೆ, ಸ್ವಲ್ಪ ಅವರ ಮನೆಗೆ ಬರಬೇಕಂತೆ" ಎಂದ.

ಹುಡುಗ ವಿಶ್ವನಾಥ ಉಪಾಧ್ಯಾಯರ ಮೊಮ್ಮಗ—ಕೃಷ್ಣ.

ವಿಶ್ವನಾಥ ಉಪಾಧ್ಯಾಯರು ಆ ಕಡೆಯಲ್ಲೆಲ್ಲ ಬಹಳ ಪ್ರಸಿದ್ಧರಾದ ವೈದಿಕರು ಧರ್ಮಶಾಸ್ತ್ರದಲ್ಲಿ ಪಾರಂಗತರು. ಧರ್ಮ ಸಂಬಂಧವಾದ ಯಾವ ಪ್ರಶ್ನೆಯಲ್ಲೇ ಆಗಲಿ, ಅವರ ಮಾತೇ ಕೊನೆಯದು.

ವಿಶ್ವನಾಥ ಉಪಾಧ್ಯಾಯರು ವೃದ್ಧರು. ಆಗಲೇ ಅರುವತ್ತೋ ಅರು ವತ್ತೈದೋ ವಯಸ್ಸು. ತಲೆಯಲ್ಲಿ ಬೆಳ್ಳಿಕೂದಲು. ಆದರೂ ಸದಾಚಾರ ದಿಂದ ಇನ್ನೂ ತಕ್ಕಷ್ಟು ದೇಹದಾರ್ಢ್ಯವುಳ್ಳವರು; ಸಜ್ಜನರು; ಧರ್ಮದ ನಿಜ ವಾದ ಮರ್ಮವನ್ನು ಬಲ್ಲವರು; ಸಂಸ್ಕೃತದಲ್ಲಿ ಪಾಂಡಿತ್ಯ; ಆಗಾಧವಾದ ಲೌಕಿಕಾನುಭವ; ಪರಿಪಕ್ವ ಮನಸ್ಸು. ಆದಕಾರಣ ಸಾಮಾನ್ಯವಾಗಿ ಎಲ್ಲರನ್ನು ಆಡಿಕೊಳ್ಳುವವರೂ ಕೂಡಾ ಉಪಾಧ್ಯಾಯರನ್ನು ಗೌರವದಿಂದ ನೋಡುತ್ತಿದ್ದರು.

ಅವರಿಂದ ಕರೆ ಏಕೆ ಬಂತು ಎಂದು ಶೀನಪ್ಪ ಒಂದು ಕ್ಷಣ ಯೋಚಿಸಿದ. ಅರ್ಥವಾಗಲಿಲ್ಲ. ಅನಂತರ ಥಟ್ಟನೆ ತನ್ನ ಚಿಕ್ಕಪ್ಪನ ಮಾತು ನೆನಪಿಗೆ ಬಂದು ಎದೆ ನಡುಗಿತು.

"ಮಗೂ, ನೀನು ಹೋಗು; ನಾನು ಬಂದುಬಿಟ್ಟೆ" ಎಂದು ಹೇಳಿ ಹುಡುಗನನ್ನು ಕಳಿಸಿಬಿಟ್ಟು ತಾನೂ ಹೊರಡಲು ಸಿದ್ಧನಾದ.

ಇದ್ದಕ್ಕಿದ್ದ ಹಾಗೆ ಆಕಾಶದಲ್ಲಿ ಮುಗಿಲು ಕವಿದ ಹಾಗೆ ಶೀನಪ್ಪನ ಮನಸ್ಸು ಮಂಕಾಯಿತು. ಮನುಷ್ಯ ಶಕ್ತಿಗಳೆಲ್ಲ ತನ್ನ ಮುಂದೆ ವ್ಯೂಹಕಟ್ಟಿ ನಿಂತು ತನ್ನನ್ನು ಯುದ್ಧಕ್ಕೆ ಆಹ್ವಾನಿಸುವಂತೆ ತೋರಿತು. ಈ ವ್ಯೂಹವನ್ನು ಹೊಕ್ಕು ಅವನು ಹೊರಬರಬಲ್ಲನೆ? ವ್ಯೂಹವನ್ನೇನೋ ಪ್ರವೇಶಿಸಬಹುದು. ಒಂದು ದೃಷ್ಟಿಯಿಂದ ವ್ಯೂಹಪ್ರವೇಶ ಆಗಲೇ ನಡೆದಿದೆ. ಆದರೆ ಹೊರಬರುವುದು—ಅಕ್ಷತನಾಗಿ ಅದರಿಂದ ತಪ್ಪಿ ಹೊರಬೀಳುವುದು ತನಗೆ ಸಾಧ್ಯವಲ್ಲ ಎಂದು ಮನಸ್ಸಿನ ಭೀತಿ ನುಡಿಯಿತು.

ಇದು ಯಾವ ವ್ಯೂಹ? ಚಕ್ರವ್ಯೂಹವಲ್ಲ, ಇದು ಪದ್ಮವ್ಯೂಹ. ಏಕಾಂಗಿ ಅಭಿಮನ್ಯು ಚಕ್ರವ್ಯೂಹವನ್ನು ಹೊಕ್ಕ; ಹೊಕ್ಕವನು ಮತ್ತೆ ಹಿಂದೆ ಬರಲಿಲ್ಲ.

ಉದ್ವಿಗ್ನನಾಗಿಯೇ ಶೀನಪ್ಪ ವಿಶ್ವನಾಥ ಉಪಾಧ್ಯಾಯರ ಮನೆಯ ಕಡೆಗೆ ನಡೆಯತೊಡಗಿದ. ಅವನ ಮನೆಗೂ ಅವರ ಮನೆಗೂ ಸುಮಾರು ಒಂದು ಮೈಲಿ. ಗದ್ದೆ-ಬಯಲಿನಲ್ಲಿ ತೆಂಗಿನ ತೋಟದ ನಡುವೆ ಉಪಾಧ್ಯಾಯರ ಮನೆ. ಬಹು ಪುರಾತನವಾದ ಮನೆ-ಕೋಟೆಯಷ್ಟು ಭದ್ರ. ಸುತ್ತಲೂ ಎತ್ತರವಾದ ಪಾಗಾರ, ಹೆಬ್ಬಾಗಿಲಿನೊಳಗಡೆ ವಿಶಾಲವಾದ ಚಾವಡಿ.

ಶೀನಪ್ಪನು ಒಳಹೊಕ್ಕಾಗ ಅಲ್ಲಿ ಏಳೆಂಟು ಜನ ಊರ ಪ್ರಮುಖರು ಕುಳಿತಿದ್ದರು. ಚಿಕ್ಕಪ್ಪ ರಾಮಕೃಷ್ಣ ಇದ್ದ; ಆದರೆ ನಾರಣಪ್ಪ ಅಲ್ಲೆಲ್ಲೂ ಕಾಣಿಸಲಿಲ್ಲ. ಇವನು ಹೋದಾಗ ಅಲ್ಲಿ ಯಾರೂ ಮಾತಾಡುತ್ತಿರಲಿಲ್ಲ. ಜಮಖಾನೆ ಹಾಸಿತ್ತು. ಗೋಡೆಗೊರಗಿ ಎಲ್ಲರೂ ಕುಳಿತಿದ್ದರು. ಗೋಡೆಗೆ ಒರಗಿಕೊಂಡು ವೃದ್ಧ ವಿಶ್ವನಾಥ ಉಪಾಧ್ಯಾಯರು ಮಂಡಿಸಿದ್ದರು. ಎತ್ತರವಾದ ಹಣೆ; ತಲೆ ತುಂಬ ಬಿಳಿಯ ಕೂದಲು. ತೀಕ್ಷ್ಣವಾದ ಕಣ್ಣು. ಮುಖದ ತೊಗಲು ಕೊಂಚ ಸುಕ್ಕುಗಟ್ಟಿತ್ತು.

ವಾತಾವರಣ ತನಗೆ ವಿರುದ್ಧವಾಗಿರುವ ಹಾಗೆ, ಅಹಿತವಾಗಿರುವ ಹಾಗೆ

ಶೀನಪ್ಪನಿಗೆ ತೋರಿತು. ಅವನು ಒಳಹೊಕ್ಕಾಗ ಎಲ್ಲರೂ ಮುಖ ತಗ್ಗಿಸಿ ಕುಳಿತಿದ್ದರು. ಉಪಾಧ್ಯಾಯರೊಬ್ಬರೇ ಗಂಭೀರವಾಗಿ ಮುಖವೆತ್ತಿ ಕುಳಿತಿದ್ದರು. ಶೀನಪ್ಪನನ್ನು ಕಂಡಕೂಡಲೇ ಅವರು

“ಬಾ, ಶೀನಾ; ಕುಳಿತುಕೋ” ಎಂದರು.

ಒಂದು ಕ್ಷಣ ಅಲ್ಲಿ ಗಂಭೀರವಾದ ಮೌನ ನೆಲಸಿತು. ಇದರಿಂದ ಶೀನಪ್ಪನ ಗಾಬರಿ ಇನ್ನಷ್ಟು ಹೆಚ್ಚಿತು. ಯಾರೂ ಮಾತಾಡುವ ಹಾಗೇ ತೋರಲಿಲ್ಲ. ಅಸಹಜವಾತಾವರಣ. ಅಲ್ಲಿ ಉಸಿರಾಡಿಸುವುದೂ ಕಷ್ಟ ಎನ್ನಿಸಿತು. ಉಸಿರು ಕಟ್ಟಿದಂತಾಯಿತು. ಈ ಮೌನವನ್ನು ತಡೆದುಕೊಳ್ಳುವುದು ಅವನಿಗೆ ಅಸಾಧ್ಯವಾಯಿತು. ಮಾತಾಡದಿದ್ದರೆ ತಾನು ಉಸಿರು ಕಟ್ಟಿ ಸಾಯುವುದೇ ಸರಿ ಎನ್ನಿಸಿತು. ಆದರೆ ಮಾತಾಡಬೇಕೆಂದರೆ ಮಾತು ಹೊರಡದು.

ಉಪಾಧ್ಯಾಯರು ಮೌನವಾಗಿ ಏನೋ ಯೋಚಿಸುತ್ತ ಕುಳಿತರು.

ಶೀನಪ್ಪ ಸುತ್ತುಮುತ್ತಲೂ ದೃಷ್ಟಿ ಹರಿಸಿದ. ಕಂಭಗಳ ಸುತ್ತ ಕಣ್ಣಾಡಿಸಿದ. ತೊಲೆ ರೀಪುಗಳನ್ನು ಎಣಿಸಿದ. ಅವನ ಕಣ್ಣು ಕುಳಿತವರೆಲ್ಲರನ್ನೂ ಸುತ್ತಿ ಬಂತು; ಸೀತಾರಾಮ ಭಟ್ಟರು; ಮಂಜುನಾಥ ಐತಾಳರು; ಗೋವಿಂದ ಸೋಮಯಾಜಿಗಳು; ಚಿದಂಬರ ಶಾಸ್ತ್ರಿಗಳು; ರಾಮಕೃಷ್ಣ ಜೋಯಿಸರು.

ಅಬ್ಬಾ, ಕೊನೆಗೂ ಮಾತಾಡುವುದು ಸಾಧ್ಯ ಎನ್ನಿಸಿತು ಶೀನಪ್ಪನಿಗೆ:

“ಏನೋ ಬರಹೇಳಿದಿರಂತೆ ಮಾವಯ್ಯ: ಏಕೋ ಗೊತ್ತಾಗಲಿಲ್ಲ” ಎಂದು ವೃದ್ಧ ಉಪಾಧ್ಯಾಯರನ್ನು ಕೇಳಿದ.

“ಹೌದು, ಬಹಳ ಗುರುತ್ವವುಳ್ಳ, ಒಂದು ವಿಚಾರವನ್ನು ಕುರಿತು ಮಾತಾಡುವುದಿತ್ತು” ಎಂದು ಉಪಾಧ್ಯಾಯರು ಸುತ್ತಲೂ ಕುಳಿತವರ ಕಡೆಗೆ ದೃಷ್ಟಿ ಬೀರಿ, “ಇವರೆಲ್ಲರೂ ಆ ವಿಷಯವಾಗಿ ಇಲ್ಲಿ ಸೇರಿದಿದ್ದಾರೆ” ಎಂದರು. ಅವರ ಮಾತು ನಿಧಾನವಾಗಿ, ಗಂಭೀರವಾಗಿ ತುಂಬು ಹೊಳೆಯಂತೆ ಹರಿಯಿತು.

ಈಗ ಚಿದಂಬರ ಶಾಸ್ತ್ರಿಗಳು ಮಾತಾಡಿದರು: “ಶೀನಪ್ಪಾ, ನೀವು ಧರ್ಮಕ್ಕೆ ವಿರುದ್ಧವಾದ ಕೇಡನ್ನು ಮಾಡಿದ್ದೀರಿ ಅಂತ ಆಪಾದನೆ ಬಂದಿದೆ.” ಎಂದರು.

“ನನಗೆ ತಿಳಿದಿರುವ ಹಾಗೆ ನಾನು ಧರ್ಮಕ್ಕೆ ವಿರುದ್ಧವಾದ ಯಾವ

ಕೆಲಸವನ್ನೂ ಮಾಡಿಲ್ಲ. ಹಾಗೇನಾದರೂ ಮಾಡಿದ್ದರೆ ಹೇಳಬೇಕು " ಎಂದ. ಶೀನಪ್ಪ, ಉಪಾಧ್ಯಾಯರ ಕಡೆಗೆ ನೋಡುತ್ತ.

" ಪರಸ್ತ್ರೀಯೊಬ್ಬಳನ್ನು ನೀವು ಮನೆಯಲ್ಲಿಟ್ಟುಕೊಂಡಿರುವುದು ನಿಜ ವಲ್ಲವೇ ? " ಎಂದು ಸೋಮಯಾಜಿಗಳು ಪ್ರಶ್ನಿಸಿದರು.

" ನಿಜ. ಪರಸ್ತ್ರೀಯೊಬ್ಬಳು ಅನಾಥಳಾಗಿ ನನ್ನ ಮನೆಯ ಮುಂದೆ ಮಳೆಯಲ್ಲಿ ನೆನೆದು ಸ್ಮೃತಿ ತಪ್ಪಿ ಬಿದ್ದಿದ್ದಳು. ಅವಳನ್ನು ಮನೆಯೊಳಕ್ಕೆ ತಂದು ಸ್ಮೃತಿ ಬರುವಂತೆ ಮಾಡಿದೆ. ಈಗ ಅವಳು ನನ್ನ ಮನೆಯಲ್ಲಿದ್ದಾಳೆ. ಇದು ಸತ್ಯ ಸಂಗತಿ " ಎಂದ ಶೀನಪ್ಪ.

" ಅವಳು ನಿಮ್ಮ ಮನೆಗೇ ಯಾಕೆ ಬಂದಳು ? " ಎಂದು ಸೋಮಯಾಜಿಗಳು ಕೇಳಿದರು.

" ನನ್ನ ಮನೆಗೆ ಅವಳು ಬರಲಿಲ್ಲ. ನನ್ನ ಮನೆಯ ಮುಂದೆ ಅವಳು ಸ್ಮೃತಿತಪ್ಪಿ ಬಿದ್ದಿದ್ದಳು. ಅವಳನ್ನು ಮನೆಯೊಳಕ್ಕೆ ಒಯ್ದವನು ನಾನು."

" ನಿಮಗೂ ಅವಳಿಗೂ ಏನೋ ಪೂರ್ವ ಸಂಬಂಧವಿದೆ ಎಂದು ಜನರು ಊಹಿಸಬಹುದಲ್ಲವೆ ? "

" ಊಹಿಸಬಹುದು. ಆದರೆ ಆ ಊಹೆ ಸರಿಯಲ್ಲ."

" ಸರಿಯಲ್ಲ ಎನ್ನುವುದಕ್ಕೆ ಆಧಾರವೇನಾದರೂ ಉಂಟೋ ? " ಶಾಸ್ತ್ರಿಗಳು ಕೇಳಿದರು.

ಶೀನಪ್ಪ ಒಂದು ಕ್ಷಣ ಸುಮ್ಮನಿದ್ದ. ಈ ಪ್ರಶ್ನೆಗೆ ಏನು ಉತ್ತರಕೊಡಬೇಕೋ ಹೊಳೆಯಲಿಲ್ಲ. ಆಧಾರ ? ಆಧಾರವುಂಟೇ ? ಅವಳ ಕಥೆಯನ್ನೆಲ್ಲ ಕೇಳಿದ್ದ. ಆದರೆ ಅವಳ ನಿರಪರಾಧಿತ್ವವನ್ನು ಅವಳ ತಮ್ಮನೂ ಕೂಡಾ ನಂಬಲಿಲ್ಲ. ಅವಳು ಹಾಲಾಡಿಯಿಂದ ಅಷ್ಟು ದೂರ ಹೇಗೆ ಬಂದಳು ಎಂಬುದನ್ನು ಸುಬ್ಬನೊಬ್ಬ ಬಲ್ಲ. ಅವಳು ನಿರಪರಾಧಿಯೆಂಬುದನ್ನು ಅವಳ ಗಂಡನೊಬ್ಬ ಬಲ್ಲ. ಶೀನಪ್ಪನ ಪಾಡೂ ಅಷ್ಟೇ ; ತಾನು ನಿರಪರಾಧಿ ಎಂಬುದನ್ನು ಅವನೊಬ್ಬ ಬಲ್ಲ ; ಪದ್ಮಾ ಬಲ್ಲಳು. ಈ ಎರಡೂ ಸಾಕ್ಷಿಗಳೂ ನಿಲ್ಲುವಂಥವಲ್ಲ.

" ಆಧಾರವಿದೆ. ಆದರೆ ಅದನ್ನು ರುಜುವಾತು ಪಡಿಸುವುದು ಕಷ್ಟ. ಒಟ್ಟಿನಲ್ಲಿ ಈಗ ಇದಕ್ಕೆಲ್ಲ ನನ್ನ ಮಾತೇ ಆಧಾರ. ನೀವು ಅದನ್ನು ನಂಬಿದರೆ ಅದು ಸತ್ಯ ; ಇಲ್ಲವಾದರೆ ಅಸತ್ಯ " ಎಂದ ಶೀನಪ್ಪ.

ಆಗ ವಿಶ್ವನಾಥ ಉಪಾಧ್ಯಾಯರು ಶೀನಪ್ಪನ ಕಡೆಗೆ ತಿರುಗಿ, ' ಶೀನಾ

ನೀನು ನಡೆದದ್ದನ್ನೆಲ್ಲ ಚಾಚೂ ತಪ್ಪದೆ ಹೇಳಿಬಿಡು. ಕೇಳೋಣ" ಎಂದರು.

ಶೀನಪ್ಪನು ಆ ರಾತ್ರಿಯಿಂದ ಅಲ್ಲಿ ತನಕ ನಡೆದದ್ದನ್ನೆಲ್ಲ ಸಂಕ್ಷೇಪವಾಗಿ ಆದರೂ ಯಾವ ವಿವರವನ್ನೂ ಬಿಡದೆ ಹೇಳಿದ. ಅವನು ಹೇಳುತ್ತಿದ್ದಾಗ. ಎಲ್ಲರೂ ಮನಃಪೂರ್ವಕವಾಗಿ ಕೇಳುತ್ತಿದ್ದರು.

ಶೀನಪ್ಪನ ಮಾತು ಮುಗಿದಾಗ ಉಪಾಧ್ಯಾಯರು ದೀರ್ಘವಾಗಿ ನಿಟ್ಟುಸಿರು ಬಿಟ್ಟರು.

"ಶೀನಪ್ಪ, ನಿಮ್ಮ ಮಾತನ್ನು ನಾವು ನಂಬುತ್ತೇವೆ— ಎನ್ನೋಣ. ಆದರೆ ಅವಳ ಮಾತನ್ನೆಲ್ಲ ನಂಬುವುದು ಸಾಧ್ಯವೇ?" ಎಂದು ಸೀತಾರಾಮ ಭಟ್ಟರು ಕೇಳಿದರು.

"ನಾನು ನಂಬಿದೆ. ಉಳಿದವರು ನಂಬುತ್ತಾರೋ ಇಲ್ಲವೋ ನಾನು ಹೇಗೆ ಹೇಳಲಿ ?" ಎಂದ ಶೀನಪ್ಪ.

"ಅದು ಹೇಗೇ ಇರಲಿ. ಪರಸ್ತ್ರೀಯನ್ನು ಮನೆಯಲ್ಲಿಟ್ಟುಕೊಳ್ಳುವುದು ಸರಿಯಲ್ಲ" ಎಂದು ಸೋಮಯಾಜಿಗಳು ಹೇಳಿದರು. ಅದೂ ನೀವು ಒಬ್ಬೊಂಟಿಗರು. ಮನೆಯಲ್ಲಿ ಇನ್ನು ಯಾರೂ ಇಲ್ಲ. ಇಂಥ ಸಂದರ್ಭದಲ್ಲಿ ಅಪವಾದ ಬರುವುದರಲ್ಲಿ ಆಶ್ಚರ್ಯವಿಲ್ಲ."

"ಹಾಗಾದರೆ ಅವಳನ್ನು ಮನೆಯಿಂದ ಹೊರಗಟ್ಟಬೇಕೆ ?" ಎಂದ ಶೀನಪ್ಪ ಕೊಂಚ ಬಿರುಸಾಗಿಯೇ ಕೇಳಿದ.

"ಹೌದು: ನೀವು ಅಪವಾದದಿಂದ ಮುಕ್ತರಾಗಬೇಕಾದರೆ ಅದೊಂದೇ ದಾರಿ."

"ಆ ದಾರಿ ಹಿಡಿದು ಜೀವಹತ್ಯದ ಪಾಪಕಟ್ಟಿಕೊಳ್ಳುವುದು ಧರ್ಮವೇ?" ಎಂದು ಶೀನಪ್ಪಕೇಳಿದ.

"ಅದು ಜೀವಹತ್ಯ ಹೇಗಾಗುತ್ತದೆ?" ಭಟ್ಟರು ಪ್ರಶ್ನೆ ಹಾಕಿದರು.

"ಅವಳು ಈಗ ತುಂಬುಗರ್ಭಿಣಿ. ಎಲ್ಲೂ ಹೋಗಲಾರಳು. ಮನೆಯಿಂದ ಹೊರಗಟ್ಟಿದರೆ ಬೀದಿ ಪಾಲಾಗಿ ಸಾಯುತ್ತಾಳೆ. ಅಂಥ ಕೆಲಸವನ್ನು ಮನುಷ್ಯರು ಮಾಡಬಹುದೆ ?"

ಒಂದು ಕ್ಷಣ ಈ ಮಾತಿಗೆ ಏನುತ್ತರ ಹೇಳಬೇಕೆಂದು ಯಾರಿಗೂ ಹೊಳೆಯಲಿಲ್ಲ. ಆಗ ಉಪಾಧ್ಯಾಯರು

"ಅದು ಸರಿ ಶೀನ; ಆ ಬಡಪಾಯಿಯನ್ನು ಬೀದಿಗಟ್ಟಬೇಕು ಅಂತಲ್ಲ.

ಅವರ ಮನೆಯವರಿಗೆ ಹೇಳಿ ಕಳಿಸಬೇಕು. ಅವರು ಕರೆದುಕೊಂಡು ಹೋಗಲಿ."

"ಅವಳ ಗಂಡ ಘಟ್ಟದ ಮೇಲೆ ಎಲ್ಲೋ ಇದ್ದಾರೆ. ತಮ್ಮನ ಮನೆಯಲ್ಲಿ ಇರಲಾರದೆ ಊರು ಬಿಟ್ಟು ಬಂದವಳು. ಕೊಲ್ಲೂರಿಗೆ ಹೋಗಿ ತನ್ನ ಗಂಡನನ್ನು ಸೇರಿಕೊಳ್ಳಬೇಕೆಂದು ಮಾಡಿದ್ದಳು. ದಾರಿ ತಪ್ಪಿ ಇಲ್ಲಿ ಬಂದು ಬಿದ್ದಿದ್ದಾಳೆ. ಈಗ ಅವಳನ್ನು ಎಲ್ಲಿಗೆ ಕಳುಹಿಸಬೇಕು ಮಾವಯ್ಯ ?" ಶೀನಪ್ಪನ ಧ್ವನಿಯಲ್ಲಿ ಅನಂತ ಕರುಣೆ ತುಂಬಿತ್ತು.

ಈಗ ಸೋಮಯಾಜಿಗಳು ಮತ್ತೆ ಮಾತಾಡಿದರು: "ನೀವು ಹೇಳಿದ್ದು, ಮತ್ತು ಅವಳು ಹೇಳಿದ್ದು ಸತ್ಯವೇ ಇರಬಹುದು. ಸಮಾಜ ಅದನ್ನು ಹೇಗೆ ನಂಬಬೇಕು ಶೀನಪ್ಪ ? ಮುಖ್ಯ ವಿಷಯ ಎರಡು; ಪರಸ್ತ್ರೀ ನಿಮ್ಮ ಮನೆಯಲ್ಲಿ ಇದ್ದಾಳೆ; ಅವಳ ಚರಿತ್ರೆ ಸರಿಯಿಲ್ಲ ಅಂತ ಅಪವಾದವೂ ಬಂದಿದೆ. ಅಂಥವಳನ್ನು ಮನೆಯಲ್ಲಿಟ್ಟುಕೊಳ್ಳುವುದು ಅಧರ್ಮ ಅಂತ ಸಮಾಜ ತಿಳಿಯುತ್ತದೆ. ಅವಳು ಗರ್ಭಿಣಿ. ಅನಾಥಳು; ಅವಳ ಪರಿಸ್ಥಿತಿ ಕರುಣಾಜನಕವೆಂಬ ಮಾತು ನಿಜ. ಆದರೆ ಸಮಾಜ ಅದನ್ನೆಲ್ಲ ಗಣನೆಗೆ ತಂದುಕೊಳ್ಳಲು ಸಾಧ್ಯವಿಲ್ಲ."

"ಎಂದರೆ ಒಂದೊ ಶೀನಪ್ಪ ಅವಳನ್ನು ಹೊರಗೆ ಹಾಕಿ ಶುದ್ಧ ಮಾಡಿಕೊಂಡು ಬ್ರಾಹ್ಮಣ ಸಮಾಜದೊಳಗೆ ಇರಬೇಕು–ಇಲ್ಲವೋ ಸಮಾಜ ಮಾಡುವ ಶಿಕ್ಷೆಗೆ ಗುರಿಯಾಗಬೇಕು. ಬೇರೆ ದಾರಿ ಇಲ್ಲ? ಎಂದು ಭಟ್ಟರು ಹೇಳಿದರು.

ಶೀನಪ್ಪ ವಿಹ್ವಲನಾದ. ಮಾತು ಕೊಡಲಿಯೇಟಿನಂತೆ ಬೀಳುತ್ತಿತ್ತು. ಅವನು ಈ ಮೊದಲು ಯೋಚಿಸಿದಂತೆಯೇ ಆಯಿತು. ಈ ವ್ಯೂಹದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎನ್ನಿಸಿತು.

"ಎಂದರೆ ನೀವು ಯಾರೂ ನನ್ನ ಮಾತನ್ನು ನಂಬುವುದಿಲ್ಲವೆ ?"

"ನಾವು ನಂಬುವುದು ಬಿಡುವುದು ಮುಖ್ಯವಲ್ಲ, ಶೀನಪ್ಪಾ. ಸಮಾಜ ಅದನ್ನು ನಂಬುವುದಿಲ್ಲ" ಎಂದರು ಶಾಸ್ತ್ರಿಗಳು.

"ಎಂದರೆ ಅನಾಥರಕ್ಷಣೆ ಧರ್ಮ ವಿರುದ್ಧವೋ ? ಇದು ಯಾವ ಶಾಸ್ತ್ರದಲ್ಲಿ ಹೇಳಿದೆ?" ಎಂದು ಶೀನಪ್ಪ ಗಡುಸುದನಿಯಲ್ಲಿ ಕೇಳಿದ.

"ಅನಾಥರಕ್ಷಣೆ ಧರ್ಮ ವಿರುದ್ಧವೆಂದು ಯಾರು ಹೇಳಿದರು, ಶೀನಪ್ಪಾ! ಈ ಅನಾಥೆ ಹೆಂಗಸು. ನೀವು ಮದುವೆಯಾಗದ ಗಂಡಸು. ಆದಕಾರಣ ಇದು ಕೇವಲ ಅನಾಥರಕ್ಷಣೆಯಷ್ಟೇ ಆಗುವುದಿಲ್ಲ."

" ಹಾಗಾದರೆ ನನಗೂ ಅವಳಿಗೂ ದೇಹಸಂಬಂಧವುಂಟು ಅಂತ ಅಲ್ಲವೇ ನೀವು ಹೇಳುವುದು? ಮಾವಯ್ಯ, ನೀವೂ ಹಾಗೇ ತಿಳಿಯುತ್ತೀರಾ?" ಎಂದು ಶೀನಪ್ಪ ಉಪಾಧ್ಯಾಯರನ್ನು ಕೇಳಿದ. ಅವನ ಕೊನೆಯ ಆಶೆ ಅವರ ಉತ್ತರದ ಮೇಲೆ ಅವಲಂಬಿಸಿದಂತೆ ಇತ್ತು. ವಿಶ್ವನಾಥ ಉಪಾಧ್ಯಾಯರು ಕರುಣೆ ತುಂಬಿದ ಧ್ವನಿಯಲ್ಲಿ ಮಾತಾಡಿದರು.

" ನೋಡು ಶೀನಪ್ಪಾ. ನಿನ್ನ ಪರಿಸ್ಥಿತಿ ಬಹಳ ಕಷ್ಟದ್ದು. ನೀನು ನಿರ್ದೋಷಿಯಾಗಿರಬಹುದು. ಆದರೆ ಅದನ್ನು ಜನ ಒಪ್ಪುವುದು ಕಷ್ಟ. ನಾನು ಒಪ್ಪಬಹುದು, ಉಳಿದವರನ್ನು ನಾನು ಒಪ್ಪಿಸಲಾರೆ. ಧರ್ಮಶಾಸ್ತ್ರ ಸ್ಥೂಲವಾಗಿ ಬಹುಜನಕ್ಕೆ ಅನ್ವಯಿಸುವಂಥದನ್ನು ಹೇಳುತ್ತದಲ್ಲದೆ, ಅಲ್ಲಲ್ಲಿ ಕಂಡು ಬರುವ ವಿಶಿಷ್ಟ ಪರಿಸ್ಥಿತಿಗಳನ್ನು ಗಮನಿಸುವುದಿಲ್ಲ. ಪರಸ್ತ್ರೀ ಮತ್ತು ಪರಪುರುಷ ಹತ್ತಿರ ಸೇರಿದಾಗ, ಒಂದೇ ಮನೆಯಲ್ಲಿರುವಾಗ ಅವರ ನಡುವೆ ದೇಹಸಂಬಂಧ ಇಲ್ಲ ಅಂತ ಜಗತ್ತು ನಂಬುವುದು ಕಷ್ಟವಪ್ಪಾ. ಇಂಥ ಸಂದರ್ಭಗಳಲ್ಲಿ ರೂಢಿ ಹೇಗೋ ಹಾಗೆ ನಡೆಯಬೇಕಾಗುತ್ತದೆ. ಬೇರೆ ದಾರಿ ಇಲ್ಲ; ಏನು ಮಾಡಲಿ ? " ಎಂದರು.

" ಎಂದರೆ, ನಾನೇನು ಮಾಡಬೇಕು ? " ಎಂದು ಶೀನಪ್ಪ ವಿಹ್ವಲನಾಗಿ ಕೇಳಿದ.

" ನೀನು ಮಾಡಿದ್ದು ಸರಿ ಅಂತ ನಿನ್ನ ಅಂತರಾತ್ಮ ಹೇಳುತ್ತಿದ್ದರೆ ನಿನ್ನ ವಿವೇಕ ಹೇಗೆ ಹೇಳುತ್ತದೋ ಹಾಗೆ ಮಾಡಿ ಬರುವುದನ್ನೆಲ್ಲ ಸಹಿಸಬೇಕು. ಇಲ್ಲವಾದರೆ ಸಮಾಜ ಹೇಳುವಂತೆ ನಡೆದುಕೊಳ್ಳಬೇಕು. ಇವೆರಡೇ ದಾರಿ. ಅಲ್ಲವೇ ಶೀನಾ ?" ಎಂದು ಉಪಾಧ್ಯಾಯರು ಹೇಳಿದರು.

ಶೀನಪ್ಪ ಸ್ವಲ್ಪ ಹೊತ್ತು ಯೋಚನೆ ಮಾಡುತ್ತ ಕುಳಿತ. ತಲೆ ಗಿರ್ರೆಂದು ತಿರುಗುತ್ತಿತ್ತು. ಆ ಅನಾಥೆಯನ್ನು ಹೊರಗಟ್ಟುವುದು ಸಾಧ್ಯವೇ ಇಲ್ಲ. ಎಂದರೆ ಸಮಾಜ ಕೊಡುವ ಶಿಕ್ಷೆಯನ್ನು ಅನುಭವಿಸಬೇಕು. 'ಸರಿ ಅದೇ ಸರಿ' ಎಂದುಕೊಂಡ ಶೀನಪ್ಪ.

" ಸರಿ. ಈ ವರೆಗೆ ನಾನು ಮಾಡಿದ್ದು ದೇವರು ಮೆಚ್ಚುವ ಕೆಲಸ. ಅದರಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಅವಳು ಆರೋಗ್ಯವಂತಳಾಗಿ ತನ್ನ ಗಂಡನಲ್ಲಿಗೆ ಹೋಗುವ ತನಕ ಅವಳು ನನ್ನ ಮನೆಯಲ್ಲಿಯೇ ಇರಬೇಕು.

ಬೇರೆ ದಾರಿಯೇ ಇಲ್ಲ. ಅವಳನ್ನು ಹೊರಗಟ್ಟಿ ಸಾವಿನ ಬಾಯಿಗೆ ಅವಳನ್ನು ನೂಕಲಾರೆ. ನೀವು ಹಿರಿಯರು, ತಿಳಿದವರು, ಧರ್ಮ ಬಲ್ಲವರು ಏನು ಬೇಕಾದರೆ ಮಾಡಬಹುದು " ಎಂದು ಹೇಳಿಬಿಟ್ಟ.

" ಹಾಗಾದರೆ ನೀವು ಅವಳನ್ನು ಕಳಿಸಿ ಬಿಟ್ಟು ಶುದ್ಧಿ ಸಂಸ್ಕಾರ ಮಾಡಿಕೊಳ್ಳುವ ತನಕ ನಿಮಗೆ ಸಮಾಜ ಬಹಿಷ್ಕಾರ ಹಾಕಬೇಕಾಗುತ್ತದೆ." ಎಂದರು ಶಾಸ್ತ್ರಿಗಳು.

" ಸರಿ, ಮಾವಯ್ಯ, ಬರುತ್ತೇನೆ." ಎಂದು ಶೀನಪ್ಪ ಉಪಾಧ್ಯಾಯರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಎದ್ದು ನಿಂತ.

ಆಗ ಶೀನಪ್ಪನ ಚಿಕ್ಕಪ್ಪ ರಾಮಕೃಷ್ಣ ಜೋಯಿಸ, " ಹಾಗಾದರೆ ಇನ್ನು ಶೀನ ದೇವಸ್ಥಾನದ ಪೂಜೆ ಮಾಡಲು ಸಾಧ್ಯವಿಲ್ಲ. ಅಲ್ಲವೇ? " ಎಂದು ಕೇಳಿದ.

" ಜಾತಿಯಿಂದ ಹೊರಗಾದವರು ದೇವರ ಪೂಜೆ ಮಾಡುವುದು ಹೇಗೆ ಸಾಧ್ಯ, ಜೋಯಿಸರೇ ? ಇನ್ನು ಮುಂದೆ ಊರ ದೇವರ ಪೂಜೆ ನೀವೋ ನಾರಣಪ್ಪನವರೋ ಮಾಡಬೇಕು." ಎಂದರು ಸೋಮಯಾಜಿಗಳು.

" ನಾನೇ ಮಾಡುತ್ತೇನೆ " ಎಂದು ರಾಮಕೃಷ್ಣ ಜೋಯಿಸ ಹೇಳುತ್ತಿರುವಾಗಲೇ ಶೀನಪ್ಪ ಅಲ್ಲಿಂದ ಎದ್ದು ಹೊರಟು ಹೋದ.

ಶೀನಪ್ಪನು ಹೊರಟು ಹೋದ ಕೂಡಲೇ ಸೋಮಯಾಜಿಗಳು " ಇದನ್ನು ಗುರು ಮಠಕ್ಕೆ ಬರೆದು ತಿಳಿಸಬೇಕು." ಎಂದರು.

" ಹುಡುಗ ತನ್ನ ತಲೆಯ ಮೇಲೆ ತಾನೆ ಕಲ್ಲು ಹಾಕಿಕೊಂಡ " ಎಂದ ರಾಮಕೃಷ್ಣ ಜೋಯಿಸ.

" ಶೀನಪ್ಪ ಇಂಥ ಕೆಲಸ ಮಾಡಬಹುದೆಂತ ನಾನು ಯೋಚಿಸಿರಲಿಲ್ಲ." ಎಂದರು ಭಟ್ಟರು. " ಇಂಥ ಕೆಲಸಕ್ಕೆ ತಕ್ಕ ಶಿಕ್ಷೆಯಾಗದಿದ್ದರೆ ಧರ್ಮ ಉಳಿಯಲಾರದು."

" ಧರ್ಮವನ್ನು ಉಳಿಸುತ್ತೇವೆಂತ ನಾವು ಧರ್ಮದ ಬುಡಕ್ಕೆ ಕೊಡಲಿಯೇಟು ಹಾಕುತ್ತಿದ್ದೇವೋ ಏನೋ. ಶೀನನಂಥ ಶೀಲವಂತರು ಬಹಳ ಕಡಿಮೆ ಭಟ್ಟರೇ. ನಾವು ಮಾಡಿದ್ದು ಅಧರ್ಮವೇ ಆಗಿದ್ದರೆ ನಮ್ಮನ್ನು ದೇವರೇ ಕಾಪಾಡಬೇಕು." ಎನ್ನುತ್ತ ಉಪಾಧ್ಯಾಯರು ಎದ್ದು ಹೊರಟುಹೋದರು. ಉಳಿದವರೆಲ್ಲ ಆಶ್ಚರ್ಯದಿಂದ ಅವರನ್ನೇ ನೋಡುತ್ತಿದ್ದರು.

ಈ ವರೆಗೆ ಏನೂ ಮಾತಾಡದೆ ಇದ್ದ ಮಂಜುನಾಥ ಐತಾಳರು ಈಗ

" ವಿಶ್ವನಾಥ ಉಪಾಧ್ಯಾಯರು ಹೇಳಿದ್ದು ಸರಿ. ಅನಾಥೆಯಾದ ಪರಸ್ತ್ರೀಯೊಬ್ಬಳನ್ನು ಮನೆಗೆ ಕರೆತಂದು ಆವಳನ್ನು ಬದುಕಿಸುವ ಧೈರ್ಯ ನಮ್ಮಲ್ಲಿ ಯಾರಿಗೂ ಬರುತ್ತಿರಲಿಲ್ಲ." ಎಂದರು.

"ಅದು ಧೈರ್ಯವಲ್ಲ, ಅಹಂಕಾರ " ಎಂದರು ಶಾಸ್ತ್ರಿಗಳು.

" ಶೀನಪ್ಪ ಅಹಂಕಾರಿ ಅಂತ ನನಗೆ ಯಾವಾಗಲೂ ಅನ್ನಿಸಿರಲಿಲ್ಲ." ಎಂದರು ಐತಾಳರು.

" ನಾವು ಸಮಾಜದ ಹಿರಿಯರು–ನೀವು ಹೇಳಿದ ಮಾತಿಗೆ ಕಾಸಿನ ಬೆಲೆ ಕೊಟ್ಟನೇ ? " ಎಂದು ಶಾಸ್ತ್ರಿಗಳು ಕೇಳಿದರು. ಅವರ ಮಾತಿನಲ್ಲಿ ಅಸಮಾಧಾನ ಹೊಗೆಯಾಡುತ್ತಿತ್ತು.

" ಶಾಸ್ತ್ರಿಗಳೇ, ಈ ಪ್ರಶ್ನೆ ಅಷ್ಟು ಸುಲಭವಲ್ಲ. ಶೀನಪ್ಪ ಧರ್ಮಸಂಕಟದಲ್ಲಿ ಸಿಕ್ಕಿ ಬಿದ್ದಿದ್ದಾನೆ. ಅದಕ್ಕೇ ಉಪಾಧ್ಯಾಯರು ಹಾಗೆ ಹೇಳಿದ್ದು. ಅವಳನ್ನು ಮನೆಯಲ್ಲಿ ಇಟ್ಟುಕೊಂಡರೆ ಸಮಾಜಧರ್ಮಕ್ಕೆ ಹಾನಿ; ಹೊರಗಟ್ಟಿದರೆ ಮನುಷ್ಯಧರ್ಮಕ್ಕೆ ಹಾನಿ. ಇಂಥ ಪ್ರಸಂಗಗಳಲ್ಲಿ ಏನು ಮಾಡಬೇಕೆಂದು ನಿರ್ಧರಿಸುವುದು ಸುಲಭವಲ್ಲ." ಎಂದು ಐತಾಳರು ನುಡಿದರು.

" ಯಾವಳೋ ಹಾದರಗಿತ್ತಿಯನ್ನು ಮನೆಯಲ್ಲಿಟ್ಟುಕೊಂಡು ಮನೆಯ ಹೆಂಡತಿಯಂತೆ ಮೆರಸಲು ಸಮಾಜ ಹೇಗೆ ಬಿಟ್ಟೀತು ?" ಎಂದು ಸೋಮಯಾಜಿಗಳು ಗರ್ಜಿಸಿದರು.

" ನಿಮ್ಮ ಮಾತು ನಿಜವಾದರೆ ಈಗ ಆಗಿದ್ದು ಸರಿ, ಇಲ್ಲವಾದರೆ...."

" ಇಲ್ಲವಾದರೆ ದೇವರು ನೋಡಿಕೊಳ್ಳುತ್ತಾನೆ."

" ನಾನು ಹೇಳುವುದೂ ಅದೇ" ಎಂದು ಐತಾಳರು ಹೊರಟು ಹೋದರು.

" ತೀರ್ಮಾನ ಆಗಿಹೋಗಿದೆಯಲ್ಲ– ಮತ್ತೇನು ಮಾತು ? " ಎಂದು ರಾಮಕೃಷ್ಣ ಜೋಯಿಸರು ಹೇಳಲು,

" ಆ ಮಾತು ಸರಿ. ಇನ್ನು ಹೋಗೋಣ " ಎಂದು ಎಲ್ಲರೂ ಹೊರಟರು.

ಶೀನಪ್ಪ ಅಲ್ಲಿಂದ ಹೊರಟಾಗ ತಲೆಗೆ ಬಲವಾದ ಏಟುಬಿದ್ದರೆ ಹೇಗೋ ಹಾಗೆ ಅವನ ಮನಸ್ಸು ಮಂಕಾಗಿತ್ತು. ತಾನು ಜಾತಿಗೆಟ್ಟವನಾದೆ ಎಂಬುದೊಂದು ಅರಿವು ಮಾತ್ರ ಮನಸ್ಸನ್ನು ತುಂಬಿತ್ತು. ತಾನು ಹುಟ್ಟಿ ಬೆಳೆದ ಸಮಾಜದಿಂದ ಹೊರಗೆ ಬಂದು ನಿಂತಿದ್ದಾನೆ. ಬಾಗಿಲು ಮುಚ್ಚಿದೆ. ಮತ್ತೆ

ಪ್ರವೇಶವಿಲ್ಲ. ಸಮಾಜ ಹೇಳಿದ ಮಾತು ಕೇಳುವ ವರೆಗೂ ಅವನು ಹಿಂಡು ತಪ್ಪಿ ಅಲೆಯಬೇಕು. ಮದುವೆ- ಮುಂಜಿ, ಊಟ ಉಪಚಾರ- ಯಾವುದಕ್ಕೂ ಅವನಿಗೆ ಆಮಂತ್ರಣ ಬರುವಂತಿಲ್ಲ. ಜಾತಿಯವರಾರೂ ಇವನ ಮನೆಗೆ ಊಟಕ್ಕೆ ಬರುವಂತಿಲ್ಲ. ಇನ್ನಾರ ಮನೆಯಲ್ಲಾದರೂ ಊಟ ಮಾಡಬೇಕಾದರೆ ಅಡ್ಡಪಂತಿ ; ತನ್ನ ಎಂಜಲೆಲೆ ತಾನೆ ಎತ್ತಿ ಸಾರಿಸಬೇಕು- ತಾನು ಭ್ರಷ್ಟ ಎಂಬುದನ್ನು ಲೋಕಕ್ಕೆ ತಾನೇ ಸಾರಬೇಕು.

"ಮಹಾಬಲೇಶ್ವರಾ, ನಿನ್ನ ಪೂಜೆಯನ್ನು ಇಷ್ಟು ದಿನ ಮಾಡಿದ್ದಕ್ಕೆ ಇಷ್ಟು ಫಲ ಕೊಟ್ಟೆಯಾ ?" ಎಂದ. ಗರ್ಭಗುಡಿಯೊಳಗೆ ಕುಳಿತು ಎಲ್ಲವನ್ನೂ ನೋಡುತ್ತಿರುವ ಅವನು ಇದನ್ನೂ ನೋಡುತ್ತಿದ್ದಾನೆ. ಇಂಥ ಧರ್ಮಸಂಕಟದಲ್ಲಿ ಎಲ್ಲರೂ ನಿರುಪಾಯರು. ವಿಶ್ವನಾಥ ಉಪಾಧ್ಯಾಯರಂಥ ಜ್ಞಾನಿಗಳೂ ದಿಗ್ಭ್ರಾಂತರು. ಆದರೆ ದೇವರು ? ಅವನೂ ನಿರುಪಾಯನೆ ? "ಸರ್ವಶಕ್ತನಾದ ನೀನೂ ನನ್ನ ಕೈ ಬಿಟ್ಟೆಯಾ?" ಎಂದು ಶೀನಪ್ಪ ಕಂಬನಿಗರೆದ.

ದಾರಿಯಲ್ಲೇ ದೇವಾಲಯವಿತ್ತು. ಒಳ ಹೊಕ್ಕು ಚಾವಡಿಯ ಮೇಲೆ ಕುಳಿತ.

ಹೊತ್ತು ಮುಳುಗುವ ಸಮಯ. ಸಣ್ಣಗೆ ಮಳೆ ಸುರಿಯುತ್ತಿತ್ತು. ಆಕಾಶಕ್ಕೆ ಹಾಕಿದ ಮೋಡದ ಪರದೆ ಇನ್ನೂ ಹಾಗೇ ಇತ್ತು. ಸುತ್ತಲೂ ಕತ್ತಲು. ಶೀನಪ್ಪನಿಗೆ ತನ್ನ ಮನಸ್ಸು ಕೂಡಾ ಕತ್ತಲಲ್ಲಿ ಕರಗುತ್ತಿರುವಂತೆ ತೋರಿತು. ಎಲ್ಲೂ ಬೆಳಕಿಲ್ಲ. ಆಕಾಶದಲ್ಲಿ ನಕ್ಷತ್ರಗಳ ಬೆಳಕಿಲ್ಲ. ದೇವಸ್ಥಾನದಲ್ಲೂ ಬೆಳಕಿಲ್ಲ.

ಅಲ್ಲಿ ಕತ್ತಲಲ್ಲಿ ಕುಳಿತ ಶೀನಪ್ಪನ ಮನಸ್ಸು ದಿಗ್ಭ್ರಾಂತವಾಗಿ ಗುರಿಯಿಲ್ಲದೆ ಗಾಳಿ ಪಟದಂತೆ ತುಯ್ಯುತ್ತಿತ್ತು. ಈಗ ಎಂಟು ದಿನಗಳ ಹಿಂದೆ ನಿನ್ನನ್ನು ಜಾತಿಯಿಂದ ಹೊರಗಟ್ಟುತ್ತಾರೆಂದು ಯಾರಾದರೂ ಹೇಳಿದ್ದರೆ ಅವನು ನಕ್ಕುಬಿಡುತ್ತಿದ್ದ.

ಆದರೆ ಈಗ ?

ಅವನು ಜಾತಿಭ್ರಷ್ಟ. ಇಡೀ ಸಮಾಜ ಅವನ ವಿರುದ್ಧವಾಗಿ ನಿಂತಿದೆ. ಸಹಾನುಭೂತಿಯುಳ್ಳವರು, ಅವನಲ್ಲಿ ಅನುಕಂಪವುಳ್ಳವರು, ಅವನ ಶೀಲದಲ್ಲಿ ನಂಬಿಕೆಯುಳ್ಳವರು- ಅವರೂ ಕೂಡಾ ಏನೂ ಮಾಡಲಾರರು. ಸಮಾಜ ಮಾಡಿದ್ದು ಅನ್ಯಾಯ. ಆದರೆ ನ್ಯಾಯ ಯಾವುದು ಎಂದು ತಿಳಿದಿದ್ದರೆ ಆಗ

ಕೂಡಾ ಅವರು ಹಾಗೆ ಮಾಡುತ್ತಿದ್ದರೆ? ಅವರಿಗೆ ಸತ್ಯ ಸಂಗತಿ ತಿಳಿಯದು ತಾನು ಆಡುವ ಮಾತು ಸತ್ಯ ಎಂದು ಅವರು ತಿಳಿಯದಿದ್ದ ಮೇಲೆ ಇನ್ನೇನು ಗತಿ?

ಇದು ಯಾರ ತಪ್ಪು? ತನ್ನದೋ? ಸಮಾಜದ್ದೋ? ವಿಧಿಯದೋ? ಇದುವಿಧಿಯ ಆಟವೇ ಹೌದು. ಅನಿರೀಕ್ಷಿತವಾಗಿ ಎಲ್ಲವೂ ನಡೆಯಿತು. ಪದ್ಮಾ ಹಾಗೆ ತನ್ನ ಮನೆಯ ಮುಂದೆ ಬಿದ್ದುದ್ದಕ್ಕೆ ಏನು ಕಾರಣ? ಅದೊಂದು ಆಕಸ್ಮಿಕ. ಅದೇ ಮೂಲ ಕಾರಣ. ಅಲ್ಲಿಂದ ಮುಂದೆ ನಡೆದದ್ದೆಲ್ಲವೂ ಸಕಾರಣ, ತರ್ಕಬದ್ಧ. ತಾನು ಜಾತಿಭ್ರಷ್ಟನಾದದ್ದೂ ಸರಿಯೆ. ಎಲ್ಲೂ ನಡೆಯದದ್ದು ಇಲ್ಲಿ ತನ್ನ ಮನೆಯಲ್ಲಿ ನಡೆದಿದೆ. ಸಾಮಾನ್ಯವಾಗಿ ನಡೆಯುವುದಕ್ಕೆ ಮಾತ್ರ ತಕ್ಕ ಉತ್ತರವನ್ನು ಧರ್ಮಶಾಸ್ತ್ರವೋ ರೂಢಿಯೋ ಹೇಳಬಲ್ಲುದು. ಅಸಾಧಾರಣವಾದುದು ನಡೆದಾಗ ಎಲ್ಲರೂ ಕಣ್ಣು ಕಣ್ಣು ಬಿಡಬೇಕಾಗುತ್ತದೆ. 'ಉಪಾಧ್ಯಾಯರು ಹೇಳಿದ ಮಾತು ಸರಿ' ಎಂದು ಶೀನಪ್ಪ ತನ್ನಷ್ಟಕ್ಕೆ ತಾನು ಹೇಳಿಕೊಂಡ.

ಆದರೂ ಇದು ಅನ್ಯಾಯ. ಸಮಾಜ ಯಾವಾಗಲೂ ಇಷ್ಟು ನಿಷ್ಠುರವಾಗುವುದಿಲ್ಲ. ಎಷ್ಟೋ ವಿಷಯಗಳಲ್ಲಿ ಅದು ಕಣ್ಣು ಮುಚ್ಚಿಕೊಂಡೇ ಇರುತ್ತದೆ. ಕಂಡರೂ ಕಾಣದ ಹಾಗೆ ತಿಳಿದರೂ ತಿಳಿಯದ ಹಾಗೆ ಧರ್ಮರಕ್ಷಕರು ತಮ್ಮಪಾಡಿಗೆ ತಾವು ಇದ್ದು ಬಿಡುತ್ತಾರೆ. ಆ ಕೃಷ್ಣಭಟ್ಟನ ಕಥೆಯನ್ನೇ ತೆಗೆದುಕೊಳ್ಳಿ. ಅವನು ಮಹಾವ್ಯಭಿಚಾರಿ. ಮನೆಯಲ್ಲಿ ಹೆಂಡತಿ ಇದ್ದರೂ ಹೊರಗೆ ಆ ಹಳೆಪೈಕರ ಪುಟ್ಟಿಯನ್ನು ರಾಜಾರೋಷವಾಗಿ ಇಟ್ಟುಕೊಂಡಿದ್ದಾನೆ. ಅವಳ ಮನೆಯಲ್ಲೇ ಬಹಳ ಕಾಲವನ್ನು ಕಳೆಯುತ್ತಾನೆ, ಎಲ್ಲರೂ ಕಾಣುವ ಹಾಗೆ. ಅಲ್ಲಿ ಊಟ ಕೂಡಾ ಮಾಡುತ್ತಾನೆ ಎಂದು ಪುಕಾರು ಇದೆ.

ಅವನ ಬೆನ್ನ ಹಿಂದೆ ಎಲ್ಲರೂ ಅವನನ್ನು ಆಡಿಕೊಳ್ಳುತ್ತಾರೆ, ಜರೆಯುತ್ತಾರೆ, ನಿಂದಿಸುತ್ತಾರೆ. ಆದರೆ ಅವನಿಗೆ ಯಾವ ಶಿಕ್ಷೆಯೂ ಇಲ್ಲ. ಅವನು ಶುದ್ಧ ಬ್ರಾಹ್ಮಣ. ತಂದೆ ತಾಯಿಗಳ ತಿಥಿಗೂ ಅವನು ಸದ್ಬ್ರಾಹ್ಮಣನೆಂದು ಕರೆಯಬಹುದು. ಆದರೆ ತಾನು? ಕೇವಲ ಪರೋಪಕಾರಿ ಬುದ್ಧಿಯನ್ನೂ ಜೀವ ಕಾರುಣ್ಯವನ್ನೂ ತೋರಿಸಿದ್ದಕ್ಕೆ ಈ ಶಿಕ್ಷೆ. ಇದು ನ್ಯಾಯ! ಇದು ಧರ್ಮ!

ಆದರೆ ತಾನು ಏನು ಮಾಡಬೇಕು? ಹಿಂಡು ತಪ್ಪಿದ ಹಸುವಿನಂತೆ

ಕಾಡಿನಲ್ಲಿ ಅಲೆಯಬೇಕು. ಬಂದದ್ದನ್ನು ಅನುಭವಿಸಬೇಕು. ಕೆಟ್ಟ ನಾಲಗೆ ಆಡುವ ವಿಷದ ಮಾತುಗಳನ್ನು ನುಂಗಬೇಕು. ನುಂಗಿ ಅರಗಿಸಿಕೊಳ್ಳಲು ಯತ್ನಿಸಬೇಕು.

ಆದರೆ ಇದು ಎಷ್ಟು ಕಷ್ಟ! ಜೀವನದ ಮೂವತ್ತೈದು ವರ್ಷಗಳ ಕಾಲ ಯಾರ ಸಂಸರ್ಗದಲ್ಲಿ, ಸಹವಾಸದಲ್ಲಿ ಕಳೆದಿದ್ದನೋ ಆ ಸಂಸರ್ಗವನ್ನು ತ್ಯಜಿಸಬೇಕು. ಇಷ್ಟು ದಿನ ನಡೆದ ದಾರಿಯನ್ನು ಬಿಟ್ಟು ಬಂಡೆಗಳ ಮೇಲೆ ತನ್ನದೇ ಆದ ಹೊಸ ಹಾದಿಯನ್ನು ಮೂಡಿಸಬೇಕು. ಇನ್ನು ತನ್ನ ಜೀವನ ಮರುಭೂಮಿಯಲ್ಲಿ ಕಾದ ಮರಳ ಮೇಲೆ ನಡೆದ ಹಾಗೆ; ಗೊಂಡಾರಣ್ಯದಲ್ಲಿ ಹಾದಿ ತಪ್ಪಿದವ ದಾರಿಯನ್ನು ಹುಡುಕಿ ನಿರಂತರವಾಗಿ ಅಲೆಯುವ ಹಾಗೆ; ಭದ್ರವಾದ ಕೋಟೆಯನ್ನು ಬಿಟ್ಟು ಹೊರಕ್ಕೆ ಬಂದವ ಪ್ರತಿ ಹೆಜ್ಜೆಗೂ ಶತ್ರುವಿನ ಧಾಳಿಯನ್ನು ನಿರೀಕ್ಷಿಸಿ ಅಂಜುತ್ತಂಜುತ್ತ ಹೊರಬಯಲಿನಲ್ಲಿ ಅಲೆಯುವ ಹಾಗೆ.

ಇದನ್ನು ಸಹಿಸಿಕೊಂಡು ಬದುಕುವುದು ಸಾಧ್ಯವಿಲ್ಲ. ಈ ಬಹಿಷ್ಕಾರದ ಅಗ್ನಿಪಥದಲ್ಲಿ ನಡೆದು ಅಕ್ಷತವಾಗಿ ಹೊರಬರುವಷ್ಟು ಶಕ್ತಿ ತನ್ನಲ್ಲಿಲ್ಲ. ತಾನು ಹುಲು ಮನುಷ್ಯ. ತಾನು ಈ ಅಗ್ನಿ ಕುಂಡದಲ್ಲಿ ಸುಟ್ಟು ಬೂದಿಯಾಗಬೇಕಲ್ಲದೆ ಅಗ್ನಿಯಲ್ಲಿ ತನ್ನ ಶೀಲ ಸುಟ್ಟು ಬಂಗಾರವಾಗುವುದು ಸಾಧ್ಯವಿಲ್ಲ. ಸೀತಾಮಾತೆ ಬೆಂಕಿಯಲ್ಲಿ ಹೊಕ್ಕು ಬಂದರೂ ಲೋಕ ಅವಳ ಶೀಲದಲ್ಲಿ ನಂಬಿಕೆ ಇಡದೆ ಹೋಯಿತು.... ಇನ್ನು ತನ್ನ ಗತಿ ?

ಸಮಾಜ ಹೇಳಿದ ಹಾಗೆ ಕೇಳುವುದೇ ಸರಿಯೋ ಅಂತ ಒಂದು ಕ್ಷಣ ಅವನಿಗೆ ಮನಸ್ಸು ಕದಲಿತು. ಯಾರನ್ನೇ ಆಗಲಿ ಬದುಕಿಸುತ್ತೇನೆ, ಉದ್ಧಾರ ಮಾಡುತ್ತೇನೆ ಎನ್ನಲು ಯಃಕಶ್ಚಿತ್ ಆದ ತಾನು ಯಾರು ? ಯಾರಿಗೆ ಯಾರು ಹೇಗೆ ಹೊಣೆ ? ಯಾರು ಯಾರನ್ನು ಬದುಕಿಸಬಲ್ಲರು ? ರಕ್ಷಣೆ ಮಾಡಬಲ್ಲರು ? ಸರ್ವ ಶಕ್ತನಾದ ದೇವರೊಬ್ಬನಲ್ಲದೆ ಇನ್ನು ಯಾರು ತಾನೇ ಇಲ್ಲಿ, ಈ ಪ್ರಪಂಚದಲ್ಲಿ ತಾನು ಇದನ್ನು ಮಾಡಿಯೇ ತೀರುತ್ತೇನೆ, ಅದನ್ನು ಸಾಧಿಸಿಯೇ ತೀರುತ್ತೇನೆ ಎಂದು ಅಹಂಕಾರದಿಂದ ಹೇಳಿ ಸಫಲನಾಗಬಲ್ಲ ? ಅವತಾರಿಗಳಾದ ರಾಮಕೃಷ್ಣರೂ ಪಡಬಾರದ ಪಾಡು ಪಟ್ಟಾಗ ತನ್ನಂಥ ಅಲ್ಪ ಮಾನವನ ಗತಿ ಏನು ? ತನಗೆ ಅಂಥ ಅಹಂಕಾರ ಏಕೆ ? ಸಮಾಜದ ಶಕ್ತಿ ದೊಡ್ಡದು, ಅದಕ್ಕೆ ತಲೆಭಾಗದೆ ವ್ಯಕ್ತಿ ಶಕ್ತಿ ಉಳಿಯುವುದಾದರೂ ಸಾಧ್ಯವೇ?

ಈ ಬಗೆಯ ಯೋಚನೆ ಹುಳುವಿನಂತೆ ಮನಸ್ಸನ್ನು ಹೊಕ್ಕು ಕೊರೆ

ಯಿತು. ಅವನ ಮನಸ್ಸಿನಲ್ಲಿ ಹುದುಗಿದ್ದ ದೌರ್ಬಲ್ಯಗಳೆಲ್ಲ ಎದ್ದು ಕೂಗಿದುವು; "ನಿನಗೆ ಈ ಛಲ ಬೇಡ; ತಗ್ಗಿ ಬಾಳಬೇಕು; ಗಿಬ್ಗ ಬಾಳಬೇಕು."

ಒಂದು ಕ್ಷಣ ಈ ಯೋಚನೆ ತನ್ನ ಮನಸ್ಸನ್ನು ಹೊಕ್ಕು ಪ್ರಭುತ್ವ ನಡಸಿದ್ದರಿಂದ ತನ್ನ ಮನಸ್ಸೆಲ್ಲ ಹೊಲಸಾದ ಹಾಗೆ ಶೀನಪ್ಪನಿಗೆ ಮರುಕ್ಷಣದಲ್ಲೇ ಅನ್ನಿಸಿತು. ಇದು ವಿತಂಡವಾದ. ಮನುಷ್ಯ ತನ್ನ ಸ್ವಾರ್ಥವನ್ನು ಮರಸುವುದಕ್ಕಾಗಿ ಮಾಡುವ ವಾಗ್ಜಾಲ. ಇದು ಕೂಡದು ಎನ್ನಿಸಿತು. "ಇಲ್ಲ, ಇಲ್ಲ; ಮತ್ತೆ ಎಂದೂ ಹೀಗೆ ಯೋಚಿಸಿ ದಾನವನಾಗುವುದಿಲ್ಲ" ಎಂದು ತನಗೆ ತಾನೇ ಹೇಳಿಕೊಂಡ. ಬಂದದ್ದು ಬರಲಿ; ಜೀವ ಕಾರುಣ್ಯದ ದಾರಿ ಬಿಟ್ಟು ತನ್ನೊಬ್ಬನ ಹಿತವನ್ನೇ ಸಾಧಿಸುತ್ತೇನೆಂಬ ಮೂರ್ಖವಾದ ಸಲ್ಲದು. ತಾನು ಹಿಡಿದ ದಾರಿ ಸರಿ; ಅದರಲ್ಲೇ ನಡೆದೇನು; ಎದ್ದರೂ ಸರಿಯೇ, ಬಿದ್ದರೂ ಸರಿಯೇ. ಸೋಲು ಗೆಲವು ದೈವೇಚ್ಛೆ. ಜೀವನದಲ್ಲಿ ಇಂಥ ಪ್ರಸಂಗಗಳು ಬರುವುದು ಕಡಿಮೆ. ಆದರೆ ಇಂಥ ಪ್ರಸಂಗಗಳಲ್ಲೇ ನಮ್ಮ ಮನುಷ್ಯತ್ವದ ತೂಕ ಆಗುವುದು. ಈ ಪರೀಕ್ಷೆಯಲ್ಲಿ ಉತ್ತೀರ್ಣನಾಗದೆ ಇರಬಹುದು. ಆದರೆ ಹೆದರಿ ಹಿಂದೇಟು ಹಾಕುವುದಿಲ್ಲ.

ಪದ್ಮಾ! ಪಾಪ, ಎಷ್ಟು ಕಷ್ಟಪಟ್ಟ ಹೆಂಗಸು. ಬೆಂಕಿಯಲ್ಲಿ ಬಿದ್ದ ಹೂವು; ಮತ್ತೆ ಅದನ್ನು ಬೆಂಕಿಗೆಸೆಯುವುದೇ? ತಾನು? ಇಲ್ಲ. ಆ ಯೋಚನೆ ಮತ್ತೆ ಮನಸ್ಸಿನಲ್ಲಿ ಬರಬಾರದು...ಎನ್ನುತ್ತ ಶೀನಪ್ಪ ಜಾವಡಿಯಿಂದ ಕೆಳಗಿಳಿದು ಗರ್ಭಗುಡಿಯ ಮುಂದೆ ನಿಂತು "ಮಹಾಬಲೇಶ್ವರಾ, ನೀನೇ ನನ್ನ ಬೆಂಬಲ; ನಿನ್ನ ಕೃಪೆಯೇ ನನ್ನ ಬೆಂಗಾವಲು, ನಾನು ಅನಾಥ; ನೀನೇ ನನ್ನ ತಾಯಿ ತಂದೆ" ಎಂದ. ಅವನ ಕಂಠ ಗದ್ಗದವಾಯಿತು. ಕಣ್ಣಿಂದ ಕಂಬನಿ ತೊಟ್ಟಿಕ್ಕುತ್ತಿತ್ತು.

ಈ ದೇವರ ಪೂಜೆಯ ಪುಣ್ಯ ತನಗೆ ಮತ್ತೆ ಇಲ್ಲ. ಆ ಪ್ರಶಾಂತವಾದ ಗರ್ಭಗುಡಿ; ಆ ಗಂಭೀರ ಮಹಾಬಲೇಶ್ವರ ಲಿಂಗ; ಆ ಶಾಂತಿ; ಆ ಧೂಪದ ವಾಸನೆ; ಈ ತುಳಸೀ ಕಟ್ಟೆ. ಆ ಗಂಟಾನಾದ. ಈ ಎಲ್ಲವಕ್ಕೂ ತಾನು ಹೊರತು ಎಂದು ಯೋಚಿಸಿದಾಗ ಶೀನಪ್ಪನಿಗೆ ಅಳು ತಡೆಯಲಾಗಲಿಲ್ಲ.

ನಿರ್ಜನವಾದ, ಕತ್ತಲು ತುಂಬಿದ ಆ ದೇವಸ್ಥಾನದ ಪ್ರಶಾಂತ ಮೌನದಲ್ಲಿ ಶೀನಪ್ಪ ಬಿಕ್ಕಿ ಬಿಕ್ಕಿ ಅತ್ತ.

ಹೊರಗೆ ಮಳೆಯೂ ಹಾಗೆ ಸತತವಾಗಿ ಸಣ್ಣಗೆ ಸುರಿಯುತ್ತಿತ್ತು.

ಗಾಳಿ ಸುಯ್ಯನೆ ಬೀಸುತ್ತಿತ್ತು. ಮಿಂಚೂ ಆಗಾಗ ಹೊಳೆದು ಕತ್ತಲನ್ನು ಕೆರೆದು ಕರಗುತ್ತಿತ್ತು.

ಶೀನಪ್ಪ ಮನೆಗೆ ಹಿಂತಿರುಗಿ ಬಂದಾಗ ಮನೆಯಲ್ಲಿ ದೀಪ ಹಚ್ಚಿತ್ತು. ಚಾವಡಿಯಲ್ಲಿ ಪದ್ಮಾ ಮತ್ತು ನಾಗಿ ಕುಳಿತು ಮಾತಾಡುತ್ತಿದ್ದರು. ಪದ್ಮಾ ಅಲ್ಲಿ ಕುಳಿತು ಹಾಗೆ ಸರಸವಾಗಿ ಮಾತಾಡುತ್ತಿದ್ದುದನ್ನು ಕಂಡು ಶೀನಪ್ಪನಿಗೆ ಆಶ್ಚರ್ಯವಾಗಲಿಲ್ಲ. ಇದು ಸಹಜ. ಇದು ಇರುವುದೇ ಹೀಗೆ. ಮೊದಲಿಂದ ಇದ್ದದ್ದೇ ಹೀಗೆ ಅನ್ನಿಸಿತು.

ಅಲ್ಲದೆ ಮನೆ ಹೀಗೆ ಇರಬೇಡವೇ ? ಬಂದು ತಾನೇ ದೀಪ ಹಚ್ಚಿಕೊಳ್ಳುವುದು ಏನು ಚಂದ ? ಬಂದಾಗ ದೀಪ ಹಚ್ಚಿದ್ದರೆ ಎಷ್ಟು ಹಿತ, ಎಷ್ಟು ಸಂತೋಷ ! ಹಠಾತ್ತಾಗಿ ಶಾರದೆಯ ನೆನಪು ಮಿಂಚಿನಂತೆ ಬಂದು ಹೃದಯದ ಕತ್ತಲನ್ನು ಇರಿಯಿತು. ಮನಸ್ಸು ಹಸಿಹಸಿಯಾಯಿತು. ಕಠಿನ ಕರ್ಕಶ ವಾಕ್ಯಗಳ ಮುಳ್ಳುಹಾಸಿಗೆಯಿಂದ ಅಪರಕ್ಷಣವೇ ಹೂವಿನ ಹಾಸಿನ ಮೇಲೆ ಬಂದು ಬಿದ್ದ ಹಾಗೆ.

"ಪದ್ಮಾ" ಎಂದ. ತನ್ನ ಮಾತಿನ ಮೃದುತೆಯನ್ನು ಕೇಳಿ ತನಗೇ ಆಶ್ಚರ್ಯವಾಯಿತು : "ಆರೋಗ್ಯ ಹೇಗಿದೆ, ಈಗ ? ಜ್ವರ ಇಲ್ಲವಷ್ಟೇ ?"

"ಇಲ್ಲ, ಸ್ವಲ್ಪವೂ ಇಲ್ಲ. ಹೋದ ಪ್ರಾಣವೆಲ್ಲ ಮರಳಿ ಮೈಗೂಡಿದ ಹಾಗೆ ಆಗಿದೆ." ಎಂದಳು. ಹಾಗೆಂದವಳು ಶೀನಪ್ಪನ ಮುಖದ ಕಡೆಗೆ ನೋಡುತ್ತ "ಏಕೆ ನಿಮ್ಮ ಮುಖ ಬಹಳ ಕಪ್ಪಿಟ್ಟಿದೆಯಲ್ಲ !" ಎಂದು ಕೇಳಿದಳು.

ಅಬ್ಬಾ ಎಂಥ ಸೂಕ್ಷ್ಮ ! ಮುಖದ ಮೇಲೆ ಆಗುವ ಅಲ್ಪಸ್ವಲ್ಪ ಬದಲಾವಣೆಯನ್ನೂ ಈ ಹೆಂಗಸರು ಎಷ್ಟು ಬೇಗ ತಿಳಿದುಕೊಳ್ಳುತ್ತಾರೆ– ಎನ್ನುತ್ತ ಶೀನಪ್ಪ, "ಏನೂ ಇಲ್ಲ, ಸ್ವಲ್ಪ ತಲೆನೋವು. ನಿನ್ನೆ ಮಳೆಯಲ್ಲಿ ಅಷ್ಟು ಹೊತ್ತು ನೆನದದ್ದಕ್ಕೆ ಅಂತ ತೋರುತ್ತದೆ. ಇನ್ನೇನೂ ಇಲ್ಲ." ಎಂದ.

ಶೀನಪ್ಪನ ಮಾತಿನಿಂದ ಪದ್ಮಾಗೆ ಹೆಚ್ಚು ಸಮಾಧಾನವಾದಂತೆ ತೋರಲಿಲ್ಲ. ಮತ್ತೊಮ್ಮೆ ಅವನ ಮುಖದ ಕಡೆಗೆ ದೃಷ್ಟಿ ಹರಿಸಿ ಮುಖ ತಗ್ಗಿಸಿದಳು ಆದರೆ ಮತ್ತೆ ಮಾತಾಡಲಿಲ್ಲ.

ಶೀನಪ್ಪ ನಾಗಿಯ ಕಡೆಗೆ ತಿರುಗಿ, "ಏನು ನಾಗಿ, ಸುಬ್ಬಿಯ ಗಂಡ ಘಟ್ಟದಿಂದ ಹಿಂತಿರುಗಿ ಬಂದನೇ ?" ಎಂದು ಕೇಳಿದ.

"ಇಲ್ಲ, ಒಡೇರೆ. ಮಳೆ ಶುರುವಾಗುವುದಕ್ಕೆ ಮುಂಚೇ ಬರಬೇಕಾ

ಗಿತ್ತು. ಇನ್ನೂ ಬರಲಿಲ್ಲಪ್ಪಾ. ಸುಬ್ಬಿಗೆ ಅದೇ ಯೋಚನೆ. ಏನಾಯಿತೋ–ಕಾಯಿಲೆಯೋ ಕಸಾಲೆಯೋ ಧರ್ಮಸ್ಥಳದ ಮಂಜುನಾಥ ದೇವರಿಗೇ ಗೊತ್ತು" ಎಂದಳು.

"ಅಯ್ಯೋ ಪಾಪ," ಎನ್ನುತ್ತ ಶೀನಪ್ಪ ಕೈಕಾಲು ಮುಖ ತೊಳೆದುಕೊಂಡು ದೇವರ ಕೋಣೆಗೆ ಹೋದ. ದೀಪ ಹಚ್ಚಿದ. ಸಂಧ್ಯಾವಂದನೆ ಮಾಡುತ್ತ ಕುಳಿತ. ಆದರೆ ಎಂದಿನಂತೆ ಮನಸ್ಸು ಮಂತ್ರದಲ್ಲಿ ಮಗ್ನವಾಗದೆ ಹೋಯಿತು. ಮತ್ತೆ ಮತ್ತೆ ಆ ಸಂಜೆ ನಡೆದ ಅವಮಾನದ ನೆನಪು ಮನಸ್ಸನ್ನು ಸುಗ್ಗಿ ಅಲ್ಲೋಲಕಲ್ಲೋಲ ಮಾಡುತ್ತಿತ್ತು.

ಸಂಧ್ಯಾವಂದನೆ ಮುಗಿದ ಮೇಲೆ ಹಾಗೇ ದೇವರ ಕೋಣೆಯಲ್ಲಿ ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಕುಳಿತಿದ್ದ. ಸುಂದರವಾದ ಕಂಚಿನ ಕೃಷ್ಣ ವಿಗ್ರಹ. ನೋಡುವುದಕ್ಕೆ ಬಲು ಸೊಗಸು. ನೋಡುತ್ತಿದ್ದರೆ ಆ ವಿಗ್ರಹ ನಗುತ್ತಿರುವಂತೆ, ತನ್ನ ಬಾಲಲೀಲೆಗಳನ್ನೆಲ್ಲ ಪ್ರದರ್ಶಿಸುತ್ತಿರುವಂತೆ ತೋರುತ್ತದೆ. ಕಣ್ಣು ಮುಚ್ಚಿದ್ದರೂ ಕೂಡಾ ಒಳಗಣ್ಣಿನೆದಿರು ಅದೇ ಆ ಕೃಷ್ಣ ವಿಗ್ರಹದ ಪ್ರಶಾಂತಸ್ಮಿತ ಬಂದು ನರ್ತಿಸುತ್ತದೆ. ಗಾಢಾಂಧಕಾರದ ಹೊಟ್ಟೆಯಲ್ಲಿ ಪೂರ್ಣಚಂದ್ರ ಹುಟ್ಟಿಬರುವಂತೆ ಮನಸ್ಸಿನ ಕಾವಳ ಕಳೆದು ನಸುಬೆಳಕು ಮೂಡಿ ಒಳಗಿನ ತೋಟದಲ್ಲಿ ಅನಂತ ಜೀವನದ ಇಂದ್ರಜಾಲ ಹರಡಿಕೊಳ್ಳುತ್ತದೆ.

ಕೃಷ್ಣ ವಿಗ್ರಹದ ತುಂಟ ನಗೆಯಲ್ಲೇ ಮನಸ್ಸು ನೆಟ್ಟು ಹಾಗೇ ಅವನು ಕೊಂಚ ಹೊತ್ತು ನಿಶ್ಚಲನಾಗಿ ಕುಳಿತಿದ್ದರಿಂದ ಮನಸ್ಸು ಕೊಂಚ ಹತೋಟಿಗೆ ಬಂತು—ಬಿರುಗಾಳಿಯ ಅರ್ಭಟೆ ಮುಗಿದ ಬಳಿಕ ಪ್ರಶಾಂತವಾಗುವ ಸರಸ್ಸಿನ ಜಲರಾಶಿಯಂತೆ.

ಶೀನಪ್ಪ ದೇವರ ಕೋಣೆಯಿಂದ ಹೊರಬಂದಾಗ ಪದ್ಮಾ ಮತ್ತು ನಾಗಿ ಏನೇನೋ ಮಾತಾಡುತ್ತ ಕುಳಿತಿದ್ದರು. ಮಳೆ ನಿಂತಿತ್ತು. ಅವನು ಹೆಬ್ಬಾಗಿಲಿಗೆ ಬಂದು ಅದನ್ನು ತೆರೆದು ಹೊರಗಡೆಯಿದ್ದ ಸಣ್ಣ ಜಗಲಿಯ ಮೇಲೆ ಕುಳಿತು ಆಕಾಶದ ಕಡೆಗೆ ದೃಷ್ಟಿ ತಿರುಗಿಸಿದ. ಅಬ್ಬಾ ಎಂಥ ಅದ್ಭುತ ದೃಶ್ಯ ಒಂದು ನಕ್ಷತ್ರ ಕೂಡಾ ಕಾಣಿಸದು ಕಾರ್ಮೋಡ ಸುರುಳಿ ಸುರುಳಿ ಬಿಚ್ಚಿಕೊಳ್ಳುತ್ತ ಪಶ್ಚಿಮದ ದಿಗಂತದ ಕಡೆಯಿಂದ ಆಕಾಶವನ್ನೆಲ್ಲ ವ್ಯಾಪಿಸುತ್ತಿತ್ತು. ಹಾಲಾಹಲದ ನೊರೆನೊರೆಯಾಗಿ ಅಲ್ಲಿ. ಕಾಳಿಂಗನ ವಿಷದ ಒರತೆಯಂತೆ

ಇಲ್ಲಿ. ಕಾಡಿಗೆಯ ಹೆಬ್ಬಂಡೆಯಂತೆ ಆ ಕಡೆ!

ಆಕಾಶ ದರ್ಶನದಲ್ಲಿ ಮಗ್ನನಾಗಿದ್ದ ಶೀನಪ್ಪನಿಗೆ ದೂರದಲ್ಲಿ ಒಂದು ಬೆಳಕು ತನ್ನ ಮನೆಯ ಕಡೆಗೆ ಬರುತ್ತಿರುವುದು ಕಂಡಿತು. ನಿಧಾನವಾಗಿ, ಗಂಭೀರವಾಗಿ, ತಾಳಬದ್ಧವಾಗಿ ಆ ಬೆಳಕು ಮುಂದೊತ್ತಿ ಬರುತ್ತಿತ್ತು. ಆಕಾಶದ ಮೋಡಗಳ ಉರವಣೆ ಅದಕ್ಕಿಲ್ಲ; ಅದು, ಆ ಬೆಳಕು ಪ್ರಶಾಂತ, ಧೀರ, ಏಕಮುಖಿ.

ಯಾರು ತನ್ನ ಮನೆಯ ಕಡೆಗೆ ಬರುತ್ತಿರಬಹುದೆಂದು ಅವನು ಯೋಚಿಸುತ್ತಿರುವಾಗಲೇ ಆ ಬೆಳಕು ಬಹಳ ಹತ್ತಿರ ಬಂತು. ಮನೆ ಪಕ್ಕದ ತೆಂಗಿನ ತೋಟದಾಚೆಯಲ್ಲಿ ಕೊಂಚ ಮರೆಯಾಯಿತು.

ಅಗೋ ಅಲ್ಲಿ; ಬೆಳಕು ಹತ್ತಿರ ಹತ್ತಿರ ಇನ್ನೂ ಹತ್ತಿರ ಬಂತು. ಬೆಳಕಿನ ಹಿಂದೆ ಎತ್ತರವಾದೊಂದು ದೇಹ ಮಸಕು ಮಸಕಾಗಿ ಕಾಣಿಸಿತು. ಯಾರು ಅದು? ವಿಶ್ವನಾಥ ಉಪಾಧ್ಯಾಯರು!

ಆಶ್ಚರ್ಯದಿಂದ ಒಂದು ಕ್ಷಣ ಶೀನಪ್ಪ ಮೂಕನೇ ಆದ. ಬಹು ಬೇಗ ಸಾವರಿಸಿಕೊಂಡು "ಬನ್ನಿ, ಬನ್ನಿ, ಮಾವಯ್ಯ" ಎಂದು ವಿನಯದಿಂದ ಅವರನ್ನು ಒಳಕ್ಕೆ ಕರೆದು.

ಅವರು, "ಶೀನಾ, ಒಳಕ್ಕೆ ಹೋಗುವುದು ಬೇಡ. ಇಲ್ಲೇ ಕುಳಿತುಕೊಳ್ಳುತ್ತೇನೆ" ಎಂದು ಜಗಲಿಯ ಅಂಚಿನಲ್ಲಿ ಕುಳಿತರು. ಶೀನಪ್ಪ ಸ್ವಲ್ಪ ದೂರದಲ್ಲಿ ತಲೆಬಾಗಿ ನಿಂತು,

"ಇಷ್ಟು ಹೊತ್ತಿನಲ್ಲಿ ನೀವು ಇಷ್ಟು ದೂರ ಬಂದರಲ್ಲ. ಹೇಳಿ ಕಳಿಸಿದ್ದರೆ ನಾನೇ ಬರುತ್ತಿರಲಿಲ್ಲವೇ?" ಎಂದ.

"ಶೀನಾ, ನೀನು ವಿನಯಶಾಲಿ. ನಾನು ಹೇಳಿ ಕಳಿಸಿದ್ದರೆ ನೀನು ಬರುತ್ತಿದ್ದೆ. ಆದರೆ ನಾನೇ ಬರಬೇಕಾಗಿತ್ತು ಬಂದೆ" ಎಂದು ಸುಮ್ಮನಾದರು. ಮತ್ತೆ ಸ್ವಲ್ಪ ಹೊತ್ತು ಬಿಟ್ಟು, "ಈ ಸಂಜೆ ಸಂಧ್ಯಾವಂದನಕ್ಕೆ ಕುಳಿತರೆ ಮನಸ್ಸು ಏಕಮುಖವಾಗದೆ ಹೋಯಿತು. ಈ ದಿನ ನಡೆದದ್ದು ಸರಿಯಲ್ಲ ಎಂದು ನನ್ನ ಮನಸ್ಸು ಮತ್ತೆ ಮತ್ತೆ ಹೇಳತೊಡಗಿತು. ತಡೆಯಲಾರದೆ ನಿನ್ನ ಕಡೆಗೆ ಬಂದೆ" ಎಂದರು.

ಹಾಗಾದರೆ ಈ ವ್ಯೂಹದಿಂದ ಪಾರಾಗುವುದು ಸಾಧ್ಯವೋ ಏನೋ ಎಂದು ಒಂದು ಕ್ಷಣ ಶೀನಪ್ಪನ ಮನಸ್ಸು ಕುಣಿಯಿತು.

ಸ್ವಲ್ಪ ತಡೆದು ಉಪಾಧ್ಯಾಯರು, "ನಿನ್ನ ಮಾತು ನಿಜ ಎಂದು ನನಗೆ ಸಂಪೂರ್ಣ ನಂಬಿಗೆಯಿದೆ ಶೀನಾ. ಅದಕ್ಕೇ ನನಗೆ ಇಷ್ಟು ದುಃಖವಾಗುತ್ತಿರುವುದು. ಸ್ವಲ್ಪ ಅಪರಾಧಕ್ಕೆ ಬಹಳ ದಂಡನೆಯಾದರೆ ಹೇಗಾದರೂ ಸಹಿಸಿಕೊಳ್ಳಬಹುದು. ಆದರೆ ಅಪರಾಧವೇ ಇಲ್ಲದೇ ಘೋರ ಶಿಕ್ಷೆಯಾದರೆ ಹೇಗೆ ಸಹಿಸುವುದು? ಇದರ ಕಾರಣ ನಮ್ಮ ಮನುಷ್ಯ ಬುದ್ಧಿಗೆ ಹೊಳೆಯುವುದಿಲ್ಲ. ದೇವರು ಹೀಗೆ ದಂಡಿಸಲು ನಮ್ಮಲ್ಲಿ ಕೆಲವರನ್ನು ಆರಿಸಿಕೊಳ್ಳುತ್ತಾನೆ. ಆ ಭಾಗ್ಯ ನಿನಗೆ ಬಂದಿದೆ. ಆದರೆ ಮಗೂ, ಆ ಭಾಗ್ಯವನ್ನು ಅನುಭವಿಸುವುದಕ್ಕೆ ಮೀರಿದ ಶಕ್ತಿಯೇ ಬೇಕು. ಈ ಶಕ್ತಿ ನಿನಗೆ ಬರಲಿ!" ಎಂದರು. ಮಾತು ಗಂಭೀರವಾಗಿ ಮಂದ್ರತನದಲ್ಲಿ ಬರುತ್ತಿದ್ದರೂ ಅವರು ಕೊರಳು ಬಿಗಿದಿರುವಂತೆ ಕಂಡಿತು.

ಉಪಾಧ್ಯಾಯರ ಮಾತಿನಲ್ಲಿದ್ದ ಆತ್ಮೀಯತೆಯನ್ನು ಕಂಡು ಶೀನಪ್ಪನ ಕೊರಳಸೆರೆ ಬಿಗಿಯಿತು. ಮಾತು ಹೊರಡಲಿಲ್ಲ.

"ಧರ್ಮಸಂಕಟದ ಪ್ರಸಂಗ ಮತ್ತೆ ಮತ್ತೆ ಯುಗಯುಗದಲ್ಲೂ ಬರುತ್ತಲೇ ಇರುತ್ತದೆ. ಎಷ್ಟೋ ಜನಕ್ಕೆ ಅಂಥ ಸಂಕಟ ಬರುವುದೇ ಇಲ್ಲ. ಅವರಲ್ಲಿ ಧರ್ಮಬುದ್ಧಿಯೇ ಇಲ್ಲದಿರುವುದು ಅದಕ್ಕೆ ಕಾರಣ. ಧರ್ಮರಕ್ಷಕರು ತಾವು ಎಂದುಕೊಳ್ಳುವವರೂ ಅಂಥವರೇ. ಈ ಜಗತ್ತಿನಲ್ಲಿ ಕಂಡು ಬರುವ ಅನೇಕ ವಿರೋಧಾಭಾಸಗಳಲ್ಲಿ ಇದೂ ಒಂದು. ಆದರೆ ಜಗತ್ತು ನಡೆಯುತ್ತ ಬಂದಿರುವುದು ಹೀಗೆ ಮಗೂ" ಎಂದರು.

"ಇದರಿಂದ ಬಿಡುಗಡೆ ಸಾಧ್ಯವೇ ಇಲ್ಲವೇ?" ಎಂದು ಶೀನಪ್ಪ ಕೇಳಿದ.

"ಇಲ್ಲ. ಹತ್ತು ಜನ ಒಂದು ಕಡೆ, ಒಬ್ಬ ಇನ್ನೊಂದು ಕಡೆ. ಈ ಯುದ್ಧದಲ್ಲಿ ಲೌಕಿಕವಾದ ವಿಜಯ ಯಾರಿಗೆ ದೊರೆಯುತ್ತದೆ, ಹೇಳು. ಹತ್ತು ಜನಕ್ಕೆ ಒಬ್ಬ ವ್ಯಕ್ತಿಯ ಗುಣ ಎಷ್ಟು ದೊಡ್ಡದಾದರೂ ಅದು ಸಮಾಜರೂಢಿಯೊಡನೆ ಸಮರಸಗೊಳ್ಳದಿದ್ದರೆ ಅದಕ್ಕೆ ಇಲ್ಲಿ ಬೆಲೆಯಿಲ್ಲ. ಇದೇ ನನ್ನ ದುಃಖಕ್ಕೆ ಕಾರಣ. ಈ ದುಃಖವೂ ಇಂದು ನಿನ್ನೆಯದಲ್ಲ ಶೀನಾ; ಇಂಥದನ್ನು ಬಹಳ ಕಂಡುಕಂಡೇ ಇಷ್ಟು ಮುದುಕನಾದೆ."

"ಹಾಗಾದರೆ ನನ್ನ ಈ ಹೋರಾಟಕ್ಕೆ ಏನೂ ಬೆಲೆಯೇ ಇಲ್ಲವೆ?"

"ಇದೆ. ಆದರೆ ಕೂಡಲೇ ತಿಳಿಯುವಂಥದಲ್ಲ. ಹತ್ತು ಜನದ ಕಲ್ಲು ಮನಸ್ಸು ಕರಗಿ ಅದು ಆರ್ದ್ರವಾಗುತ್ತ ಹೋಗುವುದು ನಿನ್ನಂಥವನ ಬಲಿದಾನ

ದಿಂದ. ಧರ್ಮದ ಬಹಿರಂಗಕ್ಕೇ ಮರುಳಾಗಿ ಅದೇ ಧರ್ಮವೆಂದು ತಿಳಿಯುವ ಜಡಮನಸ್ಸಿನವರ ಕಣ್ಣು ತೆರೆಯುವುದು ಧರ್ಮದ ಅಂತರಂಗವನ್ನು ಅರಿಯ ಬಲ್ಲ ನಿನ್ನಂಥವನಿಂದ ಶೀನಾ."

"ಹಾಗಾದರೆ ನನ್ನ ದಾರಿ ಸರಿ ಎನ್ನುತ್ತೀರಾ, ಮಾವಯ್ಯ ?"

"ಇಲ್ಲಿ ತನಕ ಸರಿ. ಮುಂದೆಯೂ ಸರಿಯಾಗಿರುವಂತೆ ದೇವರು ಅನುಗ್ರಹಿಸಲಿ. ಮಗೂ, ನಿನ್ನ ಕಷ್ಟ ನಾನು ಬಲ್ಲೆ. ಅನುಕಂಪವೊಂದಲ್ಲದೆ ಬೇರೆ ಏನೂ ನಾನು ನಿನಗೆ ಕೊಡಲಾರೆ" ಎಂದು ಉಪಾಧ್ಯಾಯರು ಎದ್ದು ನಿಂತರು.

"ನಿಮ್ಮ ಆಶೀರ್ವಾದವೂ ನನಗೆ ಬೇಕು." ಎಂದು ಶೀನಪ್ಪ ಅವರ ಕಾಲಿಗೆ ಎರಗಿದ.

ಉಪಾಧ್ಯಾಯರು ಆಶೀರ್ವಾದ ಮಾಡುತ್ತಿದ್ದಾಗ ಒಂದು ಕಂಬನಿ ಶೀನಪ್ಪನ ಹಣೆಯ ಮೇಲೆ ಬಿತ್ತು.

ಅನಂತರ ಅವರು ಲಾಟೀನು ಹಿಡಿದು ಬಂದ ದಾರಿಯಲ್ಲಿಯೇ ಹಿಂದೆ ಹೊರಟು ಹೋದರು.

ಅವರು ಹೋಗುತ್ತಿರುವುದನ್ನೇ ನೋಡುತ್ತ ಶೀನಪ್ಪ ಹೆಬ್ಬಾಗಿಲ ಹೊರಗೆ ನಿಂತಿದ್ದ; ಕಂದೀಲಿನ ಬೆಳಕು ಚಿಕ್ಕಚಿಕ್ಕದಾಗುತ್ತ ದೂರದಲ್ಲಿ ಅದೃಶ್ಯವಾಗುವ ವರೆಗೂ ನೋಡುತ್ತ ನಿಂತಿದ್ದ.

ಶೀನಪ್ಪನ ಮನಸ್ಸು ತುಂಬಿ ಬಂದಿತ್ತು. ಕಣ್ಣು ಹಸಿಗೂಡಿತ್ತು. ಉಪಾಧ್ಯಾಯರಂಥವರ ಸಹಾನುಭೂತಿ ಇರುವಾಗ ತಾನು ಏಕಾಂಗಿಯಲ್ಲ ಎಂದುಕೊಂಡ. ಮನಸ್ಸಿಗೆ ಹೊಸ ಧೈರ್ಯ ಬಂತು. ಇಡೀ ಜಗತ್ತನ್ನೇ ಬೇಕಾದರೂ ಇದಿರಿಸಬಹುದು ಎಂಬ ಹುಮ್ಮಸ್ಸು.

ಶೀನಪ್ಪ ಮನೆಯೊಳಕ್ಕೆ ಹೋದಾಗ ನಾಗಿ ಮತ್ತು ಪದ್ಮಾ ಮಾತಿಲ್ಲದೆ ಕುಳಿತಿದ್ದರು. ತಮ್ಮ ಮಾತು ಅವರಿಗೆ ಕೇಳಿಸಿರಬಹುದೇ, ಎಂದು ಶೀನಪ್ಪನಿಗೆ ಒಂದು ಕ್ಷಣ ಸಂದೇಹ ಬಂತು.

ಹಾಗೆಯೇ ದೇವರ ಮನೆಗೆ ಹೋದ. ದೀಪಕ್ಕೆ ಎಣ್ಣೆ ಹಾಕಿ ಪ್ರಜ್ವಲಿಸುವಂತೆ ಮಾಡಿ "ನೀನೇ ಕಾಪಾಡಬೇಕು, ತಂದೆ" ಎಂದು ದೀರ್ಘಪ್ರಣಾಮ ಮಾಡಿ ಅಡಿಗೆ ಮನೆಯ ಕಡೆಗೆ ನಡೆದ.

೯

ಸುಬ್ಬನಿಗೆ ಎಚ್ಚರವಾದಾಗ ತಾನು ಎಲ್ಲಿದ್ದೇನೆ ಎನ್ನುವುದೇ ಮೊದಲು ತಿಳಿಯಲಿಲ್ಲ. ಅಂಥ ಅಂಧಕಾರ, ಮಳೆ, ಗುಡುಗು. ಅವನು ಒಂದು ಬೆಂಚಿನ ಮೇಲೆ ಮಲಗಿದ್ದ—ಅಷ್ಟು ಮಾತ್ರ ಅವನಿಗೆ ತಿಳಿಯಿತು. ಚಳಿಗಾಳಿಗೆ ಮೈ ನಡುಗುತ್ತಿತ್ತು. ಎರಚಲು ಬಡಿದು ಮೈ ಅರ್ಧಕ್ಕರ್ಧ ನೆನೆದಿತ್ತು-ಮೈಯ ಒಂದು ಭಾಗ. ಸಂಪೂರ್ಣವಾಗಿ ನೆನೆದಿರಲಿಲ್ಲ. ತಲೆಯ ಮೇಲೆ ಮಳೆ ಬೀಳುತ್ತಿರಲಿಲ್ಲ. ಎಂದರೆ?

ಸುಬ್ಬ ಬೆಂಚಿನ ಮೇಲೆ ಎದ್ದು ಕುಳಿತು ಕಣ್ಣನ್ನು ಬಲವಾಗಿ ತಿಕ್ಕಿಕೊಂಡ. ನಿದ್ದೆಯ ಮಬ್ಬೋ, ಎಂಥ ಹಾಳಾದ ಮಬ್ಬೋ ತೊಲಗಿತು. ಎದ್ದು ಕುಳಿತು ಸೂಕ್ಷ್ಮವಾಗಿ ನೋಡತೊಡಗಿದ. ಏನೂ ಕಾಣಿಸಲಿಲ್ಲ. ತಾನು ಎಲ್ಲಿದ್ದೇನೆ, ಇಲ್ಲಿಗೆ ಹೇಗೆ ಬಂದೆ ಎಂದು ಕೂಡಲೇ ನೆನಪು ಬರಲಿಲ್ಲ. ಎರಡು ಸಲ ಬಲವಾಗಿ ತಲೆ ಕೆರೆದುಕೊಂಡ. ಇನ್ನೊಂದು ಸಲ ಕಣ್ಣು ಹೊಸಕಿಕೊಂಡ.

ಆಗ—

ಹಠಾತ್ತಾನೆ ನೆನಪು ನುಗ್ಗಿ ಬಂತು; "ಶಾಸ್ತ್ರಿಗಳ ಹೆಂಡತಿಯೊಬ್ಬರನ್ನೇ ಅಲ್ಲಿ ಬಿಟ್ಟು ಬಂದಿದ್ದೆನಲ್ಲ! ಎಷ್ಟು ಹೊತ್ತಾಯಿತೋ ಏನಾಯಿತೋ. ನೆನಪಿನೊಡನೆ ಒಂದು ಬಗೆಯ ಭಯವೂ ಮನಸ್ಸನ್ನು ಕವಿಯಿತು. 'ಪಾಪ, ಆ ಮುಸಾಫಿರ್‌ಖಾನೆಯಲ್ಲಿ ಈ ಗಾಢಾಂಧಕಾರದಲ್ಲಿ ಒಬ್ಬಳೇ ಹೆಂಗಸು ಎಷ್ಟು ಅಂಜಿಕೊಂಡರೋ' ಎಂದು ಪಶ್ಚಾತ್ತಾಪ ಪಟ್ಟ.

ಅವನು ಮಲಗಿದ್ದದ್ದು ಒಂದು ಜೋಪಡಿಯ ಹೊರಗೆ-ಕಾಲುಹಲಗೆಯ ಮೇಲೆ. ಆ ಜೋಪಡಿಯೇ ಆ ಊರಿನ ಹೆಂಡದಂಗಡಿ.

ಸುಬ್ಬ ಪದ್ಮಾವತಿಯನ್ನು ಅಲ್ಲಿ ಕುಳ್ಳಿರಿಸಿ ಎಲ್ಲಾದರೂ ಗಾಡಿಯ ವ್ಯವಸ್ಥೆ ಮಾಡಬಹುದೋ ನೋಡೋಣ ಅಂತಲೇ ಹೊರಟಿದ್ದ. ಅದರ ಜೊತೆಗೇ ಒಂದಷ್ಟು ಸಾರಾಯಿ ಹುಯ್ದುಕೊಳ್ಳಬೇಕೆಂಬ ಚಪಲವೂ ಸಹಜವಾಗಿ ಮೂಡಿತ್ತು. ಮುಸಾಫಿರ್‌ಖಾನೆಯನ್ನು ಬಿಟ್ಟು ನಾಲ್ಕು ಹೆಜ್ಜೆ ಹೋಗುವಷ್ಟರಲ್ಲೇ ಹೆಂಡದ ವಾಸನೆ ಮೂಗಿಗೆ ಹೊಡೆಯಿತು. ಮತ್ತೇನೂ

ಹೆಚ್ಚಿಗೆ ಯೋಚನೆ ಮಾಡದೇ ಆ ಕಡೆಗೆ ನುಗ್ಗಿದ. ಅಂಗಡಿಯ ಸುತ್ತಲೂ ಅಲ್ಲಲ್ಲಿ ಕೆಲವರು ಕುಳಿತು ಹೆಂಡವನ್ನು ಕುಡಿಯುತ್ತಿದ್ದರು. ಆದರೆ ಮಳೆ ಬರುವ ಲಕ್ಷಣ ಸ್ಪಷ್ಟವಾಗಿದ್ದದ್ದರಿಂದ ಎಲ್ಲರೂ ಹೊರಡಲು ಸಿದ್ಧರಾಗಿದ್ದರು. ಕುಡಿತ ಇನ್ನೂ ಮುಗಿಯದೇ ಇದ್ದವರು ಅಂಗಡಿಯೊಳಕ್ಕೆ ನುಗ್ಗುತ್ತಿದ್ದರು.

ಅಂಗಡಿ ಬಹಳ ಸಣ್ಣದು. ನಿಜವಾಗಿ ಹೇಳಬೇಕಾದರೆ ಅದೊಂದು ಹುಲ್ಲು ಜೋಪಡಿ. ಒಳಗೆ ಒಂದೇ ಒಂದು ಅಂಕಣದ ಜಾಗ ಅಲ್ಲಿ ಸಾಲು ಸಾಲಾಗಿ ಹೆಂಡದ ಗಡಿಗೆಗಳು.

ಸುಬ್ಬ ಹತ್ತಿರ ಹೋದ ಕೂಡಲೇ ಹೆಂಡದಂಗಡಿಯ ಮಾಲೀಕ ಜಟ್ಟಪ್ಪ 'ಬನ್ನಿ ಬನ್ನಿ' ಎಂದು ಅವನನ್ನು ಹತ್ತಿರ ಕರೆದು ಬೆಂಚಿನ ಮೇಲೆ ಕೂರಿಸಿದ. ಇನ್ನೂ ಯಾರೋ ಇಬ್ಬರು ಬಂದು ಅದೇ ಬೆಂಚಿನ ಮೇಲೆ ಕುಳಿತರು. ಸುಬ್ಬ ಕುಳಿತುಕೊಂಡ ಕೂಡಲೇ ಅಂಗಡಿಯೊಡೆಯನನ್ನು ಕುರಿತು, "ಇಲ್ಲಿ ಎಲ್ಲಾದರೂ ಒಳ್ಳೆಯ ಎತ್ತಿನ ಗಾಡಿ ಸಿಗುತ್ತದೋ ಹೇಗೆ? ಕೊಲ್ಲೂರಿಗೆ ಹೋಗಬೇಕಾಗಿತ್ತು" ಎಂದು ಕೇಳಿದ.

"ಗಾಡಿಗೇನು ಬರಗಾಲ? ಬೇಕಾದಷ್ಟು ಇದೆ. ಆದರೆ ಈ ಮಳೆಗಾಳಿಯಲ್ಲಿ ಗಾಡಿಯ ಮಾತೇಕೆ ಸ್ವಾಮಿ? ನಾಳೆ ಅದಕ್ಕೆ ಏರ್ಪಾಡು ಮಾಡಿದರಾಯಿತು. ಈಗ ನಿಮಗೆ ಏನು ಕೊಡಲಿ ಹೇಳಿ. ಅಪ್ಸಲ್ ಗೋವಾ ಸಾರಾಯಿ ಇದೆ. ಕೊಡಲೋ?" ಎಂದು ಕೇಳಿದ.

"ಸರಿ, ನೋಡುವ ನಿಮ್ಮ ಸಾರಾಯಿ" ಎಂದು ಸುಬ್ಬ ಕುಡಿತಕ್ಕೆ ಸಿದ್ಧನಾಗಿ ಕುಳಿತ.

ಸಾರಾಯಿ ಬಂತು. ಅಂಥ ಸಾರಾಯಿ ಅವನು ಜನ್ಮದಲ್ಲಿ ಕುಡಿದಿರಲಿಲ್ಲ. ತಲೆ 'ಗಿಮ್' ಎನ್ನ ತೊಡಗಿತು. ಬೆಂಕಿಯಂತೆ ಸಾರಾಯಿ ಗಂಟಲನ್ನು ಸುಡುತ್ತ ಹೊಟ್ಟೆಗೆ ಹೋಗಿ ಅಗ್ನಿಪ್ರಳಯವನ್ನೇ ಉಂಟುಮಾಡಿತು. ಅಸಾಧ್ಯವಾದ ಬಾಯಾರಿಕೆ ಹುಟ್ಟಿತು. "ಇನ್ನೊಂದು ಗಲಾಸ್ ತನ್ನಿ" ಎಂದ.

ಅದನ್ನು ಕುಡಿದದ್ದು ಮಾತ್ರ ಅವನಿಗೆ ನೆನಪಿತ್ತು. ಆಮೇಲೆ ಏನಾಯಿತೋ ಅವನಿಗೆ ತಿಳಿಯದು. ಈಗ ಅದೇ ಅಂಗಡಿಯ ಹೊರಗೆ ಮುರುಕು ಕಾಲುಹಲಗೆಯ ಮೇಲೆ ಅವನು ಮಲಗಿದ್ದಾನೆ.

ಅಂಗಡಿಯ ಬಾಗಿಲು ಮುಚ್ಚಿತ್ತು. ಒಳಗೆ ಯಾರಾದರೂ ಇದ್ದಾರೋ

ಇಲ್ಲವೋ ತಿಳಿಯುವಂತಿರಲಿಲ್ಲ. ಸುಬ್ಬನಿಗೆ ಮೈಯೆಲ್ಲ ಅಸಾಧ್ಯ ಭಾರ. ಹೊಟ್ಟೆ ಇನ್ನೂ ಧಗಧಗ ಎನ್ನುತ್ತಿತ್ತು. ಆಮೇಲೆ ಮಳೆ ನೀರು ಬಿದ್ದು ಚಳಿಯಿಂದ ನಡಕ ಬೇರೆ.

ಅವನೇನೂ ನಿನ್ನೆ ಮೊನ್ನೆಯಿಂದ ಕುಡಿಯಲು ಕಲಿತ ಹೊಸಬನೇನಲ್ಲ. ಎಷ್ಟೇ ಕುಡಿದರೂ ಅವನು ಹೀಗೆ ಮೈ ಮರೆತು ಬಿದ್ದದ್ದು ಇದೇ ಮೊದಲು. ಅಬ್ಬಾ ಎಂಥ ಸಾರಾಯಿ ಅದು– ಎಂದು ಮೂಗಿನ ಮೇಲೆ ಬೆರಳಿಟ್ಟುಕೊಂಡ. ಆಗ ಕುಡಿದಾಗ ಮನಸ್ಸಿನ ಮೇಲೆ ಹತೋಟಿ ತಪ್ಪುತ್ತಿತ್ತು–ನಿಜ. ಆದರೆ ಎಂದೂ ಈ ರೀತಿಯಾಗಿರಲಿಲ್ಲ. ಏಕೆ ಹೀಗಾಯಿತು ಎಂದು ಮತ್ತೆ ಮತ್ತೆ ಆಶ್ಚರ್ಯಪಟ್ಟ.

ಈಗ ಇಲ್ಲಿ ಕುಳಿತುಕೊಂಡು ಸುಮ್ಮನೆ ಕಾಲಹರಣ ಮಾಡಬಾರದು ಎಂದು ಎದ್ದು ನಿಂತ ಮುಸಾಫಿರ್ ಖಾನೆಗೆ ಹೇಗೆ ಹೋಗಬೇಕೋ ಈ ಕತ್ತಲಿನಲ್ಲಿ ಎಂದು ಚಿಂತಿಸುತ್ತಿರುವಾಗಲೇ ದೊಡ್ಡದೊಂದು ಮಿಂಚು ಫಳ್ಳನೆ ಮಿಂಚಿ ಸುತ್ತಮುತ್ತನ್ನೆಲ್ಲ ಬೆಳಗಿತು. ಆ ಮಿಂಚಿನ ಬೆಳಕಿನಲ್ಲಿ ಅವನಿಗೆ ಹತ್ತಿರದಲ್ಲೇ ಇದ್ದ ರಸ್ತೆ ಕಾಣಿಸಿತು.

ಸರಿ, ಆ ರಸ್ತೆಯಲ್ಲಿ ನಾಲ್ಕು ಹೆಜ್ಜೆ ದಕ್ಷಿಣಕ್ಕೆ ನಡೆದರೆ ಮುಸಾಫಿರ್ ಖಾನೆ ಸಿಕ್ಕುತ್ತದೆ. "ಥೂ ಇವತ್ತೇ ಅಮಲೇರಿ ಈ ಹಾಳು ನಿದ್ದೆ ಬರಬೇಕೆ?" ಎಂದು ಗೊಣಗುತ್ತ ಎದ್ದು ನಿಂತ. ಕೆಳಗೆ ಕೆಸರು-ನೀರು; ಅಂಗಡಿಯ ಮುಂದೆಲ್ಲ ನೀರೇ ನೀರು. ಬಹಳ ಮಳೆ ಹೊಡೆದಿರಬೇಕು ಎಂದುಕೊಂಡ. ಎದ್ದು ನಿಂತಾಗ ಸ್ವಾಭಾವಿಕವಾಗಿಯೇ ಕೈ ಅಂಗಿಯ ಜೇಬಿನ ಕಡೆ ಹೋಯಿತು.

ಜೇಬು ಬರಿದಾಗಿತ್ತು. ಬಳೆಯನ್ನು ಅಡವಿಟ್ಟು ತಂದ ಹತ್ತು ರೂಪಾಯಿಗಳಲ್ಲಿ ಒಂದೂ ಇಲ್ಲ, ನೋಡಿ ಸುಬ್ಬನಿಗೆ ಎದೆ ಒಡೆದಂತಾಯಿತು ಅದರಲ್ಲಿ ಒಂದು ರೂಪಾಯಿ ಸಾರಾಯಿಗೆ ಹೋಗಲಿ. ಉಳಿದದ್ದನ್ನು ವಂಚನೆಯಿಲ್ಲದೆ ಪದ್ಮಾವತಿಯಮ್ಮನಿಗಾಗಿಯೇ ಖರ್ಚು ಮಾಡಬೇಕೆಂದು ಮಾಡಿದ್ದ. ಈಗ, ಮುಂದೇನು ಗತಿ? ದುಡ್ಡೆಲ್ಲ ಹಾಳುಮಾಡಿದೆ ಅಂತ ಅವಳಿಗೆ ಹೇಗೆ ಹೇಳಲಿ? ನಾಳೆ ಗಾಡಿ ಮಾಡುವುದು ಹೇಗೆ? ಕೊಲ್ಲೂರು ತಲುಪುವುದು ಹೇಗೆ?

ಸುಬ್ಬ ದಿಗ್ಭ್ರಾಂತನಾದ. ದುಡ್ಡು ಏನಾಯಿತು ಹಾಗಾದರೆ? ಎಚ್ಚರ

ತಪ್ಪಿ ಮಲಗಿದ್ದಾಗ ಇಲ್ಲೇ ಎಲ್ಲಾದರೂ ಬಿದ್ದುಹೋಯಿತೋ ಏನೋ. ಹಾಗೇ ಇರಬೇಕು, ಇನ್ನೇನು ಆಗುತ್ತದೆ ಎಂದು ಕೊಂಚ ಸಮಾಧಾನ ತಂದು ಕೊಂಡು ಬೆಂಚಿನ ಮೇಲೆ ಕೈಯಾಡಿಸಿ ನೋಡಿದ. ಕತ್ತಲಲ್ಲೇ ಬೆಂಚಿನ ಕೆಳಗೂ ತಡಕಾಡಿದ. ಕೈಗಷ್ಟು ಮಣ್ಣು ಹತ್ತಿತಲ್ಲದೆ ಇನ್ನೇನೂ ಸಿಕ್ಕಲಿಲ್ಲ.

ಸುಬ್ಬ ಹತಾಶನಾದ. 'ಅಯ್ಯೋ ದೇವರೇ, ಎಂಥ ಕೆಲಸವಾಯಿತು!' ಎಂದು ಹಣೆಹಣೆ ಚಚ್ಚಿಕೊಂಡ. ಇನ್ನೊಂದು ಸಲ ಮಿಂಚಿತು. ಆ ಮಿಂಚಿನ ಬೆಳಕಿನಲ್ಲಿ ಮತ್ತೆ ಬೆಂಚಿನ ಸುತ್ತಲೂ ಕಣ್ಣಾರಿಸಿದ. ಒಂದೇ ಒಂದು ಕಾಸು ಕೂಡಾ ಕಾಣಿಸಲಿಲ್ಲ. ಬೆಂಚಿನ ಕೆಳಗಡೆ ಅಷ್ಟು ಕಸ ತುಂಬಿತ್ತು. ಬೆಂಚಿನ ಮೇಲೆ ಏನೂ ಇರಲ್ಲಿಲ್ಲ.

ಅಷ್ಟು ದುಡ್ಡನ್ನು ಅಂಗಡಿಯುವನೇ ತೆಗೆದುಕೊಂಡಿರಬಹುದೇ? ಇಲ್ಲ, ತನ್ನ ಜೊತೆಗೆ ರಾತ್ರಿ ಬೆಂಚಿನ ಮೇಲೆ ಕುಳಿತಿದ್ದ ಆ ಇಬ್ಬರಲ್ಲಿ ಯಾವನಾದ ರೊಬ್ಬ ಎತ್ತಿಹಾಕಿರಬಹುದೇ ? ಎಂದು ಯೋಚಿಸಿದ. ಯಾವುದೂ ಬಗೆಹರಿ ಯಲಿಲ್ಲ. ಮುಂದೇನು ಮಾಡಬೇಕು ?

ಏನು ಮಾಡುವುದೆಂದು ತೋಚದೆ ಒಂದು ಕ್ಷಣ ಬೆಂಚಿನ ಮೇಲೆ ಹಾಗೇ ಹತಾಶನಾಗಿ ಕುಳಿತ. ತಲೆ ಸಿಡಿಯುತ್ತಿತ್ತು. ಅದಕ್ಕಿಂತ ಹೆಚ್ಚಾಗಿ ಮನಸ್ಸು ಸಿಡಿಯುತ್ತಿತ್ತು.

"ಹಾಳು ಕುಡಿತದಿಂದಲೇ ಇಷ್ಟೆಲ್ಲ ಬಂದಾಟ." ಎಂದುಕೊಂಡ. ಹೀಗೆ ಅವನು ಎಂದುಕೊಂಡದ್ದು ಇದೇ ಮೊದಲ ಸಲವೂ ಅಲ್ಲ. ಆದರೆ ಸುಮ್ಮನೆ ಕೂತುಕೊಳ್ಳುವ ಹಾಗೂ ಇಲ್ಲ. ಹೇಗೋ ಬೆಳಗಾಗುವ ತನಕ ಅಲ್ಲೇ ಇರಬೇಕಲ್ಲ. ಬೆಳಗಾದ ಮೇಲೆ ಮತ್ತೆ ಹೆಂಡದಂಗಡಿಗೆ ಬರಬಹುದು, ಹೆಂಡದಂಗಡಿಯುವನನ್ನು ಕೇಳಿ ತನ್ನ ದುಡ್ಡು ಯಾರು ತೆಗೆದುಕೊಂಡರು ಎಂತ ಪತ್ತೆ ಹಚ್ಚಬಹುದು. ಹೆಂಡದಂಗಡಿಯುವನೇ ತೆಗೆದಿಟ್ಟಿದ್ದರೆ ತೊಂದರೆಯಿಲ್ಲ ಹಿಂದಕ್ಕೆ ಸಿಕ್ಕುತ್ತದೆ–ಎಂದು ಸುಬ್ಬ ಮನಸ್ಸಿನಲ್ಲಿಯೇ ಗುಣಾಕಾರ ಹಾಕಿದ. 'ಅಲ್ಲದೆ ಇಲ್ಲಿ ಹೀಗೆ ಗೋಳಾಡುತ್ತ ಕುಳಿತರೆ ದುಡ್ಡು ಸಿಗುತ್ತದೆಯೋ?' ಎಂದು ಮನಸ್ಸಿಗೆ ಕೊಂಚ ಸಮಾಧಾನ ತಂದುಕೊಂಡ.

ಆದರೂ ಪೂರ್ಣ ಸಮಾಧಾನವಿಲ್ಲ. 'ಥೂ ಹೀಗಾಗಬಾರದಾಗಿತ್ತು' ಎಂದುಕೊಳ್ಳುತ್ತ ಅಲ್ಲಿಂದ ಹೊರಟ. ಸೇರಿನಲ್ಲೇ ನಡೆದುಕೊಂಡು. ಮಳೆ ಸುರಿಯುತ್ತಲೇ ಇತ್ತು. ರಸ್ತೆಗೆ ಬರುವಷ್ಟರಲ್ಲೇ ಮೈಯೆಲ್ಲ ಒದ್ದೆಯಾ

ಗಿತ್ತು. ರಸ್ತೆಯ ಮೇಲೂ ಕೂಡಾ ನೀರು ಹರಿಯುತ್ತಿತ್ತು.

ಹಾಗೇ ಓಡೋಡುತ್ತ ಮುಸಾಫಿರಖಾನೆಯನ್ನು ತಲುಪಿ ಒಳಗಡೆ ನಿಂತಾಗಲೇ ಸುಬ್ಬನಿಗೆ ತಾನು ಸುರಕ್ಷಿತ ಎನ್ನಿಸಿದ್ದು. ಅಲ್ಲೂ ಕತ್ತಲೆ. ಏನೂ ಕಾಣಿಸದು. ಅಲ್ಲಿ ಒಳಗಡೆ ನಿಂತು ಒದ್ದೆ ಬಟ್ಟೆಯನ್ನು ಹಿಂಡಿಕೊಳ್ಳುತ್ತ ಮೆತ್ತಗೆ 'ಪದ್ಮಾವತಮ್ಮ' ಎಂದ.

ಉತ್ತರವಿಲ್ಲ.

"ಪಾಪ, ನಿದ್ದೆ ಹತ್ತಿರಬಹುದು, ಮಲಗಲಿ!" ಎಂದು ಹಾಗೇ ಜಗಲಿಯ ಒಂದು ಅಂಚಿನಲ್ಲಿ ಕೂತುಕೊಂಡ. ನಾಳೆ ಬೆಳಗ್ಗೆ ಏನು ಮಾಡುವುದು? ದುಡ್ಡು ಸಿಗದೆ ಹೋದರೆ ಮುಂದೇನು ಗತಿ ಎಂದು ಯೋಚಿಸುತ್ತಾ ಅಲ್ಲೇ ಸ್ವಲ್ಪ ಹೊತ್ತು ಕುಳಿತ.

ರಾತ್ರಿ ಎಷ್ಟಾಗಿರಬಹುದೋ ತಿಳಿಯಲಿಲ್ಲ. ಮಧ್ಯರಾತ್ರಿಯೋ, ಬೆಳಗಾಗುವ ಸಮಯವೋ ಯಾರಿಗೆ ಗೊತ್ತು? ಹೊರಗೆ ಚಿಟಿ ಚಿಟಿ ಮಳೆ. ಆಕಾಶದಲ್ಲಿ ಮೋಡ. ತಲೆಸಿಡಿತ, ಕಣ್ಣುರಿ. ಸ್ವಲ್ಪ ಹೊತ್ತು ಕಣ್ಣುಮುಚ್ಚಿಕೊಂಡು ಮಲಗಬೇಕು ಎಂದುಕೊಳ್ಳುತ್ತಾ ಸುಬ್ಬ ಎದ್ದು ನಿಂತ. ತಾನು ಎಲ್ಲಿ ಮಲಗಬೇಕು ? 'ಪದ್ಮಾವತಮ್ಮ ಎಲ್ಲಿ ಮಲಗಿದಾರೋ ? ಈ ಹಾಳು ಕತ್ತಲಲ್ಲಿ ಏನೂ ಕಾಣಿಸುವುದಿಲ್ಲ.' ಎಂದು ಎರಡು ಜಗಲಿಗಳನ್ನು ದಿಟ್ಟಿಸುತ್ತ ನಿಂತ. ಎಷ್ಟು ಹೊತ್ತು ನೋಡಿದರೂ ಎರಡೂ ಜಗಲಿ ತುಂಬ ಕತ್ತಲೆ. ಏನೂ ಕಾಣಿಸಲಿಲ್ಲ. 'ಏನು ಮಾಡುವುದಪ್ಪಾ' ಎಂದು ಇನ್ನೊಂದು ಸಲ ಕೊಂಚ ಗಟ್ಟಿಯಾಗಿಯೇ 'ಅಮ್ಮಾ' ಎಂದು ಕೂಗಿದ.

ಆದರೂ ಉತ್ತರವಿಲ್ಲ.

ಮರುಕ್ಷಣವೇ ಮಿಂಚು ಫಳಕ್ಕನೆ ಮಿಂಚಿತು. ನೋಡಿದ. ಎರಡು ಜಗಲಿಗಳೂ ಖಾಲಿ.

ಸುಬ್ಬ ನೆಲಕ್ಕೆ ಕುಸಿದು ಬಿದ್ದ. ಇದೇನು ಕಥೆ; ದುಡ್ಡು ಹೋಯಿತು ಎಂತ ಅಳುತ್ತ ಬಂದರೆ ಈಗ ಇಲ್ಲಿ ಪದ್ಮಾವತಮ್ಮನೇ ಇಲ್ಲ. ಎಲ್ಲಿ ಹೋಗಿರಬಹುದು ? ಎಂದು ಎಷ್ಟು ಯೋಚಿಸಿದರೂ ಅವನಿಗೆ ಬಗೆ ಹರಿಯಲಿಲ್ಲ. ಕತ್ತಲೆ; ಮುಸಲಧಾರೆಯಾದ ಮಳೆ; ಪರಿಚಯವಿಲ್ಲದ ಸ್ಥಳ. ಅವಳು ಎಲ್ಲಿಗೆ ತಾನೇ ಹೋದಾಳು ?

ಸಮಸ್ಯೆಯ ಮೇಲೆ ಸಮಸ್ಯೆ. ಸಮಸ್ಯೆ ಎಂದರೇ ಸುಬ್ಬನಿಗಾಗದು. ಸಮಸ್ಯೆ

ಬಂದಾಗಲ್ಲೆಲ್ಲ ಅದನ್ನು ಹೆಂಡದಲ್ಲಿ ಮುಳುಗಿಸಿ ಬಿಡುತ್ತಿದ್ದ. "ಯಾಕಪ್ಪಾ ಈ ಕೆಲಸ ನಾನು ಒಪ್ಪಿಕೊಂಡೆ?" ಎಂದು ಹಳಹಳಿಸಿದ. ಏನೋ ರಾಮಚಂದ್ರಶಾಸ್ತ್ರಿಗಳು ತನಗೆ ಬೇಕಾದವರು. ಈ ಒಂದು ಸಣ್ಣ ಕೆಲಸ ಮಾಡಿಕೊಡಲು ಆಗುವುದಿಲ್ಲ ಅಂತ ಹೇಗೆ ಹೇಳಲಿ ಅಂತ ಒಪ್ಪಿಕೊಂಡಿದ್ದ. ಆದರೆ ಈಗ ಅವನಿಗೆ ಬಹಳ ಬೇಸರ ಬಂತು. ಜುಗುಪ್ಸೆ ಹುಟ್ಟಿತು. ಕಷ್ಟಪಟ್ಟು ಹಾಲಾಡಿಯಿಂದ ಕಂಭದಕೋಣೆಯ ವರೆಗೆ ಕರೆದುಕೊಂಡು ಬಂದರೆ ಈಗ ಅವಳೇ ಇಲ್ಲ!

ಏನೋ ತಾನು ಹೆಂಡದಂಗಡಿಯಲ್ಲಿ ಹೆಚ್ಚಾಗಿ ಕುಡಿದು ಬಿದ್ದುಬಿಟ್ಟೆ–ಸರಿ...ಅದು ತಪ್ಪು. ಆದರೆ ಅಷ್ಟರಲ್ಲಿ ಇವಳು ಅದೃಶ್ಯಳಾಗಿ ಬಿಡುವುದು ಯಾವ ನ್ಯಾಯ? ಇದೆಲ್ಲ ಚಿಂತೆಗೆ ಕಾರಣ. ಚಿಂತೆಯೊಂದು ಸುಬ್ಬನಿಗೆ ಬೇಡ. ಆದರೆ ಮತ್ತೆ ಮತ್ತೆ ಚಿಂತೆ. ದುಡ್ಡಿಲ್ಲದ ಚಿಂತೆ. ದುಡ್ಡು ಕಳೆದುಹೋಯಿತಲ್ಲ ಎಂಬ ಚಿಂತೆ. ಈಗ ಯಾರಿಗೋಸ್ಕರ ಇಷ್ಟೆಲ್ಲ ಕಷ್ಟಪಟ್ಟು ಇಷ್ಟು ದೂರ ಬಂದಿದ್ದನೋ ಅವಳೇ ಇಲ್ಲ.

ಏನು ಮಾಡುವುದು ಈಗ? ಒಳ್ಳೇ ಪೀಕಲಾಟ ಬಂತಲ್ಲ ಎಂದು ಎರಡೂ ಜಗಲಿಗಳನ್ನು ತಡಕಿ ನೋಡಿದ. ಯಾರೂ ಇಲ್ಲ. ಒಂದು ಮೂಲೆಯಲ್ಲಿ ಅಷ್ಟು ಬಾಳೆ ಹಣ್ಣಿನ ಸಿಪ್ಪೆ, ಮಣ್ಣು.

ಮಣ್ಣು; ಎಲ್ಲಾ ಅಷ್ಟೆ. ಏನು ಮಾಡಿದರೂ ಅಷ್ಟೆ. ಕೊನೆಗೆ ಕೈಗೆ ಸಿಕ್ಕುವುದು ಮಣ್ಣೇ! ಒಂದು ಕ್ಷಣ ಸುಬ್ಬನಿಗೆ ತನ್ನ ಮೇಲೆ ತನಗೆ ಬಹಳ, ಬಹಳ ಎಂದರೆ ಬಹಳ ಸಿಟ್ಟು ಬಂತು. ಜೀವಮಾನದಲ್ಲೇ ತಾನು ಒಂದು ಕೆಲಸ ಸರಿಯಾಗಿ ಮಾಡಲಿಲ್ಲ. ಮುಟ್ಟಿದ್ದೆಲ್ಲ ಮಣ್ಣೇ. ನಂಬಿರುವವರ ಕುತ್ತಿಗೆಗೆ ಗುಂಡುಕಲ್ಲೇ. "ಎಲಾ ಅಯೋಗ್ಯನೇ, ನಿನ್ನನ್ನು ಈ ಕ್ಷಣವೇ ಕೊಯ್ದು ಸೀಳಿ ತೋರಣ ಕಟ್ಟಬೇಕು." ಎಂದು ನಾಟಕೀಯವಾಗಿ ತನ್ನನ್ನು ದ್ವೇಶಿಸಿ ತಾನೇ ಹೇಳಿಕೊಂಡು ಜೀವನದಲ್ಲಿ ಎಲ್ಲವನ್ನೂ ಹಗುರವಾಗಿ ಕಂಡುಕೊಂಡೇ ಬಂದಿದ್ದ. ಯಾವ ಸನ್ನಿವೇಶದಲ್ಲೂ ಅವನಿಗೆ ಗುರುತ್ವ ಕಂಡಿರಲಿಲ್ಲ. ಗಾಳಿ ಬೀಸಿದತ್ತ, ಪ್ರವಾಹ ಯಾವ ಕಡೆ ಕೊಂಡೊಯ್ದರೆ ಆ ಕಡೆ ಕೊಚ್ಚಿಕೊಂಡು ಹೋಗುವುದೇ ಅವನ ಜೀವನದ ಮೂಲ ಸೂತ್ರವಾಗಿತ್ತು. ದುಡ್ಡಿದ್ದರೆ ಮಝಾ; ಇಲ್ಲದಿದ್ದರೆ ಪರದಾಟ. ಎಲ್ಲೂ ನೆಲೆಯಾಗಿ ನಿಂತು ಕೆಲಸ ಮಾಡಲಿಲ್ಲ. ಮೇಳಕ್ಕೆ ಸೇರಿದರೆ ಅಲ್ಲಿ ಒಂದು ತಿಂಗಳು ಇದ್ದರೆ ಹೆಚ್ಚು; ಕೈಗೆ ಸ್ವಲ್ಪ

ದುಡ್ಡು ಸಿಕ್ಕಿದ ಮೇಲೆ ಮತ್ತೆ ಅಲ್ಲಿ ಇರಲಾರ.

"ಎಲಾ ಸೆಗಣಿ ಸುಬ್ಬಾ, ನಿನಗೆ ಈಗ ಎಷ್ಟು ವರ್ಷವೋ ವಯಸ್ಸು?" ಎಂದು ತನಗೆ ತಾನೇ ಕೇಳಿಕೊಂಡ. "ನಲವತ್ತು ವರ್ಷ ವಯಸ್ಸು ಆಗಲೇ. ನಾಯಿಗೆ ಆದ ಹಾಗೆ ನಿನಗೆ ವಯಸ್ಸೊಂದು ಆಗಿದೆ. ನಿನ್ನ ಬುದ್ಧಿಯೋ! ನಿನ್ನ ಜನ್ಮವೋ!" ಎಂದು ತನ್ನನ್ನೇ ತಾನು ಶಪಿಸಿಕೊಂಡ.

ಚಿಂತೆ. ಅದೇ ಪೀಡ ಅನ್ನುವುದು. ಮತ್ತೆಮತ್ತೆ ಅದೇ. ಚಿಂತೆ, ಚಿಂತೆ. ಸುಬ್ಬ ಜಗಲಿಯ ಮೇಲೆ ಕುಳಿತುಕೊಂಡು ಹಿಂದೆಂದೂ ಯೋಚಿಸದಿದ್ದ ರೀತಿಯಲ್ಲಿ ಯೋಚಿಸತೊಡಗಿದ. ಬುದ್ಧಿ ಈಗ ಬಹಳ ತಿಳಿಯಾಗಿತ್ತು; ಅಮಲು ಸಂಪೂರ್ಣವಾಗಿ ಇಳಿದುಹೋಗಿತ್ತು. ಯೋಚಿಸುತ್ತಲೇ ಜಗಲಿಯ ಮೇಲೆ ಮಲಗಿಕೊಂಡ. ಜಗಲಿಯ ಅರ್ಧ ಭಾಗ ಒದ್ದೆ. ಇನ್ನು ಉಳಿದ ಅರ್ಧದಲ್ಲೇ ಮುದುರಿಕೊಂಡ. ಯೋಚನೆ. ನಿದ್ದೆ ಬರುವುದಿಲ್ಲ. ಕಣ್ಣುರಿಯುತ್ತಿದೆ; ರೆಪ್ಪೆಗೆ ರೆಪ್ಪೆ ಹತ್ತುವುದಿಲ್ಲ.

ಈಗ ಏನು ಮಾಡುವುದು? ಉತ್ತರವಿಲ್ಲ. ರಾಮಚಂದ್ರಶಾಸ್ತ್ರಿಗಳ ಕೆಲಸದಲ್ಲಿ ಇಂಥ ಪ್ರಮಾದ ಆಗಬಾರದಿತ್ತು. ಅದೇ ಅವನ ಚಿಂತೆ. ಅವನು ಈ ಜಗತ್ತಿನಲ್ಲಿ ಯಾರಾದರೊಬ್ಬರ ವಿಷಯದಲ್ಲಿ ಅಷ್ಟು ಪ್ರೀತಿ ನಿಜವಾಗಿ ಇಟ್ಟಿದ್ದರೆ ಅದು ರಾಮಚಂದ್ರಶಾಸ್ತ್ರಿಯಲ್ಲಿ. ಈಗ ಅವರ ಹೆಂಡತಿ ಅದೃಶ್ಯಳಾಗಿದ್ದಾಳೆ. ತಾನು ಶಾಸ್ತ್ರಿಗಳಿಗೆ ಏನು ಹೇಳಬೇಕು? ಅದೇ ಯೋಚನೆ. ತಾನು ಏನು ಹೇಳಿದರೂ ಅವರು ನಂಬುತ್ತಾರೆ. ಸುಳ್ಳು ಹೇಳಬಹುದು— ಅದೇನೋ ಬಹು ಸುಲಭದ ಕೆಲಸ. ಸುಬ್ಬನಿಗಂತೂ ಅದು ನೀರು ಕುಡಿದ ಹಾಗೆ. ಆದರೆ ಶಾಸ್ತ್ರಿಗಳಿಗೆ ಸುಳ್ಳು ಹೇಳುವುದು ಹೇಗೆ?

ಇಬ್ಬರೂ ಕುಂಡಲಾಪುರದಲ್ಲೇ ಹುಟ್ಟಿದವರು. ಸುಮಾರಾಗಿ ಇಬ್ಬರ ವಯಸ್ಸೂ ಒಂದೇ. ಆದರೆ ಅವರಿಬ್ಬರಲ್ಲಿ ಆತ್ಮೀಯತೆ ಬೆಳೆದ ಕಥೆ ಮಾತ್ರ ಕೊಂಚ ವಿಚಿತ್ರವೇ ಎನ್ನಬೇಕು.

ಸುಬ್ಬನ ತಂದೆ ಊರ ದೇವಸ್ಥಾನದ ಪಾಟಾಳಿ. ಬಹಳ ಬಡವ. ಸುಬ್ಬನಿಗೆ ಎರಡೋ ಮೂರೋ ವರ್ಷ ವಯಸ್ಸಾಗಿದ್ದಾಗಲೇ ತಂದೆ ತೀರಿಕೊಂಡಿದ್ದ. ಅವನ ತಾಯಿಯ ನಡತೆ ಸರಿಯಿಲ್ಲ ಎಂತ ಆಗಲೇ ಹೊಗೆಯಾಡುತ್ತಿದ್ದ ಪುಕಾರು ಅವನ ತಂದೆ ಸತ್ತ ಮೇಲೆ ಕಾಳ್ಗಿಚ್ಚಿನಂತೆ ಹಬ್ಬಿತ್ತು. ಜಾತಿಯಿಂದ ಅವಳನ್ನು ಹೊರಗೆ ಹಾಕದೆ ಇದ್ದರೂ ಸಮಾಜ ಅವಳನ್ನು ಬಹಿಷ್ಕ

ರಿಸಿದಂತೆಯೇ ಆಗಿತ್ತು. ಯಾರೂ ಅವಳ ಮನೆಗೆ ಹೋಗುತ್ತಿರಲಿಲ್ಲ. ಅವಳನ್ನು ಮನೆಗೆ ಕರೆಯುತ್ತಿರಲಿಲ್ಲ.

ಅವರ ಮನೆ ಒಂದು ಮುರುಕು-ಗುಡಿಸಲು. ಮಾಡಿಗೆ ಹುಲ್ಲು ಹೊದೆಸಲಿಕ್ಕೂ ಕಷ್ಟ. ಮಳೆ ಬಂದರೆ ನೀರೆಲ್ಲಾ ಒಳಗೇ. ಅಲ್ಲಿ ಇಲ್ಲಿ ಒಂದು ಚೂರು ಜಾಗ ಮಳೆಯಿಂದ ಸುರಕ್ಷಿತವಾದದ್ದು ಸಿಕ್ಕುತ್ತಿತ್ತು. ಒಂದು ರಾತ್ರಿ ಬಂದ ಭಾರೀ ಮಳೆಗೆ ಆ ಜಾಗಗಳೂ ಕೈ ಕೊಟ್ಟುವು. ಆಗ ಆ ಮನೆಯಲ್ಲಿ ಚಳಿಗೆ ನಡಗುತ್ತ ಮುದುರುತ್ತ ಇಡೀ ರಾತ್ರಿ ನಿದ್ರೆಯಿಲ್ಲದೆ ಕಳೆದದ್ದು ಸುಬ್ಬನಿಗೆ ಎಂದೂ ಮರೆಯದು. ಊಟವೂ ಅಷ್ಟೆ. ಹೊಟ್ಟೆ ತುಂಬ ಊಟ ಮಾಡಿದರೆ ಹಬ್ಬದೂಟ ಮಾಡಿದ ಹಾಗೆ.

ಸುಬ್ಬ ಸಣ್ಣವನಾಗಿದ್ದಾಗ ಮೈಯೆಲ್ಲ ತುರಿಕಜ್ಜಿಯಾಗಿ ಒಂದು ಮೂಲೆಯಲ್ಲಿ ಬಿದ್ದಿರುತ್ತಿದ್ದ. ಮನೆಗೆ ಯಾರು ಯಾರೋ ಬಂದು ಹೋಗುತ್ತಿದ್ದರು. ಅವನ ತಾಯಿ ಅವರೆಲ್ಲರ ಕೂಡ ಸರಸವಾಗಿ ಮಾತಾಡುತ್ತ ನಗುತ್ತ ಇದ್ದದ್ದು ಅವನಿಗೆ ಕೇಳಿಸುತ್ತಿತ್ತು. ಆದರೆ ಯಾರೂ ಅವನನ್ನು ಮಾತಾಡಿಸುತ್ತಿರಲಿಲ್ಲ. ಸತ್ತೆಯಾ, ಇದ್ದೆಯಾ ಅಂತ ಅವನ ತಾಯಿ ಕೂಡಾ ಕೇಳಳು. ದಿನಕ್ಕೆ ಎರಡು ಸಲ ಏನೋ ಅಷ್ಟು ತಿನ್ನಲು ಹಾಕುತ್ತಿದ್ದರು. ಅದನ್ನೇ ತಿಂದು, ಪ್ರೀತಿ ವಿಶ್ವಾಸ ಅಂದರೆ ಏನು ಅಂತ ತಿಳಿಯದೇ ಅವನು ಬೆಳೆದ.

ಅವನು ಎಂದೂ ದೃಢಕಾಯನಾಗಲಿಲ್ಲ. ಚಿಕ್ಕಂದಿನಲ್ಲಂತೂ ತೀರ ಬಡಕಲಾಗಿ ಪ್ರೇತದಂತೆ ಕಾಣುತ್ತಿದ್ದ. ಮೈ ಮೂಳೆಯೆಲ್ಲ ಎದ್ದು ಕಾಣುತ್ತಿತ್ತು. ಎಲ್ಲರಂತೆ ಅವನು ಕೂಡಾ ಊರಿನಲ್ಲಿ ಹೊಸದಾಗಿ ತೆರೆದಿದ್ದ ಪ್ರಾಥಮಿಕ ಶಾಲೆಗೆ ಹೋಗಿ ಬರುತ್ತಿದ್ದ. ಅಲ್ಲಿ ಎಲ್ಲ ಹುಡುಗರ ಎಲ್ಲ ತಂಟೆಗೂ ಸುಬ್ಬನೇ ಮುಖ್ಯ ವಸ್ತು. ಅವನ ಹರಕಂಗಿಯ ಜೇಬಿನ ತುಂಬ ಮರಳು ತುಂಬಿ ಕಣ್ಣಿಗೂ ಮರಳನ್ನೆರಚಿ ತಲೆಯ ಮೇಲೆ ಸೆಗಣಿಯ ಕಟ್ಟೆ ಕಟ್ಟಿ ಹುಡುಗರು ಸಂತೋಷಪಡುತ್ತಿದ್ದರು. ಆ ಕಾಲದಲ್ಲಿ ಸುಬ್ಬನಿಗೆ ಒಂದಕ್ಷರವೂ ತಲೆಗೆ ಹತ್ತುತ್ತಿರಲಿಲ್ಲ. ಇದರಿಂದ ಅಧ್ಯಾಪಕರ ಬೆತ್ತಕ್ಕೆ ದಿನವೂ ತಕ್ಕಷ್ಟು ವ್ಯಾಯಾಮ ಸಿಕ್ಕುತ್ತಿತ್ತು. ಬೆತ್ತವನ್ನು ನೋಡಿದ ಕೂಡಲೇ ಸುಬ್ಬ 'ಕುಯ್ಯೋ' ಎಂದು ಅಳುತ್ತಿದ್ದ. ಪಾಠ ಓದಲು ಹೇಳಿದಾಗ ಬಂದಷ್ಟೂ ಮರೆತು ಹೋಗುತ್ತಿತ್ತು. ಏಟು, ಏಟು, ಏಟು. ಅಳು. ಹುಡುಗರೆಲ್ಲ ಸೇರಿ ಅವನಿಗೆ 'ಕುಯ್ಯ' ಅಂತ ಅಡ್ಡ ಹೆಸರು ಕೂಡಾ ಇಟ್ಟಿದ್ದರು.

ಒಂದು ದಿನ ಹುಡುಗರ ತಂಟೆ ವಿಪರೀತಕ್ಕಿಟ್ಟುಕೊಂಡಿತು. ಶಾಲೆಯ ಗಂಟೆ ಹೊಡೆದ ಕೂಡಲೇ ಸುಬ್ಬ ಸಾಮಾನ್ಯವಾಗಿ ಮೆಲ್ಲನೆ ಜಾರಿಕೊಳ್ಳುತ್ತಿದ್ದು ಆದರೆ ಆ ದಿನ ಅವನನ್ನು ಅಧ್ಯಾಪಕರು ಪರಂಗಿಮಣೆ ನಿಲ್ಲಿಸಿದ್ದರು. ಹುಡುಗರು ಎಲ್ಲರೂ ಹೊರಟು ಹೋದ ಮೇಲೆ ಮಾಸ್ತರು ಹುಣಿಸೇ ಕಡ್ಡಿಯಿಂದ ಅವನ ಬೆನ್ನ ಮೇಲೆ ಒಂದು ಬಿಗಿದು ಹೊರಕ್ಕೆ ಅಟ್ಟಿದ್ದರು. ಒತ್ತಿ ಬರುತ್ತಿದ್ದ ಅಳುವನ್ನು ತಡೆದುಕೊಳ್ಳಲು ಯತ್ನಿಸುತ್ತ ಹರಕಂಗಿಯ ಕೊಳಕು ಸೆರಗಿನಿಂದ ಕಣ್ಣನ್ನು ಒರಸಿಕೊಳ್ಳುತ್ತ ಹೋಗುತ್ತಿದ್ದ.

ಶಾಲೆಯ ಹತ್ತಿರವೇ ಒಂದು ಸಣ್ಣ ಮರಗಳ ಗುಂಪು; ಮಾವಿನ ಮರ, ಗೇರು ಮರ, ಸಳ್ಳೆಮರ, ಬಗಸಿಮರ. ಗೇರು ಮರದ ಮೇಲೆ ಇಬ್ಬರು ಹುಡುಗರು ಏರಿ ಹಣ್ಣು ಕೀಳುತ್ತಿದ್ದರು. ಕೆಳಗೆ ನಾಲ್ಕು ಮಂದಿ ಧಾಂಡಿಗ ಹುಡುಗರು ನಿಂತಿದ್ದರು. ಇದು ಯಾವದನ್ನೂ ಗಮನಿಸದೆ ಬೆನ್ನಲ್ಲಿ ಮೂಡಿದ್ದ ಹುಣಿಸೇ ಕಡ್ಡಿಯ ಗುರುತನ್ನು ಸವರಿಕೊಳ್ಳುತ್ತ ಬಿಕ್ಕುತ್ತ ಸುಬ್ಬ ಮುಂದೆ ಹೋಗುತ್ತಿದ್ದ. ಆಗ ಕಿಟ್ಟ ಅವನನ್ನು ಹಿಡಿದು ನಿಲ್ಲಿಸಿ

" ಏ ಸೆಗಣೀ ಸುಬ್ಬ, ನಿಂತುಕೊಳ್ಳೋ. ಗೇರು ಹಣ್ಣು ಕೊಡುತ್ತೇವೆ" ಎಂದ.

ಸುಬ್ಬ ಸುತ್ತಲೂ ನೋಡಿದ. ಅಪಹಾಸ್ಯದಿಂದ ನಗುವ ಮುಖಗಳನ್ನು ಕಂಡು ಹೆದರಿ " ನನಗೆ ಗೇರು ಹಣ್ಣು ಬೇಡ; ಬಿಟ್ಟು ಬಿಡೋ; ಮನೆಗೆ ಹೋಗುತ್ತೇನೆ." ಎಂದು ಅಂಗಲಾಚಿದ.

" ಏ ಏಕೋ ಮನೆಗೆ ಹೋಗುವುದು ? ಅಲ್ಲಿ ನಿಮ್ಮ ಅಮ್ಮನ ಮಿಂಡ ಕಾದಿರ್ತಾನಾ ? " ಎಂದು ಕಿಟ್ಟ ಕೇಳಿದ. ಎಲ್ಲ ಹುಡುಗರೂ ಖೋ ಖೋ ಖೋ ಎಂದು ಬಿದ್ದು ಬಿದ್ದು ನಕ್ಕರು.

ಇಷ್ಟು ಹೊತ್ತಿಗೆ ಮರದ ಮೇಲಿದ್ದ ಹುಡುಗ, " ಕಿಟ್ಟಾ, ಈ ಹಣ್ಣು ತೆಗೆದುಕೋ " ಎಂದು ಒಂದು ಹಣ್ಣನ್ನು ಕೆಳಕ್ಕೆಸೆದ. ಕಿಟ್ಟ ತಾನು ಹಿಡಿದಿದ್ದ ಸುಬ್ಬನ ಕೈಯನ್ನು ಬಿಟ್ಟು ಹಣ್ಣು ಹಿಡಿಯಲು ಅತ್ತ ಓಡಿದ. ಈ ಸಮಯವನ್ನೇ ಕಾಯುತ್ತಿದ್ದ ಸುಬ್ಬ ಬಿದ್ದರೆ ಒಂದು ಹಲ್ಲೂ ಸಿಗದು ಎನ್ನುವ ಹಾಗೆ ಓಡತೊಡಗಿದ. ಇದನ್ನು ಕಂಡು ಕಿಟ್ಟ ' ಏ ಹಿಡಿದುಕೊಳ್ರೋ ' ಎಂದು ಕೂಗುತ್ತ ಅಟ್ಟಿಸಿಕೊಂಡು ಹೋದ.

ಮರದ ಮೇಲೆ ಕುಳಿತು ಹಣ್ಣು ಕೀಳುತ್ತಿದ್ದ ರಾಮಚಂದ್ರ, ' ಹೋಗಲಿ

ಬಿಡೋ, ಕಿಟ್ಟ ' ಎಂದು ಕೂಗಿ ಹೇಳಿದ. ಆದರೆ ಅವನ ಮಾತನ್ನು ಕೇಳದೆ ಕಿಟ್ಟ ಓಡಿ ಬೆನ್ನಟ್ಟಿ ಹೋಗಿ, ಕೂಯ್ಯೋ ಎನ್ನುತ್ತಿದ್ದ ಸುಬ್ಬನನ್ನು ಹಿಡಿದುಕೊಂಡು ಬಂದ. ಇಷ್ಟು ಹೊತ್ತಿಗೆ ಗೇರು ಮರದಿಂದ ಕೆಳಗಿಳಿದು ಬಂದಿದ್ದ ರಾಮಚಂದ್ರಶಾಸ್ತ್ರಿ " ಏ, ಬೇಡವೋ. ಬಿಟ್ಟು ಬಿಡೋ " ಎಂದ ಇನ್ನಷ್ಟು ಗಟ್ಟಿಯಾಗಿ.

" ನೀನು ಸುಮ್ಮನಿರುತ್ತೀಯೋ ಇಲ್ಲವೋ, ನಿನಗೂ ಬೇಕಾಗಿದೆಯೋ ಕಡಬು " ಎಂದು ಕಿಟ್ಟ ಗಟ್ಟಿಯಾಗಿ ಒದರಿದ. ರಾಮಚಂದ್ರ ' ಹಾಳಾಗಿ ಹೋಗಲಿ, ಏನು ಬೇಕಾದರೂ ಮಾಡಿಕೋ ' ಎನ್ನುತ್ತ ಅಲ್ಲಿಂದ ಹೊರಟು ಬಿಟ್ಟ.

" ಏನೋ, ಓಡ್ಹೋಗ್ತೀಯೇನೋ, ಕಳ್ಳ " ಎನ್ನುತ್ತ ಕಿಟ್ಟ ಸುಬ್ಬನ ಬೆನ್ನ ಮೇಲೆ ಬಲವಾಗಿ ಒದ್ದ. ಅವನು ನೆಲಕ್ಕೆ ಬಿದ್ದು ಮಿಡುಕುತ್ತಿರಲು ಅವನನ್ನು ಎತ್ತಿ ನಿಲ್ಲಿಸಿ ಅಲ್ಲೇ ಇದ್ದ ಬೀಳೊಂದನ್ನು ಕಿತ್ತು ಸುಬ್ಬನ ಎರಡು ಕೈಗಳನ್ನೂ ಬೆನ್ನಿನ ಕಡೆಗೆ ತಿರುಗಿಸಿ ಹಿಂದುಗಡೆ ಬಲವಾಗಿ ಕಟ್ಟಿ ಹಾಕಿದ.

ಅಷ್ಟು ಹೊತ್ತಿಗೆ ಕಿಟ್ಟನ ಆಪ್ತಸ್ನೇಹಿತ ಗುಂಡಪ್ಪ ಮರದ ಮೇಲಿಂದ ಚೌಳಿ ಮೊಟ್ಟೆಯೊಂದನ್ನು ಕಿತ್ತು ತಂದ (ಚೌಳಿ ಮರದ ಮೇಲೆ ಇರುವ, ಮೈ ಉರಿ ಹತ್ತುವಂತೆ ಕಚ್ಚುವ ಒಂದು ಜಾತಿಯ ಇರುವೆ). ಅದನ್ನು ಸುಬ್ಬನ ಮೈ ಮೇಲೆ ಹಾಕಿ ಎಲ್ಲರೂ ಕೈ ತಟ್ಟಿ ನಗತೊಡಗಿದರು. ಉರಿ ತಾಳದೆ ಸುಬ್ಬ ಚೀರತೊಡಗಿದ. ಕಚ್ಚುವ ಇರುವೆಯನ್ನು ತೆಗೆದು ಬಿಸಾಡಬೇಕಾದರೆ ಕೈ-ಬಲವಾಗಿ ಹಿಂದೆ ಕಟ್ಟಿತ್ತು. ಅವನು ಒದ್ದಾಡುವುದನ್ನು ಕಂಡು ನಲಿಯುತ್ತ ಗೇರುಹಣ್ಣನ್ನು ತಿಂದು ಸಿಪ್ಪೆಯನ್ನು ಅವನ ಮೈ ಮೇಲೆ ಉಗಿಯುತ್ತ ಸ್ವಲ್ಪ ಹೊತ್ತು ನಕ್ಕು ಸಂತೋಷ ಪಟ್ಟು ಹುಡುಗರು ಹೊರಟು ಹೋದರು.

ಅವರು ಹೊರಟು ಹೋದ ಕೂಡಲೇ ಪಕ್ಕದ ಪೊದೆಯ ಹತ್ತಿರ ಅಡಗಿಕೊಂಡಿದ್ದ ರಾಮಚಂದ್ರ ಓಡೋಡುತ್ತ ಬಂದು ಸುಬ್ಬನ ಕೈಯನ್ನು ಬಿಚ್ಚಿದ. ಇಬ್ಬರೂ ಸೇರಿ ಮೈ ಮೇಲೆ ಉರಿಯುಂತೆ ಓಡಾಡುತ್ತಿದ್ದ ಚೌಳಿಗಳನ್ನು ಕಿತ್ತೆಸೆದರು. ಬಹಳ ಹೊತ್ತಿನ ತನಕ ಸುಬ್ಬನ ಮೈ ಉರಿಯುತ್ತಲೇ ಇತ್ತು.

ರಾಮಚಂದ್ರ ಸುಬ್ಬನನ್ನು ತನ್ನ ಮನೆಗೆ ಕರೆದುಕೊಂಡು ಹೋದ. ರಾಮಚಂದ್ರನ ತಂದೆ ಸುಬ್ಬನಿಗಾದ ಹಿಂಸೆಯನ್ನು ಕೇಳಿ ಕನಿಕರಪಟ್ಟು ಅವ

ನಿಗೆ ಉಟ್ಟುಕೊಳ್ಳಲು ಒಂದು ಪಂಚೆಯನ್ನು ಕೊಟ್ಟು ಊಟಕ್ಕೆ ಹಾಕಿ ಕಳಿಸಿದರು.

ಅಂದಿನಿಂದ ರಾಮುಚಂದ್ರ ಮತ್ತು ಸುಬ್ಬ ಹತ್ತಿರ ಹತ್ತಿರ ಬರತೊಡಗಿದರು. ಆ ದಿನದಿಂದ ಸುಬ್ಬನ ಚರ್ಯೆಯೇ ಬದಲಿಸಿತು. ರಾಮುಚಂದ್ರನಲ್ಲಿ ಅವನಿಗೆ ಅಸಾಧ್ಯ ಗೌರವ ಹುಟ್ಟಿತು. ಒಂದು ದಿನ ರಾಮುಚಂದ್ರ "ಇದೇನೋ ವಾಸನೆ. ಸ್ನಾನ ಮಾಡಬಾರದೇನೋ" ಎಂದ. ಆ ದಿನದಿಂದ ಸುಬ್ಬ ದಿನವೂ ಸ್ನಾನ ಮಾಡತೊಡಗಿದ. ಪಾಠ ಕಷ್ಟ ಪಟ್ಟು ಓದಿ ಶಾಲೆಯಲ್ಲಿ ಏಟನ್ನು ತಪ್ಪಿಸಿಕೊಳ್ಳತೊಡಗಿದ. ಒಂದಿಷ್ಟು ಪ್ರೀತಿ, ಒಂದಷ್ಟು ಕನಿಕರ, ಏನೋ ಅಲ್ಪ ಸ್ವಲ್ಪವಾದರೂ ಸಹಾನುಭೂತಿ ಸಿಕ್ಕದೆ ಇದ್ದ ಕಾಲದಲ್ಲಿ ಸುಬ್ಬನಿಗೆ ರಾಮುಚಂದ್ರನ ಸ್ನೇಹ ದೊಡ್ಡ ನಿಧಿಯೇ ಆಗಿ ಕಂಡಿತ್ತು. ಅದಕ್ಕೆ ತಕ್ಕ ಅರ್ಹತೆ ಪಡೆಯಲು ಅವನ ಅಂದಿನ ಆ ಪುಟ್ಟ ಹೃದಯ ನಿರಂತರವಾಗಿ ಶ್ರಮಿಸುತ್ತಿತ್ತು.

ಸುಬ್ಬನಿಗೆ ಹದಿನಾಲ್ಕೋ ಹದಿನೈದೋ ವರ್ಷವಾಗಿದ್ದಾಗ ಏನೋ ರೋಗದಿಂದ ಅವನ ತಾಯಿ ತೀರಿಕೊಂಡಳು. ಅದರಿಂದ ಸುಬ್ಬನಿಗೇನೂ ದುಃಖವಾಗಲಿಲ್ಲ. ಇಂದೂ ನೆನಪು ಮಾಡಿಕೊಳ್ಳಬೇಕೆಂದರೂ ಅವಳ ಮುಖ ಅವನ ಮನಸ್ಸಿನ ಮುಂದೆ ಬಂದು ನಿಲ್ಲುವುದಿಲ್ಲ. ತನ್ನ ಬಾಲ್ಯ ಅವನಿಗೆ ಒಂದು ಕೆಟ್ಟ ಕನಸಿನಂತೆ ಅನ್ನಿಸುತ್ತಿತ್ತು. ಇಂದು ಕೂಡಾ ತನ್ನ ತಾಯಿಯನ್ನು ನೆನಸಿಕೊಂಡರೆ ಅವನಿಗೇನೂ ದುಃಖವಾಗುತ್ತಿಲ್ಲ.

ಈಗ ಯೋಚನೆ ಮಾಡಿದರೆ ಸುಬ್ಬನಿಗೆ ಕೊಂಚ ಅರ್ಥವಾಗುತ್ತದೆ, ತನ್ನ ತಾಯಿ ಹಾಗೆ ಏಕೆ ಆದಳೆಂದು. ಅವಳ ಬಾಳು ಒಂದು ಸಂತತ ಹೋರಾಟವಾಯಿತು. ಬಡತನ, ಅಸಾಧ್ಯ ಬಡತನ. ಗಂಡ ಇರುವ ತನಕವೂ ಹಾಗೂ ಹೀಗೂ ಜೀವನ ಸಾಗುತ್ತಿತ್ತು. ಆದರೆ ಆ ಜೀವನದಲ್ಲಿ ಸುಖ-ತೃಪ್ತಿ ಎಂಬುದು ಮಾತ್ರ ಕೊಂಚವೂ ಇರಲಿಲ್ಲ. ಗಂಡ ಜೀವಿಸಿರುವಾಗಲೇ ಅವಳಿಗೆ ಊರ ಶ್ಯಾನುಭಾಗರು ರಾಮಯ್ಯನವರ ಪರಿಚಯವಾಗಿತ್ತು ಅಂತ ಆಮೇಲೆ ಸುಬ್ಬನಿಗೆ ತಿಳಿಯಿತು. ಆ ಮಹಾರಾಯನ ಕೃಪೆ ಇದ್ದಷ್ಟು ಕಾಲ ಅವನ ತಾಯಿಗೆ ಹೆಚ್ಚು ತೊಂದರೆಯಾಗುತ್ತಿರಲಿಲ್ಲ. ಇವಳ ಗಂಡ ಸತ್ತು ಅವನು ಕೈಬಿಟ್ಟ ಮೇಲೆ ಮಾತ್ರ ಬಾಳು ಹೇಸಿಗೆಯಾಯಿತು. ಬೇಡ ಬೇಡವೆನ್ನಿಸಿದವರನ್ನೂ ಹತ್ತಿರ ಸೇರಿಸಿದಳು. ಮನಸ್ಸು ಕೆಟ್ಟಿತ್ತು; ಹೃದಯ ಅಸಹ್ಯದ ತವರೂರಾ

ಯಿತು. ಮಗನನ್ನು ಕಂಡರೆ ಸಿಡಿಸಿಡಿದು ಬೀಳುತ್ತಿದ್ದಳು.

ಆದರೆ ಆ ಒಂದು ರಾತ್ರಿ ಮಾತ್ರ ಇನ್ನೂ ಸುಬ್ಬನ ನೆನಪಿನಲ್ಲಿ ಖಚಿತವಾಗಿ ನಿಂತಿದೆ. ಏನೋ ಅಷ್ಟು ತಂಗಳನ್ನ ತಿಂದು ಸುಬ್ಬ ಮೂಲೆಯಲ್ಲಿ ಮಲಗಿದ್ದ. ಆಗ ಅವನಿಗೆ ಎಂಟೋ ಹತ್ತೋ ಇರಬೇಕು. ಶಾಲೆಯಲ್ಲಿ ಹುಡುಗರು ಕೊಡುತ್ತಿದ್ದ ಹಿಂಸೆಯನ್ನು ನೆನಸಿಕೊಂಡು ಮೌನವಾಗಿ ಅಳುತ್ತ ಕಣ್ಣು ಮುಚ್ಚಿಮಲಗಿಕೊಂಡಿದ್ದ. ತನಗೆ ಯಾರೂ ಇಲ್ಲ ಎಂಬ ಭಾವನೆ ಮನಸ್ಸಿನಲ್ಲಿ ಹೊಗೆಯಾಡುತ್ತಿತ್ತು. ರಾತ್ರಿ ಹತ್ತುಗಳಿಗೆ ಆಗಿದ್ದಿರಬಹುದು. ಅವನ ತಾಯಿ ಮೆಲ್ಲನೆ ದೀಪ ಹಿಡಿದು ಅವನು ಮಲಗಿದ್ದಲ್ಲಿಗೆ ಬಂದಳು. ಇದು ತಿಳಿದು ಸುಬ್ಬ ಕಣ್ಣನ್ನು ಇನ್ನಷ್ಟು ಬಲವಾಗಿ ಮುಚ್ಚಿಕೊಂಡ. ಅವಳು ಹತ್ತಿರ ಬಂದವಳು ದೀಪವನ್ನು ಕೆಳಕ್ಕಿಟ್ಟು ಅವನ ಮುಖವನ್ನೇ ನೋಡುತ್ತ ನಿಂತಳು. ನಿದ್ದೆ ಬಂದಿರಬಹುದೆಂದು ತಿಳಿದು,

"ಅಯ್ಯೋ ಕಂದಾ, ನೀನು ಏಕಾದರೂ ಹುಟ್ಟಿಕೊಂಡೆಯೋ. ಹೊಟ್ಟೆಗೆ ಸರಿಯಾಗಿ ಒಂದು ತುತ್ತು ಊಟ ಹಾಕಲಿಲ್ಲ. ಒಂದು ಒಳ್ಳೆಯ ಮಾತು ಕೂಡಾ ಆಡಲಿಲ್ಲ. ದೇವರೇ, ನನಗೇಕೆ ಸಾವು ಬಾರದು" ಎಂದು ಅಳ ತೊಡಗಿದಳು.

ಅಷ್ಟು ಮೃದುವಾಗಿ ಮಾತಾಡಿದ್ದನ್ನು ಕೇಳಿ ಸುಬ್ಬನ ಹೃದಯ ಕರಗಿ ಹೋಯಿತು. ಅವನೂ ಬಿಕ್ಕಿಬಿಕ್ಕಿ ಅಳತೊಡಗಿದ. ಆಗ ಅವಳು ಅವನ ಹತ್ತಿರ ಬಂದು ಕುಳಿತು ತಲೆಯನ್ನು ನೇವರಿಸುತ್ತ 'ಮಗೂ, ನಿನ್ನನ್ನು ದೇವರೇ ಕಾಪಾಡಬೇಕು.' ಎಂದು ಹೇಳುತ್ತ ಅವನು ನಿದ್ದೆ ಮಾಡುವ ತನಕವೂ ಅಲ್ಲೇ ಇದ್ದು ಹೊರಟು ಹೋಗಿದ್ದಳು. ಇದು ಬಹಳ ವರ್ಷಗಳ ಹಿಂದೆ. ಅದನ್ನು ಯೋಚಿಸಿದಾಗ ಸುಬ್ಬನ ಮನಸ್ಸು ಮತ್ತೆ ಆದ್ರ್ರವಾಗಿ ಕೊರಳು ಬಿಗಿದಂತೆ ಆಯಿತು.

ಆಮೇಲೆ ಅವಳು ಕುಡಿಯುವುದನ್ನು ಕಲಿತಳು. ಹಾಳಾದಳು. ಮತ್ತೆ ಈ ವಾತ್ಸಲ್ಯದ ಅಮೃತ ಸುಬ್ಬನನ್ನು ಸೋಕಲಿಲ್ಲ. ಆ ಕಾಲದಲ್ಲಿ ರಾಮಚಂದ್ರನ ಸ್ನೇಹ ದೊರೆಯದೆ ಹೋಗಿದ್ದರೆ ಸುಬ್ಬ ಏನಾಗುತ್ತಿದ್ದನೋ!

ತಾಯಿ ಸತ್ತ ಮೇಲೆ ಸುಬ್ಬ ಅನಾಥನಾದ. ಅವನ ಸೋದರ ಮಾವ ಹಾಲಾಡಿ ಸಣ್ಣಪ್ಪ ಬಂದು ಸುಬ್ಬನನ್ನು ತನ್ನೂರಿಗೆ ಕರೆದುಕೊಂಡು ಹೋದ.

ಹಾಲಾಡಿ ಸಣ್ಣಪ್ಪ ಮಾರಣಕಟ್ಟೆ ಮೇಳದಲ್ಲಿ ಮುಖ್ಯ ಪಾತ್ರಧಾರಿ.

ಮಳೆಗಾಲದಲ್ಲಿ ಊರು, ಬೇಸಾಯ. ಕೊಯ್ಲು ಮುಗಿದ ಮೇಲೆ ಮೇಳ; ಊರೂರು ಸುತ್ತಿ ಭಾಗವತರಾಟಗಳನ್ನು ಆಡಿ ಅಷ್ಟು ಸಂಪಾದನೆ ಮಾಡಿ ಕೊಂಡು ಮಳೆಗಾಲ ಶುರುವಾಗುವಷ್ಟರಲ್ಲಿ ಊರು ಸೇರುವುದು; ಇದು ಸಣ್ಣಪ್ಪನ ಬದುಕು. ಸುಬ್ಬನನ್ನು ಸಣ್ಣಪ್ಪ ಮೇಳಕ್ಕೆ ಸೇರಿಸಿದ. ಸುಬ್ಬ ಮೇಳದಲ್ಲಿ ಕೋಡಂಗಿ ವೇಶದಿಂದ ಹಿಡಿದು ಬಾಲಕೃಷ್ಣನ ವೇಷಕ್ಕೆ ಏರಿ ಸಣ್ಣ ಪುಟ್ಟ ವೇಷಗಳನ್ನು ಹಾಕುತ್ತ ಕೊನೆಗೆ ಹಾಸ್ಯಗಾರನಾಗಿ ಪ್ರಖ್ಯಾತನಾದ.

ಮೇಳದವರ ಬಾಳು ಕ್ರಮವಿಲ್ಲದ್ದು. ಇವತ್ತು ಹಾಲಾಡಿಯಾದರೆ ನಾಳೆ ಶಂಕರನಾರಾಯಣ, ನಾಡಿದ್ದು ಬಸರೂರು. ರಾತ್ರಿಯೆಲ್ಲ ನಿಶಾಚರರ ಹಾಗೆ ವೇಷ ಕಟ್ಟಿ ಕುಣಿಯುವುದು, ಹಗಲಿನಲ್ಲಿ ನಿದ್ರೆ. ಆಹಾರ ವಿಹಾರ ಯಾವದ ರಲ್ಲೂ ನಿಯಮವಿಲ್ಲ. ಸಹಜವಾಗಿಯೇ ಕುಡಿತ ವ್ಯಭಿಚಾರಗಳ ದುರಭ್ಯಾಸ ಅಂಟಿಕೊಳ್ಳುತ್ತದೆ. ಅದರಿಂದ ತಪ್ಪಿಸಿಕೊಂಡವರು ಬಹಳ ವಿರಳ. ಮೇಳ ದವರು ಎಂದರೆ ಆಚಾರ ಕೆಟ್ಟವರು, ನೀತಿ ಇಲ್ಲದವರು ಅಂತ ಎಲ್ಲರೂ ತಿಳಿ ಯುತ್ತಿದ್ದರು.

ಮೊದಮೊದಲು ಸುಬ್ಬ ಮಾವನ ಹೆದರಿಕೆಯಿಂದ ಕೀರ ಹೊಲಸು ಬಾಳಿಗೆ ಇಳಿಯಲಿಲ್ಲ. ಮಾವನೂ ಕೂಡಾ "ಅನಾಥ ಹುಡುಗ; ಸಭ್ಯನಾಗಿ ಗೃಹಸ್ಥನಾಗಿ ಬದುಕಬೇಕು. ಒಂದು ಮದುವೆ ಮಾಡಿಸಬೇಕು." ಎನ್ನುತ್ತಿ ರುವಾಗಲೇ ಅಕಸ್ಮಾತ್ತಾಗಿ ತೀರಿಕೊಂಡ

ಅಂದಿನಿಂದ ಸುಬ್ಬ ಲಂಗರಿಲ್ಲದ ಹಡಗಿನಂತೆ ಮನ ಬಂದತ್ತ ಅಲೆಯ ತೊಡಗಿದ. ಸಿಕ್ಕಾಪಟ್ಟೆ ಕುಡಿಯುವುದನ್ನು ಕಲಿತ. ಒಂದು ಮೇಳದಲ್ಲಿ ನಿಲ್ಲದೆ ಒಂದರಿಂದ ಒಂದಕ್ಕೆ ಜಿಗಿದ. ಈ ವರ್ಷ ಮಾರಣಕಟ್ಟೆ ಮೇಳ; ಮುಂದಿನ ವರ್ಷ ಸೌಕೂರು ಮೇಳ; ಮತ್ತೊಂದು ವರ್ಷ ಮಂದರ್ತಿ ಮೇಳ- ಹೀಗೆ.

ಜೊತೆಗೆ ಪ್ರಾಯ ಬಂದ ಮೇಲೆ ವ್ಯಭಿಚಾರಕ್ಕೂ ಶುರುವಾಯಿತು. ಮಂದರ್ತಿಯ ಪುಟ್ಟಯ್ಯ ಹೆಣ್ಣು ಕೊಡಲು ಬಂದಿದ್ದ. ಆಗ ಸುಬ್ಬ ಮದುವೆ ಒಲ್ಲೆನೆಂದ ಆಮೇಲೆ ಹೆಣ್ಣು ಸಿಕ್ಕಲಿಲ್ಲ. ಹೀಗಾಗಿ ಹೋದ ಹೋದ ಊರಿನಲ್ಲಿ ಸೂಳೆಯರನ್ನು ಹುಡುಕಿಕೊಂಡು ಹೋಗುವುದು; ಇದ್ದ ದುಡ್ಡೆಲ್ಲ ಖರ್ಚು ಮಾಡುವುದು; ಮಳೆಗಾಲದಲ್ಲಿ ಸಾಲ, ಬೇಸಗೆಯಲ್ಲಿ ದುಡಿತ, ಖರ್ಚು.

ಎಷ್ಟೋ ಜನ ಸೂಳೆಯರನ್ನು ಕಂಡಿದ್ದರೂ ಅವನಿಗೆ ಗಂಗೊಳ್ಳಿಯ

ಗಂಗೆಯಂಥವಳು ಇನ್ನೆಲ್ಲೂ ಸಿಕ್ಕಲಿಲ್ಲ. ಅವಳು ಸುಬ್ಬನನ್ನು ಮೆಚ್ಚಿ ಬಂದವಳು. ಗಂಗೊಳ್ಳಿಯಲ್ಲಿ ಒಂದು ಸಲ, ಸುಬ್ಬನಿದ್ದ ಮಂದರ್ತಿ ಮೇಳ ಒಂದು ಹದಿನೈದು ದಿವಸ ಬೀಡು ಬಿಟ್ಟಿತು. ಸುತ್ತುಮುತ್ತಲ ಪ್ರದೇಶದಲ್ಲಿ ಎಂಟು ಹತ್ತು ಆಟಗಳು ಆದುವು. ಗಂಗೊಳ್ಳಿಯಲ್ಲೇ ಎರಡು ಆಟಗಳು ಆದುವು.

ಎರಡನೆಯ ಆಟದಲ್ಲಿ ಸುಬ್ಬನ ಹಾಸ್ಯ ಬಹು ಪಸಂದಾಗಿ ಆಯಿತು. ದ್ರೌಪದೀ ಪ್ರತಾಪ ಎಂಬ ಪ್ರಸಂಗ ನಡೆಯಬೇಕಿತ್ತು. ಒಳಗೆ ಮುಖ್ಯ ಪಾತ್ರಧಾರಿ ಅಣ್ಣಪ್ಪನಿಗೂ ಮೇಳದ ಯಜಮಾನ ಕುಪ್ಪಯ್ಯನಿಗೂ ಜಗಳ. ಆಟ ಶುರುವಾಗಿತ್ತು. ಜಗಳ ಮುಗಿಯಲಿಲ್ಲ. ಯಜಮಾನ ಸುಬ್ಬನಿಗೆ ಶರಣು ಬಂದು 'ಏನಾದರೂ ಮಾಡಿ ಮರ್ಯಾದೆ ಉಳಿಸು, ಮಾರಾಯ' ಎಂದ. ಸುಬ್ಬನ ಹಾಸ್ಯಕ್ಕೆ ಬೇಕಾದ್ದಕ್ಕಿಂತ ಹೆಚ್ಚು ಅವಕಾಶ ಸಿಕ್ಕಿತು. ಅಂದು ನೆರೆದ ಸಭಿಕರೆಲ್ಲ ಹಾಸ್ಯ ಪಸಂದಾಯಿತು ಎಂದರು. ಕೊನೆಗೂ ಜಗಳ ಬಗೆಹರಿದು ಮುಖ್ಯ ಪಾತ್ರ ಬರುವಷ್ಟರಲ್ಲೇ ಸುಬ್ಬ ತನ್ನ ಜಯಭೇರಿ ಹೊಡೆದಿದ್ದ.

ಅಂದೇ ಗಂಗೆ ಸುಬ್ಬನಿಗೆ ಮನಸೋತಳು. ಗಂಗೆ ಜಾತಿಯಿಂದಲೇ ವೇಶ್ಯೆ. ಬಸರೂರಿನ ಸುಪ್ರಸಿದ್ಧ ವೇಶ್ಯೆ ಸರಸ್ವತಮ್ಮನ ಮಗಳು. ಗಂಗೊಳ್ಳಿಗೆ ಬಂದು ತನ್ನ ವೃತ್ತಿಯನ್ನು ನಡಸುತ್ತಿದ್ದಳು. ಬಹಳ ಲಕ್ಷಣವುಳ್ಳ ಹೆಂಗಸು. ಬೆಡಗು ಬಿನ್ನಾಣಕ್ಕಿಂತ ಹೆಚ್ಚಾಗಿ ತನ್ನ ಗುಣದಿಂದ ಗಿರಾಕಿಗಳ ಮನಸ್ಸನ್ನು ಸೆಳೆಯುತ್ತಿದ್ದಳು. ಸುಂದರವಾದ ಕಂಠ. ಅಷ್ಟು ಸಂಗೀತವನ್ನು ಕೂಡಾ ಕಲಿತಿದ್ದಳು. ಸುಬ್ಬನಿಗೆ ಅವಳು ಮನಸೋತದ್ದು ಎಲ್ಲರಿಗೂ ಆಶ್ಚರ್ಯದ ಮಾತಾಯಿತು. ಸುಬ್ಬ ಏನೂ ಅಂಥ ಸ್ಫುರದ್ರೂಪಿಯಲ್ಲ; ಬಡಕಲು ದೇಹ ಕ್ಷಾಮಗ್ರಸ್ತ ಮುಖ. ಆದರೆ ತುಂಟನಗೆ ತುಂಬಿದ ಕಣ್ಣು. ಮಾತಾಡುತ್ತಿದ್ದರೆ ತಂಬೂರಿಯನ್ನು ಮೀಟಿದ ಹಾಗೆ. ಸರಸವಾಗಿ, ಹಾಸ್ಯ ಪೂರ್ಣವಾಗಿ ತಾಸುಗಟ್ಟಲೆ ಮಾತಾಡ ಬಲ್ಲ. ಅಂತೂ ಗಂಗೆ ಒಲಿದ ಮೇಲೆ ಸುಬ್ಬನಿಗೆ ಎಲ್ಲೋ ಒಂದು ನಿಲುಗಡೆ ಸಿಕ್ಕಿದ ಹಾಗಾಯಿತು. ಮಳೆಗಾಲವೆಲ್ಲ ಗಂಗೊಳ್ಳಿಯೇ ಅವನ ಮನೆಯಾಯಿತು. ಬೇಸಗೆಯಲ್ಲಿ ಊರೂರು ಸುತ್ತುವುದು ಮೇಳದೊಡನೆ.

ಈ ನಡುವೆ ಅನೇಕ ವರ್ಷ ಅವನು ರಾಮಚಂದ್ರಶಾಸ್ತ್ರಿಯನ್ನು ನೋಡೇ ಇರಲಿಲ್ಲ. ಹಾಲಾಡಿಗೆ ಹೋದ ಮೇಲೆ ಎಲ್ಲೋ ಒಂದು ಸಲ ಕುಂಡಲಾಪುರದಲ್ಲಿ ಆಟವಾದಾಗ ಸುಬ್ಬ ಅವನನ್ನು ಕಂಡಿದ್ದನಷ್ಟೇ.

ಒಂದು ವರ್ಷ– ಅದು ಈಗ ನಾಲ್ಕು ವರ್ಷಗಳ ಹಿಂದೆ–ಮಳೆಗಾಲ ಕಳೆದು ಎಲ್ಲ ಕಡೆಯಲ್ಲೂ ಭತ್ತದ ಗದ್ದೆಗಳ ಹಚ್ಚ ಹಸುರು ತುಂಬಿದ ಕಾಲ. ಕೆರೆ ಕಾಲುವೆಗಳಲ್ಲಿ, ಗದ್ದೆ ಬಯಲಿನಲ್ಲಿ ನೀರು. ಬಾವಿ ತುಂಬಿತ್ತು, ಹೊಳೆಯಲ್ಲಿ ತುಂಬು ನೀರು. ಆ ಕಾಲದಲ್ಲಿ ಸುಬ್ಬ ಗಂಗೊಳ್ಳಿಯಲ್ಲೇ ಇದ್ದ. ಕೈಯಲ್ಲಿದ್ದ ದುಡ್ಡೆಲ್ಲ ಖರ್ಚಾಗಿತ್ತು; ದಸರಾ ಕಾಲ ಯಾವಾಗ ಬಂದೀತು, ಹಗಲುವೇಷ ಹಾಕಿಕೊಂಡು ಊರೂರು ಸುತ್ತಿ ಅಷ್ಟು ಕಾಸು ಮಾಡೇನು ಅಂತ ಸುಬ್ಬ ಕಾತರನಾಗಿದ್ದ ಕಾಲ.

ಆ ಕಾಲದಲ್ಲಿ ಗಂಗೊಳ್ಳಿಗೆ ಯಾರೋ ಅಷ್ಟು ಜನ– ಕಾಬೂಲಿನವರೋ ಕಂದಾಹಾರಿಗಳೋ ಬಂದು ಡೇರೆ ಹೊಡೆದಿದ್ದರು–ಊರ ಹತ್ತಿರ. ಅನೇಕ ವಿಧದಲ್ಲಿ ಅವರು ತಮ್ಮ ಕರಾಮತಿ ತೋರಿಸುತ್ತಿದ್ದರು. ಹಿಂಗು, ಮಣಿಸರಕು, ಇತ್ಯಾದಿ ಮಾರುವುದರ ಜೊತೆಗೆ ಜೂಜಾಟದ ಜಾಲವನ್ನೂ ಹರಡಿದ್ದರು. ಮೊದ ಮೊದಲು ಲಾಭ, ಆಮೇಲೆ ನಷ್ಟ; ಕೈಯಲ್ಲಿರುವ ದುಡ್ಡೆಲ್ಲ ತೊಳೆದು ಹೋಗುವ ವರೆಗೆ. ಆ ಕಾಬೂಲು ಕಂದಾಹಾರಿಗಳೋ ಭಯಂಕರ ಮನುಷ್ಯರು. ಗಂಡಸರಿಗಿಂತ ಹೆಂಗಸರೇ ಹೆಚ್ಚು ಭಯಂಕರ. ಅನ್ಯಾಯ ಮಾಡಿದರೂ ಉಸುರೆತ್ತುವ ಹಾಗಿರಲಿಲ್ಲ. ದುಡ್ಡು ಕಳೆದುಕೊಂಡು ಬಾಯಿಮುಚ್ಚಿಕೊಂಡು ಹೊರಟು ಹೋಗಬೇಕು.

ಅವರು ಆಡುತ್ತಿದ್ದ ಆಟಗಳಲ್ಲೆಲ್ಲ ಮೂರೆಲೆ ಆಟ ಬಹಳ ಜನರನ್ನು ಆಕರ್ಷಿಸಿತ್ತು. ಸೋಲುವುದು; ಗೆಲ್ಲುವುದು; ದುಡ್ಡು ಕಳೆದುಕೊಳ್ಳುವುದು; ದುಡ್ಡು ಪಡೆಯುವುದು–ಹೀಗೆ ಜನ ಅದಕ್ಕೆ ಪರವಶರಾಗಿ ಹೋಗಿದ್ದ ಕಾಲ. ಎಷ್ಟೋ ಜನ ಇದ್ದಬಿದ್ದ ದುಡ್ಡನ್ನೆಲ್ಲ ಕಳೆದುಕೊಂಡು 'ಪಾಪರ್' ಆದರು. ಇನ್ನು ಕೆಲವರು ಒಂದಷ್ಟು ದುಡ್ಡು ಮಾಡಿಕೊಂಡು ಎಲ್ಲವನ್ನೂ ಕಳೆದುಕೊಳ್ಳುವುದಕ್ಕೆ ಸಿದ್ಧರಾಗುತ್ತಿದ್ದರು.

ಒಂದು ಕಟ್ಟೆಯ ಮೇಲೆ ಕುಳಿತು ಅವರು ಆಟ ಆಡುತ್ತಿದ್ದರು. ಆಟ ನೋಡಲು ಬಹಳ ಮಂದಿ ನೆರೆದು ಸುತ್ತಲೂ ನಿಂತಿದ್ದರು. ಅಲ್ಲಲ್ಲಿ ಅಲೆದಾಡುತ್ತ ಸುಬ್ಬ ಆ ಕಟ್ಟೆಯ ಹತ್ತಿರ ಬಂದು ಆಟ ನೋಡುವವರ ಗುಂಪಿನಲ್ಲಿ ತಾನೂ ಸೇರಿಕೊಂಡ. ಆಟವಾಡಲು ಕುಳಿತವರಲ್ಲಿ ರಾಮಚಂದ್ರಶಾಸ್ತ್ರಿಯನ್ನು ಕಂಡು ಸುಬ್ಬನಿಗೆ ಆಶ್ಚರ್ಯವಾಯಿತು. ತನ್ನ ಕಣ್ಣನ್ನೇ ತನಗೆ ನಂಬಲು ಆಗಲಿಲ್ಲ. ಕಣ್ಣು ತಿಕ್ಕಿಕೊಂಡು ಮತ್ತೆ ನೋಡಿದ. ಹೌದು, ರಾಮಚಂದ್ರ

ಶಾಸ್ತ್ರಿಯೇ, ಸಂದೇಹವಿಲ್ಲ: ಅದೇ ಚಂಚಲವಾದ ಕಣ್ಣು; ಮನಃಸ್ಥೈರ್ಯದ ಕೊರತೆಯನ್ನು ಸೂಚಿಸುವ ಸಣ್ಣ ಮೂಗು. ಮೋಹಕವಾದ, ಸುಖದಿಂದ ಬೆಳೆದದ್ದನ್ನು ಸೂಚಿಸುವ ಮುಖ.

"ಅಬ್ಬಾ ಇವರು ಇಲ್ಲಿಗೆ ಹೇಗೆ ಬಂದರು ?" ಎಂದುಕೊಂಡ ಸುಬ್ಬ. ಶುದ್ಧ ವೈದಿಕ ಮನೆತನದವರು, ಸಭ್ಯರು, ಸದ್ಗೃಹಸ್ಥರು–ಇವರಿಗೆ ಈ ಆಟ ಏಕೆ. ತನ್ನಂಥ ಅಪ್ಪೇಪಾರಿಯಾದರೆ ಆ ಮಾತು ಬೇರೆ. ಸುಬ್ಬನಿಗೆ ನಿಜ ವಾಗಿಯೂ ಬಹಳ ದುಃಖವಾಯಿತು. ಆದರೆ ಆಟ ಮುಗಿಯುವ ವರೆಗೂ ಹಾಗೇ ಮಾತಾಡದೆ ಸುಮ್ಮನೆ ನಿಂತುಕೊಂಡ.

ಮೊದಮೊದಲು ರಾಮಚಂದ್ರಶಾಸ್ತ್ರಿ ಗೆಲ್ಲುತ್ತಿದ್ದ, ಗೆದ್ದ ದುಡ್ಡನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತಿದ್ದ. ಆಗ ಅವನ ಮುಖ ಹೊಳೆಯುತ್ತಿತ್ತು. ಆದರೆ ಸ್ವಲ್ಪ ಹೊತ್ತಾದ ಮೇಲೆ ಸೋಲುವ ಸರದಿ ಬಂತು. ಇದ್ದ ದುಡ್ಡೆಲ್ಲವೂ ಕರಗಿಹೋಯಿತು. ಬಂದ ದುಡ್ಡು, ಕೈಲಿ ಇದ್ದ ದುಡ್ಡು ಎಲ್ಲ ಕರಗಿದ ಮೇಲೆ ರಾಮಚಂದ್ರಶಾಸ್ತ್ರಿ ಎದ್ದು ಅಲ್ಲಿಂದ ಹೊರಟ. ಮುಖ ಕಪ್ಪಾಗಿತ್ತು. ಕಣ್ಣು ಕಳೆಗುಂದಿತ್ತು.

ರಾಮಚಂದ್ರಶಾಸ್ತ್ರಿ ಅತ್ತಿತ್ತ ನೋಡದೆ ಕಟ್ಟೆಯಿಂದಿಳಿದ ಕೂಡಲೇ ಸುಬ್ಬ ಅವನ ಬೆನ್ನ ಹಿಂದೆಯೇ ಹೋಗಿ ಅವನ ಬೆನ್ನನ್ನು ಮೆಲ್ಲನೆ ತಟ್ಟಿದ. ಕೂಡಲೇ ಶಾಸ್ತ್ರಿ ಹಿಂತಿರುಗಿ ನೋಡಿ ಒಂದು ಕ್ಷಣ ಕಕ್ಕಾವಿಕ್ಕಿಯಾಗಿ ಆನಂತರ,

"ಓಹೋ, ಯಾರೋ ಅಂತ ಇದ್ದೆ–ಸುಬ್ಬನೋ ?" ಎಂದು, "ಇದೇನು ಇಲ್ಲಿ ?" ಎಂದು ಕೇಳಿದ.

"ಹೌದು ಶಾಸ್ತ್ರಿಗಳೇ; ಇದೇನು ನೀವು ಇಲ್ಲಿ! ಇದು ಎಷ್ಟು ದಿನದಿಂದ ನಡೆಯುತ್ತಿದೆ ?" ಎಂದು ಕೇಳಿದ.

ಒಂದು ಕ್ಷಣ ರಾಮಚಂದ್ರಶಾಸ್ತ್ರಿ ಮಾತಾಡಲಿಲ್ಲ. ಆಮೇಲೆ

"ಸುಬ್ಬಾ, ಎಂಥ ದುರ್ಬುದ್ಧಿ ನನಗೆ ಬಂತೋ ಕಾಣೆ. ಈಗ್ಗೆ ಎಂಟು ದಿನಗಳ ಹಿಂದೆ ಗಂಗೊಳ್ಳಿಗೆ ಬಂದವ ಯಾವ ಮೋಡಿಗೋ ಸಿಕ್ಕಿಈ ಆಟಕ್ಕೆಸೋತೆ. ಆ ಸಲ ನೂರು ರೂಪಾಯಿ ಲಾಭ ಬಂತು. ಮತ್ತೆ ಎರಡು ದಿನ ಬಿಟ್ಟು ಬಂದು ಆಡಿದೆ. ಇಪ್ಪತ್ತು ರೂಪಾಯಿ ಬಂತು, ಮತ್ತೆ ಮತ್ತೆ ಬಂದೆ; ದುಡ್ಡು ಹೋಗತೊಡಗಿತು. ಹೋದ ದುಡ್ಡು ಮರಳಿ ಬರಲಿ ಅಂತ ಪುನಃ ಪುನಃ

ಆಡಿದೆ. ಎಲ್ಲ ತೊಳೆದುಹೋಯಿತು" ಎಂದ.

"ಎಂದರೆ ಒಟ್ಟಿಗೆ ಎಷ್ಟು ಹೋಯಿತು ಶಾಸ್ತ್ರಿಗಳೇ ?" ಎಂದು ಕೇಳಿದ.

"ಸುಮಾರು ಒಂದು ಸಾವಿರ."

"ಒಂದು ಸಾವಿರ! ಸಾಲ ಮಾಡಿದಿರಾ ?"

"ಹೌದು."

"ಯಾರಿಂದ ?"

"ಶೀನ ಭಂಡಾರಿಯಿಂದ."

"ಅಯ್ಯೋ ದೇವರೆ, ಆ ಶನೇಶ್ವರನ ಕೈಗೆ ಸಿಕ್ಕಿಬಿದ್ದಿರಾ ?

"ಸಿಕ್ಕಿ ಬಿದ್ದಿದ್ದೇನೆ. ಇನ್ನು ತಪ್ಪಿಸಿಕೊಳ್ಳಲು ಯತ್ನಿಸಬೇಕು."

ಇದನ್ನು ಕೇಳಿ ಸುಬ್ಬನಿಗೆ ಬಹಳ ದುಃಖವಾಯಿತು. ಶಾಸ್ತ್ರಿ ಅನುಕೂಲಸ್ಥನೆಂದು ಸುಬ್ಬ ಬಲ್ಲ. ತಕ್ಕಷ್ಟು ಆಸ್ತಿ ಇತ್ತು. ಆದರೆ ಸಾಲ ಮಾಡಲು ಶುರು ಮಾಡಿದರೆ ?

"ಆಸ್ತಿ ಭೋಗ್ಯ ಮಾಡಿದ್ದೀರಿ ಅಲ್ಲವೇ ?"

"ಹೌದು."

"ಜೂಜಿನ ಖರ್ಚೊಂದೆಯೋ ಇನ್ನೇನಾದರೂ ಉಂಟೋ ?"

ಇನ್ನೇನು ? ಮನೆಯ ಖರ್ಚು ವಿಪರೀತ– ನಿನಗೆ ಗೊತ್ತೇ ಇದೆಯಲ್ಲ. ಬರುವವರು, ಹೋಗುವವರು; ಊಟ, ಉಪಚಾರ; ವ್ರತ, ಹೋಮ ಹವನ. ಸಾಲವಂತೂ ಬೆಳೆದಿದೆ. ಬಹಳ ಹೆದರಿಕೆಯಾಗುತ್ತಿದೆ ಸುಬ್ಬ"

ಈ ಮಾತು ಕೇಳಿ ಸುಬ್ಬನಿಗೆ ಬಹಳ ಸಿಟ್ಟು ಬಂತು.

"ಶಾಸ್ತ್ರಿಗಳೇ, ನಾನೊಂದು ಮಾತು ಹೇಳಲೋ ? ಸಿಟ್ಟು ಮಾಡಿಕೊಳ್ಳ ಬಾರದು."

"ಹೇಳು. ನೀನು ನನಗೆ ಬೇಕಾದವ. ಸಿಟ್ಟೇಕೆ ?"

"ನೋಡಿ ಶಾಸ್ತ್ರಿಗಳೇ; ನೀವು ಸಂಸಾರವಂದಿಗರು. ನನ್ನಂಥ ಬೇವಾರ್ಸಿಗಳಲ್ಲ. ನೀವು ಮತ್ತೆ ಈ ಆಟಕ್ಕೆ ಖಂಡಿತ ಕೈ ಹಾಕಬೇಡಿ, ನನ್ನಾಣೆ."

"ಇಲ್ಲ. ಇನ್ನು ಆ ಯೋಚನೆ ಮಾಡುವ ಹಾಗೇ ಇಲ್ಲ."

"ಖಂಡಿತ ಮತ್ತೆ ಆ ಯೋಚನೆ ಮಾಡಬಾರದು. ನೀವು ಹಾಳಾಗುವುದನ್ನು ನಾನು ನೋಡಲಾರೆ," ಎಂದು ಸುಬ್ಬ ಕಂಬನಿಯನ್ನು ಬರಸಿಕೊಂಡ. ಶಾಸ್ತ್ರಿಗೂ ಅಳು ಬರುವ ಹಾಗೆ ಆಗಿತ್ತು.

ಮತ್ತೆ ಸುಬ್ಬ ರಾಮಚಂದ್ರಶಾಸ್ತ್ರಿಯನ್ನು ಕಂಡದ್ದು ಎರಡು ವರ್ಷಗಳ ಮೇಲೆ. ಆಗ ಸುಬ್ಬ ಬಯಲಾಟದ ಕಾಲ ಮುಗಿದು ಹೋಳದವರು ಮನೆಗೆ ಹಿಂತಿರುಗುವಾಗ ಕೆಟ್ಟ ಕಾಹಿಲೆ ಅಂಟಿಸಿಕೊಂಡು ನರಳುತ್ತಿದ್ದ. ಗಂಗೊಳ್ಳಿಯ ಗಂಗೆಗೆ ಮುಖ ತೋರಿಸಲು ನಾಚಿ ತನ್ನ ಹುಟ್ಟಿದೂರಾದ ಕುಂಡಲಾಪುರಕ್ಕೆ ಹೋದ.

ಪಾಳು ಬಿದ್ದಿದ್ದ ತನ್ನ ಮನೆಗೇ ಹೋಗಿ ಅಲ್ಲಿ ಇಲ್ಲಿ ಕೊಂಚ ದುರಸ್ತಿ ಮಾಡಿಸಿಕೊಂಡು ಛಾವಣಿಯನ್ನು ಹೊದೆಸಿ ಅಲ್ಲೇ ಮಳೆಗಾಲವನ್ನು ಕಳೆಯುವುದು ಎಂದು ನಿರ್ಧರಿಸಿದ. ಇದ್ದ ಅಲ್ಪ ಸ್ವಲ್ಪ ಹಣ ಕೆಲವು ದಿನಗಳಲ್ಲೇ ಕರಗಿತು. ಕಾಹಿಲೆ ಬೇರೆ ವಾಸಿಯಾಗಲಿಲ್ಲ. ಆಗ ಮತ್ತೆ ರಾಮಚಂದ್ರನೇ ಸುಬ್ಬನ ಸಹಾಯಕ್ಕೆ ಬಂದ. ಅಕ್ಕಿ ಕೊಟ್ಟ, ದುಡ್ಡು ಕೊಟ್ಟ. ಒಳ್ಳೆ ಪಂಡಿತರಿಂದ ಔಷಧಿ ಮಾಡಿಸಿಕೊಟ್ಟ. ಸುಬ್ಬನಿಗೆ ನಿಧಾನವಾಗಿ ಗುಣವಾಗುತ್ತ ಶ್ರಾವಣ ಮಾಸದ ಹೊತ್ತಿಗೆ ಸಂಪೂರ್ಣ ವಾಸಿಯಾಯಿತು.

ಕುಂಡಲಾಪುರದಲ್ಲಿದ್ದಾಗ ಸುಬ್ಬನಿಗೆ ರಾಮಚಂದ್ರಶಾಸ್ತ್ರಿಯ ದುರವಸ್ಥೆಯ ಸಂಪೂರ್ಣ ಪರಿಚಯವಾಯಿತು. ಮನೆಯಲ್ಲಿ ಯದ್ವಾತದ್ವಾ ಖರ್ಚು ಯಥಾ ಪ್ರಕಾರ ನಡೆಯುತ್ತಲೇ ಇತ್ತು. ತಾಯಿ ಕಾಹಿಲೆ ಬಿದ್ದಿದ್ದರು. ಶೀನ ಭಂಡಾರಿಯ ಸಾಲ ಶಾಸ್ತ್ರಿಯ ಕುತ್ತಿಗೆ ವರೆಗೆ ಬಂದಿತ್ತು. ದುಡ್ಡು ಬೇಕು ಅಂತ ಅವ ವರಾತ ಮಾಡುತ್ತಿದ್ದ. ಶಾಸ್ತ್ರಿ 'ಸ್ವಲ್ಪ ಅವಕಾಶ ಕೊಡು' ಎಂದು ಕೇಳುತ್ತಿದ್ದ. ಇನ್ನೇನು ಸ್ವಲ್ಪ ಸಮಯದಲ್ಲೇ ಶಾಸ್ತ್ರಿಯ ಆಸ್ತಿಯೆಲ್ಲ ಶೀನ ಭಂಡಾರಿಗೆ ಸೇರುತ್ತದೆಂಬುದರಲ್ಲಿ ಏನೂ ಸಂದೇಹವೇ ಇರಲಿಲ್ಲ. ಇಂಥ ಸಮಯದಲ್ಲೂ ತನಗೆ ಇಷ್ಟು ಹಣ ಖರ್ಚು ಮಾಡಿದನಲ್ಲ ಎಂದು ಸುಬ್ಬನಿಗೆ ದುಃಖವಾಯಿತು. ಆದರೆ ಬೇರೆ ಉಪಾಯವಿರಲಿಲ್ಲ. ಅವನು ಬದುಕಬೇಕಲ್ಲ?

ಗಂಗೊಳ್ಳಿಗೆ ಮರಳಿ ಹೋದಾಗ ಗಂಗೆ ದೊಡ್ಡ ರಾಮಾಯಣವನ್ನೇ ಮಾಡಿದ್ದಳು. ಕೊನೆಗೂ ಸುಬ್ಬನ ಬಾಯಿಂದ ಸತ್ಯವನ್ನು ಹೊರಡಿಸಿ ಚೆನ್ನಾಗಿ ಛೀಮಾರಿ ಮಾಡಿದ್ದಳು. ಅದನ್ನು ನೆನೆಸಿಕೊಂಡು ಈಗಲೂ ಸುಬ್ಬನಿಗೆ ನಗು ಬಂತು. ಒಂದು ಹತ್ತು ದಿವಸ ಅವಳು ಅವನನ್ನು ಹತ್ತಿರವೂ ಸೇರಿಸದೆ ಸತಾಯಿಸಿದಳು. ಆಮೇಲೆ ಎಲ್ಲವೂ ಸರಿಹೋಯಿತು

ಅವನು ಮತ್ತೆ ಅದೇ ವರ್ಷ ಮಾಘ ಮಾಸದ ಸಮಯಕ್ಕೆ ಕುಂಡಲಾ

ಪುರಕ್ಕೆ ಹೋದಾಗ ದಿವಾಳಿ ತೆಗೆದಿದ್ದ. ತಾಯಿ ತೀರಿ ಹೋಗಿದ್ದಳು. ಹೆಂಡತಿ ಹಡೆದಿದ್ದಳು. ಆಸ್ತಿಯೆಲ್ಲ ಮುಳುಗಿ ಹೋಗಿ ಇನ್ನೂ ಅಷ್ಟು ಸಾಲ ಉಳಿದಿತ್ತು. ಭಂಡಾರಿ ಜೈಲಿಗೆ ಕಳಿಸುತ್ತೇನೆಂದು ಬೆದರಿಕೆ ಹಾಕಿ ವಾರಂಟೂ ಹೊರಡಿಸಿದ್ದ.

ಘಟ್ಟದ ಮೇಲೆ ಹೋಗಿ ಹೇಗಾದರೂ ಈ ವಾರಂಟಿನಿಂದ ಬಚಾವು ಆಗಬೇಕೆಂದು ಸೂಚಿಸಿದ್ದು ಸುಬ್ಬನೇ. ತಲೆಯ ಮೇಲೆ ಬೆಟ್ಟವೇ ಬಿದ್ದ ಹಾಗೆ ಆಗಿ ದಿಗ್ಭ್ರಾಂತನಾಗಿ ಶಾಸ್ತ್ರಿ ಆಗ ಕೈ ಕಟ್ಟಿ ಕೂತಿದ್ದ. ಸುಬ್ಬನೇ ಅಲ್ಲಿ ಇಲ್ಲಿ ಕೊಂಚ ಹಣ ಕೂಡಿಸಿಕೊಂಡು ಇಬ್ಬರೂ ಕಳೂರುಕಟ್ಟೆಗೆ ಹೋದರು. ಹೋಗುವ ಮೊದಲು ಸುಬ್ಬ ಎಲ್ಲ ಕಥೆಯನ್ನೂ ಹೇಳಿದ ಅದನ್ನೆಲ್ಲ ಕೇಳಿ ಅವಳು

"ಅಡ್ಡಿ ಇಲ್ಲ; ನಿಮಗೂ ಕೊಂಚ ಮನುಷ್ಯ ಗುಣ, ಕೃತಜ್ಞತೆ ಉಂಟು ಅಂದ ಹಾಗಾಯಿತಲ್ಲ. ಬಹಳ ಸಂತೋಷ" ಎಂದು ನಕ್ಕಿದ್ದಳು.

ಅಲ್ಲಿ ಕಂಭದಕೋಣೆಯ ಮುಸಾಫಿರ್‌ಖಾನೆಯಲ್ಲಿ ಚಳಿಯಿಂದ ನಡುಗುತ್ತ ಮಲಗಿದ್ದ ಸುಬ್ಬ ಅದನ್ನೆಲ್ಲ ನೆನಸಿಕೊಂಡು "ಗಂಗೆಯಂಥ ಹೆಂಗಸು ಬೇರೆ ಇಲ್ಲ" ಎಂದು ನಿಟ್ಟುಸಿರು ಬಿಟ್ಟ. ಅವನು ಹೋಗುವಾಗ ಅವಳು ನೂರು ರೂಪಾಯಿ ಕೊಡದೆ ಹೋಗದಿದ್ದರೆ ಅವರು ಕಳೂರುಕಟ್ಟೆಯಲ್ಲಿ ಅಂಗಡಿಯಿಡುವುದು ಸಾಧ್ಯವೇ ಇರಲಿಲ್ಲ.

ವ್ಯಾಪಾರ ಸುಬ್ಬನಿಗೂ ತಿಳಿಯದು. ಶಾಸ್ತ್ರಿಗಂತೂ ಇನ್ನೂ ತಿಳಿಯದು. ಎರಡೇ ತಿಂಗಳಲ್ಲಿ ಊರಿಗೆ ಹೋಗಬೇಕೆಂದು ಯೋಚಿಸಿದ್ದ ಶಾಸ್ತ್ರಿಗೆ ಅಂಗಡಿ ಬಿಟ್ಟು ಹೊರಡಲು ಆಗಲೇ ಇಲ್ಲ. ತನ್ನ ಹೆಂಡತಿಗಾಗಿ ಅವನು ಕೊರಗುತ್ತಿದ್ದುದನ್ನು ಕಂಡು ಸುಬ್ಬನಿಗೆ ಬಹಳ ದುಃಖವಾಗಿತ್ತು. ಇಬ್ಬರ ಜೀವನ ಒಂದು ಅಂಗಡಿಯಿಂದ ಆಗುವುದು ಅಸಾಧ್ಯ ಎಂದು ತಿಳಿದ ಕೂಡಲೇ ಸುಬ್ಬ ಶಾಸ್ತ್ರಿ ಎಷ್ಟು ಬೇಡವೆಂದರೂ ಕೇಳದೆ ಆ ಊರನ್ನು ಬಿಟ್ಟು ಬಂದು ಮತ್ತೆ ಮೇಳ ಸೇರಲು ನಿರ್ಧರಿಸಿದ. ಅಷ್ಟು ದುಡ್ಡು ಮಿಗಿಸಿಕೊಂಡು ಬಂದು ವ್ಯಾಪಾರಕ್ಕೆ ಹಾಕಬೇಕು ಅಂತಲೂ ಮಾಡಿದ್ದ. ಕೊನೆಗೆ ಶಾಸ್ತ್ರಿ,

"ಸುಬ್ಬ, ಹೋಗುವುದಂತೂ ನಿರ್ಧರಿಸಿಯೇ ಬಿಟ್ಟೆ. ಆಗಲಿ, ಮತ್ತೆ ಯಾವಾಗ ಬರುತ್ತೀ? ಈ ವರ್ಷ ಮಳೆಗಾಲಕ್ಕೆ ಇಲ್ಲಿಗೇ ಬಂದುಬಿಡು" ಎಂದು ಹೇಳಿ ಕಳಿಸಿದ್ದ. ಸುಬ್ಬನೂ ಅದಕ್ಕೆ ಹೂಗುಟ್ಟಿದ್ದ. ಹೋಗಬೇಕೆಂ

ತಲೂ ಮಾಡಿದ್ದ. ಆದರೆ ಆ ವರ್ಷವೂ ಎಂದಿನಂತೆಯೇ ಕೈಯಲ್ಲಿ ಕಾಸು ನಿಲ್ಲಲಿಲ್ಲ. ಸುಬ್ಬ ಗಂಗೊಳ್ಳಿಯಲ್ಲಿಯೇ ಮಳೆಗಾಲ ಕಳೆದ

ಮೂರನೆಯ ವರ್ಷ ಸುಬ್ಬ ಕಳೂರುಕಟ್ಟೆಗೆ ಹೋದಾಗ ಶಾಸ್ತ್ರಿಗೆ ಸಂತೋಷವಾಯಿತು. ವ್ಯಾಪಾರವೂ ಸ್ವಲ್ಪ ಕುದುರಿತ್ತು. ಆದರೆ ಬರುವ ಬಾಕಿ ಬಹಳ ನಿಂತುಬಿಟ್ಟು ಕೈಗೆ ಕಾಸು ಹತ್ತಲಿಲ್ಲ. ತನ್ನ ಹೆಂಡತಿಯನ್ನೂ ಮಗುವನ್ನೂ ನೆನಸಿಕೊಂಡು ಸದಾ ಕೊರುಗುತ್ತಿದ್ದ. ಆಗಲೇ ಶಾಸ್ತ್ರಿ ಮತ್ತು ಸುಬ್ಬ ಎಂಟು ದಿನಗಳ ಮಟ್ಟಿಗೆ ಅಂತ ಊರಿಗೆ ಬಂದದ್ದು.

ಪುನಃ ಕಳೂರುಕಟ್ಟೆಗೆ ಹೋಗಿ ನಾಲ್ಕೈದು ತಿಂಗಳು ಕಳೆದ ಮೇಲೆ ಅವರಿಗೆ ಕೊಲ್ಲೂರಿನ ದೇವಸ್ಥಾನದ ಪಾರುಪತ್ಯಗಾರರ ಪರಿಚಯವಾದದ್ದು. ವ್ಯಾಪಾರ ಹೇಗೂ ತನಗೆ ಒಗ್ಗುವುದಿಲ್ಲ, ಬಂದಷ್ಟು ಹಣ ತೆಗೆದುಕೊಂಡು ಕೊಲ್ಲೂರು ದೇವಸ್ಥಾನದ ಗುಮಾಸ್ತ ಕೆಲಸಕ್ಕೆ ಹೋಗಬೇಕೆಂದು ಶಾಸ್ತ್ರಿ ನಿರ್ಧರಿಸಿದ.

" ನಾನು ಇಲ್ಲಿ ನಿಂತು ಬಾಕಿ ವಸೂಲಿ ಮಾಡಿಕೊಂಡು ಕೊಲ್ಲೂರಿಗೆ ಬರುತ್ತೇನೆ. ನೀನು ಊರಿಗೆ ಹೋಗಿ ನನ್ನ ಹೆಂಡತಿಯನ್ನು ಅಲ್ಲಿಗೆ ಕರೆದು ಕೊಂಡು ಬಾ " ಎಂದ ಶಾಸ್ತ್ರಿ.

" ನೀವೇ ಹೋಗಬಹುದಲ್ಲ. ಅದೇ ಒಳ್ಳೆಯದು " ಎಂದಿದ್ದ ಸುಬ್ಬ.

" ಇಲ್ಲ ಸುಬ್ಬ, ನಾನು ಹೋದರೆ ಬಾಕಿ ವಸೂಲಾಗುವುದಿಲ್ಲ ವಸೂಲಾ ಗದೆ ಹೊರಡುವ ಹಾಗಿಲ್ಲ."

" ಬಾಕಿ ಎಲ್ಲ ವಸೂಲಾದ ಮೇಲೆ ನೀವೇ ಹೋಗಿ. ಅದೇ ಸರಿ " ಎಂದು ಸುಬ್ಬ ಮತ್ತೆ ಹೇಳಿದ.

" ಹಾಗೆಲ್ಲ ಹೇಳಬೇಡ ಸುಬ್ಬ. ನೀನು ನನಗೆ ತಮ್ಮನ ಹಾಗೆ. ಅವಳಿಗೆ ಅಲ್ಲಿ ಬಹಳ ಕಷ್ಟವಾಗಿದೆ. ಎರಡೇ ತಿಂಗಳಲ್ಲಿ ಹೋಗುತ್ತೇನೆಂದು ಬಂದಿದ್ದೆ. ನೋಡು, ಆಗಲೇ ನಾಲ್ಕೈದು ತಿಂಗಳು ಕಳೆಯಿತು. ನನಗೇಕೋ ಭಯ ವಾಗುತ್ತದೆ. ಈ ಒಂದು ಕೆಲಸ ನಿನ್ನಿಂದ ಆಗಲೇ ಬೇಕು. ಅದೂ ಅಲ್ಲದೆ ನಾನು ಬಹಿರಂಗವಾಗಿ ಅಲ್ಲಿಗೆ ಹೋಗುವುದು ಕಷ್ಟ. ಶೀನ ಭಂಡಾರಿಯ ವಾರೆಂಟು ಇದ್ದೇ ಇದೆ. ಯಾವ ಸಮಯಕ್ಕೆ ಏನೋ. ಅಂತೂ ನೀನು ನಾಳೆಯೇ ಹೊರಡು " ಎಂದು ಶಾಸ್ತ್ರಿ ಬಲವಂತ ಮಾಡಿದ.

ಸುಬ್ಬ ಒಪ್ಪಿಕೊಂಡ. " ಒಪ್ಪಿಕೊಂಡು ಬಂದು ಹೀಗೆ ನಂಬಿಕೆಗೆ

ದ್ರೋಹ ಮಾಡಿದೆನಲ್ಲ !" ಎಂದು ಸುಬ್ಬ ಜಗಲಿಗೆ ತನ್ನ ತಲೆಯನ್ನು ಚಚ್ಚಿಕೊಂಡ. ಈ ಎಲ್ಲ ಕಥೆಯೂ ಜ್ಞಾಪಕ ಬಂದು ತನ್ನಿಂದ ಇಂಥ ದೊಡ್ಡ ಪ್ರಮಾದ ಆದ ಮೇಲೆ ರಾಮಚಂದ್ರಶಾಸ್ತ್ರಿಗೆ ಹೇಗೆ ಮುಖ ತೋರಿಸಲಿ, ಎಂದು ಹಲುಬಿದ.

ಪದ್ಮಾವತಮ್ಮ ಏನಾದಳು ? ಯಾವ ಪಾಪಿಗಳ ಕೈಗೆ ಸಿಕ್ಕಿದಳೋ. ಯಾವುದೂ ತಿಳಿಯದು. ಬೆಳಗ್ಗೆ ಎದ್ದು ಸುತ್ತಮುತ್ತೆಲ್ಲ ವಿಚಾರಿಸಬೇಕು. ಎಂದುಕೊಂಡ.

ತನ್ನ ಎರಡು ವರ್ಷದ ಮಗುವನ್ನು ಬಿಟ್ಟು ಬರಲಾರದೆ ಅವಳು ಅತ್ತದ್ದು ನೆನಪಿಗೆ ಬಂದು ಸುಬ್ಬನಿಗೆ ಕರುಳು ಕಿವುಚಿದಂತಾಯಿತು.

ತನ್ನಂಥವರು ಈ ಜಗತ್ತಿನಲ್ಲಿ ಇರಬಾರದು ಎಂದುಕೊಂಡ. 'ನನ್ನಂಥ ಕುಡುಕನನ್ನು ಶಾಸ್ತ್ರಿ ನಂಬಿದ್ದು ತಪ್ಪು. ನಾನೂ ಒಬ್ಬ ಮನುಷ್ಯನೇ !' ಎಂದು ಪಶ್ಚಾತ್ತಾಪದಿಂದ ಗೋಳೋ ಎಂದು ಅಳತೊಡಗಿದ.

ಅತ್ತತ್ತು ಪಶ್ಚಾತ್ತಾಪದ ಬೆಂಕಿ ಕೊಂಚ ತಣಿದ ಮೇಲೆ ಸುಬ್ಬ ಮಲಗಲು ಯತ್ನಿಸಿದ. "ಸುಮ್ಮನೇ ಅತ್ತು ಪ್ರಯೋಜನವಿಲ್ಲ. ನಾಳೆ ಮಾಡಬೇಕಾದ ಕೆಲಸ ಬಹಳ ಇದೆ. ಇನ್ನಾದರೂ ನನ್ನ ಮನುಷ್ಯತ್ವ ತೋರಿಸಬೇಕು. ಹೇಗಾದರೂ ಮಾಡಿ ಪದ್ಮಾವತಮ್ಮನನ್ನು ಪತ್ತೆಹಚ್ಚಲೇ ಬೇಕು, ಹಚ್ಚಿಯೇ ತೀರುತ್ತೇನೆ" ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡ.

ಮೈ ಮೇಲಿನ ಅರಿವೆಯೆಲ್ಲ ಒದ್ದೆ. ನೆಲವೂ ಒದ್ದೆ. ತಲೆನೋವು.

ಕಣ್ಣು ಮುಚ್ಚಿಕೊಂಡರೂ ಸುಬ್ಬನಿಗೆ ನಿದ್ದೆ ಹತ್ತಲಿಲ್ಲ.

ಆದರೂ ಹಾಗೆಯೇ ಬೆಳಗಾಗುವುದನ್ನೇ ಕಾಯುತ್ತ ಚಳಿಯಲ್ಲಿ ನಡಗುತ್ತ, ಗುಡುಗಿನ ಮೊಳಗನ್ನು ಕೇಳುತ್ತ ಸಿಡಿಲಿನ ಆರ್ಭಟವನ್ನು ಆಲಿಸುತ್ತ ಅಲ್ಲೇ ಮಲಗಿದ್ದ.

# ೧೦

ಕೊನೆಗೂ ಬೆಳಗಾಯಿತು. ಮಳೆ ಸಣ್ಣಗೆ ಇನ್ನೂ ಹೊಯ್ಯುತ್ತಲೇ ಇತ್ತು. ಸುತ್ತ ಮುತ್ತಲಿನ ಗದ್ದೆಗಳಲ್ಲೆಲ್ಲ ನೀರು ತುಂಬಿಕೊಂಡಿತ್ತು. ಗದ್ದೆಯಿಂದ ಗದ್ದೆಗೆ ರಭಸದಿಂದ ಚಿಮ್ಮುವ ನೀರಿನ ಘೋರ್ಗರೆತ ಜಲಪಾತದಂತೆ ಸುತ್ತಲೂ ಪ್ರತಿಧ್ವನಿಸುತ್ತಿತ್ತು. ಒಂದು ಮೈಲಿ ದೂರದಲ್ಲಿದ್ದ ಸಮುದ್ರದ ಮೊರೆತ ರುದ್ರಗಂಭೀರವಾಗಿ ಮೊಳಗುತ್ತಿತ್ತು. ಬೆಳಗಾದರೂ ಹೆಚ್ಚು ಬೆಳಕಿಲ್ಲ. ಆಕಾಶದಲ್ಲಿ ದಟ್ಟವಾಗಿ ಕವಿದಿದ್ದ ಮೋಡ ಕವಿದಂತೆಯೇ ಇತ್ತು.

ಸುಬ್ಬ ಜಗಲಿಯ ಮೇಲೆ ಎದ್ದು ಕುಳಿತ. ಮೈಮೇಲಿನ ವಸ್ತ್ರ—ಉಟ್ಟ ಪಂಚೆ, ತೊಟ್ಟ ಅಂಗಿ ಮೈ ಶಾಖಕ್ಕೇ ಕೊಂಚ ಒಣಗಿತ್ತು. ಕಣ್ಣುರಿ ಇದ್ದರೂ ತಲೆ ಸಿಡಿತ ಇರಲಿಲ್ಲ. ಬೆಳಗಿನ ಝಾವದ ಹೊತ್ತಿಗೆ ಅವನಿಗೆ ಸ್ವಲ್ಪ ನಿದ್ರೆಯೂ ಬಂದಿರಬೇಕು.

ರಾತ್ರಿ ನಡೆದದ್ದು ನೆನಸಿಕೊಂಡು ಸುಬ್ಬ ಮತ್ತೆ ಮರುಗಿದ. ಈ ರೀತಿಯ ಇಕ್ಕಟ್ಟಿನ ಪ್ರಸಂಗ ಅವನ ಜೀವನದಲ್ಲಿ ಈ ಹಿಂದೆ ಎಂದೂ ಬಂದಿರಲಿಲ್ಲ. ಏನೋ ಎಲ್ಲ ಸಲೀಸಾಗಿ ನಡೆದುಕೊಂಡು ಹೋಗುತ್ತಿತ್ತು. ಕಷ್ಟ ಬರುತ್ತಿತ್ತು ಬಂದರೂ ಎಂಥ ಕಷ್ಟ ? ಹೆಂಡಕ್ಕೆ ದುಡ್ಡಿಲ್ಲದ ಕಷ್ಟ. ಗಂಗೆಗೆ ಮನಸ್ಸು ಕೆಟ್ಟಾಗ ಅಷ್ಟು ತೊಂದರೆ. ಆಟಗಳ ಕಾಲದಲ್ಲಿ ರಾತ್ರಿ ನಿದ್ದೆ ಇಲ್ಲದೆ ಆಗಾಗ ತಲೆ ನೋವು, ಹೊಟ್ಟೆನೋವು—ಇತ್ಯಾದಿ. ಅಂಥ ಕಾಲಗಳಲ್ಲೆಲ್ಲಾ ಸುಬ್ಬನ ಬುದ್ಧಿ ಬಹಳ ಚುರುಕಾಗಿ ಕೆಲಸ ಮಾಡುತ್ತಿತ್ತು. ಆದರೆ ಈಗಿನಂಥ ಫಜೀತಿ ಮಾತ್ರ ತೀರ ಹೊಸದು. ಅದನ್ನು ಹೇಗೆ ಎದುರಿಸಬೇಕೆಂಬುದೇ ಅವನಿಗೆ ಹೊಳೆಯಲಿಲ್ಲ. "ನೀನೂ ಬಹಳ ದೊಡ್ಡ ಹಾಸ್ಯಗಾರ. ಮಾಡು ಈಗ ಹಾಸ್ಯ, ನೋಡುವ" ಎಂದು ತನಗೆ ತಾನೇ ಹೇಳಿಕೊಂಡ. ಶಾಲೆಯಲ್ಲಿ ಹುಡುಗರು ನಿನ್ನನ್ನು 'ಸೆಗಣಿ ಸುಬ್ಬ' ಎಂದು ಕೂಗುತ್ತಿದ್ದದು ಸುಮ್ಮನೇ ಅಲ್ಲ. ಇದಕ್ಕೇ. ಈ ಮಂಕುತನಕ್ಕೇ" ಎಂದು ತನಗೆ ತಾನೇ ಬಯ್ದುಕೊಂಡ.

"ಛೇ, ಸುಮ್ಮನೆ ಕುಳಿತುಕೊಳ್ಳಬಾರದು" ಎಂದು ಅಲ್ಲೇ ಸ್ವಲ್ಪ ದೂರದಲ್ಲಿದ್ದ ಹಳ್ಳಕ್ಕೆ ಹೋಗಿ ಮುಖ ತೊಳೆದುಕೊಂಡು ಬಂದ. ಬರುತ್ತಾ ದಾರಿಯಲ್ಲಿ ಹೆಂಡದಂಗಡಿ ಕಡೆಗೆ ಕಣ್ಣು ಹರಿಸಿದ. ಆ ಗುಡಿಸಲ ಬಾಗಿಲು

ತೆರೆದಿರಲಿಲ್ಲ. ಯಾವ ಕಡೆಯೂ ಜನ ಸಂಚಾರವಿಲ್ಲ. ಅಂಗಡಿಯಲ್ಲಂತೂ ಜನರ ಸುಳಿವೇ ಇಲ್ಲ. “ದುಡ್ಡಿನ ಮನೆ ಹಾಳಾಯಿತು. ಈ ಪದ್ಮಾವತಮ್ಮ ಏನಾದರು ?” ಎಂದು ಮತ್ತೆ ತಲೆ ಕೆರೆದುಕೊಂಡ.

ಮುಸಾಫಿರ್‌ಖಾನೆಯಲ್ಲಿ ಬಂದು ಕುಳಿತ. ಹೊಟ್ಟೆ ಖಾಲಿಯಾಗಿತ್ತು; ಅಸಾಧ್ಯ ಹಸಿವು. ಕೈಯಲ್ಲಿ ಒಂದು ಕಾಸೂ ಇಲ್ಲ. ಆ ಊರಿನಲ್ಲಿ ಅವನಿಗೆ ಪರಿಚಯದವರು ಯಾರೂ ಇರಲಿಲ್ಲ ಇದ್ದಿದ್ದರೆ ? ಇತ್ತ ತಲೆಯೂ ಖಾಲಿಯಾದ ಹಾಗೇ ಆಗಿತ್ತು. ಯಾವ ಉಪಾಯವೂ ಸೂಚಿಸುತ್ತಿರಲಿಲ್ಲ.

ಹಾಗೇ ಕುಳಿತಿದ್ದ. ಆಗಾಗ ಎದ್ದು ಹೆಂಡದಂಗಡಿಯ ಕಡೆಗೆ ಹೋಗಿ ನೋಡಿ ಬರುತ್ತಿದ್ದ. ಅಂಗಡಿಯ ಬಾಗಿಲು ತೆರೆಯಲೇ ಇಲ್ಲ. ಹೀಗೆ ಎರಡು ಮೂರು ಗಳಿಗೆ ಕಳೆಯಿತು. ಹೊಟ್ಟೆ ಹಸಿವು ಹೆಚ್ಚುತ್ತಿತ್ತು. ಕೂತು ಕೂತು ಬೇಸರ ಹಿಡಿದಿತ್ತು. ಪದ್ಮಾವತಿಯಮ್ಮ ಎಲ್ಲಿ ಹೋದರು ಅಂತ ಅಲ್ಲಿ ಇಲ್ಲಿ ವಿಚಾರಿಸಬೇಕಾಗಿತ್ತು. ಈ ಹಾಳಾದ ಹೆಂಡದಂಗಡಿಯವ ಬಾಗಿಲು ತೆರೆಯ ಬಾರದೆ ? ಅವನು ಹಗಲೆಲ್ಲ ಏಳುವುದೇ ಇಲ್ಲವೇನೋ. ಸಂಜೆಯಾದ ಮೇಲೆ ಹೆಂಡದ ಗಡಿಗೆಯೊಳಗಿಂದ ಉದಯವಾಗುತ್ತಾನೋ ಏನೋ ಎಂದುಕೊಂಡ.

ಅಬ್ಬಾ, ಅಂಗಡಿಯ ಬಾಗಿಲು ತೆರೆದಿರಬೇಕು. ಜೋಪಡಿಯ ಬಾಗಿಲು ಅರ್ಧ ತೆರೆದಿರುವಂತೆ ದೂರದಿಂದ ಕಂಡಿತು. ಹತ್ತಿರ ಹೋದ. ಬಾಗಿಲೇನೋ ತೆರೆದಿತ್ತು. ಆದರೆ ಒಳಗೆ ಯಾರೂ ಇರಲಿಲ್ಲ.

“ಎದುರಿಗಿದ್ದ ಕಾಲು ಹಲಗೆಯ ಮೇಲೆ ಕುಳಿತುಕೊಳ್ಳೋಣ. ಅಂಗಡಿಯವ ಬಂದಾನು” ಎಂದು ಕುಳಿತುಕೊಂಡ. ಕುಳಿತುಕೊಂಡಾಗ ದುಡ್ಡು ಇಲ್ಲೇ ಎಲ್ಲಾದರೂ ಬಿದ್ದಿರಬಹುದೋ ಏನೋ ಅಂತ ಮತ್ತೆ ಸುತ್ತಲೂ ದೃಷ್ಟಿ ಹರಿಸಿದ. ಹಲಗೆಯ ಕೆಳಗೆ ಬಗ್ಗಿ ನೋಡಿದ. ಎಲಾ, ಅದೇನದು ? ಕೆಸರಲ್ಲಿ ಏನೋ ಹೊಳೆಯುತ್ತಿತ್ತು. ಬಾಗಿ ಎತ್ತಿಕೊಂಡ; ಅದೊಂದು ನಾಲ್ಕಾಣೆ ಪಾವಲಿ. ಸುಬ್ಬನಿಗೆ ಆ ನಾಲ್ಕಾಣೆ ನೋಡಿ ಬಹಳ ಸಂತೋಷ ವಾಯಿತು. ಹಾಗೇ ಅದನ್ನು ಎತ್ತಿ ಕಿಸೆಯಲ್ಲಿಟ್ಟುಕೊಂಡು ಮತ್ತೂ ಹುಡುಕಿದ. ಇನ್ನೂ ಎರಡಾಣೆ ಸಿಕ್ಕಿತು. ಒಟ್ಟು ಆರಾಣೆ ! ಅಡ್ಡಿಯಿಲ್ಲ. ಈ ಅಂಗಡಿಯವ ದರೋಡೆ ಮಾಡಿ ಇಷ್ಟಾದರೂ ಕಿಸೆಯಲ್ಲಿ ಬಿಟ್ಟಿದ್ದನಲ್ಲ, ಬಹಳ ಧರ್ಮಾತ್ಮ ಎಂದುಕೊಂಡ. ಮತ್ತೆ ಒಂದು ಕಾಸೂ ಅಲ್ಲಿ ಸಿಕ್ಕಲಿಲ್ಲ.

ಸ್ವಲ್ಪ ಹೊತ್ತಿನಲ್ಲೇ ಹೆಂಡದಂಗಡಿಯೊಡೆಯ ಜಟ್ಟಪ್ಪ ಒಂದು ಚೆಂಬಿ

ನಲ್ಲಿ ನೀರು ತೆಗೆದುಕೊಂಡು ಬಂದ. ಬಂದವನೇ " ಯಾರು ಸ್ವಾಮಿ, ನೀವು? ಏನು ಕೆಲಸ ಆಗ ಬೇಕಿತ್ತು ? " ಎಂದು ಕೇಳಿದ.

ಬಹಳ ದಪ್ಪವಾದ, ಎದೆ ನಡುಗಿಸುವಂಥ ಧ್ವನಿ ಬಯಲಾಟದಲ್ಲಿ ರಾಕ್ಷಸವೇಷದವನು ಮಾತಾಡುವಂತೆ ಮಾತಾಡುತ್ತಿದ್ದ. ಬಹಳ ಎತ್ತರವಾದ ಆಳು ಆರಡಿಗಿಂತ ಒಂದಂಗುಲ ಕಡಿಮೆ ಇಲ್ಲ ಎಂದು ಸುಬ್ಬ ತನ್ನಷ್ಟಕ್ಕೆ ತಾನೇ ಹೇಳಿಕೊಂಡ. ಸೊಂಟದ ಸುತ್ತ ಸಣ್ಣ ಪಂಚೆಯೊಂದನ್ನು ಮಾತ್ರ ಸುತ್ತಿ ಕೊಂಡಿದ್ದ. ತೋಳು ಎದೆ ಕಾಲು- ಎಲ್ಲಾ ಕಡೆಗಳಲ್ಲೂ ಮಾಂಸಖಂಡಗಳು ಉಂಡುಂಡೆಯಾಗಿ ಕುಣಿಯುತ್ತಿದ್ದುವು. ಒಟ್ಟನಲ್ಲಿ ನೋಡಿದರೆ ಹೆದರಿಕೆ ಯಾಗುವ ಆಕಾರ. ಹಾಗೆಯೇ ಮಾತೂ.

" ನಾನು ಯಾರು ಅಂತ ಕೇಳ್ತೀಯೋ. ನಾನೊಂದು ಮಳ್ಳು. ನಿನ್ನೆ ರಾತ್ರಿ ಇಲ್ಲಿ ಬಂದು ಅಮಲೇರಿ ಬಿದ್ದುಕೊಂಡ ಮಂಕ " ಎಂದ ಸುಬ್ಬ.

" ಏನು, ಮತ್ತೆ ಹೆಂಡಬೇಕಾಗಿದೆಯೋ ?"

" ಹೆಂಡವಲ್ಲ ಮಾರಾಯ; ದುಡ್ಡು ಬೇಕು, ದುಡ್ಡು."

" ದುಡ್ಡು ? ಯಾವ ದುಡ್ಡು ? ಇಲ್ಲಿ ಸಿಕ್ಕುವುದು ಹೆಂಡ, ಸಾರಾಯಿ; ದುಡ್ಡಲ್ಲ " ಎಂದು ಅವನು ಗರ್ಜಿಸಿದ.

" ನಿನ್ನೆ ರಾತ್ರಿ ಇಲ್ಲೇ ನಾನು ಜ್ಞಾನ ತಪ್ಪಿ ಮಲಗಿದ್ದು ಜ್ಞಾಪಕವಿದೆ ಯಲ್ಲವೋ ? "

" ಅದೆಲ್ಲ ನೆನಪಿಟ್ಟುಕೊಳ್ಳುವುದಕ್ಕೆ ನನಗೆ ಬೇರೆ ಕೆಲಸ ಇಲ್ಲವಾ ? ಇಲ್ಲಿಗೆ ಎಷ್ಟೋ ಜನ ಬರುತ್ತಾರೆ, ಹೋಗುತ್ತಾರೆ. ಊರಿನವರನ್ನೆಲ್ಲ ನೆನಪಿಟ್ಟುಕೊಳ್ಳುವುದು ಕಷ್ಟ. ನೀವು ಯಾರೋ ಪರಸ್ಥಳದವರಿರಬೇಕು. ಅದಕ್ಕೆ ಹೀಗೆ ಮಾತಾಡುತ್ತಿದ್ದೀರಿ."

" ನಾನು ಪರಸ್ಥಳದವನಷ್ಟೇ ಅಲ್ಲ. ಪರದೇಶಿಯೂ ಹೌದು " ಎಂದು ಸುಬ್ಬ " ನಿನ್ನೆ ರಾತ್ರಿ ನಾನು ಇಲ್ಲಿ ಬಂದಿದ್ದಾಗ ಕಿಸೆಯಲ್ಲಿ ಸುಮಾರು ಹತ್ತು ರೂಪಾಯಿ ಇತ್ತು. ಮತ್ತೆ ಇಲ್ಲಿ ಎಚ್ಚರ ಬಂದಾಗ ಒಂದು ದಮಡಿಯೂ ಇರ ಲಿಲ್ಲ. ಕಳೆದು ಹೋದೀತು ಅಂತ ಸಾಹುಕಾರರೇ ತೆಗೆದಿಟ್ಟಿರಬೇಕು ಅಲ್ಲವೇ? ನಾನು ಪ್ರಯಾಣಸ್ಥ. ಆ ದುಡ್ಡು ಕೊಟ್ಟು ಬಿಡಿ " ಎಂದು ಬಹು ವಿನಯ ದಿಂದ ಕೇಳಿಕೊಂಡ.

" ಏನೋ ಯೋಗ್ಯರು ಅಂತ ಮರ್ಯಾದೆಯಿಂದ ಮಾತಾಡಿಸಿದೆ,

ನಿಮ್ಮ ಮಾತು ಕೇಳಿದರೆ ನಿಮ್ಮ ಮಂಡೆಯೇ ಸರಿಯಿಲ್ಲ, ಅಂತ ತೋರುತ್ತದೆ. ನಾನು ನಿಮ್ಮ ದುಡ್ಡು ಸುಲಿದುಕೊಂಡೆ ಅಂತ ಅಲ್ಲವೇ ನೀವು ಹೇಳೋದು ? " ಎಂದ. ಮಾತು ಬಲು ಖಾರವಾಗಿ ಬಂತು.

" ಛೆ, ಛೇ, ನಿನ್ನಂಥವರ ಮೇಲೆ ಅಂಥ ಮಾತಾಡಿದರೆ ನನ್ನ ಬಾಯಿಯಲ್ಲಿ ಹುಳು ಸುರಿಯಬೇಕು. ವಿಷಯ ಇದು. ಇಲ್ಲಿ ಬಂದಾಗ ಜೇಬಿನಲ್ಲಿ ದುಡ್ಡು ಇತ್ತು. ಎಚ್ಚರವಾದಾಗ ಇರಲಿಲ್ಲ. ಇನ್ನು ಒಂದು ಕಾಸೂ ನನ್ನ ಹತ್ತಿರ ಇಲ್ಲ. ಅದು ಏನಾಗಿರಬಹುದು ಅಂತ ಕೇಳುತ್ತಿದ್ದೇನೆ– ಅಷ್ಟೇ."

"ಅದೆಲ್ಲಾ ನನಗೇನು ಗೊತ್ತು? ಇಲ್ಲಿ ಕಳವು, ದರೋಡೆ ಯಾವುದೂ ಆದದ್ದು ನನಗೆ ನೆನಪಿಲ್ಲ. ಈ ಜಟ್ಟಪ್ಪನ ವಿಚಾರ ತಮಗೆ ತಿಳಿಯದು ಅಂತ ಕಾಣುತ್ತದೆ. ಜಟ್ಟಪ್ಪ ಅಂದರೆ ಊರಿಗೆ ಊರೇ ಗಡಗಡ ನಡುಗುತ್ತದೆ. ನೀವು ನಿನ್ನೆ ರಾತ್ರಿ ಇಲ್ಲಿಗೆ ಬಂದದ್ದು ಹೌದೋ ? "

"ಎಲಾ ಇವನ, ನಾನು ಇರುವುದು ನಿಜವೋ ಅಲ್ಲವೋ ಅಂತ ಕೂಡಾ ಇವನು ಪ್ರಶ್ನೆ ಕೇಳಬಹುದು " ಎಂದು ತನ್ನೊಳಗೆ ಯೋಚಿಸುತ್ತ ಸುಬ್ಬ,

" ಜಟ್ಟಪ್ಪಾ, ಸುಳ್ಳು ಯಾಕೆ ಹೇಳಲಿ ? ನಾನು ಹೇಳಿದ್ದೆಲ್ಲ ನಿಜವೇ. ನಾನೇನೂ ಬೆದರಿಕೆ ಹಾಕುವುದಕ್ಕೆ ಬಂದಿಲ್ಲಪ್ಪಾ; ಏನೋ ಸಾಹುಕಾರನನ್ನು ಕೇಳೋಣ– ಅಂತ ಬಂದೆ. ಸಿಟ್ಟು ಮಾಡಬೇಡ " ಎಂದ.

"ಸಿಟ್ಟೇಕೆ ಸ್ವಾಮೀ, ಯೋಚನೆ ಮಾಡಿದರೆ ನನಗೆ ನೀವು ಇಲ್ಲಿಗೆ ಬಂದದ್ದು, ಕುಡಿದದ್ದು, ದುಡ್ಡು ಕಳಕೊಂಡದ್ದು ಎಲ್ಲ ನಿಮ್ಮ ಕನಸಿನೊಳಗೇ ನಡೆದ ಹಾಗೆ ತೋರುತ್ತದೆ. ನೀವು ನಿನ್ನೆ ರಾತ್ರಿ ಆ ಮಳೆಯಲ್ಲಿ ಇಲ್ಲಿಗೆ ಬಂದ ಹಾಗೇ ನನಗೆ ತೋರುವುದಿಲ್ಲ " ಎಂದುಬಿಟ್ಟ.

ಈ ಮಾತಿಗೆ ಏನೂ ಹೇಳಲು ತೋಚದೆ ಸುಬ್ಬ ಒಂದು ಕ್ಷಣ ಅವನ ಮುಖವನ್ನು ದಿಟ್ಟಿಸಿ ನೋಡಿದ. ಕಣ್ಣಿನಲ್ಲಿ ತೋಳವೋ ಹುಲಿಯೋ ಆಡುತ್ತಿರುವ ಹಾಗೆ ಅವನಿಗೆ ಕಂಡಿತು. ಹುರಿ ಮೀಸೆಯ ಮೇಲೆ ಅವನ ಕೈ ಆಡುತ್ತಿತ್ತು. ಸುಬ್ಬನಿಗೆ ಬೆಂಕಿಯ ಮೇಲೆ ನಿಂತ ಹಾಗೆ ಆಗತೊಡಗಿತು. ಆದರೂ ಕೊಂಚ ಧೈರ್ಯ ತಂದುಕೊಂಡು,

" ಹಾಗಾದರೆ ನಾನು ಇಲ್ಲಿ ನಿನ್ನ ಮುಂದೆ ನಿಂತದ್ದು ಕೂಡಾ ಸುಳ್ಳು ಅಂತ ನಿನಗೆ ತೋರಬಹುದಲ್ಲಪ್ಪ."

"ಹೌದು. ನೀವು ಹೀಗೇ ಬಾಯಿಗೆ ಬಂದ ಹಾಗೆ ಮಾತಾಡುತ್ತ ನಿಂತರೆ ಹಾಗೂ ಆಗಬಹುದು. ಆಮೇಲೆ ಜಟ್ಟಪ್ಪ ಅಂಥವ, ಇಂಥವ ಅಂತ ದೂರಿಕೊಳ್ಳಬೇಡಿ. ನನಗೆ ಕೋಪ ಬಹಳ ಜಾಸ್ತಿ. ನಿಮ್ಮ ದುಡ್ಡು ನಾನು ಮುಟ್ಟಿಲ್ಲ; ಅದು ಎಲ್ಲಿ ಕಳೆದು ಹೋಯಿತೋ ನನಗೇನು ಗೊತ್ತು? ಸ್ವಾಮಿಯವರು ಬೇಗ ಇಲ್ಲಿಂದ ಹೊರಡುವುದು ನನಗೂ ಒಳ್ಳೇದು, ನಿಮಗೂ ಒಳ್ಳೇದು" ಎಂದ. ಮಾತು ಕೂಡ ಖಂಡಿತವಾಗಿತ್ತು. ಇನ್ನು ಇಲ್ಲಿ ನಿಂತು ಮಾತಾಡಿ ಉಪಯೋಗವಿಲ್ಲ ಎಂದು ಸುಬ್ಬನಿಗೆ ತೋರಿತು.

"ಹೋಗಿ ಬರುತ್ತೇನೆ, ಜಟ್ಟಪ್ಪನವರೇ; ನಮಸ್ಕಾರ" ಎಂದು ಮೆತ್ತಗೆ ಅಲ್ಲಿಂದ ಕಾಲು ಕಿತ್ತ. ಎದೆ ಡವಗುಟ್ಟುತ್ತಿತ್ತು ಸುಬ್ಬನಿಗೆ. ನಾಲ್ಕು ಹೆಜ್ಜೆ ಹೋಗಿ ಹಿಂದೆ ನೋಡಿದ. ಜಟ್ಟಪ್ಪ ಬಾಗಿಲ ಹತ್ತಿರ ಕೆಂಗಣ್ಣು ಕೆಕ್ಕರಿಸಿ ನೋಡುತ್ತಿದ್ದ. ಸುಬ್ಬ ಸ್ವಲ್ಪ ಹೊತ್ತು ನಿಂತು, "ನಿಮ್ಮ ಸಹಾಯ ಎಂದೂ ಮರೆಯುವುದಿಲ್ಲ; ನೀವು ಬಹಳ ಒಳ್ಳೆಯವರು" ಎಂದು ಸರಸರನೆ ಮುಂದೆ ನಡೆದ.

ಈ ಮಾತನ್ನು ಕೇಳಿ ಜಟ್ಟಪ್ಪ ಒಂದು ಹೆಜ್ಜೆ ಮುಂದೆ ಬಂದು ನಿಂತಿದ್ದ. ಇಷ್ಟು ಹೊತ್ತಿಗೆ ಸುಬ್ಬ ರಸ್ತೆಯನ್ನು ಸೇರಿ ಮತ್ತೆ ನಿಂತುಕೊಂಡು ಸುತ್ತಮುತ್ತಲೂ ನೋಡಿದ. ಅಕ್ಕಪಕ್ಕದ ಅಂಗಡಿ ಬಾಗಿಲುಗಳು ತೆರೆದದ್ದನ್ನು ಕಂಡು ಸ್ವಲ್ಪ ಧೈರ್ಯ ಮಾಡಿ, "ಜಟ್ಟಪ್ಪನವರೇ, ನನ್ನ ದುಡ್ಡೇನಾದರೂ ಸಿಕ್ಕಿದ ಪಕ್ಷದಲ್ಲಿ ಧರ್ಮಸ್ಥಳದ ದೇವರ ಡಬ್ಬಿಗೆ ಹಾಕಿಬಿಡಿ" ಎಂದು ಕೂಗಿ ಹೇಳಿ ಅಲ್ಲಿಂದ ಕಾಲು ಕಿತ್ತವ ಮುಸಾಫಿರ್ ಖಾನೆಗೆ ಬರುವ ತನಕ ನಿಲ್ಲಲಿಲ್ಲ.

ಕೈಯಲ್ಲಿ ಆರಾಣೆ ಇತ್ತು. ಸದ್ಯ ಅಷ್ಟಾದರೂ ಸಿಕ್ಕಿತಲ್ಲ ಎಂದು ಅಷ್ಟಕ್ಕೇ ಸಮಾಧಾನಪಟ್ಟುಕೊಂಡು ರಾಮಯ್ಯ ಕಮ್ತಿಯ ಹೋಟೆಲಿಗೆ ಹೋಗಿ ಒಂದಷ್ಟು ಅವಲಕ್ಕಿ ತಿಂದು ಕಷಾಯ ಕುಡಿದು ಪದ್ಮಾವತಿಯಮ್ಮನನ್ನು ಹುಡುಕಿಕೊಂಡು ಹೊರಟ.

ರಸ್ತೆಯ ಮೇಲೆ ನಡೆದುಕೊಂಡು ಹೋಗಿ ನಾಯಕನಕಟ್ಟೆ, ಅಂಬಾಲು ವರೆಗೂ ಎಲ್ಲ ಕಡೆಯೂ ವಿಚಾರಿಸಿ ನೋಡಿದ. ಗರ್ಭಿಣಿ ಹೆಂಗಸೊಬ್ಬಳು ಹಿಂದಿನ ರಾತ್ರಿ ಆ ದಾರಿಯಲ್ಲಿ ಹೋದವಳನ್ನು ಯಾರೂ ಕಂಡಿರಲಿಲ್ಲ.

ಸುಬ್ಬ ಹಾಗೇ ಉಪ್ಪುಂದ ಹೊಳೆಯ ಬಾಗಿಲ ವರೆಗೂ ಹೋಗಿ ಅಲ್ಲಿ ಇಲ್ಲಿ ವಿಚಾರಿಸಿದ. ಯಾವ ಸಮಾಚಾರವೂ ತಿಳಿಯಲಿಲ್ಲ. ಹತಾಶನಾಗಿ ಮತ್ತೆ ಕಂಭದಕೋಣೆಗೇ ಹಿಂತಿರುಗಿ ಬಂದ.

ಇನ್ನೇನು ಮಾಡುವುದೆಂದು ಎಷ್ಟು ಯೋಚಿಸಿದರೂ ಸುಬ್ಬನಿಗೆ ಯಾವ ದಾರಿಯೂ ಸೂಚಿಸಲಿಲ್ಲ. ಪದ್ಮಾವತಮ್ಮನಿಗೆ ಏನಾಗಿರಬಹುದೆಂದು ಊಹಿಸುವುದೂ ಅವನಿಗೆ ಸಾಧ್ಯವಿಲ್ಲ. ಎಲ್ಲಿ ಹೋಗಿರಬಹುದು? ಏನಾಗಿರಬಹುದು? ಏನಾದರೂ ಹೊಳೆ-ಕೆರೆಯ ಪಾಲಾಗಿರಬಹುದೇ? ಎಂದು ಮತ್ತೆ ಮತ್ತೆ ತಾನೇ ಪ್ರಶ್ನೆ ಕೇಳಿಕೊಂಡ. ಒಂದಕ್ಕೂ ಉತ್ತರ ಹೊಳೆಯಲಿಲ್ಲ. ಹತಾಶನಾಗಿ ಕೈ ಕಟ್ಟಿಕೊಂಡು ಒಂದು ಗಳಿಗೆ ಹಾಗೇ ಕುಳಿತುಕೊಂಡ.

ಈಗ ಏನು ಮಾಡಬೇಕೆಂದು ಅವನಿಗೆ ನಿರ್ಧರಿಸುವುದೇ ಕಷ್ಟವಾಯಿತು. ಯಾವ ಕಡೆಗೆ ಹೋಗಬೇಕು ? ಎಲ್ಲಿ ವಿಚಾರಿಸಬೇಕು ? ಹೇಗೆ ಪತ್ತೆ ಹಚ್ಚಬೇಕು? ಪದ್ಮಾವತಮ್ಮನನ್ನು ಹೀಗೆ ಕಾಡುಪಾಲು ಮಾಡಿಬಿಟ್ಟು ರಾಮಚಂದ್ರ ಶಾಸ್ತ್ರಿಯನ್ನು ನೋಡುವುದು ಹೇಗೆ ? " ನನ್ನ ಹೆಂಡತಿ ಎಲ್ಲಿ ?" ಎಂದು ಆತ ಕೇಳಿದರೆ ಯಾವ ಬಾಯಿಂದ ನಿಜ ಸಂಗತಿಯನ್ನು ಹೇಳಲಿ ? ಅಯ್ಯೋ ದೇವರೇ, ಇದೆಲ್ಲ ಫಜೀತಿಗೆ ನನ್ನನ್ನು ಸಿಕ್ಕಿ ಹಾಕಿಸಿದೆ. ಥೂ, ನಿನ್ನ ಮನೆ ಹಾಳಾಗ " ಎಂದು ದೇವರನ್ನು ಬಯ್ದು ತನ್ನ ಸಿಟ್ಟನ್ನೂ ವ್ಯಕ್ತಪಡಿಸಿದ.

ಇದೆಲ್ಲ ತನಗೇಕೆ, ಎಲ್ಲಾದರೂ ತಲೆ ಮರಸಿಕೊಂಡು ಹೋದರಾಯಿತು ಎಂದು ಕೂಡಾ ಒಂದು ಕ್ಷಣ ಅವನಿಗೆ ಅನ್ನಿಸಿತ್ತು. ಆದರೆ ರಾಮಚಂದ್ರನ ಸ್ನೇಹವನ್ನು ಯೋಚಿಸಿಕೊಂಡಾಗ ತನಗೆ ಅಂಥ ಯೋಚನೆ ಬಂದದ್ದಕ್ಕಾಗಿ ಅವನಿಗೆ ತನ್ನ ಮೇಲೆ ಅಸಹ್ಯ ಹುಟ್ಟಿತು. 'ಅಬ್ಬಾ, ಎಂಥ ಮೃಗವೋ ನೀನು ಸುಬ್ಬ ' ಎಂದು ತನಗೆ ತಾನೇ ಜರೆದುಕೊಂಡ.

ಸ್ವಲ್ಪ ಯೋಚಿಸಿದ ಮೇಲೆ, ನಡೆದದ್ದನ್ನೆಲ್ಲ ಚಾಚೂ ತಪ್ಪದೆ ರಾಮಚಂದ್ರಶಾಸ್ತ್ರಿಗೆ ಹೇಳಿ ಅವನ ಕ್ಷಮೆ ಕೇಳಿ ಆಮೇಲೆ ಆವನು ಹೇಗೆ ಹೇಳಿದರೆ ಹಾಗೆ ಮಾಡುವುದೇ ಸರಿ ಎಂದು ಅವನಿಗೆ ತೋರಿತು. ಅಂತೂ ಒಂದು ನಿರ್ಧಾರಕ್ಕೆ ಬಂದ ಹಾಗಾಯಿತು. ಶಾಸ್ತ್ರಿಯನ್ನು ನೋಡಬೇಕಾದರೆ ಕೊಲ್ಲೂರಿಗೆ ಹೋಗಬೇಕು. ಕೊಲ್ಲೂರಿಗೆ ಹೋಗಬೇಕಾದರೆ ಸ್ವಲ್ಪವಾದರೂ ಕೈಲಿ ದುಡ್ಡು ಬೇಕು. ದುಡ್ಡು ಬೇಕಾದರೆ-?

ಮತ್ತೆ ಯೋಚನೆ, ಚಿಂತೆ. ಈ ಯೋಚನೆ, ಚಿಂತೆ ಇವುಗಳಿಂದ ಜೀವಮಾನದಲ್ಲೆಲ್ಲ ತಪ್ಪಿಸಿಕೊಳ್ಳಲು ಯತ್ನಿಸುತ್ತಿದ್ದ ಸುಬ್ಬನಿಗೆ ಈಗ ಯೋಚಿಸುವುದು, ಚಿಂತಿಸುವುದು ಬಿಟ್ಟು ಬೇರೆ ಕೆಲಸವೇ ಇಲ್ಲ. ಹೆಂಡತಿ ಇಲ್ಲ, ಮಕ್ಕಳಿಲ್ಲ-ಆದರೂ ಈ ತಾಪತ್ರಯ ಏಕಪ್ಪಾ ?

ಕೊನೆಗೆ "ಆಹ, ಸರಿ. ಅದೇ ಸರಿ" ಎಂದು ಎದ್ದು ನಿಂತ. ಅವನಿಗೆ ತಾನು ಮರವಂತೆಯಲ್ಲಿ ಬಳೆ ಅಡುವಿಟ್ಟದ್ದು ಫಕ್ಕನೆ ನೆನಪಿಗೆ ಬಂತು. ಇನ್ನೇನು ಮಾಡುವುದು? ಮತ್ತೆ ಅಲ್ಲಿಗೆ ಹೋಗಿ ಅದನ್ನು ಎಷ್ಟಕ್ಕಾದರೂ ಮಾರಿ ಬಿಡುವುದು. ಆ ದುಡ್ಡು ತೆಗೆದುಕೊಂಡು ಕೊಲ್ಲೂರಿಗೆ ಹೋಗುವುದು; ಕೊಲ್ಲೂರಿನಲ್ಲಿ ರಾಮಚಂದ್ರಶಾಸ್ತ್ರಿಯನ್ನು ನೋಡಿದ ಮೇಲೆ ಮತ್ತೆ ಮಾತು.

ಇಷ್ಟು ಹೊತ್ತಿಗೆ ಹೊತ್ತು ಪಶ್ಚಿಮಕ್ಕೆ ತಿರುಗಿತ್ತು. ಕಂಭದಕೋಣೆಯನ್ನು ಬಿಟ್ಟು ಮತ್ತೆ ಹಿಂದಿನ ದಿನ ಬಂದ ದಾರಿಯಲ್ಲೇ ಹಿಂತಿರುಗಿದ. ದಾರಿಯಲ್ಲಿ ಅವನ ಗುರುತಿನವರಾದ ನಾವುಂದ ಪಟೇಲರು ವೆಂಕಟರಮಣಯ್ಯನವರ ಮನೆಯಲ್ಲಿ ಊಟ ಮಾಡಿ ಒಂದರ್ಧಗಳಿಗೆ ವಿಶ್ರಮಿಸಿ ಮತ್ತೆ ಹೊರಟ.

ಅವನು ತ್ರಾಸಿಯನ್ನು ತಲಪಿದಾಗ ಇನ್ನೂ ಒಂದೆರಡು ಗಳಿಗೆ ಹೊತ್ತು ಇತ್ತು. ಅಲ್ಲಿಗೆ ತಲಪಿದ ಕೂಡಲೇ ತಾನು ಬಳೆ ಅಡುವಿಟ್ಟಿದ್ದ ಅಂಗಡಿ ಜನಾರ್ದನ ಕಿಣಿಯ ಹತ್ತಿರ ಹೋಗಿ ಇನ್ನಷ್ಟು ದುಡ್ಡು ಬೇಕಾಗಿದೆ ಎಂದು ಕೇಳಿದ.

"ಆ ಒಡವೆಯ ಮೇಲೆ ಮತ್ತೆ ದುಡ್ಡು ಸಿಗಲಾರದು" ಎಂದ ಕಿಣಿ.

"ಹಾಗಲ್ಲ; ಅದನ್ನು ನಿಮಗೆ ಮಾರಿಬಿಡುತ್ತೇನೆ. ಇನ್ನು ಎಷ್ಟು ಕೊಡುತ್ತೀರಿ ಹೇಳಿ" ಎಂದು ಕೇಳಿದ.

"ಈಗ ನನ್ನ ಹತ್ತಿರ ಒಂದು ಪೈಯೂ ಇಲ್ಲ. ಬೇಕಾದರೆ ದುಡ್ಡು ಬಡ್ಡಿ ಕೊಟ್ಟು ಒಡವೆ ತೆಗೆದುಕೊಂಡು ಹೋಗಿ."

"ಏನಾದರೂ ಮಾಡಿ ಕಿಣೀರೇ; ನಿಮ್ಮ ಸಹಾಯ ಎಂದೂ ಮರೆಯುವುದಿಲ್ಲ." ಎಂದು ಸುಬ್ಬ ಅಂಗಲಾಚಿದ.

ಕಿಣಿ ಬುದ್ಧಿವಂತ, ನಯಶಾಲಿ, ಕೊಡುವುದಿಲ್ಲ ಅನ್ನಲಿಲ್ಲ: "ಏನು ಮಾಡಲಿ ಹೇಳಿ, ನನ್ನ ಕೈ ಕಟ್ಟಿಹೋಗಿದೆ. ಕೊಟ್ಟವರು ದುಡ್ಡು ಕೊಡುವುದಿಲ್ಲ. ಕೈಯಲ್ಲಿ ಒಂದು ಕಾಸೂ ಇಲ್ಲ, ಸ್ವಾಮಿ. ಕ್ಷಮಿಸಬೇಕು" ಎಂದ.

ಸುಬ್ಬ ಮತ್ತೆ ಹತಾಶನಾದ. ಮತ್ತೆ ಚಿಂತೆ, ಯೋಚನೆ. ಈಗ ಈ ಕಿಣಿ ಕೈ ಕೊಟ್ಟ. ಅಲ್ಲಿ ಜೆಟ್ಟಪ್ಪ ಜೇಬಿಗೆ ಕೈಯಿಟ್ಟ. ಮುಂದೆ?

ಗಂಗೊಳ್ಳಿಗೆ ಹೋಗುವುದಲ್ಲದೆ ಬೇರೆ ದಾರಿಯಿಲ್ಲ. ಹೊತ್ತು ಕಂತಲು ಒಂದೋ ಎರಡೋ ಗಳಿಗೆ ಇರಬೇಕು. ಗಂಗೊಳ್ಳಿ ಮೂರು ಮೈಲಿಗಿಂತ

ಜಾಸ್ತಿಯಿಲ್ಲ. ಕತ್ತಲು ಕತ್ತಲಾಗುವಷ್ಟರಲ್ಲಿ ಅಲ್ಲಿಗೆ ಹೋಗಬಹುದು.

ಮತ್ತೆ ಒಂದು ಬಗೆಯ ಮಂಕು ಸುಬ್ಬನನ್ನು ಕವಿಯುತ್ತಿತ್ತು. ಸಂಜೆಯಾಗುತ್ತ ಬಂದ ಹಾಗೆ ಯಾವಾಗಲೂ ಹಾಗೆಯೇ. ಸಂಜೆಯಾದ ಕೂಡಲೇ ಕುಡಿಯುವ ಆಶೆ. ತಡೆಯಲಾರದಂಥ ಬಾಯಾರಿಕೆ. ಏನೂ ಬೇಡ; ಯಾವುದಕ್ಕೂ ಮನಸ್ಸು ಓಡುವುದಿಲ್ಲ. ‘ ಸರಿ, ಗಂಗೆಯ ಪಾದವೇ ಗತಿ ’ ಎಂದುಕೊಳ್ಳುತ್ತ ಗಂಗೊಳ್ಳಿಗೆ ಹೊರಟ.

ಬಲು ವೇಗವಾಗಿ ನಡೆಯುತ್ತಿದ್ದ. ಸಂಜೆಯ ಸಮಯ. ಮಳೆಯೇನೋ ಇರಲಿಲ್ಲ. ಆದರೂ ಮಳೆಗಾಲ. ಯಾವ ಹೊತ್ತಿಗೆ ಮಳೆ ಬಂದೀತು ಎಂದು ಹೇಳುವುದು ಕಷ್ಟ. ಆಕಾಶದಲ್ಲಿ ಕಪ್ಪುಮೋಡ ಕವಿದದ್ದು ಕವಿದ ಹಾಗೆಯೇ ಇತ್ತು. ಗಾಳಿ ಸ್ತಬ್ಧವಾಗಿತ್ತು. ಮತ್ತೆ ಗಾಳಿ ಶುರುವಾದರೆ ಮಳೆ ಖಂಡಿತ. ಗಾಳಿ ಯಾವಾಗ ಮತ್ತೆ ಬೀಸತೊಡಗುವುದೋ ಯಾರು ಬಲ್ಲರು.

ಸುಬ್ಬ ಗುಜ್ಜಾಡಿಯ ಹತ್ತಿರ ಬರುವಷ್ಟಕ್ಕೆ ಕತ್ತಲಾಯಿತು. ಮೋಡವೂ ಇನ್ನಷ್ಟು ಕಪ್ಪಾಯಿತೋ ಏನೋ. ಇದ್ದಕ್ಕಿದ್ದ ಹಾಗೆ ಕಣ್ಣು ಕಾಣಿಸದಷ್ಟು ಕತ್ತಲು ತುಂಬಿ ಮೊರೆಯಿತು. ಬೀದಿಯ ಎರಡೂ ಕಡೆ ಮರಗಳು. ಮರಗಳ ನೆಳಲಿನಲ್ಲಿ ಕತ್ತಲು ಇನ್ನಷ್ಟು ಭೀಕರ. ರಸ್ತೆ ಏನೂ ಕಾಣಿಸುವುದಿಲ್ಲ. ಆದರೂ ರಾಜರಸ್ತೆಯಾದದ್ದರಿಂದ ವಾಸಿ; ಮುಗ್ಗರಿಸಿ ಬೀಳುವ ಭಯ ಅಷ್ಟಿಲ್ಲ. ಮರಗಳಲ್ಲಿ ಚೀರಟೆ ಹಕ್ಕಿ ಚಿರ ಚಿರೋ ಎನ್ನುತ್ತಿತ್ತು.

ಏನೋ ವಿವರಿಸಿ ಹೇಳಲಾರದ ಒಂದು ಬಗೆಯ ಭಯ ಸುಬ್ಬನ ಮನಸ್ಸಿನಲ್ಲಿ ತುಂಬಿತು. ಬಾಲ್ಯದಲ್ಲಿ ಕೇಳಿದ ಭೂತ ಪ್ರೇತಗಳ ದೆವ್ವಗಳ ಸುಪ್ತ ಭೀತಿ ಹೆಡೆಯೆತ್ತಿ ಬುಸುಗುಟ್ಟುತ್ತಿತ್ತು.

ಅಬ್ಬಾ, ಮೇಲು ಗಂಗೊಳ್ಳಿ ಬಂತು. ಅದೋ ಅಲ್ಲೇ ಮನೆಗಳ ದೀಪಗಳೂ ಕಾಣುತ್ತವೆ. ಇನ್ನು—ಒಂದೇ ಫರ್ಲಾಂಗು. ಹೆದರಿಕೆಯಿಲ್ಲ.

ಇಷ್ಟು ಹೊತ್ತಿಗೆ ಗಾಳಿ ಬೀಸತೊಡಗಿತ್ತು. ಮಳೆ ಹನಿಯ ತೊಡಗಿತ್ತು. ಗುಡುಗು ಗುಡುಗಿತು. ಮಿಂಚು ಫಳಾರನೆ ಮಿಂಚಿ ಕಣ್ಣು ಕುಕ್ಕಿಸಿತು.

ಗಂಗೆಯ ಮನೆ ಬಂತು. ಸಮುದ್ರವನ್ನೆಲ್ಲ ಸುತ್ತಿದವನಿಗೆ ಕೊನೆಗೂ ಬಂದರು ಕಂಡ ಹಾಗಾಯಿತು ಸುಬ್ಬನಿಗೆ.

ಬಾಗಿಲು ತಟ್ಟಿದ ಕೂಡಲೇ ಬಾಗಿಲು ತೆರೆಯಿತು.

ಬಾಗಿಲು ತೆರೆದವಳು ಗಂಗೆಯೇ.

ಗಂಗೆ ಕೈ ಕಂದೀಲನ್ನು ಸುಬ್ಬನ ಮುಖಕ್ಕೆ ಹಿಡಿದು ನೋಡಿದಳು :

" ಓ ನೀವೋ; ಇದೇನು ಹೀಗಾಗಿದ್ದೀರಿ ?"

" ಏನು ಹೀಗಾಗಿರುವುದು ?" ಎಂದ ಸುಬ್ಬ.

" ನಿಮ್ಮ ಮುಖ ಹೇಗಿದೆ ಗೊತ್ತಿದೆಯಾ ? "

" ಹೇಗಿದೆ ? "

" ಕೋಡಂಗಿ ಹಾಗೆ ಇದೆ. ನೀವು ಈಗ ಯಾವ ವೇಷವನ್ನೂ ಹಾಕಿಲ್ಲವಷ್ಟೇ?"

" ಸಾಕು ತಮಾಷೆ ಗಂಗಾ ; ಬಹಳ ಕಷ್ಟದಲ್ಲಿದ್ದೇನೆ."

" ಕಷ್ಟ? ನಿಮಗೆ ಯಾವಾಗ ಕಷ್ಟ ತಪ್ಪಿದ್ದು? ಹಾಸ್ಯಗಾರರೇ ಹೀಗೆಅಳುಮೋರೆ ಮಾಡಿದರೆ ಹೇಗೆ ? " ಎಂದಳು. ಇಬ್ಬರೂ ಮನೆಯೊಳಕ್ಕೆ ಹೋದರು. ಗಂಗೆ ಬಾಗಿಲನ್ನು ಹಾಕಿಕೊಂಡು ಬಂದು ಚಾಪೆಯ ಮೇಲೆ ಕುಳಿತಳು.

ಸುಬ್ಬ ಕುಳಿತುಕೊಳ್ಳಲಿಲ್ಲ. ನಿಂತುಕೊಂಡೇ ಮಾತಾಡಿದ :

" ಗಂಗೆ, ನೀನು ಬಹಳ ಕೆಟ್ಟು ಹೋಗಿದ್ದೀಯೆ !"

" ಊರೇ ಹಾಗೆ ಹೇಳುತ್ತದೆ. ನೀವು ಹೇಳಿದ್ದು ಹೊಸ ಸಮಾಚಾರವಲ್ಲ."

" ಸರಿ. ಈಗ ನಾನೂ ಹಾಗೇ ಹೇಳುತ್ತೇನೆ."

" ಹತ್ತರ ಕೂಡೆ ಹನ್ನೊಂದು ; ಪರಿಸೆ ಕೂಡೆ ಗೋವಿಂದ!"

" ಅಲ್ಲ---"

" ಅಲ್ಲ, ಏನು ? "

" ನನ್ನನ್ನು ಕೋಡಂಗಿ ಅಂದೆಯಲ್ಲ. ಅಬ್ಬಾ ಎಷ್ಟು ಅಹಂಕಾರ ! ಒಂದು ವೇಳೆ ದೇವರೇ ಈ ಮಾತು ಆಡಿದ್ದರೂ ನಾನು ಸುಮ್ಮನೆ ಕೂರುವವನಲ್ಲ—ಆದರೆ—"

" ಆದರೆ ಏನು ? "

" ನೀನು ಕೇವಲ ಹೆಂಗಸು ; ಸ್ತ್ರೀ ; ಮದಗಜಗಾಮಿನಿ; ಹೆಂಗಸಿನ ಮೇಲೆ ಕೈ ಎತ್ತುವುದು ಅಧರ್ಮ. ಶ್ರೀ ರಾಮಚಂದ್ರನೂ ಕೂಡಾ ತಾಟಕೆಯ ಮೂಗು ಕೊಯ್ಸಿದ. ಕೈ ಎತ್ತಲಿಲ್ಲ " ಎಂದು ನಾಟಕೀಯವಾಗಿ, ಸುಬ್ಬ ನುಡಿದ.

" ಸುಬ್ಬಣ್ಣನವರೇ, ಇದು ಈ ಬಡ ಹೆಂಗಸಿನ ಮನೆ. ರಂಗಸ್ಥಳವಲ್ಲ.

ಮರೆಯಬೇಡಿ."

"ಮಾತು ಹಾರಿಸಬೇಡ ಗಂಗಾ; ನೀನು ನನ್ನನ್ನು ಕೋಡಂಗಿ ಅಂದುಬಿಟ್ಟೆ."

"ಅಂದೆ. ಅದು ಏನೋ ಸುಮ್ಮನೆ ಕೂರುತ್ತಿರಲಿಲ್ಲ ಅಂದರಲ್ಲ, ಏನು ಮಾಡುತ್ತಿದ್ದಿರಿ?"

"ಹೇಳಿ ಏನು ಉಪಯೋಗ? ನೀನು ಹೆಂಗಸು. ಕೇವಲ ನಾರಿ."

"ನಾನು ಹೆಂಗಸಲ್ಲ ಅಂತ ಇಟ್ಟುಕೊಳ್ಳಿ. ನಾನು ಗಂಗೆಯಲ್ಲ; ಗಂಗಾಧರ. ಆಗ ಏನು ಮಾಡುತ್ತಿದ್ದಿರಿ?"

"ಹೇಳಿಬಿಡಲೋ. ನೀನು ಹೆದರಿಕೊಳ್ಳಬಹುದು. ಬೇಡ."

"ಇಲ್ಲ, ಖಂಡಿತ ಹೆದರುವುದಿಲ್ಲ. ನಾನು ಹೆದರುವ ಹೆಂಗಸೇ? ಹೇಳಿ ಬಿಡಿ."

"ಹೇಳಿಬಿಡಲೋ?"

"ಹೂ."

"ಯಾರೇ ಆಗಲಿ ನನ್ನನ್ನು ಕೋಡಂಗಿ ಅಂತ ಕರೆದಿದ್ದರೆ ನಾನು, ನಾನು—ಕೋಡಂಗಿ ಕುಣಿತ ಕುಣಿದು ಬಿಡುತ್ತಿದ್ದೆ."

ಈ ಮಾತು ಕೇಳಿ ಗಂಗೆ ತುಂಬು ಮನಸ್ಸಿನಿಂದ ನಕ್ಕಳು. ಅವಳ ನಗೆಯ ಬೆಳುದಿಂಗಳು ಮನೆಯನ್ನೆಲ್ಲ ತುಂಬಿತ್ತು. ಸುಬ್ಬನಿಗೂ ಏಕೋ ಇದ್ದಕ್ಕಿದ್ದ ಹಾಗೆ ಮನಸ್ಸಿನಲ್ಲಿದ್ದ ಕಾವಳ ಕಳೆದು ಬೆಳಕು ತುಂಬಿದ ಹಾಗೆ ಆಯಿತು. ಇನ್ನೂ ನಿಂತೇ ಇದ್ದ ಅವನನ್ನು ಕಂಡು ಗಂಗೆ,

"ಅಯ್ಯೋ, ಇನ್ನೂ ನಿಂತೇ ಇದ್ದೀರಿ: ಬನ್ನಿ ಬಚ್ಚಲು ಮನೆಗೆ ಹೋಗೋಣ. ಮುಖ ತೊಳೆದುಕೊಂಡರೆ ನಿಮ್ಮ ಆರೋಗ್ಯಕ್ಕೆ ಏನೂ ತೊಂದರೆ ಯಿಲ್ಲವಲ್ಲ?" ಎಂದು ನಗುನಗುತ್ತ ಕೇಳಿದಳು.

"ಈಗ ನಿಜ ಹೇಳುವುದಾದರೆ ಮುಖ ತೊಳೆದುಕೊಳ್ಳುವುದಕ್ಕಿಂತ ಒಂದು ತುತ್ತು ಅನ್ನ ತಿನ್ನುವುದೇ ಆರೋಗ್ಯಕ್ಕೆ ಒಳ್ಳೆಯದೆಂದು ನನಗೆ ತೋರುತ್ತದೆ."

"ಅದು ಸಿಕ್ಕಬೇಕಾದರೆ, ಇದು ಆಗಬೇಕು" ಎಂದಳು ಗಂಗೆ.

"ಹಾಗೇ ಆಗಲಿ; ಮಹಾರಾಣಿಯವರ ಆಜ್ಞೆ" ಎಂದು ಸುಬ್ಬ ಅವಳನ್ನು ಹಿಂಬಾಲಿಸಿದ.

ಗಂಗೆಯ ಮನೆಯಲ್ಲಿ ಅವಳು, ಅವಳ ಮುದುಕಿ ತಾಯಿ ಇಬ್ಬರಲ್ಲದೆ ಇನ್ನಾರೂ ಇಲ್ಲ. ಸಣ್ಣ ಮನೆ. ಆದರೆ ಬಹಳ ಅಚ್ಚುಕಟ್ಟು. ಒಳಗೆ ಎಲ್ಲೂ ಒಂದು ಕಸ ಕಾಣಿಸದು. ಗುಡಿಸಿ ಸಾರಿಸಿದ ನೆಲ ಥಳಥಳ ಹೊಳೆಯುತ್ತಿತ್ತು. ಮನೆಯೆಲ್ಲ ಧೂಪದ ವಾಸನೆ ಘಮಘಮಿಸುತ್ತಿತ್ತು.

ಗಂಗೆಯ ಜೀವನವೂ ಹಾಗೆಯೇ ಚೊಕ್ಕ. ಮೀನು, ಮಾಂಸ— ಎರಡನ್ನೂ ಅವಳು ಮುಟ್ಟಳು. ಪ್ರತಿ ದಿನವೂ ಸರಿಯಾಗಿ ಸ್ನಾನ ಮಾಡಿ ದೇವರ ಪೂಜೆ ಮಾಡದೇ ಊಟಮಾಡಲಾರಳು.

ಸುಬ್ಬ ಮುಖ ತೊಳೆದುಕೊಂಡು ಬಂದ ಕೂಡಲೇ ಅವಳು, "ಅಲ್ಲಿ ನೋಡಿ, ಹಗ್ಗದ ಮೇಲೆ ನಿಮ್ಮದೇ ಅಂಗಿ, ಪಂಚೆ ಇದೆ. ಈಗ ಮೈಮೇಲಿರುವುದನ್ನು ಬಿಚ್ಚಿ ಹಾಕಿ ಅವನ್ನು ತೊಟ್ಟುಕೊಳ್ಳಿ." ಎಂದಳು.

ಸುಬ್ಬ ಒಗೆದಿಟ್ಟ ಪಂಚೆ ಅಂಗಿಗಳನ್ನು ತೊಟ್ಟುಕೊಳ್ಳುತ್ತ "ಬರೇ ಮಾತಿನ ಗಂಗಾಪ್ರವಾಹವೇ ಆಯಿತು. ಹೊಟ್ಟೆಗೇನಾದರೂ ಉಂಟೋ; ಇಲ್ಲ ಇವತ್ತು ಏಕಾದಶಿಯೋ?" ಎಂದು ನಗುತ್ತ ಕೇಳಿದ.

"ಇಷ್ಟು ಹೇಳುವವರು ನೀವು ನನ್ನ ಮನೆಯಲ್ಲಿ ಊಟಮಾಡುತ್ತೀರಾ? ಅನ್ನ ಆಗುತ್ತಿದೆ. ಊಟಕ್ಕೆ ಏಳುತ್ತೀರಾ?" ಎಂದು ನಕ್ಕಳು.

"ಅದಕ್ಕೇನಂತೆ. ನಾನು ಜಾತಿಯ ಹೊರಗಿರುವ ಮನುಷ್ಯ. ನನ್ನದೇನೂ ಅಭ್ಯಂತರವಿಲ್ಲ. ಆದರೆ ನಿನ್ನದೇ ಕೊಕ್ಕೆ ಅದಕ್ಕೆ."

"ನೀವು ಉತ್ತಮ ಜಾತಿಯವರು; ನನ್ನ ಮನೆಯಲ್ಲಿ ಊಟಮಾಡುವುದು ಸರಿಯಲ್ಲ. ಅದು ದೇವರು ಮೆಚ್ಚುವ ಕೆಲಸವಲ್ಲ. ಹೋಗಲಿ, ನೀವೇ ಅಡಿಗೆ ಮಾಡಿಕೊಳ್ಳಿ. ಸಾಮಾನು ತಂದು ಕೊಡಲೇ?"

"ಬೇಡ ಮಹಾರಾಯತಿ; ನಾನು ಅಡಿಗೆ ಮಾಡಿದರೆ ಅದನ್ನು ತಿನ್ನುವವರು ಯಾರು?"

"ಎಂದರೆ ಅದು ಅಷ್ಟು ಪಸಂದಾಗಿರುತ್ತದೆ—ಅಂತಲೋ?"

"ಅಲ್ಲ."

"ಮತ್ತೆ?"

"ಅಡಿಗೆ ಮಾಡಿ ಮುಗಿಸುವಷ್ಟರಲ್ಲಿ ನಾನೇ ಇರುವುದಿಲ್ಲ."

"ಸರಿ ಹಾಗಾದರೆ—"

"ಒಗ್ಗರಣೆ—ಅವಲಕ್ಕಿ, ಹೆಸರು— ಪಾಯಸ—"

"ಅಷ್ಟು ಮಾಡಿ ತರುವಷ್ಟರಲ್ಲಿ ಜೀವಕ್ಕೆ ಏನೂ ಹಾನಿಯಾಗಲಿಕ್ಕಿಲ್ಲ. ಅಲ್ಲವೇ ?"

"ಆ ಬಗ್ಗೆ ತಮಗೆ ಚಿಂತೆ ಬೇಡ. ಗಂಗಾದೇವಿಯವರ ನಳಪಾಕದ ರುಚಿ ನೋಡದೆ ಖಂಡಿತ ಪ್ರಾಣಬಿಡುವುದಿಲ್ಲ. ಆಮೇಲೆ ಏನಾಗುವುದೋ ದೇವರೇ ಬಲ್ಲ" ಎಂದು ಸುಬ್ಬ ಹೇಳುತ್ತಿರಲು ಅವಳು ನಗುನಗುತ್ತ ಅಡಿಗೆ ಮನೆಯ ಕಡೆಗೆ ನಡೆದಳು.

ಸುಬ್ಬ ಹಾಗೇ ಯೋಚಿಸುತ್ತ ಪಡಸಾಲೆಯಲ್ಲಿದ್ದ ಮಂಚದ ಮೇಲೆ ಕುಳಿತ. ಈ ಮನೆಗೆ ಬಂದಾಗಲೆಲ್ಲ ಅವನಿಗೆ ಏನೋ ಒಂದು ಬಗೆಯ ತೃಪ್ತಿ, ಸಮಾಧಾನ. ಪೋಲಿ ಅಲೆಯುವ ಹಸುವನ್ನು ತಂದು ಒಂದು ಗೂಟಕ್ಕೆ ಕಟ್ಟಿಹಾಕಿದ ಹಾಗೆ ಮನಸ್ಸು ಇಲ್ಲಿ ತನ್ನ ನೆಲೆಯನ್ನು ಕಾಣುತ್ತಿತ್ತು. ಒಂದು ಕ್ಷಣ ಈ ಪ್ರಪಂಚ, ಕಷ್ಟ, ತೊಂದರೆ, ತಾಪತ್ರಯ, ಮೋಸ, ಮಾತ್ಸರ್ಯ–ಎಲ್ಲವೂ ಮರೆಯುತ್ತಿತ್ತು. "ಹೌದು, ಇದೇ ಸ್ವರ್ಗ, ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು ?" ಎಂದುಕೊಂಡ. ಯಾವಾಗಲೂ ಹಾಗೇ ಅನ್ನಿಸುತ್ತಿತ್ತು ಅವನಿಗೆ. ತಾಯಿ, ತಂದೆ, ಅಣ್ಣ, ತಮ್ಮ, ತಂಗಿ, ಹೆಂಡತಿ ಮಕ್ಕಳು ಇಲ್ಲದ ಸುಬ್ಬನಲ್ಲಿ ಇಷ್ಟು ಪ್ರೀತಿ ತೋರುತ್ತಿರುವ ಈ ಹೆಣ್ಣು ಈ ಗಂಗೆ ಕೆಲವು ಸಲ ಅವನಿಗೆ ದೇವತೆಯಂತೆಯೇ ಕಾಣುತ್ತಿದ್ದಳು. "ತನ್ನಲ್ಲಿ ಯಾವ ವಿಶೇಷವನ್ನು ಕಂಡು ಇವಳು ಹೀಗೆ ಒಲಿದಳು, ಈ ಒಲವಿಗೆ ಏನು ಕಾರಣ, ಯಾವ ದೈವದ ಆಟ ಇದು" ಎಂದು ಸುಬ್ಬ ಬಹಳ ಯೋಚಿಸಿದ್ದ. ಯೋಚಿಸುವುದು–ಅಷ್ಟೆ. ಯಾವುದಕ್ಕೂ ಉತ್ತರ ಸಿಗುವುದಿಲ್ಲ. ಆದಕಾರಣ ಯೋಚಿಸುವುದೇ ತಪ್ಪು. ಆ ಸಂದರ್ಭದಲ್ಲಿ ಏನೇನು ಅನ್ನಿಸುತ್ತದೋ, ಏನೇನು ಬುದ್ಧಿಗೆ ಹೊಳೆಯುತ್ತದೋ ಹಾಗೆ ಹಾಗೆ ನಡೆದರೆ ತೀರಿತು ಎಂಬ ಸಿದ್ಧಾಂತವನ್ನು ರೂಪಿಸಿಕೊಳ್ಳುತ್ತಿದ್ದ. ಕೆಲವು ವರ್ಷ ಹಾಗೆಯೇ ಜೀವಿಸಲು ಯತ್ನಿಸುತ್ತಿದ್ದ. ಆದರೆ ಗಂಗೆಯ ಪರಿಚಯ ಆದ ಮೇಲೆ ಅವನಿಗೆ ತಿಳಿಯದಂತೆಯೇ ಅವನಲ್ಲಿ ಏನೇನೋ ಬದಲಾವಣೆಗಳು ಬಹು ನಿಧಾನವಾಗಿ ಆಗತೊಡಗಿದುವು. ಮುಖ್ಯವಾಗಿ ಆದ ಪರಿಣಾಮವೆಂದರೆ ಏನು ಮಾಡುತ್ತಿದ್ದರೂ 'ಗಂಗೆ ಏನಂದಾಳು?' ಎಂಬ ಯೋಚನೆ ಮನಸ್ಸನ್ನು ತಿವಿಯುತ್ತಿದ್ದುದು. 'ಇದರಿಂದ ಯಾವ ಕೆಟ್ಟ ಚಟದಲ್ಲೇ ಆಗಲಿ ತೀರ ದೂರ ಹೋಗಲು ಹೆದರಿಕೆ. ತಾನು ಹಾಕಿದ ಗೆರೆ ತಾನೇ ಮೀರಿದರೂ ಕೂಡಾ ಮರುಗಳಿಗೆಯಲ್ಲೇ ಪಶ್ಚಾತ್ತಾಪ ಪಡುತ್ತಿದ್ದ.

ಗಂಗೆಯಿಲ್ಲದಿದ್ದರೆ ತನ್ನ ಬಾಳು ನಿಜವಾಗಿಯೂ ನಾಯಿಬಾಳೇ ಆಗುತ್ತಿತ್ತು-ಅದರಲ್ಲಿ ಸಂದೇಹವಿಲ್ಲ-ಎಂದು ಸುಬ್ಬನಿಗೆ ಎಷ್ಟೋ ಸಲ ಹೊಳೆದಿತ್ತು. ಇದು ನಿಜವಾಗಿಯೂ ಆಶ್ಚರ್ಯ. ಗಂಗೆ ವೇಶ್ಯೆ. ಸಮಾಜದಲ್ಲಿ ಅವಳಿಗೆ ಯಾವ ಗೌರವವೂ ಇಲ್ಲ. ಅತಿ ಕೀಳು ಜಾತಿಯವರಿಗೆ ದೊರೆವಷ್ಟು ಪುರಸ್ಕಾರವೂ ಅವಳಿಗಿಲ್ಲ. ಆದರೆ ಇವಳಲ್ಲಿ ಕಂಡು ಬಂದಂಥ ಹೃದಯ ಇನ್ನೆಲ್ಲೂ ಕಾಣಸಿಗದು. ಈ ಅನುಕಂಪ, ಈ ಸರಳತೆ, ಈ ನೇರನಡೆ. ಜಾಣೆಯೂ ಹೌದು; ಇನ್ನೊಬ್ಬರ ಮನಸ್ಸನ್ನು ಬಹು ಸುಲಭವಾಗಿ ತಿಳಿಯಬಲ್ಲಳು. ಸುಳ್ಳು ಹೇಳುವುದನ್ನು ಕಲೆಯಾಗಿ ಬಳಸಿಕೊಂಡಿದ್ದ ಸುಬ್ಬನೂ ಆಕೆಯ ಮುಂದೆ ಸೋತು ಹೋಗುತ್ತಿದ್ದ. ಮಾತಿಗೆ ಎಷ್ಟು ಬಣ್ಣ ಕಟ್ಟಿದರೂ ಆ ಬಣ್ಣದೊಳಗಡೆ ಇರುವ ಸತ್ಯವನ್ನು ಅವಳು ಹೇಗೋ ಕಂಡುಬಿಡುತ್ತಿದ್ದಳು. ಮೊದಮೊದಲು ಅವಳ ಮುಂದೆ ಸುಬ್ಬ ಸುಂದರವಾದ ಸುಳ್ಳುಗಳನ್ನು ಹೇಳಿ ತನ್ನ ಪ್ರತಿಭೆಯನ್ನು ತೋರಿಸಲು ಯತ್ನಿಸುತ್ತಿದ್ದ. ಆದರೆ ಇದು ಬಹಳ ದಿನ ನಡೆಯಲಿಲ್ಲ. ಕೆಲವು ದಿನ ಅವಳು ಸುಮ್ಮನೆ ಹೇಳಿದ ಸುಳ್ಳನ್ನು ಕೇಳಿ ತಲೆದೂಗುತ್ತಿದ್ದಳು. ಆದರೆ ಒಂದು ದಿನ,

"ಸುಬ್ಬಣ್ಣನವರೇ, ಸುಮ್ಮನೆ ಸುಳ್ಳು ಹೇಳುವುದಕ್ಕೆ ಏಕೆ ಕಷ್ಟಪಡುತ್ತೀರಿ ? ಇರುವ ವಿಷಯ ಹೇಳಿ ಬಿಡುವುದು ಎಷ್ಟು ಸುಲಭ ? ನಿಮ್ಮ ಕಷ್ಟ ನೋಡಿ ಅಳಬೇಕೋ ನಗಬೇಕೋ ನನಗೆ ತಿಳಿಯುವುದಿಲ್ಲ." ಎಂದಿದ್ದಳು.

ಈ ಮಾತು ಕೇಳಿ ಸುಬ್ಬನಿಗೆ ಏನೋ ಒಂದು ತರಹ ಆಯಿತು:

"ಎಂದರೆ ನಾನು ಇಷ್ಟು ದಿನ ಹೇಳಿದ್ದೆಲ್ಲ ಸುಳ್ಳು ಅಂತಲೋ ನಿನ್ನ ಅಭಿಪ್ರಾಯ ?" ಎಂದು ಕೇಳಿದ ಸುಬ್ಬ ಸಿಟ್ಟಿನಿಂದ.

"ಎಲ್ಲವೂ ಸುಳ್ಳಲ್ಲ. ಒಂದರ್ಧ ಸುಳ್ಳು, ಅರ್ಧ ಸತ್ಯ. ಸುಳ್ಳು ಯಾವುದು ಸತ್ಯ ಯಾವುದು ಅಂತ ನನಗೆ ಕೂಡಲೇ ಗೊತ್ತಾಗುತ್ತದೆ. ಆದರೆ ನಿಮಗೇ ಕಷ್ಟ. ಆ ಶ್ರಮ ಇನ್ನು ಬೇಡ" ಎಂದಿದ್ದಳು.

ಅದೂ ನಿಜವೇ ಎನ್ನಿಸಿತ್ತು ಸುಬ್ಬನಿಗೆ. ಅವಳಿಂದ ಯಾವುದನ್ನೂ ಮುಚ್ಚು ಮರೆ ಮಾಡುವುದು ಸಾಧ್ಯವಿಲ್ಲ ಎಂದು ಬಹು ಬೇಗ ತಿಳಿಯಿತು. ಹಾಗೆ ತಿಳಿದ ಮೇಲೆ ಅವನು ಮತ್ತೆ ಸುಳ್ಳು ಹೇಳಲು ಯತ್ನಿಸಲಿಲ್ಲ. ದೇವರ ಮುಂದೆ ಹೇಗೋ ಹಾಗೆ ಗಂಗೆಯ ಮನಸ್ಸಿನಲ್ಲಿರುವುದನ್ನೆಲ್ಲ ಹೇಳಿಬಿಡುತ್ತಿದ್ದ. ಅದರಿಂದ ಅವನ ಮನಸ್ಸಿಗೆ ಅಪೂರ್ವ ತೃಪ್ತಿ ದೊರೆಯುತ್ತಿತ್ತು. ಮನಸ್ಸಿನ

ಕೊಳೆ ಕಸಗಳನ್ನೆಲ್ಲ ತೊಳೆದು ಸುಖಸ್ನಾನ ಮಾಡಿಸಿದಂತೆ ಆಗುತ್ತಿತ್ತು.

ಗಂಗೆಗೆ ಒಂದೇ ಕೊರತೆ-ಮಗುವಿಲ್ಲ ಎನ್ನುವುದು. "ಪಾಪ, ಅವಳಿಗೊಂದು ಮಗು ಹುಟ್ಟಿದ್ದರೆ!" ಎಂದು ಎಷ್ಟೋ ಸಲ ಸುಬ್ಬನೇ ನಿಟ್ಟುಸಿರು ಬಿಡುತ್ತಿದ್ದ. ಅನೇಕ ಸಲ ಸುಬ್ಬನಿಗೆ ಅವಳು ತನ್ನನ್ನು ಮಗುವಿನಂತೆಯೇ ಕಾಣುತ್ತಿರುವುದಾಗಿಯೂ, ಅದೇ ವಾತ್ಸಲ್ಯವನ್ನೂ ತೋರಿಸುತ್ತಿರುವುದಾಗಿಯೂ ಅನ್ನಿಸಿತ್ತು.

ಈಗ ಸುಬ್ಬ ಇನ್ನೊಂದು ಆತ್ಮ ನಿವೇದನೆಗೆ ಸಿದ್ಧನಾಗಿ ಬಂದಿದ್ದ. ಕುಡಿದು ಅಮಲೇರಿ ಬಿದ್ದು ಪದ್ಮಾವತಿಯಮ್ಮನನ್ನು ಬೀದಿಪಾಲೋ ಕೆರೆಯಪಾಲೋ ಮಾಡಿದ ತನ್ನ ಆ ಸಾಹಸಕೃತ್ಯವನ್ನು ಗಂಗೆಗೆ ಹೇಗೆ ಹೇಳಲಿ ಎಂದು ಸುಬ್ಬ ಯೋಚಿಸುತ್ತಿರುವಾಗಲೇ ಅವಳು ತಿಂಡಿಯನ್ನೂ ಪಾಯಸವನ್ನೂ ತಂದು ಸುಬ್ಬನ ಮುಂದಿಟ್ಟು ತಾನೂ ಹತ್ತಿರದಲ್ಲಿ ಕುಳಿತಳು.

ಕಂಭದಕೋಣೆಯಲ್ಲಿ ನಡೆದದ್ದನ್ನೆಲ್ಲ ಯೋಚಿಸಿ ಸುಬ್ಬನ ಮನಸ್ಸು ಖಿನ್ನವಾಗಿತ್ತು. ಗಂಗೆಯನ್ನು ಕಂಡ ಬಳಿಕ ತಿಳಿಯಾಗಿದ್ದ ಮನಸ್ಸಿನಲ್ಲಿ ಮತ್ತೆ ಕಾರ್ಮೋಡಗಳು ಬಂದು ಕವಿದಂತೆ ಆಗಿತ್ತು. ಏನೂ ಮಾತಾಡದೆ ತಲೆ ಬಗ್ಗಿಸಿಕೊಂಡು ಆಹಾರ ಸೇವನೆ ನಡಸಿದ. ಗಂಗೆ ಕೂಡಾ ಮಾತಾಡದೆ ಸುಮ್ಮನೆ ಕುಳಿತಳು. ಏನೋ ವಿಶೇಷ ನಡೆದಿದೆ ಅಂತ ಮಾತ್ರ ಅವಳಿಗೆ ತಿಳಿಯಿತು. "ಯಾವಾಗಲೂ ಹೀಗೇ ಈ ಮನುಷ್ಯ, ಶುದ್ಧ ಮಗು; ಒಂದೂ ತಿಳಿಯುವುದಿಲ್ಲ: ಮಾಡಬಾರದ್ದನ್ನೇ ಮಾಡಬೇಕು. ಮತ್ತೆ ಅಳಬೇಕು" ಎಂದುಕೊಂಡಳು.

ಸುಬ್ಬ ಹೊಟ್ಟೆ ತುಂಬಾ ಫಳಾರ ಮಾಡಿ ಎಲೆ ಅಡಿಕೆ ಹಾಕಿಕೊಳ್ಳುತ್ತ ಕುಳಿತ. ಹೊಟ್ಟೆ ತುಂಬಿದ ಮೇಲೆ ಸುಬ್ಬನಿಗೆ ಗಂಗೆಯ ತಾಯಿಯ ನೆನಪು ಬಂತು:

"ಎಲ್ಲಿ ಸರಸ್ವತಮ್ಮ?" ಎಂದು ಕೇಳಿದ.

"ಎರಡು ದಿನಗಳಿಂದ ಜ್ವರ ಬರುತ್ತದೆ. ಒಳಗೆ ಮಲಗಿಕೊಂಡಿದ್ದಾಳೆ" ಎಂದಳು.

ಮತ್ತೆ ಮೌನ, ಸುಬ್ಬನಿಗೆ ನಡೆದದ್ದನ್ನೆಲ್ಲ ಹೇಳಬೇಕು ಅಂತ. ಆದರೆ ಹೇಗೆ ಹೇಳಲಿ ಹೇಗೆ ಶುರುಮಾಡಲಿ-ಅಂತ ತಿಳಿಯದೆ ದಿಗ್ಭ್ರಾಂತನಂತೆ ಕುಳಿತಿದ್ದ.

ಆದರೆ ಗಂಗೆಯೋ ಮೌನವನ್ನು ಮುರಿದು ಮಾತಿಗೆ ಶುರುಮಾಡಿದಳು:

“ ನಾನು ಒಂದು ಸಮಾಚಾರ ಕೇಳಿದೆ ನಿಜವೇ ?” ಎಂದಳು.

“ ಏನು ಸಮಾಚಾರ ? ಯಾರು ಹೇಳಿದ್ದು ? ”

“ ಹಾಲಾಡಿಯಿಂದ ಯಾರೋ ಬಂದವರು ಹೇಳಿದರು. ಯಾರೋ ಆಗದೆ ಇದ್ದವರು ಹುಟ್ಟಿಸಿದ ಮಾತು ಅಂತ ಮಾಡಿದ್ದೆ ಅದು ನಿಜವೇನು ?”

“ ಸಮಾಚಾರ ಯಾವುದು ಅಂತ ತಿಳಿಯದೆ ನಿಜವೋ ಸುಳ್ಳೋ ಅಂತ ಹೇಗೆ ಹೇಳುವುದು ? ”

“ ನಾನು ಕೇಳಿದ ಸಮಾಚಾರ. ಮತ್ತೆ ಸಿಟ್ಟು ಮಾಡಿಕೊಳ್ಳಬೇಡಿ. ಜನ ಏನು ಏನು ಬೇಕಾದರೂ ಹುಟ್ಟಿಸಿ ಹೇಳುತ್ತಾರೆ–”

“ ಇಲ್ಲ ಮಹಾರಾಯತಿ, ಸಿಟ್ಟು ಮಾಡಿಕೊಳ್ಳುವುದಿಲ್ಲ. ಸಮಾಚಾರ ಏನು ಅಂತ ಹೇಳಿಬಿಡು.”

“ ನಿಮ್ಮ ಸ್ನೇಹಿತರು ರಾಮಚಂದ್ರಶಾಸ್ತ್ರಿಗಳಿಲ್ಲವೇ–ಅವರ ಹೆಂಡತಿ....”

“ಏನು, ಏನು ಅವರ ಹೆಂಡತಿ ವಿಚಾರ ಏನು? ಎಲ್ಲಿದ್ದಾರೆ? ಯಾವಾಗ ಬಂದರು ! ” ಸುಬ್ಬ ಬಹಳ ಉತ್ಸಾಹದಿಂದ ಕೇಳಿದ.

“ ಅವರ ಹೆಂಡತಿ ನಿಮ್ಮನ್ನು ಕಟ್ಟಿಕೊಂಡು ಓಡಿ ಹೋದಳು ಅಂತ ಊರಲೆಲ್ಲ ಸುದ್ದಿ. ಇದು ನಿಜವಲ್ಲ– ಅಲ್ಲವೇ ? ”

ಈ ಮಾತು ಕೇಳಿ ಸುಬ್ಬನಿಗೆ ಒಂದು ಕ್ಷಣ ಕಣ್ಣು ಕತ್ತಲೆ ಬಂದ ಹಾಗೆ ಆಯಿತು. ಎರಡೂ ಕೈಗಳಿಂದ ಕಿವಿ ಮುಚ್ಚಿಕೊಂಡು “ ಈ ಜನದ ಬಾಯಿಗೆ ಬೆಂಕಿ ಬೀಳ ; ಥೂ ” ಎಂದು “ ಮೊನ್ನೆ ತಾನೇ ಅವರನ್ನು ನೀನು ಇಲ್ಲಿ ನೋಡಿದೆಯಲ್ಲ. ನಿನಗೆ ವಿಷಯವನ್ನೆಲ್ಲ ಹೇಳಲಿಲ್ಲವೇ ? ” ಎಂದು ಕೇಳಿದ.

“ ಎಂದರೆ ಈ ಕಥೆಯಲ್ಲಿ ಏನೂ ಹುರುಳಿಲ್ಲ ಅಂತಲೋ ? ”

“ ನನ್ನ ಜೊತೆಗೆ ಪದ್ಮಾವತಮ್ಮ ಊರು ಬಿಟ್ಟು ಬಂದದ್ದು ನಿಜ. ಅದನ್ನು ನೀನೇ ಬಲ್ಲೆ. ಆದರೆ ನನ್ನನ್ನು ಕಟ್ಟಿಕೊಂಡು ಓಡಿ ಹೋದಳು ಎಂಬ ಮಾತು ಮಾತ್ರ ಮಹಾಪಾತಕ.”

“ ನಿಮ್ಮ ಜೊತೆಗೆ ಏಕೆ ಬಂದರು ಅವರು ? ”

“ ನಿನಗೆ ಆ ದಿನ ಹೇಳಲಿಲ್ಲವೆ ?—ಅವರನ್ನು ಅವರ ಗಂಡನ ಬಳಿಗೆ ಕೊಲ್ಲೂರಿಗೆ ಕರೆದುಕೊಂಡು ಹೋಗುತ್ತಿದ್ದೇನೆ— ಅಂತ.”

“ ಹೇಳಿದ್ದೇನೋ ಸರಿ. ಆದರೆ ಈಗ ಒಬ್ಬರೇ ಹಿಂದೆ ಬಂದಿರಿ. ಪದ್ಮಾ

ವತಮ್ಮ ಎಲ್ಲಿ ? ”

“ ಅದೆಲ್ಲ ದೊಡ್ಡ ಕಥೆ ಗಂಗಾ ; ಹೇಳುತ್ತೇನೆ. ಪೂರಾ ಕೇಳುವ ತನಕ ಮಾತ್ರ ಬಯ್ಯಬೇಡ ” ಎಂದ.

“ ಆಗಲಿ. ಹಾಗೇ ಆಗಲಿ.” ಎಂದು ಗಂಗೆ ಕೇಳುತ್ತ ಕುಳಿತಳು. ಸುಬ್ಬ ತಾನು ಪದ್ಮಾವತಮ್ಮನನ್ನು ಕರೆದುಕೊಂಡು ಹೊರಟದ್ದರಿಂದ ಮತ್ತೆ ತಾನು ಗಂಗೊಳ್ಳಿಗೆ ಬಂದು ತಲಪುವ ವರೆಗಿನ ಕಥೆಯನ್ನೆಲ್ಲ ವಿಸ್ತಾರವಾಗಿ ಹೇಳಿ ಮುಗಿಸಿದ. ಬಳೆಯ ವಿಷಯ ಹೇಳಬೇಕೋ ಬೇಡವೋ ಅಂತ ಒಂದು ಕ್ಷಣ ಅನುಮಾನಿಸಿ ಕೊನೆಗೆ ಹೇಳಿಯೇ ಬಿಟ್ಟ.

ಈ ಕಥೆಯನ್ನೆಲ್ಲ ಮನಸ್ಸು ಕೊಟ್ಟು ಕೇಳುತ್ತಿದ್ದ ಗಂಗೆ ಕಥೆ ಮುಗಿದ ಮೇಲೂ ಒಂದು ನಿಮಿಷ ಹಾಗೆಯೇ ನಿಶ್ಚಲಳಾಗಿ ಕುಳಿತಿದ್ದಳು. ಅವಳ ಕಣ್ಣು ಹಸಿಗೂಡಿತ್ತು. ಸೆರಗಿನಿಂದ ಕಣ್ಣನ್ನು ಒರಸಿಕೊಳ್ಳುತ್ತ

“ ಪದ್ಮಾವತಮ್ಮ ಗರ್ಭಿಣಿ ಎಂದಿರಲ್ಲವೇ? ” ಎಂದು ಕೇಳಿದಳು.

“ ಹೌದು. ಆರೇಳು ತಿಂಗಳಿರಬಹುದು.”

ಇವನ್ನು ಕೇಳಿ ಗಂಗೆ, “ ನೀವು ಬಹಳ ಒಳ್ಳೆಯ ಕೆಲಸವನ್ನು ಮಾಡಿದಿರಿ.” ಎಂದಳು.

ಸುಬ್ಬ ಮಾತಿಲ್ಲದೆ ಮೌನವಾಗಿ ತಲೆ ತಗ್ಗಿಸಿ ಕುಳಿತಿದ್ದ.

“ ನಿಮ್ಮನ್ನು ನಂಬಿದ್ದ ಸ್ನೇಹಿತರಿಗೆ ದೊಡ್ಡ ಉಪಕಾರ ಮಾಡಿದಂತಾಯಿತು–ಬಹಳ ಪುಣ್ಯದ ಕೆಲಸ ಮಾಡಿದಿರಿ.” ಎಂದಳು ಮತ್ತೆ.

ಅದಕ್ಕೂ ಸುಬ್ಬ ಪ್ರತಿ ಹೇಳಲಿಲ್ಲ. ಗಂಗೆಯೇ ಮತ್ತೆ, “ ನಿಮ್ಮಂಥವರಿಗೆ ಏನು ಮಾಡಬೇಕು ಗೊತ್ತೆ ? ” ಎಂದು ಕೇಳಿದಳು.

“ ಏನು ಮಾಡಬೇಕು. ಹೇಳಿ ಬಿಡು. ನಾನು ಎಲ್ಲದಕ್ಕೂ ಸಿದ್ಧ” ಎಂದ ಸುಬ್ಬ, ತಲೆ ತಗ್ಗಿಸಿಕೊಂಡೇ.

“ ಏನು ಮಾಡಬೇಕು ಹೇಳಿ ಬಿಡಲೋ ? ಕಸಬರಿಕೆ ಸೇವೆ ಮಾಡಿ ಹೊರಗಟ್ಟಬೇಕು.” ಗಂಗೆಯ ಮಾತಿನಲ್ಲಿ ಕ್ರೋಧ ದಳ್ಳುರಿಯುತ್ತಿತ್ತು.

ಎಂದೂ ಇಲ್ಲದ ಈ ಕೋಪದ ಮಾತುಗಳನ್ನು ಕೇಳಿ ಸುಬ್ಬ ತಲೆಯೆತ್ತಿ ನೋಡಿದ. ಗಂಗೆಯ ಕಣ್ಣಲ್ಲಿ ನೀರು.

“ ನೀನು ಹೇಳಿದ್ದು ಸರಿ, ಗಂಗಾ. ಆಗುವುದು ಆಗಿ ಹೋಯಿತು. ಮುಂದೇನು ಮಾಡಬೇಕು— ಹೇಳು.”

" ಅದೇ ನಾನು ಯೋಚಿಸುತ್ತಿದ್ದೇನೆ. ಏನೂ ತೋಚುವುದಿಲ್ಲ. ಬಹಳ ಇಕ್ಕಟ್ಟಿನ ಪ್ರಸಂಗ. ಪದ್ಮಾವತಮ್ಮ ಏನಾದರು. ಅದೇ ನನ್ನ ಚಿಂತೆ. ಅಲ್ಲ, ಕುಡಿಯುವುದು ಅಂದರೆ ಅಷ್ಟು ಕುಡಿಯುವುದೇ ? "

" ಆ ಮಾತು ಬಿಡು, ಗಂಗಾ. ನಾನು ಮುಂದೇನು ಮಾಡಬೇಕು–ಹೇಳು."

" ನಾಳೆ ಬೆಳಗ್ಗೆಯೇ ಇಲ್ಲಿಂದ ಹೊರಟು ಕೊಲ್ಲೂರಿಗೆ ಹೋಗಿ ಶಾಸ್ತ್ರಿಗಳನ್ನು ಕಂಡು ಎಲ್ಲವನ್ನೂ ತಿಳಿಸಿ ಮುಂದೆ ಅವರು ಏನು ಹೇಳಿದರೆ ಅದನ್ನು ಮಾಡಬೇಕು."

" ನಾನೂ ಅದೇ ಯೋಚನೆ ಮಾಡುತ್ತಿದ್ದೆ" ಎಂದು ಸುಬ್ಬ " ಇನ್ನೂ ಒಂದು ಮಾತು. ಪದ್ಮಾವತಮ್ಮನನ್ನು ಮತ್ತೆ ಕಾಣುವ ತನಕ ನಾನು ಕುಡಿಯುವುದಿಲ್ಲ." ಎಂದು ನುಡಿದ.

ಗಂಗೆ ನಕ್ಕಳು. ಸುಬ್ಬ ಗಂಭೀರವಾಗಿಯೇ ಕುಳಿತಿದ್ದ. ನಗಲಿಲ್ಲ.

# ೧೧

ರಾಮಚಂದ್ರಶಾಸ್ತ್ರಿಗೆ ಮೈಸೂರು ಸೀಮೆಗೆ ಕಾಲಿಟ್ಟು ಕಳೂರುಕಟ್ಟೆಯಲ್ಲಿ ಅಂಗಡಿ ಇಟ್ಟಾಗ ಎಲ್ಲವನ್ನೂ ಅವನು ಹೊಸತಾಗಿ ಕಲಿಯಬೇಕಾಯಿತು. ವ್ಯಾಪಾರವೊಂದೇ ಅವನಿಗೆ ಹೊಸತಲ್ಲ, ಕೆಲಸ ಮಾಡುವುದೇ ಅವನಿಗೆ ಹೊಸದು. ತಂದೆ ಇರುವ ತನಕ ಅಷ್ಟು ಇಷ್ಟು ವೇದ, ಸಂಸ್ಕೃತ ಅಂತ ಓದಿಕೊಳ್ಳುತ್ತಿದ್ದ. ತಂದೆ ಸತ್ತ ಮೇಲೆ ಜಮೀನಿನಿಂದ ಬರುತ್ತಿದ್ದ ವರಮಾನವನ್ನು ಖರ್ಚು ಮಾಡುವುದನ್ನು ಮಾತ್ರ ಕಲಿತುಕೊಂಡ. ತನ್ನ ಆಸ್ತಿ ಎಷ್ಟು; ಕುಳಿತುಕೊಂಡು ಊಟ ಮಾಡಿದರೆ ಎಷ್ಟು ದಿನ ತಡೆದೀತು ; ಅದರ ಮೇಲೆ ಎಷ್ಟು ಸಾಲ ಮಾಡಬಹುದು ? ಎಂದು ಒಂದು ಕ್ಷಣವೂ ಅವನು ಯೋಚಿಸಿರಲಿಲ್ಲ. ಸಾಲ ಅಮರಿಕೊಂಡು ಬಂದಾಗ, ಶೀನ ಭಂಡಾರಿಯು ಬೆದರಿಕೆ ಹೆಚ್ಚಿದಾಗ, ಆಸ್ತಿಯೇ ಮುಳುಗುವುದೆಂಬ ಭೀತಿ ಹುಟ್ಟಿದಾಗ—ಆಗಲೇ ಅವನು ಯೋಚಿಸಲು ಶುರುಮಾಡಿದ್ದು. ಆದರೆ ಯೋಚನೆಗೆ ಕಾಲ ಬಂದಾಗಲೇ ಮಿಂಚಿ ಹೋಗಿತ್ತು. ಅಲ್ಲದೆ, ಯೋಚಿಸಿಯಾದರೂ ಮಾಡುವುದೇನು ? ಜೀವನದ ಅನುಭವವಿಲ್ಲದ ಯೋಚನೆ ಮರಳಿನಿಂದ ಎಣ್ಣೆ ಹಿಂಡಲು ಯತ್ನಿಸಿದ ಹಾಗೆ. ಆ ಅನುಭವವೇ ಇಲ್ಲದ ರಾಮಚಂದ್ರ ಕಾಡಿನಲ್ಲಿ ಬಿಟ್ಟು ಬಂದ ಮಗುವಿನಂತೆ ವಿಹ್ವಲನಾಗಿ ಬೆದರುಗಣ್ಣಿನಿಂದ ಸುತ್ತುಮುತ್ತಲ ಪ್ರಪಂಚವನ್ನು ನೋಡುತ್ತಿದ್ದ. ಅಳುತ್ತಲೂ ಇದ್ದನೋ ಏನೋ. ಆದರೆ “ ಇಷ್ಟು ದೊಡ್ಡವನಾಗಿ ಅಳುತ್ತಾನೆ, ಕಾಣಿರೋ ” ಎಂದು ಜನ ಆಡಿಕೊಂಡಾರು ಅಂತ ಮನಸ್ಸಿನಲ್ಲಿಯೇ ಕೊರಗಿದ.

ಯಾವ ಉಪಾಯವೂ ಸೂಚಿಸದೆ ಇದ್ದಾಗ ಸುಬ್ಬನ ಸೂಚನೆಯನ್ನು ತತ್‌ಕ್ಷಣ ಒಪ್ಪಿಕೊಂಡು ಕಳೂರುಕಟ್ಟೆಗೆ ಬಂದ. ಸುಬ್ಬನೂ ಜೊತೆಗೆ ಇದ್ದದ್ದರಿಂದ ಕೊಂಚ ಧೈರ್ಯ. ಇಲ್ಲವಾದರೆ ಮಹಾರಾಯ ಅಲ್ಲಿ ಏನು ಮಾಡಲೂ ತೋಚದೆ ಆಕಾಶ ನೋಡುತ್ತ ಕುಳಿತುಕೊಳ್ಳುತ್ತಿದ್ದ. ಸುಬ್ಬ ಜನದ ಬಳಕೆಯುಳ್ಳವ, ನಾನಾ ವಿಧದ ಸ್ವಭಾವವನ್ನು ಚೆನ್ನಾಗಿ ಅರಿತವ. ಯಾರ ಹತ್ತಿರ ಹೇಗೆ ಮಾತಾಡಬೇಕು; ಯಾರನ್ನು ಹೇಗೆ ಒಲಿಸಿಕೊಳ್ಳಬೇಕು ಎಂದು ಅವನಿಗೆ ಚೆನ್ನಾಗಿ ಗೊತ್ತು.

ಇದರ ಜೊತೆಗೆ ರಾಮಚಂದ್ರನಿಗೆ ಅಸಾಧ್ಯ ದಾಕ್ಷಿಣ್ಯ. ಯಾರ ಮನೆಗಾದರೂ ಕರೆಯದೆ ಊಟಕ್ಕೆ ಹೋಗುವುದು ಹೇಗೆ? ಹೋದರೆ ಅವರು ಏನು ತಿಳಿದುಕೊಂಡಾರು? ಅಂತ ಸಂಕೋಚ. ಸುಬ್ಬ ಮತ್ತು ರಾಮಚಂದ್ರ ಕಳೂರುಕಟ್ಟೆಗೆ ಹೋಗುತ್ತಿದ್ದಾಗ ಇದೇ ದೊಡ್ಡ ರಾಮಾಯಣವಾಯಿತು. "ಶಾಸ್ತ್ರಿಗಳೇ, ಇದು ನಿಮ್ಮ ಮನೆಯೂ ಅಲ್ಲ; ಊರೂ ಅಲ್ಲ. ಇಲ್ಲಿ ದಾಕ್ಷಿಣ್ಯ ಅಂತ ಕೂತರೆ ಉಪವಾಸ ಸಾಯಬೇಕು—ಅಷ್ಟೆ. ಪರಸ್ಥಳದಲ್ಲಿ ಅದೆಲ್ಲ ನಡೆಯುವುದಿಲ್ಲ" ಅಂತ ಹೇಳಿ ಅವನನ್ನು ಊಟಕ್ಕೆ ಎಳೆಯಬೇಕಾದರೆ ಸುಬ್ಬನಿಗೆ ಸಾಕು ಸಾಕಾಗಿ ಹೋಗುತ್ತಿತ್ತು.

ಇಂಥವನು ಅಂಗಡಿ ವ್ಯಾಪಾರ ಮಾಡುವುದು ಸಾಧ್ಯವೇ ಅಂತ ಸುಬ್ಬನಿಗೆ ಎಷ್ಟೋ ಸಲ ಸಂಶಯ ಬಂದಿತ್ತು. ಆದರೂ ಬೇರೆ ದಾರಿ ಇರಲಿಲ್ಲ. ಏನಾದರೂ ಮಾಡದೆ ಇದ್ದರೆ ಬದುಕು ಮಾಡುವುದು ಹೇಗೆ?

ಸರಿ. ಅಲ್ಲಿ ಇಲ್ಲಿ ಮಾತನಾಡಿ ಒಂದು ಅಂಗಡಿ ಮಾಡಿದರು. ಸಣ್ಣ ಅಂಗಡಿ. ಇಬ್ಬರೂ ಕೂಡಿ ಗಾಡಿ ಮಾಡಿಕೊಂಡು ಸಾಗರಕ್ಕೆ ಹೋಗಿ ಅಷ್ಟು ಸಾಮಾನು ತಂದರು. ಅಂಗಡಿ ಶುರುವಾಯಿತು. ಸುಬ್ಬ ಇದ್ದದ್ದರಿಂದ ರಾಮಚಂದ್ರ ಧೈರ್ಯದಿಂದ ವ್ಯಾಪಾರ ಶುರು ಮಾಡಿದ. ವ್ಯಾಪಾರ ಅಂದರೇನು ಅಂತ ತಿಳಿಯುವುದಕ್ಕೆ ನಾಲ್ಕು ತಿಂಗಳು ಹಿಡಿಯಿತು. ಅದೂ ಸುಬ್ಬ ಇದ್ದದ್ದರಿಂದ, ಈ ಸಾಮಾನಿಗೆ ಎಷ್ಟು ಹೇಳಬೇಕು; ಬಾಕಿ ಅಂಗಡಿಗಳಲ್ಲಿ ಎಷ್ಟು ಹೇಳುತ್ತಾರೆ; ಅಳತೆ; ಲೆಕ್ಕಾಚಾರ—ಎಲ್ಲವೂ ಹೊಸತು ರಾಮಚಂದ್ರನಿಗೆ. ಆದರೂ ಬಹಳ ಕಷ್ಟಪಟ್ಟು, ಮನಸ್ಸನ್ನು ಏಕಾಗ್ರಗೊಳಿಸಿ ಕೆಲಸ ಮಾಡಿದ್ದರಿಂದ ವ್ಯಾಪಾರದ ಮೂಲ ಸೂತ್ರಗಳಲ್ಲಿ ಮುಖ್ಯವಾದ ಕೆಲವಾದರೂ ಅವನಿಗೆ ತಿಳಿದಂತಾಯಿತು. ಆದರೆ ಅಷ್ಟೇ ಸಾಲದು ಅಂತ ತಿಳಿಯಲು ಅವನಿಗೆ ಬಹಳ ಕಾಲ ಬೇಕಾಗಲಿಲ್ಲ.

ಸುಬ್ಬ ಊರಿಗೆ ಹೊರಟು ನಿಂತ ಹೊತ್ತಿಗೆ ವ್ಯಾಪಾರ ಸಾಧಾರಣವಾಗಿ ನಡೆಯುತ್ತಿತ್ತು. ಒಂದು ದೃಷ್ಟಿಯಿಂದ ನೋಡಿದರೆ ವ್ಯಾಪಾರ ಬಹಳ ಚೆನ್ನಾಗಿ ನಡೆಯುತ್ತಿತ್ತು ಅಂತಲೇ ಹೇಳಬೇಕು. ಮೋಸವಿಲ್ಲದ ವ್ಯಾಪಾರ. ಧಾರಣೆ ಎಲ್ಲರಿಗೂ ಒಂದೇ. ಸೇರು ಅಂದರೆ ಸೇರೇ. ಮೂರು ಪಾವು ಅಲ್ಲ. ಹೀಗಾಗಿ ಸುತ್ತಮುತ್ತಲ ಹಳ್ಳಿಯವರು, ಊರಿನವರು, ಎಲ್ಲರೂ ಶಾಸ್ತ್ರಿಗಳ ಅಂಗಡಿಗೇ ಬರುತ್ತಿದ್ದರು. ಈ ನಂಬಿಕೆ ವ್ಯಾಪಾರದಲ್ಲಿ ಮುಖ್ಯ ಎಂದು ಶಾಸ್ತ್ರಿಗೂ ಬಹಳ

ಬೇಗ ತಿಳಿಯಿತು. ಅವನು ಹಾಗೆ ಮೋಸವಿಲ್ಲದೆ ನಡೆದುಕೊಂಡದ್ದು ಈ ರೀತಿ ಯೋಚನೆ ಮಾಡಿ ಅಲ್ಲ. ಬೇರೆ ರೀತಿ ಅವನಿಗೆ ತಿಳಿಯದು. ಸೇರಿಗೆ ಕೆಲವು ಸಲ ಇಪ್ಪತ್ತು ತೊಲೆಯೋ ಆಗುವುದು ಸಾಧ್ಯ ಅಂತ ಅವನಿಗೆ ಯಾವಾಗಲೂ ಅನ್ನಿಸಿರಲಿಲ್ಲ. ಸೇರಿಗೆ ಇಪ್ಪತ್ತನಾಲ್ಕು ತೊಲೆ– ಯಾವಾಗಲೂ; ತೆಗೆದು ಕೊಳ್ಳುವಾಗಲೂ ಅಷ್ಟೇ. ಕೊಡುವಾಗಲೂ ಅಷ್ಟೆ.

ವ್ಯಾಪಾರ ಬೆಳೆದಂತೆ ಬಾಕಿಯೂ ಬೆಳೆಯತೊಡಗಿತು. ಸರಿಯಾಗಿ ದುಡ್ಡುಕೊಟ್ಟು ಸಾಮಾನು ಕೊಂಡುಕೊಂಡು ಹೋಗುವವರು ಒಬ್ಬರಾದರೆ "ನಾಳೆ ಕೊಡುತ್ತೇನೆ, ನಾಡಿದ್ದು ಕೊಡುತ್ತೇನೆ" ಎನ್ನುವವರು ಹತ್ತು ಜನ. ಕತ್ತಿನ ಮೇಲೆ ಕೂತು ವಸೂಲುಮಾಡುವ ಕಲೆ ರಕ್ತಗತವಾಗಿ ಬಂದಿರುತ್ತದೋ ಏನೋ. ಹಾಗೆ ವಸೂಲಿ ಮಾಡುವುದಿರಲಿ, ಗಟ್ಟಿಯಾಗಿ ಕೇಳುವುದಕ್ಕೂ ದಾಕ್ಷಿಣ್ಯ ರಾಮಚಂದ್ರನಿಗೆ. ಬಾಕಿ ಬೆಳೆದದ್ದರಿಂದ ದುಡ್ಡು ಕೈಗೆ ಹತ್ತಲೇ ಇಲ್ಲ. ಬಂದ ದುಡ್ಡನ್ನು ಮತ್ತೆ ವ್ಯಾಪಾರಕ್ಕೆ ಹಾಕದೆ ಇದ್ದರೆ ಅಂಗಡಿ ಮುಚ್ಚ ಬೇಕು. ಬಂದ ಲಾಭವೆಲ್ಲ – ಅದು ಲಾಭ ಎನ್ನುವುದಾದರೆ – ಗಿರಾಕಿಗಳ ವಶ. ಹಳ್ಳಿಯ ಗಿರಾಕಿಗಳಾದರಂತೂ ತೀರಿತು. ಅವರು ಪೇಟೆಗೆ ಬಂದರೆ, ಈ ಅಂಗಡಿಗೆ ಬಂದರೆ ದುಡ್ಡು. ಇಲ್ಲದಿದ್ದರೆ ನಾನು. ಸಾಮಾನ್ಯವಾಗಿ ಹಳ್ಳಿ ಜನ ಮೋಸಮಾಡುತ್ತಿರಲಿಲ್ಲ.

ಸುಬ್ಬ ಮತ್ತೆ ಕಳೂರುಕಟ್ಟೆಗೆ ಬಂದಾಗ ಈ ಪರಿಸ್ಥಿತಿಯನ್ನು ಕಂಡು ಅವನ ಎದೆ ನಡುಗಿತು. "ಶಾಸ್ತ್ರಿಗಳೇ, ಇಷ್ಟು ಬಾಕಿ ಬಿಟ್ಟುಕೊಂಡರೆ ವ್ಯಾಪಾರ ಮಾಡಿದ ಹಾಗೇ" ಎಂದ.

"ಏನು ಮಾಡುವುದು ಸುಬ್ಬ, ಕೇಳಿದರೆ ಕೊಡುವುದಿಲ್ಲ."

"ಕೊಡುವುದಿಲ್ಲ ಅಂದರೆ ಅವರ ಅಪ್ಪನ ಮನೆಯ ಗಂಟೋ?"

"ನನಗೆ ಏನು ಮಾಡಬೇಕೋ ತಿಳಿಯುವುದಿಲ್ಲ. ಸ್ವಲ್ಪ ಜೋರಾಗಿ ಕೇಳಿದರೆ ಮತ್ತೆ ವ್ಯಾಪಾರಕ್ಕೆ ಬರುವುದಿಲ್ಲ."

"ಬರದಿದ್ದರೆ ಹಾಳಾಗಿಹೋಗಲಿ; ಬಾಕಿ ಮಾತ್ರ ವಸೂಲು ಮಾಡದೆ ಬಿಡಬಾರದು."

"ನನಗೆ ಇನ್ನು ಯಾವ ಕಷ್ಟವೂ ಇಲ್ಲ. ಈ ವಸೂಲಿಯೊಂದೇ ಕಷ್ಟ."

"ವ್ಯಾಪಾರದಲ್ಲಿ ಅದೇ ಮುಖ್ಯ. ಅದೇ ನಿಮಗೆ ಆಗುವುದಿಲ್ಲ. ಶಾಸ್ತ್ರಿಗಳೇ, ನಿಮಗೆ ಬಹಳ ದಾಕ್ಷಿಣ್ಯ. ವ್ಯಾಪಾರಕ್ಕೆ ನೀವು ಲಾಯಖ್ಖಲ್ಲ"

"ಹೌದು ಸುಬ್ಬಾ, ನನಗೂ ಹಾಗೇ ಅನ್ನಿಸುತ್ತಿದೆ. ಇನ್ನೇನು ಮಾಡಲಿ?"

ಸುಬ್ಬನೂ ಬಹಳ ಯೋಚನೆಮಾಡಿ "ಬಾಕಿ ಇರುವವರ ಪಟ್ಟಿ ಒಂದು ಕೊಡಿ. ನೋಡುವಾ. ನನಗೂ ಈ ಬಾಕಿ ವಸೂಲಿ ಹೆಚ್ಚಾಗಿ ತಿಳಿಯದು. ಆದರೆ ಮೇಳದ ಯಜಮಾನನಿಂದ ಸಂಬಳ ವಸೂಲುಮಾಡಿಕೊಂಡು ಸ್ವಲ್ಪ ಅಭ್ಯಾಸವಾಗಿದೆ" ಎಂದ.

ಬಾಕಿ ಪಟ್ಟಿಯನ್ನು ಹಿಡಿದುಕೊಂಡು ಮರುದಿನವೇ ಕೆಲಸಕ್ಕೆ ಶುರು ಮಾಡಿದ. ನಕ್ಷತ್ರಕನ ಕಥೆ ಅವನಿಗೆ ಗೊತ್ತು. ಈಗ ಆ ವೇಷವನ್ನೇ ತಳೆದ. ಒಂದು ತಿಂಗಳಲ್ಲಿ ಅರ್ಧಕ್ಕರ್ಧ ಬಾಕಿ ವಸೂಲಾಯಿತು. ಉಳಿದವರು ನಕ್ಷತ್ರಕನ ತಾತಂದಿರು. "ಬಾಕಿದಾರ ಹರಿಶ್ಚಂದ್ರನಾದ್ದರಿಂದ ನಕ್ಷತ್ರಕ ಗೆದ್ದ. ಇಂಥವರು ಒಬ್ಬರು ಸಿಕ್ಕಿದರೆ ನಕ್ಷತ್ರಕ ಕಾಡಿಗೆ ಹೋಗಿ ಮೂಗು ಹಿಡಿದು ಕುಳಿತುಕೊಳ್ಳುತ್ತಿದ್ದ" ಎಂದುಕೊಂಡ ಸುಬ್ಬ.

"ನೋಡಿ, ಶಾಸ್ತ್ರಿಗಳೇ, ಇಷ್ಟು ವಸೂಲಾಯಿತು. ಇನ್ನು ಉಳಿದದ್ದು ದೇವರಿಗೆ ಬಿಟ್ಟುಬಿಡಿ. ಇನ್ನು ಮೇಲೆ ಮಾತ್ರ ಸಾಲ ಕೊಡಬೇಡಿ" ಎಂದು ಸುಬ್ಬ ಹೇಳಿದ.

"ಸಾಲ ಕೊಡುವುದೇ ಇಲ್ಲ ಅನ್ನುವುದಕ್ಕೂ ಆಗುವುದಿಲ್ಲ. ನಂಬಿ ಗಸ್ತರು ಅನ್ನುವವರಿಗೂ ಕೊಡದೆ ಇರುವುದು ಹೇಗೆ? ಪರಸ್ಥಳ. ಒಬ್ಬರಿಗೊಬ್ಬರು ಬೇಕೇಬೇಕಾಗುತ್ತದೆ. ಸಮಯ ಸಂದರ್ಭ, ಆನುವು ಆಪತ್ತು ಅಂತ ನೋಡದಿದ್ದರೆ ಹೇಗೆ?"

"ನೀವು ಹೇಳುವುದೂ ಸರಿಯೆ. ಆದರೆ ಬಹಳ ಎಚ್ಚರಿಕೆಯಿಂದಿರಬೇಕು, ಶಾಸ್ತ್ರಿಗಳೇ." ಎಂದ.

ರಾಮಚಂದ್ರ ಸ್ವಲ್ಪ ಹೊತ್ತು ಸುಮ್ಮನಿದ್ದು ಆಮೇಲೆ

"ಸುಬ್ಬ, ನೀನು ಏಕೆ ಊರಿಗೆ ಹೋಗಬೇಕು? ಇಲ್ಲೇ ಇದ್ದುಬಿಡು. ನೀನಿದ್ದರೆ ನನಗೆ ಯಾವ ಹೆದರಿಕೆಯೂ ಇಲ್ಲ. ಮೇಳಗೀಳ ಅಂತ ನೀನು ಊರೂರು ಯಾಕೆ ಸುತ್ತುವುದು? ಇಬ್ಬರೂ ಇಲ್ಲೇ ವ್ಯಾಪಾರ ಮಾಡೋಣ. ಏನು ಹೇಳುತ್ತೀ?" ಎಂದು ಕೇಳಿದ.

ಸುಬ್ಬ ಸ್ವಲ್ಪ ಹೊತ್ತು ಯೋಚನೆ ಮಾಡಿ, "ಈ ಒಂದು ವಿಷಯದಲ್ಲಿ ನೀವು ಕ್ಷಮಿಸಬೇಕು. ಊರೂರು ಸುತ್ತಿ ಅಭ್ಯಾಸವಾದ ನನಗೆ ಒಂದು ಕಡೆ ಇದ್ದುಬಿಡುವುದು ಎಂದರೆ ಬೆಂಕಿಯ ಮೇಲೆ ಕುಳಿತ ಹಾಗೆ ಆಗುತ್ತದೆ.

ನನ್ನದು ತಿರುಕುಳಿ ಬಾಳು. ನನ್ನ ಜನ್ಮವೇ ಹಾಗೆ. ಏನು ಮಾಡಲಿ?" ಎಂದ. ಸುಬ್ಬ ಹೇಳಿದ್ದು ನಿಜ. ಅವನಿಗೆ ಆಗಲೇ ಆ ಊರು ಬೇಸರ ಹುಟ್ಟಿಸಿತ್ತು.

ಸುಬ್ಬನ ಮಾತಿನಲ್ಲಿದ್ದ ಯಥಾರ್ಥತೆಯನ್ನು ಕಂಡ ರಾಮಚಂದ್ರ ಮತ್ತೆ ಆ ವಿಚಾರವಾಗಿ ಮಾತಾಡಲು ಹೋಗಲಿಲ್ಲ. ಆದರೆ

"ಸುಬ್ಬ; ನಾನು ನನ್ನ ಹೆಂಡತಿಗೆ ಬೇಗ ಬಂದುಬಿಡುತ್ತೇನೆ ಎಂದು ಹೇಳಿ ಬಂದೆ. ಈಗ ಆಗಲೇ ಎಂಡು ವರ್ಷವಾಗುತ್ತ ಬಂದಿದೆ. ಮಗು ಹೇಗಿದೆಯೋ, ಅವಳು ಹೇಗಿದ್ದಾಳೋ ? ನೋಡಿ ಬರಬೇಕು. ನಾಳೆಯೇ ನಾವು ಹೊರಟುಬಿಡೋಣ. ಆಗಬಹುದೇ ?" ಎಂದು ಕೇಳಿದ.

"ಆಗಲಿ" ಎಂದ ಸುಬ್ಬ. ಕಳೂರುಕಟ್ಟೆಯನ್ನು ಬಿಟ್ಟರೆ ಸಾಕು ಎನ್ನಿಸಿದ್ದ ಅವನಿಗೆ ಇದರಿಂದ ಬಹಳ ಸಂತೋಷವೂ ಆಯಿತು.

ವೇಷ ಮರೆಸಿಕೊಂಡು ಬೈರಾಗಿಯ ಹಾಗೆ ತನ್ನ ಹೆಂಡತಿಯನ್ನು ನೋಡಿ ರಾಮಚಂದ್ರ ಒಬ್ಬನೇ ಹಿಂತಿರುಗಿ ಬಂದ. ಸುಬ್ಬ ಊರಿನಲ್ಲೇ ಉಳಿದ.

ರಾಮಚಂದ್ರನಿಗೆ ತನ್ನ ಹೆಂಡತಿಯನ್ನು ನೋಡಿದಾಗ ಬಹಳ ದುಃಖವಾಗಿತ್ತು. ಅವಳು ಏಕಾಂಗಿಯಾಗಿ ಅಲ್ಲಿ ತವರು ಮನೆಯಲ್ಲಿ ಅತಿ ಸಂಕೋಚದಿಂದ ಬಾಳುತ್ತಿರುವಳೆಂಬುದೂ ಅವನಿಗೆ ಚೆನ್ನಾಗಿ ತಿಳಿದಿತ್ತು. ಮಾರು ವೇಷದಿಂದ ಹೋದದ್ದರಿಂದ ಮಗುವನ್ನು ಒಂದು ಸಲ ಮಾತಾಡಿಸಿ ಮುದ್ದು ಮಾಡಿ ಬರಲೂ ಆಗಲಿಲ್ಲ. ಆದ ಕಾರಣ ಊರಿಂದ ಹೊರಟಾಗ ಅವನ ಮನಸ್ಸು ಭಾರವಾಗಿತ್ತು. ಆದರೆ ಹಲಸೂರು ದೂರ ದೂರವಾಗುತ್ತ ಬಂದ ಹಾಗೆ ಮನಸ್ಸಿನ ಭಾರವೂ ಕಡಿಮೆಯಾಗುತ್ತ ಬಂತು. ಹುಬ್ಬಳ್ಳಿಗೆ ಬರುವಾಗ ಅರ್ಧವಷ್ಟಿದ್ದ ತನ್ನ ಹೆಂಡತಿ ಮಕ್ಕಳ ಚಿಂತೆ ನಗರಕ್ಕೆ ಬರುವಾಗ ರವಷ್ಟು ಮಾತ್ರ ಉಳಿದಿತ್ತು. ಕಳೂರುಕಟ್ಟೆಗೆ ಬಂದು ಅಂಗಡಿಯ ಬಾಗಿಲು ತೆರೆದ ಮೇಲೆ ಅದು ಮರೆತಂತೆಯೇ ಆಯಿತು.

ಮತ್ತೆ ಎಂದಿನಂತೆ ವ್ಯಾಪಾರ ಶುರುವಾಯಿತು. ಸಾಲ ಕೊಡುವುದು ಬೇಡ ಬೇಡವೆಂದರೂ ಬಾಕಿ ಬೆಳೆಯುವುದು ನಿಲ್ಲಲಿಲ್ಲ. ಆದರೂ ಮೊದಲಿಗಿಂತ ಕೊಂಚ ವಾಸಿ. ಒಂದು ತಿಂಗಳಾದರೂ ಹಣ ಕೊಡದೆ ಇದ್ದವರಿಗೆ ಮತ್ತೆ ಸಾಲಕೊಡುವುದನ್ನು ನಿಲ್ಲಿಸಿಬಿಟ್ಟ. ಇದರಿಂದ ಸ್ವಲ್ಪ ಹಣ ಹೋದರೂ

ಆಗುವ ನಷ್ಟ ಒಂದು ಪರಿಮಿತಿಯೊಳಗೆ ಬಂತು.

ಮೊದ ಮೊದಲು ಆ ಊರಿನ ಆಚಾರ ವಿಚಾರ ಆ ಕನ್ನಡ, ತಿಳಿಯದೆ ರಾಮಚಂದ್ರ ಕೊಂಚ ಕಕ್ಕಾವಿಕ್ಕಿಯಾಗುತ್ತಿದ್ದ. ಇಷ್ಟು ಹೊತ್ತಿಗಾಗಲೇ ಎರಡು ವರ್ಷವಾದದ್ದರಿಂದ ಅಲ್ಲಿನ ಜನರೊಡನೆ ಬೆರೆತು ಅವರ ಮಾತನ್ನು ಸಲೀಸಾಗಿ ಉಪಯೋಗಿಸಲು ತೊಂದರೆ ಆಗುತ್ತಿರಲಿಲ್ಲ.

ಅವನ ಅಂಗಡಿಗೆ ಒಬ್ಬಳು ಬರುತ್ತಿದ್ದಳು. ಆ ಮಾತು ಈ ಮಾತು ಆಡುತ್ತ ಬಹಳ ಹೊತ್ತು ನಿಲ್ಲುತ್ತಿದ್ದವಳು ಅವಳೊಬ್ಬಳೇ. ಆಸ್ತಿ ಹೋದ ಚಿಂತೆ, ಪರದೇಶಿಯಾದ ಚಿಂತೆ, ಹೆಂಡತಿ— ಮಗು ತನ್ನ ಬಳಿಯಲ್ಲಿಲ್ಲದ ಚಿಂತೆ ವ್ಯಾಪಾರದ ಚಿಂತೆ— ಇವುಗಳಲ್ಲಿ ಮಗ್ನವಾಗಿರುತ್ತಿದ್ದ ಶಾಸ್ತ್ರಿಗೆ ಮೊದಮೊದಲು ಅವಳ ಕಡೆ ಅಷ್ಟು ಗಮನ ಹೋಗಲಿಲ್ಲ. ಎಷ್ಟೋ ಜನ ಅಂಗಡಿಗೆ ಬರುತ್ತಾರೆ, ಹೋಗುತ್ತಾರೆ. ಒಬ್ಬೊಬ್ಬರು ಒಂದೊಂದು ತರಹ. ಕೆಲವರು ವಿಮಾನದ ಮೇಲೆ ಬಂದಿರುತ್ತಾರೆ. ಬಂದ ಕೂಡಲೇ ಸಾಮಾನು ತೆಗೆದುಕೊಂಡು ಹೋಗುವ ತನಕ ಚಡಪಡಿಸುತ್ತಿರುತ್ತಾರೆ. ಕೆಲವರು ಸಾಮಾನು ಕಟ್ಟಿ ಕೊಟ್ಟರೂ ಹೋಗುವುದಿಲ್ಲ. ಅದು ಇದು ಮಾತಾಡುತ್ತಾ ನಿಂತಿರುತ್ತಾರೆ. ಅದನ್ನೆಲ್ಲ ಗಮನಿಸುತ್ತ ನಿಂತಿರುವುದಕ್ಕೆ ಪುರಸೊತ್ತೆಲ್ಲಿ ?

ಆದರೆ—

ಒಂದು ದಿನ ಸಂಪೂರ್ಣವಾಗಿ ಅವನ ದೃಷ್ಟಿ, ವ್ಯಾಪಾರ ಇತ್ಯಾದಿಗಳಲ್ಲಿ ವ್ಯಗ್ರವಾಗದ ಕೇವಲ ಮನುಷ್ಯ ದೃಷ್ಟಿ ಅವಳ ಮೇಲೆ ಬಿತ್ತು.

ಮೈ ಜುಮ್ಮೆಂದಿತು.

ರೂಪವತಿಯಲ್ಲ ಅಲ್ಲವೆ? ಅಲ್ಲದಿರಬಹುದು. ಆದರೆ ಇವಳು ಖಂಡಿತ ಮೋಹಿನಿ; ಆ ಕಣ್ಣು ಆ ಹುಬ್ಬು, ಆ ಗಲ್ಲ, ಆ ಜಡೆ, ಮೂಗಿನ ಆ ನತ್ತು; ಕಿವಿಯ ಓಲೆ, ಕೈ ಬಳೆ. ಎಲ್ಲವೂ ತಕ್ಕ ತಕ್ಕ ಎಂದು ಕುಣಿಯುತ್ತವೆ. ಆ ಕಣ್ಣು ಅತ್ತ ಇತ್ತ, ಮೇಲೆ ಕೆಳಗೆ ಸುತ್ತುಮುತ್ತ ಒಂದು ಕ್ಷಣವೂ ನಿಶ್ಚಲವಾಗಿ ನಿಲ್ಲದೆ ಅಲೆಯುತ್ತದೆ. ಒಂದೊಂದು ಅಂಗವಿಕ್ಷೇಪವೂ ಒಂದೊಂದು ಮುದ್ರೆ; ಒಂದೊಂದು ನಿಲುವೂ ಒಂದೊಂದು ಭಂಗಿ. ತುಂಟು ನಗೆ.

ಖಂಡಿತವಾಗಿಯೂ ರಾಮಚಂದ್ರ ಅಂಥವಳನ್ನು ಎಲ್ಲೂ ಕಂಡಿರಲಿಲ್ಲ. ಇದು ಅಸಾಧಾರಣ, ಇದು ಅಸಾಮಾನ್ಯ ಎಂದು ಮಾತ್ರ ಅವನಿಗೆ ಎನಿಸಿತು. ಆದರೆ ಏಕೆ ಎಂದು ಮಾತ್ರ ತಿಳಿಯಲಿಲ್ಲ

ಕಣ್ಣು— ಚಂಚಲವಾದ ಕಣ್ಣು ಮಿಂಚಿನ ಗೋಳಗಳಾಗಿ ಒಡೆದು ವಿದ್ಯುತ್ತನ್ನು ಸುತ್ತಲೂ ಚೆಲ್ಲಿದುವು. ಹುಬ್ಬು ಬಿಲ್ಲಿನಂತೆ ಬಾಗಿಬಾಗಿ ಸುತ್ತಲೂ ಬಾಣದ ಮಳೆಯನ್ನು ಕರೆದುವು. ಬಳೆಗಳು ಘಲಿರುಘಲಿರೆಂದು ನೂರು ವೀಣೆಯ ತಂತಿಯ ಮೇಲೆ ಕೈಯಾಡಿಸಿ ಮಿಡಿಸುವು. ಮೃದಂಗದ ತಾಳವನ್ನನುಸರಿಸಿ ಕೈ ಆಡಿತು; ಮೈ ಬಳುಕಿತು; ಕಾಲಗೆಜ್ಜೆ ಝಣರು ಝಣರೆಂದು ನಿಕ್ವಣಿಸಿತು.

ರಾಮಚಂದ್ರ ಮುಗ್ಧನಾದ. ಅಂಗಡಿ, ದುಡ್ಡು, ಕಾಸು, ಮನೆ, ಮಠ ಊರು, ಕೇರಿ ಜಗತ್ತು— ಎಲ್ಲವೂ ಮರೆಯಿತು. ಒಂದು ಕ್ಷಣ ಕನಸಿನಲ್ಲಿ— ಅಂತಃಪುರದಲ್ಲಿ, ಹಂಸತೂಲಿಕಾ ತಲ್ಪದ ಮೇಲೆ—

ಅವಳ ಕೈ ಕೊಂಕಿತು, ಮೈ ಬಳುಕಿತು; ನಗೆ ತುಳುಕಿತು, ಕಣ್ಣಿನ ಕುಡಿ ಮಿಟುಕಿತು; ಮಿಂಚು ತುಳುಕಿತು. ಬೆಳುದಿಂಗಳ ಮಹಾಪೂರ ಮೊರೆಯಿತು.

" ಅಯ್ಯನೋರೆ, ಒಂದು ಪಾವು ಬೇಳೆ ಕೊಡಿ" ಎಂದು ಅವಳು ಮಾತಾಡಿದಾಗಲೇ ರಾಮಚಂದ್ರನಿಗೆ ಮೈ ಅರಿವು ಬಂದು ತಾನು ಇಷ್ಟು ಹೊತ್ತು ಅವಳ ಕಡೆಗೆ ನೋಡುತ್ತಿದ್ದೆನೆಂದು ತಿಳಿದು ಕಕ್ಕಾವಿಕ್ಕಿಯಾದದ್ದು. ಸುತ್ತಲೂ ನೋಡಿದ. ಯಾರೂ ಇಲ್ಲ. ಅವಳ ಮುಖದ ಕಡೆಗೆ ನೋಡಿದ. ತುಂಟ ನಗೆ— ಅಷ್ಟೇ ಇನ್ನೇನೂ ಇಲ್ಲ.

ರಾಮಚಂದ್ರನಿಗೆ ಕೊಂಚ ಧೈರ್ಯ ಬಂತು. ಆದರೆ ಮುಖ ಎತ್ತಿ ನೋಡುವುದಕ್ಕೆ ಆಗಲಿಲ್ಲ. ಅದು ಹೇಗೆ ಬೇಳೆ ಅಳೆದು ಕೊಟ್ಟು ದುಡ್ಡು ತೆಗೆದುಕೊಂಡನೋ ಅವನಿಗೆ ತಿಳಿಯದು. ಅವಳು ಕೊಟ್ಟ ದುಡ್ಡನ್ನು ಎಣಿಸಿ ನೋಡದೆ ಹಾಗೇ ಪೆಟ್ಟಿಗೆಯೊಳಕ್ಕೆ ತುರುಕಿದ.

ಅವಳೇ ಹೇಳಿದಳು: ' ಬರ್‍ತೀನಿ, ಅಯ್ಯನೋರೆ! '

" ಬರ್‍ತೀನಿ ಅಯ್ಯನೋರೆ!"— ಗಣೆಯ ಮೇಲೆ ಡೊಂಬತಿ ಕುಣಿದ ಹಾಗೆ, ನಾಗರ ಹಾವು ನೆಲದ ಮೇಲೆ ಸರ‍್ರನೆ ಕೊಂಕಿ ಕೊಂಕಿ ಹರಿದು ಹೋದ ಹಾಗೆ, ಇಲ್ಲಿ ಸ್ವಿಚ್ಚನ್ನೊತ್ತಿದರೆ, ಅಲ್ಲಿ ಎಲ್ಲೋ ಬೆಳಕು ಝಗ್ಗೆಂದ ಹಾಗೆ. ಇದು ಸಂಗೀತ— ಆರೋಹಣ, ಅವರೋಹಣ; ಸನಿದಪ— ಮಗರಿಸ.... ....

ಮತ್ತೆ ಮತ್ತೆ ದಿನ ದಿನವೂ ಅವಳು ಬಂದಳು. ಮನಸ್ಸಿನ ಒಂದು ಭಾಗ ವ್ಯಾಪಾರದಲ್ಲಿ ಮಗ್ನವಾಗಿದ್ದರೆ ಇನ್ನೊಂದು ಭಾಗ ಅವಳ ಬರವನ್ನು

ಕಾತರವಾಗಿ ಕಾಯುತ್ತಿತ್ತು. ಅವಳು ಬಂದರೆ ಅವನಿಗೆ ಅಂಗಡಿಯಲ್ಲೆಲ್ಲ ಮಿಂಚಿನ ಹೊಳೆಯೇ ಹರಿದಂತೆ ಆಗುತ್ತಿತ್ತು. ಅಳತೆ ತಪ್ಪುವುದು; ತೂಕ ಸರಿ ಹೋಗುವುದಿಲ್ಲ. ಚಿಲ್ಲರೆ ಮೂರು ಸಲ ಎಣಿಸಿದರೂ ಹೆಚ್ಚು ಕಡಿಮೆಯೇ ಆಗುತ್ತದೆ.

ಅವಳನ್ನು ನೋಡುವ ಧೈರ್ಯವಿಲ್ಲ. ಆದರೂ ನೋಡುವ ಆಶೆ; ನೋಡಬೇಕೆಂದು ಕದ್ದು ಕಣ್ಣೆತ್ತಿದರೆ ಅವಳ ನೋಟ ಅವನ ಕಣ್ಣನ್ನು ತಿವಿಯುವುದು. ಅದೇ ತುಂಟ ನಗೆ; ಕಣ್ಣನ್ನು ಹೊಕ್ಕು ಅದರ ಮೂಲಕ ಮನಸ್ಸನ್ನು ಹುಡುಕುವಂಥ ನೋಟ. ಕೂಡಲೇ ತಲೆ ತಗ್ಗಿಸುತ್ತಾನೆ. ಆದರೆ ತಲೆ ತಗ್ಗಿದರೂ ಕಣ್ಣ ಮುಂದೇ ಅದೆ ತುಂಟ ನಗೆ. ಅವಳ ಮಾತೂ ಅದೇ ರೀತಿ. ಕಾಮನ ಬಿಲ್ಲನ್ನು ಕರಗಿಸಿ ಮಾಡಿದ ಸಂಗೀತ.

ಅವಳು ಅಂಗಡಿಯನ್ನು ಬಿಟ್ಟರೆ ಅವನ ಕಣ್ಣು ಅವಳನ್ನು ಹಿಂಬಾಲಿಸುವುದು. ನರ್ತಕಿಯಂತೆ ಹೆಜ್ಜೆಯಿಡುತ್ತ ಅವಳು ನಡೆಯುವಳು. ಅಂಗಾಂಗವೂ ಬಳುಕಿ ಕೊಂಕಿ, ಕುಣಿಯುವುದು.

ಅಲ್ಲೇ, ಅವರ ಅಂಗಡಿಯ ಹತ್ತಿರದಲ್ಲೇ—ಎದುರು ಬೀದಿಯಲ್ಲಿ—ನಾಲ್ಕನೆಯದೋ ಐದನೆಯದೋ ಅವಳ ಮನೆ. ಮನೆಯನ್ನು ತಲುಪಿ ಅವಳ ಹೊಸ್ತಿಲ ಮೇಲೆ ಒಂದು ಕ್ಷಣ ನಿಲ್ಲುತ್ತಾಳೆ. ಒಂದು ಕೈ ಬಾಗಿಲ ಮೇಲೆ, ಇನ್ನೊಂದು ಕೈ ಸೊಂಟದ ಮೇಲೆ. ಮುಖದಲ್ಲಿ ಅದೇ ತುಂಟ ನಗೆ. ಕಣ್ಣು ಮಿಟುಕು. ಹಾಗೆ ಅವಳು ಅಲ್ಲಿ ನಿಲ್ಲುವುದು ಒಂದೇ ಕ್ಷಣ. ಒಂದು ಕ್ಷಣ ರಾಮಚಂದ್ರನ ಕಣ್ಣು ಅವಳ ಕಣ್ಣನ್ನು ಕೂಡುತ್ತದೆ. ಮರು ಕ್ಷಣವೇ ಅವಳು ಒಳಕ್ಕೆ ಹೋಗಿ ಕಣ್ಮರೆಯಾಗುತ್ತಾಳೆ.

ಹೀಗೇ ಈ ನಾಟಕ ದಿನ ದಿನವೂ ನಡೆಯಿತು. ರಾಮಚಂದ್ರನ ಮನಸ್ಸಿನಲ್ಲಿ ಹೇಳಲಾರದ ಗೊಂದಲ. ಆಶೆಗೂ ವಿವೇಕಕ್ಕೂ ಸಂತತವಾದ ಹೋರಾಟ. ವಿವೇಕ ತನ್ನ ಕೆಲಸವನ್ನು ಮೊದ ಮೊದಲು ಬಹಳ ಸಮರ್ಪಕವಾಗಿ ಬಹಳ ಮುತುವರ್ಜಿಯಿಂದ ಮಾಡಿತು. “ಕೈ ಹಿಡಿದ ಹೆಂಡತಿಗೆ ದ್ರೋಹ ಮಾಡಬಾರದು. ಅವಳು ಅಲ್ಲಿ ಅನಾಥಳಾಗಿ ಹಂಗಿನನ್ನಕ್ಕೆ ಬಿದ್ದು ನಿನ್ನನ್ನು ನಂಬಿ ಇದ್ದಾಳೆ. ಕೂಡದು. ಇದು ದೇವರು ಮೆಚ್ಚುವ ಕೆಲಸವಲ್ಲ. ಮನುಷ್ಯರು ತೆಗಳುವ ಕೆಲಸ. ನಿಂದೆ, ಅಪಮಾನ, ನಾಚಿಕೆಗೇಡು. ಅಲ್ಲದೆ ಅವಳು ಯಾರೋ? ಯಾವ ಕೀಳುಜಾತಿಯೋ? ಎಂಥ ಗುಣವೋ,

ಎಂಥ ಹುಟ್ಟೋ. ಕೂಡದು, ಮನಸ್ಸು ಹೀಗೆ ದಾರಿ ಬಿಟ್ಟು ಹೋಗಬಾರದು. ಇದು ಪಾಪ. ಇದು ನರಕದ ದಾರಿ " ಎಲ್ಲವೂ ಸರಿಯೆ. ಈ ತರ್ಕವನ್ನು ವಿರೋಧಿಸುವುದು ಹೇಗೆ ? ಆದರೆ—

ವಿವೇಕದ ಒಂದೊಂದು ಪಟ್ಟಿಗೂ ಆಶೆ ಹತ್ತು ಪಟ್ಟಾಗಿ ಬೆಳೆದು ನೂರು ವರಸೆಗಳನ್ನು ತೋರಿತು. ವಾದದಲ್ಲಿ ಸೋತು ಬಿದ್ದರೂ ಅದು ಸೋಲುವುದಿಲ್ಲ. ಸ್ಪ್ರಿಂಗಿನಂತೆ ಒತ್ತಿದಷ್ಟೂ ಮೇಲೆ ಮೇಲೆ ಚಿಮ್ಮುತ್ತದೆ. ಮನಸ್ಸಿನ ಯಾವುದೋ ಪದರದಲ್ಲಿ ಸೂಕ್ಷ್ಮ ರೂಪದಲ್ಲಿ ಅಡಗಿದ್ದು ಸಮಯ ನೋಡಿ ಆಕಾಶದುದ್ದ ಬೆಳೆದು ನಿಲ್ಲುತ್ತದೆ. ಆಗ ವಿವೇಕದ ಸೊಲ್ಲಡಗಿ ಅದು ಮುರಿದು ಬೀಳುತ್ತದೆ. ಮತ್ತೆ ವಿವೇಕ ತಲೆಯೆತ್ತಿದರೂ ಅದರ ಬಲ ಒಂದು ಅಂಶ ಕಡಿಮೆಯಾಗಿರುತ್ತದೆ. ಆಶೆ, ಕಾಮ ದಿನದಿನಕ್ಕೆ ಬೆಳೆದು ಭೂತಾಕಾರದಲ್ಲಿ ನಿಂತು ಮನಸ್ಸನ್ನು ತುಳಿಯುತ್ತದೆ. ವಿವೇಕದ ಹೆಣ ಬಿದ್ದು ಅದರ ಗೋರಿಯ ಮೇಲೆ ಕಾಮದ ಹಸುರು ಬಳ್ಳಿ ಗಾಳಿಗೆ ತೊನೆಯುತ್ತದೆ.

ಹೀಗೇ ಒಂದೆರಡು ತಿಂಗಳು ಕಳೆದಿತ್ತು, ರಾಮಚಂದ್ರ ಊರಿಗೆ ಹೋಗಿ ಬಂದಾಗ. ಹೊಟ್ಟೆಯೊಳಗಡೆ ಇಟ್ಟ ಕೆಂಡದಂತೆ ಈ ಆಶೆ ಮನಸ್ಸನ್ನೆಲ್ಲ ಕ್ರಮಕ್ರಮವಾಗಿ ಸುಟ್ಟು ಬೆಳೆಯುತ್ತಿತ್ತು. ಎಷ್ಟೋ ಸಲ ರಾಮಚಂದ್ರನಿಗೆ ಅವಳನ್ನು ಒಂದು ಸಲ ಮಾತಾಡಿಸಬೇಕೆಂಬ ಆಶೆ ದುರ್ದಮ್ಯವಾಗುತ್ತಿತ್ತು. ಆದರೆ ಮಾತಾಡಬೇಕೆಂದರೆ ಬಾಯಿಯಿಂದ ಸ್ವರವೇ ಹೊರಡದು. ನಾಲಗೆ ಸೇದಿಕೊಂಡ ಹಾಗೆ. ನಾಲಗೆಯ ತುದಿ ವರೆಗೆ ಬಂದ ಮಾತು ಹೊರ ಬೀಳದು. ಒಬ್ಬಳು ಹೆಂಗಸಿನೊಡನೆ ಒಂದು ಮಾತಾಡುವುದು ಇಷ್ಟು ಕಷ್ಟ ಎಂದು ತಿಳಿದದ್ದು ಅವನಿಗೆ ಆಗಲೇ. ಆಡಬೇಕೆಂಬ ಆಶೆ. ಆದರೆ ಏಕೆ ಮಾತಾಡಲು ಬರುವುದಿಲ್ಲ ? ಭಯ. ಸುತ್ತುಮುತ್ತಲಿನ ಜನದ ಭಯ. ಮನಸ್ಸಿನಲ್ಲಿ ಬೇರುಬಿಟ್ಟ ಭಾವನೆಗಳ, ನೀತಿಕಲ್ಪನೆಯ ಭಯ. ಮಾತಾಡಬೇಕೆಂದು ಗಂಟಲು ಸರಿ ಮಾಡಿಕೊಂಡು, ಉಗುಳು ನುಂಗಿಕೊಂಡು ಸಿದ್ಧವಾಗುವಷ್ಟರಲ್ಲಿ ದೂರದಲ್ಲಿ ಯಾರದೋ ಕಾಲ ಸಪ್ಪಳ. ಮೈ ಬೆವತುಕೊಳ್ಳುತ್ತದೆ. ಯಾರಾದರೂ ಅಂಗಡಿಯಲ್ಲಿ ಇದ್ದರಂತೂ ತೀರಿತು, ಅವಳ ಹತ್ತಿರವಿರಲಿ, ಉಳಿದವರ ಹತ್ತಿರವೂ ಮಾತಾಡಲು ವಿನಾ ಕಾರಣ ಸಂಕೋಚ. ಇದರಿಂದ ರಾಮಚಂದ್ರ ಒಂದು ಹತ್ತು ದಿನ ನರಕಯಾತನೆಯನ್ನೇ ಅನುಭವಿಸಬೇಕಾಯಿತು. ಆದರೆ ಅವಳು ಮಾತ್ರ ಪ್ರತಿ ದಿನವೂ ಬಂದು ಅದು ಇದು

ಮಾತಾಡದೇ ಇರುತ್ತಿರಲಿಲ್ಲ. ಇತ್ತೀಚೆಗೆ ದಿವಸಕ್ಕೆ ಎರಡು ಸಲವೂ ಬರುತ್ತಿದ್ದಳು.

ಒಂದು ದಿನ ರಾತ್ರಿ ಅಂಗಡಿ ಬಾಗಿಲು ಹಾಕುವ ಸಮಯ. ಅರ್ಧದಷ್ಟು ಬಾಗಿಲು ಹಾಕಿಯೂ ಆಗಿತ್ತು. ಬೀದಿಯ ಕಡೆ ಬೆನ್ನು ತಿರುಗಿಸಿಕೊಂಡು ರಾಮಚಂದ್ರ ಬಾಗಿಲು ಹಾಕುತ್ತಿದ್ದಾಗ ಅವಳು ಬಂದಳು.

" ಅಯ್ಯೋ ನೋಡಿ, ಅಂಗಡಿ ಬಾಗಿಲು ಹಾಕಿಬಿಟ್ಟಿರಾ" ಎಂದಳು. ರಾಮಚಂದ್ರ ಹಿಂತಿರುಗಿ ನೋಡಿದ: ಅವಳು. ಮೈ ಜುಮ್ಮೆಂದು ನರಗಳೆಲ್ಲಾ ಕಂಪಿಸಿದುವು. ಈಗಲಾದರೂ ಉತ್ತರ ಹೇಳಲೇ ಬೇಕಲ್ಲ. ಉತ್ತರ ಹೇಳುವ ಮೊದಲು ರಾಮಚಂದ್ರ ಸುತ್ತಲೂ ನೋಡಿದ. ಯಾರೂ ಇರಲಿಲ್ಲ:

" ಇಲ್ಲ. ಏನು ಬೇಕಾಗಿತ್ತಮ್ಮ?" ಎಂದು ಕೇಳಿದ.

" ಸೀಮೆ ಎಣ್ಣೆ ಸಲ್ಪ ಬೇಕಾಗಿತ್ತು."

" ಆಗಲಿ, ಕೊಡ್ತೀನಮ್ಮ" ಎಂದು ರಾಮಚಂದ್ರ ಅಂಗಡಿಯ ಒಳಕ್ಕೆ ಹೋದ. ಅವಳು ಹಿಂಬಾಲಿಸಿದಳು. ಅರ್ಧ ಬಾಗಿಲು ಹಾಕಿದ್ದು ಹಾಕಿದಂತೆಯೇ ಇತ್ತು. ಒಳಕ್ಕೆ ಬರುತ್ತಿದ್ದಾಗ ಅವಳ ಸೆರಗು ಹಾಳಾದ ಆ ಬಾಗಿಲಿಗೆ ಸಿಕ್ಕಿ ಜಾರಿತು. ಉಬ್ಬಿದ ಎದೆ ಕಾಣಿಸಿತು. ಸೆರಗಿನ ತುದಿಯನ್ನು ಕೈಲಿ ಹಿಡಿದು ಅದರ ಜೊತೆಗೆ ಆಡುತ್ತ ಅವಳು ಬಾಗಿಲ ಹತ್ತಿರವೇ ನಿಂತು ಅವನನ್ನು ಅರೆಗಣ್ಣಿಂದ ನೋಡುತ್ತ ತುಂಟನಗೆಯನ್ನು ನಗುತ್ತ ಮೈಯನ್ನೊಮ್ಮೆ ಕೊಂಕಿಸಿ ನಿಧಾನವಾಗಿ, ಬಹು ನಿಧಾನವಾಗಿ ಸೆರಗನ್ನು ಸರಿಪಡಿಸುತ್ತ ಗಹಗಹಿಸಿ ನಕ್ಕು ಬಿಟ್ಟಳು.

ಒಂದು ಕ್ಷಣ ಹಾಗೇ ಮುಗ್ಧನಾಗಿ ನೋಡುತ್ತ ನಿಂತಿದ್ದ ರಾಮಚಂದ್ರನ ರಕ್ತ ನಾಳಗಳಲ್ಲಿ ರಕ್ತ ಜಲಪಾತದಂತೆ ಭೋರ್ಗರೆಯಿತು. ತಂತಿಯಂತೆ ಬಿಗಿಯಿತು. ಒಂದು ನಿಮಿಷ ಏನು ಮಾಡುವುದೆಂದು ತೋಚದೆ ತಲೆ ತಗ್ಗಿಸಿ ಕುಳಿತ. ಮತ್ತೆ ಕಣ್ಣೆತ್ತಿದಾಗ ಅವನಿಗೆ ಕಂಡದ್ದು ಮುಸು ಮುಸುನಗೆ; ಅರ್ಧ ತೆರೆದಿದ್ದ ಎದೆ. ಈಗ ಎಲ್ಲಿಂದಲೋ ಧೈರ್ಯದ ಹೊಳೆ ತನ್ನ ಮನಸ್ಸಿನೊಳಕ್ಕೆ ಹರಿದು ಬಂದಂತೆ ಅವನಿಗೆ ತೋರಿತು. ಕೊನೆಗೂ ಮಾತು ಹೊರಟಿತು.

" ನಿನ್ನ ಹೆಸರೇನಮ್ಮಾ?" ಎಂದು ಕೇಳಿದ. ಎಂಥ ದಿಗ್ವಿಜಯ!

" ಚೆಲುವಿ." ಮಾತಿನ ಒಂದೊಂದು ಮಾತ್ರೆಯಲ್ಲೂ ಎಷ್ಟು ಬೆಡಗು,

ಎಷ್ಟು ಬಿನ್ನಾಣ; ಸಮ್ಮೋಹನದ ಎಂಥ ಮಂತ್ರ!

ಅವಳೇ ಮತ್ತೆ ಮಾತಾಡಿದಳು: "ನಮ್ಮ ಮನೆ ಇಲ್ಲೇ ಮುಂದಿನ ಬೀದಿಯಲ್ಲಿ ನಾಲ್ಕನೆಯ ಮನೆ. ಮನೆ ಮುಂದೆ ಅಶ್ವತ್ಥದ ಮರ ಇಲ್ಲವಾ, ಅದೇ." ಎಂದು ಸ್ವಲ್ಪ ಸುಮ್ಮನಿದ್ದು ಅವನನ್ನು ಅರ್ಥಪೂರ್ಣವಾಗಿ ನೋಡಿ ನಕ್ಕು "ಮನೆಯಲ್ಲಿ ನಾನು, ನಮ್ಮ ತಾಯಿ. ಇನ್ನಾರೂ ಇಲ್ಲ ಅಯ್ಯನೋರೆ! ನನಗೆ ಬಹಳ ಹೆದರಿಕೆ" ಎಂದಳು.

ಇವಳಿಗೆ— ಹೆದರಿಕೆ!

ರಾಮಚಂದ್ರನ ಬಾಯಿಯಿಂದ ಇಷ್ಟು ಮಾತು ಹೊರಟಿದ್ದೇ ಹೆಚ್ಚು. ಅಷ್ಟು ಮಾತಾಡಿದ್ದರಿಂದ ಮಾತಾಡಬೇಕೆಂಬ ಲವಲವಿಕೆ ಹೆಚ್ಚಿದರೂ ಮಾತು ಹೊರಡಲೊಲ್ಲದು. ಮೂಕನಾಗಿ ಬೆಪ್ಪಾಗಿ ಅವಳನ್ನು ನೋಡುತ್ತ ಕುಳಿತ. ಕಂದೀಲಿನ ಬೆಳಕಿನಲ್ಲಿ ಅವಳ ಮುಖ ಅಸ್ಪಷ್ಟವಾಗಿ ಕಾಣುತ್ತಿತ್ತು. ಅದೇ ನಗೆ. ನಗುವುದಕ್ಕೇ ಹುಟ್ಟಿರುವ ಹಾಗೆ. ಅವಳು ಅಷ್ಟು ಎತ್ತರವೂ ಅಲ್ಲ; ಅಷ್ಟು ಕುಳ್ಳೂ ಅಲ್ಲ. ತುಂಬಿದ ಮೈ; ಎತ್ತರವಾಗಿ ಜೋಡು ಗಿರಿ ಶಿಖರಗಳಂಥ ಎದೆ. ಸುದೃಢ, ಸುಪುಷ್ಟ. ಎಲ್ಲವೂ ಮಾಟವಾದದ್ದು. ಉಟ್ಟ ಸೀರೆಯಲ್ಲಿ, ತೊಟ್ಟಿದ್ದ ರವಿಕೆಯಲ್ಲಿ, ಬಳೆಗಳಲ್ಲಿ, ತುರುಬಿನಲ್ಲಿ, ಅಲ್ಲಿಗೆ ಸಿಕ್ಕಿದ ಮಲ್ಲಿಗೆ ದಂಡೆಯಲ್ಲಿ—ಎಲ್ಲೆಲ್ಲೂ ಒಂದು ತರದ ಹುಚ್ಚು ಹಿಡಿಸುವ ನಯ, ನಾಜೂಕು.

ಬಹಳ ಪ್ರಯತ್ನಿಸುತ್ತಿದ್ದಾಳೆ— ಆದರೂ ಆ ಸೆರಗು ಸರಿಯಾಗುವುದೇ ಇಲ್ಲ. ಅವಳು ಅವನನ್ನು ನೋಡುವಳು, ಮುಖ ತಗ್ಗಿಸುವಳು, ನಗುವಳು. ಮತ್ತೆ ನೋಡುವಳು. ನೋಡಿ ನೋಡಿ ರಾಮಚಂದ್ರ ನೀರು ನೀರಾದ. ಅಲ್ಲಿ ಅವಳು ನಿಂತಿದ್ದಾಳೆ, ತಾನು ನೋಡುತ್ತ ಕುಳಿತಿದ್ದಾನೆ. ಯಾರಾದರೂ ಬಂದರೆ, ಯಾರಾದರೂ ಕಂಡರೆ ಎಂಬ ಭಯ. ಆದರೆ ಅವಳಿಗೆ ಬೇಕಾದ್ದನ್ನು ಕೊಟ್ಟು ಕಳಿಸೋಣ ಎಂದರೆ ಕಾಲೇ ಏಳುವುದಿಲ್ಲ.

ಕೊನೆಗೆ ಅವಳೇ "ಅಯ್ಯನೋರೇ, ನಾನು ಬರುತ್ತೇನೆ" ಎಂದು ತಿರುಗಿದಳು. ಈಗ ರಾಮಚಂದ್ರ ಸರ್ಪದ ಕಣ್ಣಿಗೆ ಮುಗ್ಧವಾಗಿ ಹಾರಲಾರದೆ ಕಲ್ಲಾದ ಹಕ್ಕಿ ಸರ್ಪದ ದೃಷ್ಟಿ ಚಲಿಸಿದೊಡನೆಯೇ ರೆಕ್ಕೆ ಬಡಿಯುವಂತೆ, "ಹಾಗೇ ಹೋಗ್ತೀಯ, ಚೆಲುವಿ? ಸೀಮೆಎಣ್ಣೆ ಬೇಕು ಅಂತಂದೆ?" ಎಂದ.

"ಓಹೋ, ನಿಮ್ಮ ಮಾತು ಕೇಳುತ್ತ ಮರೆತೇ ಬಿಟ್ಟಿದ್ದೆ. ಪರವಾ

ಇಲ್ಲ, ಅಯ್ಯನೋರೇ. ನಾಳೆ ತೆಗೆದುಕೊಂಡು ಹೋದರಾಯಿತು ” ಎನ್ನುತ್ತ ಅವನ ಕಡೆಗೆ ತಿರುಗಿ ಇನ್ನೊಮ್ಮೆ ನಕ್ಕು ಚಿಗರೆಯಂತೆ ಅಲ್ಲಿಂದ ಚಿಗಿದಳು.

ಸುಬ್ಬ ಮತ್ತೆ ಅಲ್ಲಿಗೆ ಬರುವಷ್ಟರಲ್ಲಿ ಚೆಲುವಿ–ರಾಮಚಂದ್ರರ ಸಂಬಂಧ ಬಹಳ ಹಳೆಯದೇ ಆಗಿತ್ತು. ಚೆಲುವಿಯ ಮನೆ, ಅಲ್ಲಿಯ ವಾತಾವರಣ,– ಎಲ್ಲವೂ ಅಸಹ್ಯವಾಗುತ್ತಿತ್ತು ರಾಮಚಂದ್ರನಿಗೆ. ಕಾತರದಿಂದ, ಆತುರದಿಂದ ಅವಳ ಮನೆಗೆ ಹೋಗುತ್ತಿದ್ದ ರಾಮಚಂದ್ರ ಜುಗುಪ್ಸೆ ಪಟ್ಟುಕೊಂಡೇ ಹಿಂತಿರುಗುತ್ತಿದ್ದ. ಆದರೆ ಮತ್ತೆ ಅದೇ ಸೆಳೆತ. ಆಗಾಗ ಅಸಹನೀಯವಾದ ಪಶ್ಚಾತ್ತಾಪದಲ್ಲಿ ಕಂಗೆಟ್ಟು ಅಳಲುತ್ತಿದ್ದ. ವಿವೇಕ ಮತ್ತೆ ಮತ್ತೆ ತಲೆಯೆತ್ತಿ ಆಕ್ಷೇಪಿಸುತ್ತಿತ್ತು. ಹೆಂಡತಿ ಮತ್ತು ಮಗುವಿನ ಜ್ಞಾಪಕ ಬಂದು ಎಷ್ಟೋ ರಾತ್ರಿ ಅಳುತ್ತ ಕಳೆದಿದ್ದ. ‘ ಇದು ಕೂಡದು, ಕೂಡದು ’ ಎಂದು ತನಗೆ ಹೇಳಿಕೊಳ್ಳುತ್ತ ಎರಡು ಮೂರು ದಿನ ಅವಳ ಮನೆಯ ಕಡೆಗೆ ಸುಳಿಯುತ್ತಿರಲಿಲ್ಲ. ಆದರೆ ಮತ್ತೆ ಅವಳು ಅಂಗಡಿಗೆ ಬರುತ್ತಾಳೆ, ‘ಅಯ್ಯನೋರೇ’ ಎನ್ನುತ್ತಾಳೆ. ನಗುತ್ತಾಳೆ. ನಿಶ್ಚಯದ ಕಟ್ಟು ಸಡಿಲುತ್ತದೆ. ಮತ್ತೆ ಯಥಾ ಪ್ರಕಾರ ಮನ್ಮಥ ವಿಜಯ.

ಸುಬ್ಬ ಬಂದು ಪದ್ಮಾವತಿಯ ಕಷ್ಟಗಳನ್ನು ವರ್ಣಿಸಿದಾಗ ಅವಳಿಗೆ ಬಂದ ಅಪವಾದದ ಕಥೆಯನ್ನು ಕೇಳಿದಾಗ ಅವರ ತಾಯಿ ತೀರಿಕೊಂಡು ಅವಳು ನಿಜವಾಗಿಯೂ ಅನಾಥೆಯೇ ಆದಳೆಂಬುದು ತಿಳಿದಾಗ ರಾಮಚಂದ್ರನಲ್ಲಿ ಮತ್ತೆ ಪಶ್ಚಾತ್ತಾಪ ದಳ್ಳುರಿಯಿತು. ಚೆಲುವಿಯ ಮೋಹಪಂಜರದಿಂದ ಬಿಡಿಸಿಕೊಳ್ಳಬೇಕಾದರೆ ಈ ಊರು ಬಿಟ್ಟಲ್ಲದೆ ಬೇರೆ ದಾರಿಯೇ ಇಲ್ಲವೆಂದೂ ಆಗ ಅನ್ನಿಸಿತು. ಅದೇ ಸಂದರ್ಭದಲ್ಲಿ ಅಲ್ಲಿಗೆ ಬಂದಿದ್ದ ಕೊಲ್ಲೂರು ದೇವಸ್ಥಾನದ ಪಾರುಪತ್ಯಗಾರರಿಂದ ಅಲ್ಲಿ ಒಂದು ಕೆಲಸ ಸಿಕ್ಕಬಹುದೆಂಬ ಭರವಸೆ ದೊರೆತಾಗ ಆ ಪಶ್ಚಾತ್ತಾಪದ ಉದ್ರೇಕಸ್ಥಿತಿಯಲ್ಲೇ ಒಂದು ನಿರ್ಧಾರಕ್ಕೆ ಬಹುಬೇಗ ಬಂದುಬಿಟ್ಟ ; ತಾನು ಕೊಲ್ಲೂರಿಗೆ ಹೋಗಿ ಕೆಲಸ ಸಿಕ್ಕಿದ ಮೇಲೆ ಮನೆ ಮಾಡುವುದು ; ಸುಬ್ಬ ಕೂಡಲೇ ಊರಿಗೆ ಹೋಗಿ ಪದ್ಮಾವತಿಯನ್ನು ಅಲ್ಲಿಗೆ ಕರೆತರುವುದು. ಅಷ್ಟರಲ್ಲಿ ಬರುವಷ್ಟು ಬಾಕಿಯನ್ನು ವಸೂಲು ಮಾಡಿಕೊಂಡು ಕೊಲ್ಲೂರಿಗೆ ಹೋಗುವುದು.

ಸುಬ್ಬ ಹೊರಟ ಎಂಟುದಿನಗಳಲ್ಲಿ ತಾನು ಹೊರಟರೆ ಸಾಕು ಎಂದುಕೊಂಡು ರಾಮಚಂದ್ರ ಬಾಕಿ ವಸೂಲಿಗೆ ಪ್ರಯತ್ನಿಸಿದ. ಎಂಟು ದಿನಗಳೇನೋ

ಕಳೆದುವು. ಆದರೆ ಬಾಕಿಯಲ್ಲಿ ಸೇಕಡಾ ಹತ್ತರಷ್ಟೂ ಕೈಗೆ ಬರಲಿಲ್ಲ. ಇರಲಿ, ಕೊಲ್ಲೂರಿಗೆ ಹೋಗಿ ತಕ್ಕ ವ್ಯವಸ್ಥೆ ಮಾಡಿ ಮತ್ತೆ ಇಲ್ಲಿಗೆ ಬಂದು ವಸೂಲು ಮಾಡಿಕೊಳ್ಳೋಣ ಎಂದು ಎಂಟನೆಯ ದಿನ ಕೊಲ್ಲೂರಿಗೆ ಹೊರಟ. ಯಾರದೋ ಗಾಡಿಯಲ್ಲಿ ಕುಳಿತು ಹಸುರುಮಗ್ಗಿ ಹೊಳೆಯ ತನಕ ಬಂದು ಅಲ್ಲಿಂದ ಕೊಲ್ಲೂರಿಗೆ ನಡೆದು ಬಂದ.

ಕೊಲ್ಲೂರಿನಲ್ಲಿ ಸ್ವಸ್ಥಾನದಲ್ಲಿ ಕುಳಿತಿದ್ದ ಪಾರುಪತ್ಯಗಾರರು ಕಳೂರು ಕಟ್ಟೆಯಲ್ಲಿ ಕಂಡದಕ್ಕಿಂತ ಭಿನ್ನರಾಗಿ ಇಲ್ಲಿ ಕಂಡರು. ಅಲ್ಲಿ ಬಹಳ ಸ್ನೇಹ ಪೂರ್ಣವಾಗಿ ವರ್ತಿಸಿದವರು ಇಲ್ಲಿ ರಾಮಚಂದ್ರನನ್ನು ಕಂಡು "ನೀವು ಯಾರು? ಗೊತ್ತಾಗಲಿಲ್ಲ?" ಎಂದರು.

ರಾಮಚಂದ್ರ ಎಲ್ಲ ಸಂಗತಿಗಳನ್ನೂ ಜ್ಞಾಪಿಸಿ ಕೊಟ್ಟ ಮೇಲೆ, "ಅಹಾ, ಈಗ ಜ್ಞಾಪಕಕ್ಕೆ ಬಂತು ನೋಡಿ. ನಾವು ಬಹಳ ಜನರನ್ನು ನೋಡುತ್ತೇವೆ, ಯಾರನ್ನಂತ ನೆನಪಿಟ್ಟುಕೊಳ್ಳುವುದು ಹೇಳಿ." ಎಂದು ಶ್ರೀ ಮದ್ಗಾಂಭೀರ್ಯ ದಿಂದ ಮಾತಾಡಿದರು. ಕೆಲಸ ಕೊಡಲು ಏನೂ ತೊಂದರೆ ಇಲ್ಲ ಅಂತ ಅಲ್ಲಿ ಹೇಳಿದವರು, ಇಲ್ಲಿ

"ಕೆಲಸ ಖಾಲಿ ಇರಬಹುದು ಅಂತ ಮಾಡಿದ್ದೆ, ಈಗ ಯಾವ ಕೆಲಸವೂ ಖಾಲಿ ಇಲ್ಲ ನೋಡಿ. ಸದ್ಯಕ್ಕೆ ಖಾಲಿಯಾಗುವ ಸಂಭವವೂ ಇಲ್ಲ" ಅಂತ ತಣ್ಣಗೆ ಕೊರೆವ ತಣ್ಣೀರು ಚೆಲ್ಲಿದಂತೆ ಮಾತಾಡಿದರು.

"ಏನೋ ಸ್ವಾಮಿ, ನಿಮ್ಮನ್ನೇ ನಂಬಿಕೊಂಡು ಬಂದಿದ್ದೇವೆ. ಏನಾ ದರೂ ಮಾಡಿ ಒಂದು ನೆಲೆ ತೋರಿಸಬೇಕು" ಎಂದು ಎಷ್ಟು ವಿನಯದಿಂದ ಸಾಧ್ಯವೋ ಅಷ್ಟು ವಿನಯದಿಂದ ರಾಮಚಂದ್ರ ಕೇಳಿಕೊಂಡ. ಆಗ ಅವರು ಕೊಂಚ ಸಿಡುಕಿನಿಂದ

"ಏನ್ರೀ, ನಿಮಗೆ ಹೇಳಿದ ಮಾತು ಅರ್ಥವಾಗುತ್ತದೋ ಇಲ್ಲವೋ? ಈಗ ಕೆಲಸ ಖಾಲಿ ಇಲ್ಲ. ಕೆಲಸ ಎಲ್ಲಿಂದ ತರಲಿ? ಮತ್ತೆ ನೋಡುವಾ" ಎಂದರು.

ಇನ್ನು ಮಾತಾಡಿ ಫಲವಿಲ್ಲೆಂದು ರಾಮಚಂದ್ರ ಸುಮ್ಮನೆ ಅಲ್ಲಿಂದ ಹೊರಟು ಭಟ್ಟರ ಮನೆಗೆ ಹೋದ. ಸುಬ್ಬ ಪದ್ಮಾವತಿಯನ್ನು ಕರೆದುಕೊಂಡು ಇನ್ನೂ ಬಂದಿಲ್ಲ. ನಾಳೆ ಬರಬಹುದು ಅಂತ ಕಾದು ಕುಳಿತ. ಬರಲಿಲ್ಲ. ಎರಡು ದಿನ ಕಳೆಯಿತು, ಮೂರು ದಿನ ಕಳೆಯಿತು. ಆದರೂ ಸುಬ್ಬನ

ಸುಳಿವೇ ಇಲ್ಲ. .ಏನಾಗಿರಬಹುದು ? ಮಳೆ ಬೇರೆ ಶುರುವಾಗಿಬಿಟ್ಟಿತ್ತು. ಬರುವಹಾಗಿದ್ದರೆ ಇಷ್ಟರೊಳಗೇ ಬರಬೇಕಾಗಿತ್ತು. ಇನ್ನು ಬರುವ ಸಂಭವ ಕಡಿಮೆ.

ಏನಾಗಿರಬಹುದು, ಎಂದು ಎಷ್ಟು ಯೋಚಿಸಿದ್ದರೂ ರಾಮಚಂದ್ರನಿಗೆ ಯಾವುದೂ ಬಗೆ ಹರಿಯಲಿಲ್ಲ. ಮಗುವಿಗೋ ಅವಳಿಗೋ ಹುಷಾರಿಲ್ಲದಿರಬಹುದೋ? ಅಥವಾ ಚಂದ್ರಶೇಖರ ಕಳಿಸಿಕೊಡಲು ಒಪ್ಪಲಿಲ್ಲವೋ ? ಎಂದು ಹಲವು ವಿಧವಾಗಿ ಯೋಚಿಸಿದ. ಆದರೆ ನಿಜ ಸಂಗತಿ ತಿಳಿಯದೆ ಯಾವ ನಿರ್ಧಾರವನ್ನಾದರೂ ಮಾಡುವುದು ಹೇಗೆ ?

ಐದನೆಯ ದಿವಸ ತಾನು ಕೊಲ್ಲೂರಲ್ಲಿ ಹೀಗೆ ಕುಳಿತುಕೊಂಡು ಯಾವ ಪ್ರಯೋಜನವೂ ಇಲ್ಲ ಎಂದು ನಿರ್ಧರಿಸಿದ. ಇಲ್ಲಿ ಕೆಲಸ ಸಿಕ್ಕಲಿಲ್ಲ. ಆದ ಕಾರಣ ಕಳೂರುಕಟ್ಟೆಯಲ್ಲಿ ನೆಲಸುವುದೇ ಗತಿ. ಸದ್ಯ, ಅಂಗಡಿಯನ್ನು ಬಿಟ್ಟು ಬಿಡದೆ ಇದ್ದದ್ದೇ ವಿವೇಕವಾಯಿತು, ಎಂದು ಅಲ್ಲಿಂದ ಹೊರಟ. ಹೊರಡುವ ಮೊದಲು ಅವನು ಇಳಿದುಕೊಂಡಿದ್ದ ಮನೆಯ ರಾಮಣ್ಣಭಟ್ಟರಿಗೆ, " ನೋಡಿ ಭಟ್ಟರೇ, ನನ್ನ ಹೆಸರು ರಾಮಚಂದ್ರಶಾಸ್ತ್ರಿ ಅಂತ. ಇಲ್ಲಿಗೆ ಸುಬ್ಬ ಅಂತ ಒಬ್ಬರು ಬಂದು ನನ್ನನ್ನು ಕೇಳಿದರೆ ನಾನು ಮತ್ತೆ ಕಳೂರುಕಟ್ಟೆಗೆ ಹಿಂತಿರುಗಿ ಹೋದೆ ಅಂತ ದಯವಿಟ್ಟು ಹೇಳಬೇಕು " ಎಂದು ಕೇಳಿಕೊಂಡ. ಮೊದಲೆರಡು ದಿನ ಚಿಲುವಿನ ನೆನಪು ಇರಲಿಲ್ಲ. ಹೊರಡುವ ಹಿಂದಿನ ದಿನ ಮಾತ್ರ ಅವಳ ಕರೆ ತಡೆದುಕೊಳ್ಳಲು ಅಸಾಧ್ಯ ಎನ್ನುವಷ್ಟಾಯಿತು. ರೆಕ್ಕೆಯಿದ್ದರೆ ಹೇಗೋ ಹಾಗೆ ಅವನು ಕೊಲ್ಲೂರಿನಿಂದ ಕಳೂರುಕಟ್ಟೆಗೆ ಹಾರಿ ಹೋದ.

ಅಲ್ಲಿಗೆ ಬಂದ ಮೇಲೆ ಮತ್ತೆ ವ್ಯಾಪಾರ-ಚಿಲುವಿ. ಪದ್ಮಾವತಿಯನ್ನು ಕುರಿತು ಯೋಚಿಸಲು ಅವನಿಗೆ ಹೆಚ್ಚು ಸಮಯವೇ ಸಿಗಲಿಲ್ಲ. ಆಗಾಗ ನೆನಪು ಬರುತ್ತಿತ್ತು. "ಅವಳ ವಿಷಯವಾಗಿ ನೀನು ಸರಿಯಾಗಿ ನಡೆದುಕೊಳ್ಳಲಿಲ್ಲ " ಎಂದು ಆತ್ಮಸಾಕ್ಷಿ ಚುಚ್ಚಿ ಹೇಳುತ್ತಿತ್ತು. ಆದರೆ ಅದು ಯಾವಾಗಲೋ ಒಂದೊಂದು ಸಲ.

# ೧೨

ಬಹಿಷ್ಕೃತನಾಗಿ, ಜಾತಿಭ್ರಷ್ಟನಾದ ಮೇಲೆ ಒಂದೆರಡು ದಿನ ಶೀನಪ್ಪನ ಮನಸ್ಸು ತೀರ ಕೆಟ್ಟಿತ್ತು. ಮನೆಯಲ್ಲಿ ಮಾತಾಡುತ್ತಲೇ ಇರಲಿಲ್ಲ. ಪದ್ಮಾವತಿಯು ಮಕ್ಕಳನ್ನು [illegible] ಕರೆದಳು. 'ಹಾ, ಹೂ' ಎನ್ನುವಷ್ಟಲ್ಲದೇ ಅದಕ್ಕಿಂತ ಹೆಚ್ಚು ಶಬ್ದ ಬಾಯಿಯಿಂದ ಹೊರಡದಾಯಿತು. ಸದಾ ಚಿಂತೆ, ಕಳವಳ. ಮನೆಯಲ್ಲಿ ಒಂದು ಕಡೆ ಕುಳಿತುಕೊಳ್ಳಲಾರ. ಅಡಿಗೆ ಮನೆಯಿಂದ ಚಾವಡಿಗೆ, ಚಾವಡಿಯಿಂದ ಅಂಗಳಕ್ಕೆ, ಅಂಗಳದಿಂದ ಹಿತ್ತಲಿಗೆ. ಹಿತ್ತಲಿಂದ ಮತ್ತೆ ಅಂಗಳಕ್ಕೆ, ಬಾವಿಯ ಕಡೆಗೆ. ಮೊದಲು ಅವನು ಏಕಾಂಗಿಯೇ ಆದರೆ ಆಗ ತನ್ನ ಜಾತಿಯ ಜನರ ಸಹಕಾರ ಸಹಾನುಭೂತಿಗಳ ಸಂಭವವಾದರೂ ಇತ್ತು. ಈಗ ಅದೂ ಇಲ್ಲ. ದೂರ ದ್ವೀಪದಲ್ಲಿ ಹಡಗೊಡೆದು ಬಿದ್ದ ಏಕಾಂಗಿಯ ಪಾಡು ತನ್ನದು ಎಂದು ಶೀನಪ್ಪನಿಗೆ ಅನ್ನಿಸಿತು. ಊಟ ಬೇಡ, ತಿಂಡಿ ಬೇಡ. ನಿದ್ದೆ ಹತ್ತದು; ವಿಶ್ರಾಂತಿ ಇಲ್ಲ. ಅಗ್ನಿಕುಂಡದಲ್ಲಿ ಬಿದ್ದು ಒದ್ದಾಡುತ್ತಿರುವನಂತೆ. ಸಂಧ್ಯಾವಂದನೆಗೆ ಕುಳಿತರೆ ಮಂತ್ರ ಮರೆಯುತ್ತದೆ; ದೇವರ ಪ್ರಾರ್ಥನೆಗೆ ಕುಳಿತರೂ ಮನಸ್ಸು ಎತ್ತಲೆತ್ತಲೋ ತೊಳಲುತ್ತದೆ.

ಎರಡು ದಿನಗಳ ಕಾಲ ಹೀಗೆ ಕಳೆದ ಮೇಲೆ ಶೀನಪ್ಪನಿಗೆ ಥಟಕ್ಕನೆ ಇದಕ್ಕೆಲ್ಲ ಮದ್ದು ಕೆಲಸವೇ ಎಂದೆನ್ನಿಸಿತು. ನಟ್ಟಿಯ ಕಾಲ. ಊರಲ್ಲೆಲ್ಲ ಯಾರಿಗೂ ಪುರಸೊತ್ತಿಲ್ಲ. ಇಂಥ ಕಾಲದಲ್ಲಿ ತಾನು ಸುಮ್ಮನೆ ಕುಳಿತು ಚಿಂತಿಸುತ್ತ ಬಿದ್ದಿರುವುದು ಸರಿಯೋ? ಎನ್ನಿಸಿತು. ನಟ್ಟಿಯೂ ಆಗ ಬೇಡವೇ? ಆಗದಿದ್ದರೆ ಮುಂದೆ ತಿನ್ನುವುದೇನನ್ನು? ಜಾತಿಗೆಟ್ಟರೆ ಹೊಟ್ಟೆ ಏನೂ ಸುಮ್ಮನಿರುವುದಿಲ್ಲವಲ್ಲ?

'ಸರಿ, ಇದೇ ಸರಿ' ಎನ್ನುತ್ತ ಶೀನಪ್ಪ ಮೂರನೆಯ ದಿನದಿಂದ ನಟ್ಟಿಯ ವಿಚಾರದಲ್ಲಿ ಮಗ್ನನಾದ. ಬೆಳಗಾದರೆ ಎದ್ದು ಅವಲಕ್ಕಿ ಮೊಸರು ತಿಂದು ಗುದ್ದಲಿ ಹಿಡಿದು ಗದ್ದೆಗೆ ಹೊರಟರೆ ಮತ್ತೆ ಮನೆಗೆ ಬರುವುದು ಮೈಯೆಲ್ಲ ಒದ್ದೆಯಾಗಿ ಬೆವರಾಗಿ ಹೊತ್ತು ನೆತ್ತಿಮುಟ್ಟಿ ಇಳಿಗಿದ ಮೇಲೆಯೇ. ಹೊತ್ತಿಗಾಗಲೇ ಪದ್ಮಾವತಿ ಗಂಜಿ ಮಾಡಿಟ್ಟು ಹೋಗುತ್ತಿದ್ದ. ಬಂದ ಮೇಲೆ ಮತ್ತೆ ತನಗೆ ಅನ್ನ ಮಾಡಿಕೊಂಡು ಊಟಮಾಡಿ ಕೊಂಚ ವಿಶ್ರಾಂತಿ

ತೆಗೆದುಕೊಂಡು ಗದ್ದೆಗೆ ಹೋಗುತ್ತಿದ್ದ. ಮಾಡಿದಷ್ಟೂ ಕೆಲಸವೇ. ಆಳು ಗದ್ದೆ ಉಳುತ್ತಾನೆ; ಹೆಣ್ಣಾಳುಗಳು ಅಗೆ ಕೀಳುವುದು, ನಟ್ಟಿಯ ಕೆಲಸ ಮಾಡುತ್ತಾರೆ. ಆದರೂ ಗದ್ದೆಯಂಚು ಸರಿ ಪಡಿಸುವುದು; ನೀರು ಹೋಗಲು ತಕ್ಕ ದಾರಿ ಮಾಡಿ ಕೊಡುವುದು; ನೆಡುವವರಿಗೆ ಅಗೆ ಕೊಡುವುದು—ಹೀಗೆ ಹತ್ತಾರು ಕೆಲಸ. ರಾತ್ರಿ ಮನೆಗೆ ಬರುವಷ್ಟು ಹೊತ್ತಿಗೆ ತುಂಬ ಆಯಾಸ. ಏನೋ ಅಷ್ಟು ತಿಂದು ಮಲಗಿದರೆ ಕೂಡಲೇ ನಿದ್ದೆ. ಹೊರಗೆ ರಪರಪ ಮಳೆ; ಚಳಿಗಾಳಿ. ಸುಖ ನಿದ್ದೆ. ಶೀನಪ್ಪನಿಗೇ ಆಶ್ಚರ್ಯ—ಜೀವನದಲ್ಲಿ ಇಷ್ಟು ಅನಾಹುತ ನಡೆದೂ ಎಷ್ಟು ಸುಖವಾಗಿ ನಿದ್ದೆ ಬರುತ್ತದೆ ಅಂತ.

ಮೂರನೆಯ ದಿನ ಸಂಜೆ ಕತ್ತಲುಕತ್ತಲಾಗುವ ಸಮಯ. ಪದ್ಮಾವತಿಗೆ ಈಗ ಜ್ವರ ಏನೂ ಇಲ್ಲ. ಮೊದಲಿದ್ದ ಆರೋಗ್ಯವೇ ಮತ್ತೆ. ಸ್ವಾಭಾವಿಕವಾಗಿಯೇ ಇದ್ದ ದೌರ್ಬಲ್ಯ ಅಶಕ್ತಿ ಇದ್ದೇ ಇತ್ತು. ಆದರೆ ನಡೆದಾಡಲು ಸಣ್ಣ ಪುಟ್ಟ ಕೆಲಸ ಮಾಡಲು ಏನೂ ತೊಂದರೆಯಿಲ್ಲ. ಕತ್ತಲಾಗುವಷ್ಟರಲ್ಲೇ ಅವಳು ದೀಪಗಳನ್ನೆಲ್ಲ ಹಚ್ಚಿಟ್ಟಳು. ದೇವರ ಕೋಣೆಯಲ್ಲೂ ದೀಪ ಹಚ್ಚಿ ಇಡುವ ಎನ್ನಿಸಿತು. ಆದರೆ ಏನನ್ನುತ್ತಾರೋ ಶೀನಪ್ಪ ಅಂತ ಆ ಕೆಲಸ ಮಾಡಲಿಲ್ಲ. ಅಡಿಗೆ ಮನೆಗೆ ಹೋಗಿ ಕಸ ಮುಸುರೆಯನ್ನೆಲ್ಲ ತೆಗೆದು ಸಾರಿಸಿದಳು. ಇನ್ನೇನು ಶೀನಪ್ಪ ಬರುವ ಹೊತ್ತು—ಒಲೆಗೆ ಬೆಂಕಿ ಹೊತ್ತಿಸಿಟ್ಟಳು. ಬಚ್ಚಲು ಮನೆಗೆ ಹೋಗಿ ಎರಡು ಕೊಡ ನೀರು ಹಾಕಿ ಒಲೆಗೆ ಉರಿಹಾಕಿದಳು. ಬಚ್ಚಲು ಮನೆಯಿಂದ ಬಂದು ಚಾಪಡಿಯನ್ನು ಗುಡಿಸಿ ಗೋಡೆಯ ಹತ್ತಿರ ಚಾಪೆಯನ್ನು ಹಾಸಿ ದೀಪವಿಟ್ಟು ಒಂದು ಮೂಲೆಯಲ್ಲಿ ಕುಳಿತಳು.

ಶೀನಪ್ಪ ಬಂದು ಗುದ್ದಲಿಯನ್ನು ಒಂದು ಕಡೆ ಇಟ್ಟು, ತಲೆಗೆ ಹಾಕಿಕೊಂಡಿದ್ದ ಕಂಬಳಿಯನ್ನು ತೆಗೆದು ಬಳುವಾಡಿನ ಗೂಟಕ್ಕೆ ತಗುಲಿ ಹಾಕಿದ. ಹಾಗೇ ನೋಡಿದ. ಚಾವಡಿಯ ಮೇಲೆ ದೀಪ. ಚಾಪಡಿ ಚೆನ್ನಾಗಿ ಗುಡಿಸಿತ್ತು. ಮೂಲೆಯಲ್ಲಿ ಪದ್ಮಾ. ನೋಡಿ ಶೀನಪ್ಪನ ಮನಸ್ಸು ಕರಗಿತು. ತಾನು ಮೂರು ದಿನಗಳಿಂದ ಅವಳ ಹತ್ತಿರ ಸರಿಯಾಗಿ ಮಾತೇ ಆಡಿಲ್ಲ ಎನ್ನುವುದು ನೆನಪಿಗೆ ಬಂತು. " ಪಾಪ, ಏನು ತಿಳಿದುಕೊಂಡಳೋ. ಅಲಕ್ಷ್ಯ ಎಂದು ತಿಳಿದು ಎಷ್ಟು ನೊಂದಳೋ," ಎಂದು ತನ್ನಷ್ಟಕ್ಕೇ ಅಂದುಕೊಳ್ಳುತ್ತಾ, " ಪದ್ಮಾ " ಎಂದ. ಅತ್ಯಂತ ಮೃದುವಾಗಿ ಅತ್ಯಂತ ಆತ್ಮೀಯತೆಯನ್ನು ವ್ಯಕ್ತ ಪಡಿಸುವ ಮಾತು.

ಪದ್ಮಾ ಒಂದು ಕ್ಷಣ ಅವನ ಕಡೆಯೇ ನೋಡುತ್ತ "ನಟ್ಟಿ ಮುಗಿಯುತ್ತಾ ಬಂತೋ? ಇನ್ನೂ ಎಷ್ಟಿದೆ?" ಎಂದಳು.

"ಇನ್ನೇನು, ಮುಗಿಯುತ್ತ ಬಂದಹಾಗೇ ಪದ್ಮಾ. ಇನ್ನೆರಡು ದಿನ ಸರಿಯಾಗಿ ಕೆಲಸ ನಡೆವರೆ ನಟ್ಟಿಯ ಕೆಲಸ ಈ ವರ್ಷಕ್ಕೆ ಮುಕ್ತಾಯವಾದ ಹಾಗೇ"

"ಸರಿ, ಮೈಯೆಲ್ಲ ಒದ್ದೆ, ಕೆಸರು. ಎಷ್ಟು ಆಯಾಸವಾಗಿದೆಯೋ ಏನೋ. ಹೋಗಿ, ಬಚ್ಚಲು ಮನೆಯಲ್ಲಿ ಬಿಸಿ ನೀರಿದೆ. ಸ್ನಾನಮಾಡಿಕೊಂಡು ಬನ್ನಿ"

"ಬಿಸಿ ನೀರೇ? ಬಿಸಿ ನೀರೆಲ್ಲಿಂದ ಬರಬೇಕು?" ಎಂದು ಶೀನಪ್ಪ ನಕ್ಕ.

"ಹೋಗಿ ನೋಡಿ. ನಾನು ತಮಾಷೆ ಮಾಡುತ್ತೇನೋ ಏನು ಅಂತ."

"ಎಂದರೆ, ನೀನೇ ನೀರು ಎತ್ತಿಹಾಕಿ, ಬಿಸಿ ನೀರು ಕಾಯಿಸಿದ್ದೀ. ಅಲ್ಲವೆ?"

"ಹೌದು."

"ನಿನಗೆ ಹುಶಾರಿಲ್ಲ, ಮೈಯಲ್ಲಿ ಶಕ್ತಿಯಿಲ್ಲ. ಈ ಕೆಲಸ ಏಕೆ ಮಾಡುವುದಕ್ಕೆ ಹೋದೆ?" ಎಂದು ಶೀನಪ್ಪ ಗದರಿಸುವಂತೆ ಕೇಳಿದ.

"ಇನ್ನೇನು ಮಾಡಬೇಕಂತೀರಿ? ಸುಮ್ಮನೆ ಕೂತುಕೊಂಡು ತಿನ್ನಬೇಕು ಅಂತ ತಾನೇ ನೀವು ಹೇಳುವುದು? ನನಗೆ ಅದು ಸಾಧ್ಯವಿಲ್ಲ. ಕೈಲಾಗುವ ಸಣ್ಣಪುಟ್ಟ ಕೆಲಸ ಮಾಡದೆ ಇದ್ದರೆ ನನಗೆ ಅನ್ನವೇ ಸೇರದು. ನನಗೆ ಮೈ ಸರಿಯಾಗಿಯೇ ಇದೆ ಈಗ. ಹೀಗೆ ಕೆಲಸ ಮಾಡಿಕೊಂಡಿರು ಅಂತೀರೋ ಇರುತ್ತೇನೆ. ಇಲ್ಲವಾದರೆ---"

"ಹೊರಟೆ ಅನ್ನುತ್ತೀ---ಅಲ್ಲವೆ? ಒಳ್ಳೇ ಬೆದರಿಕೆಹಾಕುತ್ತಿದ್ದೀ ಪದ್ಮಾ, ಅಡ್ಡಿಯಿಲ್ಲ." ಎಂದು ಶೀನಪ್ಪ ನಕ್ಕ.

"ನೀವು ಈಗ ಕೂಡಲೇ ಹೋಗಿ ಬಿಸಿ ನೀರಲ್ಲಿ ಸ್ನಾನಮಾಡಿಕೊಂಡು ಬನ್ನಿ. ಹೋಗಿ" ಎಂದಳು ಪದ್ಮ.

"ಆಗಲಿ, ಹಾಗೇ ಮಾಡುತ್ತೇನೆ" ಎಂದು ಶೀನಪ್ಪ ಪದ್ಮಳ ಕಡೆಗೆ ನೋಡಿ ನಸುನಕ್ಕು ಬಚ್ಚಲ ಮನೆಯ ಕಡೆಗೆ ನಡೆದ.

ಅವನು ಅತ್ತ ಹೋದ ಕೂಡಲೇ ಪದ್ಮಾ "ಈ ಮನುಷ್ಯ ಮನುಷ್ಯನಲ್ಲ,

ದೇವರು." ಎಂದು ನಿಟ್ಟುಸಿರುಬಿಟ್ಟಳು. ಶೀನಪ್ಪ ಹಾಗೆ ಏಕೆ ವ್ಯಗ್ರನಾಗಿದ್ದ ಎಂದು ಅವಳು ಕೊಂಚ ಊಹಿಸಿದ್ದಳು. ಆ ದಿನ ಉಪಾಧ್ಯಾಯರೂ ಶೀನಪ್ಪನೂ ಮಾತಾಡುತ್ತಿದ್ದುದು ಅಲ್ಪಸ್ವಲ್ಪ ಅವಳಿಗೂ ಕೇಳಿಸಿತ್ತು. ಮಿಕ್ಕುದನ್ನು ಊಹಿಸುವುದು ಅವಳಿಗೆ ಅಸಾಧ್ಯವಾಗಲಿಲ್ಲ. ತಾನು ಬಂದದ್ದು ಶೀನಪ್ಪನಿಗೆ ಶನಿ ವಕ್ರಿಸಿದ ಹಾಗೆಯೇ ಆಯಿತು ಎಂದೂ ಅವಳು ಬಲ್ಲಳು. ಆದರೆ ಏನು ಮಾಡುವುದು ? ಇಂಥ ಸಜ್ಜನನಿಗೆ ಕಷ್ಟಕೊಡಲೆಂದೇ ಈ ಪಾಪಿ ಜನ್ಮ ತಳೆದಳೋ ಎಂದು ತನ್ನದೃಷ್ಟಕ್ಕೆ ತಾನೇ ಅಂದುಕೊಂಡಳು. ಬಂದಾಯಿತು. ಈ ವ್ಯಭಿಚಾರ ಕಳೆಯದೆ ಎಲ್ಲಿಗೂ ಹೋಗುವ ಹಾಗಿಲ್ಲ. ಶೀನಪ್ಪನಿಗೆ ತೊಂದರೆಯಾಗದಂತೆ ಮಾಡಬೇಕು. ಅವನ ಮನಸ್ಸು ಪ್ರಸನ್ನವಾಗಿರುವಂತೆ ನೋಡಿಕೊಳ್ಳಬೇಕು. ತನ್ನಿಂದ ಅವನಿಗುಂಟಾದ ಕಷ್ಟ ಆದಷ್ಟು ಕಡಿಮೆಯಾಗುವಂತೆ ಮಾಡಬೇಕು. "ನಾಳೆಯಿಂದ ಅವರು ಒಪ್ಪಿದರೆ ನಾನೇ ಅಡಿಗೆ ಮಾಡುತ್ತೇನೆ, ಪಾಪ, ಎಷ್ಟು ವರ್ಷಗಳಿಂದ ತಾವೇ ಕೈ ಸುಟ್ಟುಕೊಂಡು ಊಟ ಮಾಡುತ್ತಿದ್ದಾರೋ !" ಎಂದು ಮರುಗಿದಳು.

ಶೀನಪ್ಪ ಸ್ನಾನಮಾಡಿ ಬಂದು ಅಡಿಗೆ ಮನೆಯಲ್ಲಿ ಒಲೆಯ ಮೇಲೆ ಅನ್ನಕ್ಕೆ ಎಸರಿಟ್ಟು ದೇವರಕೋಣೆಗೆ ಹೋಗಿ ಕುಳಿತುಕೊಂಡ. ಪದ್ಮ ದೇವರ ಕೋಣೆಯ ತನಕ ಹೋಗಿ ಬಾಗಿಲ ಹತ್ತಿರ ನಿಂತು,

"ದೇವರ ಮನೆಯಲ್ಲೂ ದೀಪ ಹಚ್ಚಿ ಇಡೋಣ ಅಂತಿದ್ದೆ. ಆದರೆ ನೀವು ಏನಂತೀರೋ ಅಂತ ಸುಮ್ಮನಾದೆ" ಎಂದಳು.

"ಅದಕ್ಕೆ ನಾನೇನು ಹೇಳುತ್ತಿದ್ದೆ ? ಒಳ್ಳೇದಾಯಿತು ಎನ್ನುತ್ತಿದ್ದೆ. ಯಾಕೆ ಹೀಗೆ ಹೇಳುತ್ತೀ, ಪದ್ಮಾ?"

"ಇಲ್ಲ, ನಾನು ಅಪವಾದಕ್ಕೆ ಸಿಕ್ಕಿದವಳು. ದೇವರ ಮನೆಯೊಳಕ್ಕೆ ಹೋಗಬಹುದೋ ಬಾರದೋ ಅಂತ–"

"ಒಳ್ಳೇ ಚೆನ್ನಾಗಿ ಹೇಳಿದೆ, ಪದ್ಮಾ. ಅಪವಾದಕ್ಕೆ ಸಿಕ್ಕುವುದು ಅಪರಾಧ ಅಂತ ನಾನು ತಿಳಿದಿಲ್ಲ. ಹಾಗೆ ನೋಡಿದರೆ ನಾನೂ ಲೋಕಾಪವಾದಕ್ಕೆ ಸಿಕ್ಕಿದವನೇ" ಎಂದು ಹೇಳಿ, ಈ ಮಾತು ಆಡಬಾರದಾಗಿತ್ತು ಎಂದು ಹಲ್ಲು ಕಚ್ಚಿಕೊಂಡ. ಆದರೆ ಮಾತು ಮಿಂಚಿ ಹೋಗಿತ್ತು.

"ಹಾಗಾದರೆ ನಾನು ಆ ದಿನ ಹೇಳಿದ ಹಾಗೇ ಆಯಿತು. ಬೇಡ, ಈ ಶನೀನ ಮನೆಯಲ್ಲಿಟ್ಟುಕೊಳ್ಳಬೇಡಿ–ಎಂದೆ. ನೀವು ಕೇಳಲಿಲ್ಲ. ನಿಮ್ಮ ಒಳ್ಳೆ

ತನಕ್ಕೆ ತಕ್ಕ ಪ್ರತಿಫಲ ಸಿಕ್ಕಿತಲ್ಲ!"

"ಇಲ್ಲ, ಇಲ್ಲ; ಅಂಥವೇನೂ ಆಗಿಲ್ಲ, ಪದ್ಮಾ. ಏನೋ, ಕೆಲವು ಜನ ಏನೋ ಆಡಿಕೊಳ್ಳುತ್ತಿದ್ದಾರಂತೆ. ಅದಕ್ಕೇನು ಮಾಡುವುದಕ್ಕಾಗುತ್ತದೆ?"

"ಸುಮ್ಮನೆ ಯಾಕೆ ಮುಚ್ಚುಮರೆ ಮಾಡುತ್ತೀರಿ, ಶೀನಪ್ಪಾ. ನನಗೆ ಎಲ್ಲ ಗೊತ್ತಿದೆ. ನಿಮಗೆ ನಿಮ್ಮ ಜನರು ಬಹಿಷ್ಕಾರ ಹಾಕಿದ್ದಾರೆ. ಹೌದೋ ಅಲ್ಲವೋ?"

"ಇದು ನಿನಗೆ ಹೇಗೆ ತಿಳಿಯಿತು, ಪದ್ಮಾ? ಯಾರು ಹೇಳಿದರು? ಆ ನಾಗಿಯೋ? ಅವಳಿಗೆ ಇಷ್ಟು ವಯಸ್ಸಾದರೂ ಬುದ್ಧಿ ಬರಲಿಲ್ಲ."

"ನಾಗಿಯ ಮೇಲೆ ಏಕೆ ಅಷ್ಟು ಸಿಟ್ಟು ಮಾಡುತ್ತೀರಿ? ನನಗೆ ಅಷ್ಟು ಗೊತ್ತಾಗುವುದಿಲ್ಲ ಅಂತ ತಿಳಿದಿರಾ?"

ಶೀನಪ್ಪ ಸುಮ್ಮನಾದ; ಇವತ್ತಲ್ಲ ನಾಳೆ ಪದ್ಮಳಿಗೆ ಇದು ತಿಳಿಯಬೇಕು. ಸರಿ, ಹೀಗೆ ತಿಳಿದದ್ದೇ ಒಳ್ಳೇದಾಯಿತು ಎಂದುಕೊಂಡ.

ಅವಳು ಅಲ್ಲಿ ಬಾಗಿಲ ಬಳಿ ಹಾಗೇ ನಿಂತಿದ್ದಳು. ಶೀನಪ್ಪ ಮಣೆಯ ಮೇಲೆ ಕುಳಿತು ಸಂಧ್ಯಾವಂದನೆಗೆ ಸಿದ್ಧನಾಗಿದ್ದ. ದಿನವೆಲ್ಲ ಬಹಳ ಬಿಸಿಲು ಕಾದದ್ದರಿಂದ ವಿಪರೀತ ಶಖೆ. ಶೀನಪ್ಪ

"ವಿಪರೀತ ಶಖೆ. ರಾತ್ರಿ ಭಾರೀ ಮಳೆ ಬರಬಹುದು ಅಂತ ಕಾಣುತ್ತೆ" ಎಂದ. ಈ ಮಾತು ಮರೆಯಲಿ ಎಂದು. ಆದರೆ ಆ ಮಾತನ್ನು ಹೇಗೆ ಮರೆತಾಳು?

"ಶೀನಪ್ಪನವರೇ ನೀವು ಮನುಷ್ಯರಲ್ಲ" ಎಂದಳು ತುಂಬು ದನಿಯಲ್ಲಿ.

"ಭೂತವೋ ಪ್ರೇತವೋ?" ಎಂದು ನಕ್ಕ ಶೀನಪ್ಪ.

"ಇದು ತಮಾಷೆಯ ಮಾತಲ್ಲ, ನಿಜ."

"ಹಾಗಾದರೆ ನಾನಂತೂ ಮನುಷ್ಯನಲ್ಲ ಅಂತ ಆಯಿತು, ಇನ್ನು ನಾನು ಯಾರು?"

"ದೇವರು."

"ನಾನು ದೇವರು! ಇದು ಬಹಳ ಆಶ್ಚರ್ಯದ ಮಾತು." ಎಂದು ಶೀನಪ್ಪ ನಕ್ಕ.

"ನಿಮಗೆ ಆಶ್ಚರ್ಯವಾಗಬಹುದು. ನನಗೆ ಏನೂ ಆಶ್ಚರ್ಯವಿಲ್ಲ. ನೀವು ದೇವರಲ್ಲದಿದ್ದರೆ ನನ್ನಂಥವಳಿಗೆ ಆಶ್ರಯ ಕೊಡುತ್ತಿದ್ದಿಲ್ಲ. ಕೊಟ್ಟು

ಇಂಥ ಸಂದಿಗ್ಧಕ್ಕೆ ಸಿಕ್ಕಿಕೊಳ್ಳುತ್ತಿರಲಿಲ್ಲ."

"ನಾನು ಮನುಷ್ಯನಾದುದಕ್ಕೇ ಮನುಷ್ಯರ ಹಾಗೆ ನಡೆದುಕೊಂಡೆ. ದೇವರಾಗಿದ್ದರೆ ಏನು ಮಾಡುತ್ತಿದ್ದೆ ಗೊತ್ತೆ?"

"ಏನು ಮಾಡುತ್ತಿದ್ದಿರಿ?"

"ಈ ಕ್ಷಣದಲ್ಲಿ ನಿನ್ನನ್ನೂ ನಿನ್ನ ಗಂಡನನ್ನೂ ಒಂದು ಕಡೆ ಸೇರಿಸಿ ಒಂದು ರಾಜ್ಯವನ್ನೇ ನಿಮಗೆ ಕೊಡುತ್ತಿದ್ದೆ."

"ಹೌದು, ಖಂಡಿತ; ಅದರಲ್ಲಿ ನನಗೆ ಸಂದೇಹವೇ ಇಲ್ಲ. ಆದರೆ ಅದಕ್ಕಿಂತ ಹೆಚ್ಚಾದದ್ದನ್ನು ನೀವು ನನಗೆ ಕೊಟ್ಟಿದ್ದೀರಿ."

"ಅದೇನು ನಾನು ಕೊಟ್ಟಿರುವುದು, ನನಗೇ ಗೊತ್ತಿಲ್ಲದಿರುವುದು?"

"ಅಂತಃಕರಣ. ಅದು ದೇವರಲ್ಲಿದೆಯೋ ಇಲ್ಲವೋ ನನಗೆ ಗೊತ್ತಿಲ್ಲ. ನಿಮ್ಮಲ್ಲಿ ಇದೆ. ಅಷ್ಟು ಸಾಕು– ಈ ಜಗತ್ತಿನಲ್ಲಿ ನಮಗೆ ಇನ್ನೇನು ಬೇಕು?" ಎಂದಳು ಪದ್ಮಾ. ಅವಳ ಕಂಠ ಬಿಗಿದು ಬರುತ್ತಿತ್ತು.

"ದೇವರಾಗಿದ್ದವ ಈಗ ದೇವರಿಗೂ ಕೊಂಚ ಮೀರಿದೆ ಅಂತ ಕಾಣುತ್ತದೆ" ಎಂದು ಶೀನಪ್ಪ ನಕ್ಕ.

ಪದ್ಮಾವತಿ ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ,

"ನಾನು ಒಂದು ಮಾತು ಕೇಳುತ್ತೇನೆ. ನಡಸಿಕೊಡಬೇಕು. ಆಗಬಹುದೋ?"

"ಆಗಬಹುದು. ಏನು ಬೇಕಾದರೂ ಕೇಳು– ಇಲ್ಲಿಂದ ನಿನ್ನನ್ನು ಹೊರಗಟ್ಟಬೇಕು ಎಂಬ ಮಾತೊಂದನ್ನು ಬಿಟ್ಟು."

"ಆ ಮಾತನ್ನು ಸದ್ಯ ಕೇಳುವ ಹಾಗೇ ಇಲ್ಲವಲ್ಲ" ಎಂದು ಒಮ್ಮೆ ನಿಟ್ಟುಸಿರು ಬಿಟ್ಟು ಅವಳು "ಆ ಮಾತನ್ನು ಈಗ ನಾನು ಕೇಳುವುದಿಲ್ಲ." ಎಂದಳು.

"ಹಾಗಾದರೆ ಏನು, ಹೇಳು."

"ನಾಳೆಯಿಂದ ನಾನೇ ಅಡಿಗೆ ಮಾಡುತ್ತೇನೆ."

"ಆಗುವುದಿಲ್ಲ" ಎಂದು ಶೀನಪ್ಪ ನಿಷ್ಠುರವಾಗಿ ಹೇಳಿದ.

"ಏಕೆ? ನಾನು ಮುಟ್ಟಿದ್ದು ತಿನ್ನಬಾರದು ಅಂತಲೋ?"

"ಪದ್ಮಾ, ಅಂಥ ಮಾತು ಆಡಬೇಡ ತಾಯಿ. ಕಾರಣ ಅದಲ್ಲ ಅಂತ ನಿನಗೆ ತಿಳಿಯದೆ?"

" ನನಗೂ ತಿಳಿದಿದೆ. ಏನೋ ತಮಾಷೆಗೆ ಹೇಳಿದೆ ಕ್ಷಮಿಸಿ. ಹಾಗಾದರೆ ಇನ್ನೇಕೆ ?"

" ನಿನಗೆ ತ್ರಾಣವಿಲ್ಲ, ಈಗ. ಕೆಲಸ ಮಾಡಲು ಸಾಧ್ಯವಿದೆಯೇ ? ನೀನೇ ಹೇಳು. ಇಂಥ ಕಾಲದಲ್ಲಿ ವಿಶ್ರಾಂತಿ ಅಗತ್ಯ."

" ಇಂಥ ಕಾಲ ಅಂಥ ಕಾಲ ಎನ್ನುತ್ತೀರಲ್ಲ ಶೀನಪ್ಪ, ಈ ವಿಷಯವೆಲ್ಲ ಬಹಳ ತಿಳಿದಿರುವ ಹಾಗೆ. ನಾನು ಹೇಳುತ್ತೇನೆ ಕೇಳಿ ; ಅಷ್ಟಿಷ್ಟು ಕೆಲಸ ಮಾಡಿದರೆ ಏನೂ ಆಗುವುದಿಲ್ಲ."

" ಎಂದರೆ ನನ್ನ ಮನೆಯಲ್ಲಿ ಕೆಲಸ ಮಾಡದೆ ಊಟ ಮಾಡಬಾರದು. ಆಮೇಲೆ ನಾನು ಹಂಗಿಸಬಹುದು ಅಂತಲೋ ? "

" ನಾನು ಹೀಗೆ ಹೇಳುವುದಕ್ಕೆ ಕಾರಣ ಅದಲ್ಲ, ನಿಮಗೆ ಗೊತ್ತಿಲ್ಲವೆ ? ಇಂಥ ಮಾತು ನೀವು ಆಡಬಹುದೆ ? " ಎಂದು ಕೇಳಿದಳು.

" ನಾವಿಬ್ಬರೂ ಇನ್ನು ಈ ರೀತಿ ಮಾತಾಡಬಾರದಲ್ಲವೇ ?" ಎಂದ ಶೀನಪ್ಪ, ತಾನೂ ಇದೇ ರೀತಿ ಮಾತಾಡಿದ್ದನ್ನು ಜ್ಞಾಪಿಸಿಕೊಂಡು

" ನಾನೇ ನಾಳೆಯಿಂದ ಅಡಿಗೆ ಮಾಡುವುದು — ಸರಿ ಅಲ್ಲವೆ ?"

" ಬೇಡ, ಪದ್ಮಾ ; ಅಷ್ಟು ಕೆಲಸ ನಿನಗೆ ತಡೆಯದು."

" ಅವೆಲ್ಲಾ ಬೇಡ ; ನಾನು ಕೇಳಿದ ಮಾತು ನಡಸಿ ಕೊಡುತ್ತೇನೆ ಅಂತ ಒಪ್ಪಿಕೊಂಡಿರಿ. ನಡಸಿ ಕೊಡುತ್ತೀರೋ ಇಲ್ಲವೋ ಹೇಳಿಬಿಡಿ " ಎಂದಳು ಪದ್ಮಾ.

" ನನ್ನ ಮಾತಿಗೇ ನನ್ನನ್ನು ಕಟ್ಟಿಹಾಕಿದಿ, ಪದ್ಮಾ. ಸರಿ. ಆದರೆ ನನ್ನಲ್ಲಿ ದಾಕ್ಷಿಣ್ಯ ಕೊಂಚವೂ ಬೇಡ. ಕೈಲಾದರೆ, ಆಗುವ ತನಕ ಮಾಡು. ಆಗುವುದಿಲ್ಲ ಎನ್ನಿಸಿದ ಕೂಡಲೇ ಬಿಟ್ಟು ಬಿಡಬೇಕು.... ಹಾ !" ಎಂದ.

ಈಗ ಇಬ್ಬರ ಮನಸಿನಲ್ಲಿ ಒಂದೇ ಕಾಲಕ್ಕೆ ಒಂದೇ ಭಾವನೆ ಹುಟ್ಟಿತು. ಶೀನಪ್ಪನೇ ಅದನ್ನು ಮೊದಲು ವ್ಯಕ್ತ ಪಡಿಸಿದ. " ನಾವು ಹೀಗೆ ಇಷ್ಟು ಸಹಜವಾಗಿ ಮಾತಾಡುತ್ತಿರುವುದನ್ನು ಕಂಡರೆ ನಾವು ಬಾಲ್ಯದಿಂದಲೂ ಇದೇ ಮನೆಯಲ್ಲಿ ಹೀಗೆ ಇದ್ದ ಹಾಗೆ ಅನ್ನಿಸುತ್ತದಲ್ಲವೇ ? ಆಶ್ಚರ್ಯ."

" ಹೌದು. ನನಗೂ ಆಶ್ಚರ್ಯ. ಇದು ಯಾವ ಋಣಾನುಬಂಧವೋ" ಎಂದು ಪದ್ಮಾ " ನೀವು ಇನ್ನು ಸಂಧ್ಯಾವಂದನೆ ಮುಗಿಸಿ " ಎಂದು ಅಡಿಗೆ ಮನೆಗೆ ನಡೆದಳು.

ಅಡಿಗೆಯಾಯಿತು; ಊಟವಾಯಿತು. ಪದ್ಮಾ ಮಲಗಿಕೊಂಡಳು. ನಾಗಿಯೂ ಬಂದು ತನ್ನ ಚಾಪೆಯನ್ನು ಬಿಚ್ಚಿ ಕಂಬಳಿ ಹಾಸಿ ಮಲಗಿದಳು. ಶೀನಪ್ಪನೂ ಸ್ವಲ್ಪ ಹೊತ್ತು ಜೈಮಿನಿ ಭಾರತವನ್ನು ಓದಲು ಯತ್ನಿಸಿದ. ಆದರೆ ಓದಿನಲ್ಲಿ ಮನಸ್ಸು ನಿಲ್ಲಲಿಲ್ಲ. ದೀಪವಾರಿಸಿ ಅವನು ಮಲಗಿಕೊಂಡ.

ಬಹಳ ಆಯಾಸವಾಗಿದ್ದರೂ ಶೀನಪ್ಪನಿಗೆ ಬೇಗ ನಿದ್ದೆ ಹತ್ತಲಿಲ್ಲ. ಪದ್ಮಳನ್ನು ಕುರಿತೇ ಯೋಚಿಸುತ್ತಿದ್ದ. ಅವಳನ್ನು ಕುರಿತು ಯೋಚಿಸುತ್ತಿದ್ದಾಗ ಮನಸ್ಸು ಚೆನ್ನಾಗಿ ಕೆಲಸ ಮಾಡುತ್ತಿತ್ತು. ತನ್ನ ಪರಿಸ್ಥಿತಿಯನ್ನು ಕುರಿತು ಯೋಚಿಸಿದಾಗ ಮಾತ್ರ ಶೀನಪ್ಪನ ಮನಸ್ಸು ತೀರಾ ಜಡವಾಗುತ್ತಿತ್ತು. "ಹೌದು, ನನ್ನ ವಿಷಯವಾಗಿ ನಾನು ಯೋಚಿಸಬಾರದು. ಇನ್ನೊಬ್ಬರ ವಿಚಾರವಾಗಿಯೇ ಯೋಚಿಸುವುದನ್ನು ಕಲಿಯಬೇಕು. ಬಹುಶಃ ಅದೇ ಸರಿಯಾದ ದಾರಿ ಅಂತ ತೋರುತ್ತದೆ" ಎಂದುಕೊಂಡ ಶೀನಪ್ಪ.

ಪದ್ಮಾ ಇಲ್ಲಿ ಸುಖವಾಗಿರುವ ಹಾಗೆ ಏನು ಮಾಡಬೇಕು ಎಂದು ಶೀನಪ್ಪ ಯೋಚಿಸತೊಡಗಿದ. ಅವಳು ಈಗ ಗರ್ಭಿಣಿ. ಹೆರಿಗೆಯ ಸಮಯ ಬಹಳ ಹತ್ತಿರವಾಗುತ್ತಿರಬೇಕು. ನಾನು ಏನನ್ನು ಮಾಡಬೇಕು? ಈಗ ಬೇರೆ ತಾನೇ ಅಡಿಗೆ ಮಾಡಿಕೊಳ್ಳುತ್ತೇನೆಂದು ಹಟ ಹಿಡಿದಿದ್ದಾಳೆ. ತನಗೆ ಎಷ್ಟೋ ಭಾರ ಕಡಿಮೆಯಾಯಿತು ನಿಜ. ಅದೂ ಸರಿಯೆ. ಆದರೆ ಅವಳು ಎಷ್ಟೇ ಹೇಳಿದರೂ ಅವಳಿಗೆ ಇದು ಕೆಲಸ ಮಾಡುವ ಸಮಯವಲ್ಲ. ಯಾರನ್ನಾದರೂ ಮನೆಗೆಲಸಕ್ಕೆ ತಂದು ಇಟ್ಟುಕೊಳ್ಳಬೇಕು. ಯಾರನ್ನು ತರುವುದು? ಯಾರಾದರೂ ಬರಬಹುದಿತ್ತು. ಯಾರಾದರೊಬ್ಬ ವಯಸ್ಸಾದ ಹೆಂಗಸನ್ನು ಹೇಗಾದರೂ ಪುಸಲಾಯಿಸಿ ಮನೆಗೆಲಸಕ್ಕೆ ತಾತ್ಕಾಲಿಕವಾಗಿಯಾದರೂ ನೇಮಿಸಿಕೊಳ್ಳಬೇಕಾಗಿತ್ತು. ಆದರೆ ಈಗ? ತನಗೆ ಜಾತಿಕಟ್ಟು ಆಗಿದೆ ಎಂಬ ಸುದ್ದಿ ಈಗ ಸುತ್ತಮುತ್ತಲೂ ಹರಡಿದೆ. ನನ್ನ ಮನೆಯಲ್ಲಿ ಯಾರು ಬಂದು ನಿಲ್ಲಲು ಒಪ್ಪಿಯಾರು?"

ಶೀನಪ್ಪನಿಗೆ ಈ ವಿಚಾರ ಮನಸ್ಸಿಗೆ ಬಂದು ಬಹಳ ಸಂಕಟವಾಯಿತು. ಏನು ಮಾಡಬೇಕೆಂಬುದೇ ಸೂಚಿಸಲಿಲ್ಲ. ಆದಷ್ಟು ಬೇಗ ಪದ್ಮಾವತಿಗೆ ಅಡಿಗೆ ಮಾಡುವ ಈ ಕಷ್ಟ ತಪ್ಪಬೇಕು. ಅವಳ ಹೆರಿಗೆ ಬಾಣಂತನ ಸುಗಮವಾಗಿ ಸಾಗಬೇಕು. "ನನ್ನನ್ನು ಅವಳು ಬೇಡವೆಂದಳು ಈ ದೇವರಿಗೆ ಮನೆಗೆಲಸಕ್ಕೆ ಒಬ್ಬ ಆಳನ್ನು ನೇಮಿಸಿಕೊಳ್ಳಲೂ ಆಗುವುದಿಲ್ಲ. ಒಳ್ಳೇ

ಕ್ಕಾಗಿ ಶ್ರೀನಪ್ಪನಂಥ ಸಜ್ಜನನಿಗೂ ಎಂಥ ಘೋರ ಶಿಕ್ಷೆ? ಆದರೆ ಅವರ ಆ ಶಿಕ್ಷೆಗೆ ತಾನೇ ಕಾರಣಳು. ತನ್ನ ಸಲುವಾಗಿ ಅಲ್ಲವೆ ಅವರಿಗೆ ಈ ಬಹಿಷ್ಕಾರ?

ಇಂಥ ಜೀವನದಿಂದ ಯಾರಿಗೆ ಏನು ಉಪಯೋಗ? ತಾನು ಸತ್ತರೆ ಏನು ಕೇಡು? ಏನು ಹಾನಿ? ಯಾರಿಗೆ ನಷ್ಟ? ಎಷ್ಟು ಯೋಚಿಸಿದರೂ ಮತ್ತೆ ಮತ್ತೆ ಮನಸ್ಸು ಕೊನೆಗೆ ಬಯಸುವುದು ಒಂದನ್ನೇ: ಮೃತ್ಯುವನ್ನು!

ಆದರೆ—

ಆ ಮಗು, ತನ್ನ ಕರುಳಿನ ತುಣುಕು. "ಅಯ್ಯೋ ಕಂದ, ಹೇಗಿದ್ದೀಯೋ, ನೀನು? ಎಷ್ಟು ಅತ್ತೆಯೋ ನನ್ನ ರಾಜಾ!" ಎಂದು ಮುಖ ಮುಚ್ಚಿಕೊಂಡು ಸದ್ದಾ ಸದ್ದಾಗದಂತೆ ಅತ್ತಳು. ದಿಂಬು ತೊಯ್ಯುವಷ್ಟು ಅತ್ತರೂ ಹೃದಯ ಕರಕರಗಿ ನೀರಾಗಿ ಮತ್ತೆ ಮತ್ತೆ ಚಿಮ್ಮುತ್ತಿತ್ತು.

ಮಗು, ಮಗು, ಮಗೂ. "ನಿನ್ನನ್ನು ಅಲ್ಲಿ ಬಿಟ್ಟು ಬಂದು ಎಂಥ ಪಾಪ ಕಟ್ಟಿಕೊಂಡೆ, ಕಂದ." ಆ ಕಾಲದಲ್ಲಿ ಅವಳ ಮನಸ್ಸಿಗೆ ಎಂಥ ಮಂಕು ಕವಿಯಿತೋ. ಹುಚ್ಚೀ ಹಿಡಿದ ಹಾಗೆ ಆಗಿತ್ತಲ್ಲ — ಮನೆಯ ಹೊರಗಡೆ ಎಲ್ಲಿ ತಲೆ ಹಾಕಿದರೂ ಅಲ್ಲಿ ಚುಚ್ಚು ಮಾತು: ಮುಳ್ಳು ಕೋಲಿನಿಂದ ಬಾರಿಸಿದ ಹಾಗೆ, ತಲೆಯ ಮೇಲೆ ಗಂಗಳವನ್ನಿಟ್ಟು ಸೀಳಿದ ಹಾಗೆ. ಒಳಗೆ, ಮೂದಲಿಕೆ, ವ್ಯಂಗ್ಯ: ಗಾಯಕ್ಕೆ ಉಪ್ಪು ಹಾಕಿದ ಹಾಗೆ, ಮೆಣಸಿನಕಾಯಿಯ ಹೊಗೆ ಹಾಕಿ ಕಿಟಕಿ ಬಾಗಿಲನ್ನೆಲ್ಲ ಮುಚ್ಚಿದ ಕೊಠಡಿಯಲ್ಲಿ ಕೂಡಿ ಹಾಕಿದ ಹಾಗೆ. ಈ ಬೆಂಕಿಯ ಬಲೆಯಿಂದ ತಪ್ಪಿಸಿಕೊಳ್ಳಬೇಕು. ಈ ಅಪವಾದದ ಮುಳ್ಳು ಹಾಸಿಗೆಯನ್ನು ಬಿಟ್ಟು ದೂರ ದೂರ ಹೋಗಬೇಕು ಎಂಬ ಒಂದು ಯೋಚನೆಯಲ್ಲದೆ ಮನಸ್ಸು ಇನ್ನು ಯಾವ ಯೋಚನೆಯನ್ನೂ ಹತ್ತಿರ ಸೇರಿಸದು. "ಪಾಪ, ಎರಡೂವರೆ ವರ್ಷದ ಮುದ್ದು ಕಂದ, ನನ್ನನ್ನು ಬಿಟ್ಟು ಅದು ಹೇಗೆ ಇದ್ದೀತು ಅಂತ ಒಂದು ನಿಮಿಷವೂ ಯೋಚನೆ ಮಾಡಿಲ್ಲವಲ್ಲ ನಾನು?" ಎಂದು ಪದ್ಮಾವತಿ ಈಗ ಕತ್ತಲಿನ ಭೀಕರ ಮೌನದಲ್ಲಿ ತನ್ನ ಆತ್ಮಸಾಕ್ಷಿಯ ಮುಂದೆ ನಿಂತು ತಲೆ ಚಚ್ಚಿಕೊಂಡಳು.

"ಮಗೂ, ಅನಂತ! ಕ್ಷಮಿಸು ಕಂದ" ಎಂದು ದೂರದಿಂದಲೇ ತನ್ನ ಮಗುವನ್ನು ಕರೆದು ಹೇಳಿದಳು. "ಅಪ್ಪಾ, ನಾನು ಬಹಳ ಸ್ವಾರ್ಥಿ. ಕಷ್ಟಕಾಲದಲ್ಲಿ ನನ್ನ ಕ್ಷೇಮವೊಂದನ್ನೇ ಚಿಂತಿಸಿದೆ. ನಿನ್ನನ್ನು ಬಿಟ್ಟು ಹೋಗುವುದೇ ಸರಿ ಎಂದುಕೊಂಡೆ. ಮಾಡಿದ್ದು ತಪ್ಪಾಯಿತು ಮಗೂ—ತಪ್ಪು, ಶತಾ

ಪರಾಧ. ಅಯ್ಯೋ" ಎಂದಳು. ಮತ್ತೆ ಅಳು ಹೃದಯವನ್ನು ಭೇದಿಸಿ ಕೊಂಡು ಕಟ್ಟೆಯೊಡೆದ ಪ್ರವಾಹದಂತೆ ಭೋರ್ಗರೆಯಿತು.

ಆ ಕಾಲದಲ್ಲಿ ಹೀಗೆ ಏಕೆ ಅವಳಿಗೆ ಅನ್ನಿಸಲಿಲ್ಲವೋ ! ಅವಳಿಗೆ ಅರ್ಥ ವಾಗಲಿಲ್ಲ. ಆಗ ಎಲ್ಲವೂ ಸುಲಭವಾಗಿ ಕಂಡಿತು. ಕೊಲ್ಲೂರಿಗೆ ಹೋಗು ವುದು, ಆಮೇಲೆ ತನ್ನ ಗಂಡನನ್ನು ಕಳಿಸಿ ಮಗುವನ್ನು ಕರೆಸಿಕೊಳ್ಳುವುದು: ಒಂದು ಹತ್ತು ದಿನಗಳ ಕಾಲ. ಅಷ್ಟು ದಿನ ತನ್ನ ಅತ್ತಿಗೆ ಮಗುವನ್ನು ನೋಡಿ ಕೊಳ್ಳುತ್ತಾಳೆ. ಅವಳಿಗೆ ಇನ್ನೂ ಮಗುವಿಲ್ಲ. ಪದ್ಮಾವತಿಯನ್ನು ಕಂಡರೆ ಎಷ್ಟು ತಿರಸ್ಕಾರವಿದ್ದರೂ ಮಗುವಿನ ವಿಚಾರದಲ್ಲಿ ತುಂಬ ವಾತ್ಸಲ್ಯ ಅವಳಿಗೂ ಅವಳ ಗಂಡನಿಗೂ. ಮಗು ಕೂಡಾ ಅತ್ತೆ ಅತ್ತೆ ಅಂತ ಅವಳ ಹಿಂದೆಯೇ ಓಡಾಡು ತ್ತಿತ್ತು. ಏನೇ ಇರಲಿ, ಅವರು ಮಗುವಿಗೆ ಏನೂ ಕಡಿಮೆ ಮಾಡುತ್ತಿರ ಲಿಲ್ಲ.

ಆಗ ಅವಳಿಗೆ ಹೀಗೆನ್ನಿಸುತ್ತಿತ್ತು: ತಾನು ಸುಬ್ಬನ ಜೊತೆಗೆ ತನ್ನ ಗಂಡನ ಬಳಿಗೆ ಹೋಗುತ್ತೇನೆಂದು ಹೇಳಿದ್ದರೆ ಅವಳ ತಮ್ಮ ಅವಳನ್ನು ಖಂಡಿತ ಕಳಿಸಿ ಕೊಡುತ್ತಿರಲಿಲ್ಲ. ಸುಬ್ಬನೇ ರಾಮಚಂದ್ರನ ದುರ್ಗತಿಗೆ ಕಾರಣನೆಂದೂ ಅವನು ಮಹಾ ಪೋಲಿಯೆಂದೂ, ಕಾಮುಕ ವ್ಯಭಿಚಾರಿ ಎಂದೂ ಚಂದ್ರಶೇಖರ ಅನೇಕ ಸಲ ಅವನನ್ನು ಶಪಿಸಿದ್ದನ್ನು ಪದ್ಮಾವತಿಯೇ ಕೇಳಿದ್ದಳು. ಹೀಗಿರು ವಾಗ ಅವನ ಜೊತೆಗೆ ಪಂಪ್ಪೂರಿಗೆ ಹೋಗುತ್ತೇನೆಂದು ಹೇಳಿದ್ದರೆ ಅವರು ಒಪ್ಪುತ್ತಿರಲಿಲ್ಲ. ಆದರೆ ಆ ಊರೇ ಅವಳಿಗೆ ನರಕವಾಗಿತ್ತು. ಎಷ್ಟು ಬೇಗ ಅಲ್ಲಿಂದ ಹೊರಟುಬಿಟ್ಟರ ಅಷ್ಟು ಒಳ್ಳೆಯದು ಅಂತ ಅವಳಿಗೆ ಅನ್ನಿ ಸಿತ್ತು.

ನಿಜವಾಗಿ ನೋಡಿದರೆ ಆಗ ಇಷ್ಟೆಲ್ಲ ಯೋಚನೆ ಮಾಡುವುದಕ್ಕೆ ಅವಳ ಮನಸ್ಸಿಗೆ ಬಿಡುವೇ ಇರಲಿಲ್ಲ. ಮನಸ್ಸಿನಲ್ಲಿದ್ದದ್ದೂ ಒಂದೇ ಯೋಜನೆ: ಪಲಾ ಯನ. ಅರ್ಧ ಅರ್ಧ ಮಾತ್ರ ರೂಪುಗೊಂಡ ವಿಚಾರಗಳು ಮನಸ್ಸಿನಲ್ಲಿ. ಪಲಾಯನ ಭಾವನೆಯ ಮಹಾ ಪ್ರವಾಹದಲ್ಲಿ ಕೊಚ್ಚಿಕೊಂಡು ಇಷ್ಟು ದೂರ ಓಡಿ ಬಂದಳು.

ಈಗ ಸ್ಪಷ್ಟವಾಗಿ ಎಲ್ಲವನ್ನೂ ಯೋಚಿಸುವುದು ಸಾಧ್ಯವಾಗಿದೆ. ಯೋಚಿಸಿದಷ್ಟೂ ಮನಸ್ಸಿನ ಸಂಕಟ ಹೆಚ್ಚುತ್ತದೆ. ದೂರದಲ್ಲಿ ನಿಂತು ಮಗು 'ಅಮ್ಮಾ' ಎಂದು ಕೂಗುತ್ತದೆ. ಹಗಲು ರಾತ್ರಿ ಮಗನ ಕೂಗು ಮೈಲಿ

ಮೈಲಿಗಳನ್ನು ದಾಟಿ ಬಂದು ಅವಳ ಎದೆಯನ್ನು ಇರಿಯುತ್ತದೆ.

ಮಗುವಿನ ಒಂದೊಂದು ಆಟವೂ ನೆನಪಿಗೆ ಬರುತ್ತದೆ. ಅವನಿಗೆ ಒಂದು ಕ್ಷಣವೂ ಪುರಸೊತ್ತಿಲ್ಲ. ಯಾವಾಗಲೂ ಏನೇನೋ ಕೆಲಸ. ಕಾಗೆಯನ್ನು ಅಟ್ಟುತ್ತ ಅಂಗಳವೆಲ್ಲ ಓಡಾಡುವುದು ಅಷ್ಟು ಹೊತ್ತು. ಪುಟ್ಟ ಕರುವಿನ ಬಾಲವಹಿಡಿದು ಅದರ ಕೂಡ ಆಡುವುದು ಅಷ್ಟು ಹೊತ್ತು. ಯಾರು ಏನು ಮಾಡಿದರೆ ಅದನ್ನು ತಾನೂ ಮಾಡಬೇಕು. ಮಾವನ ಹಾಗೆ ಪಂಚೆಯುಟ್ಟು ಶಾಲು ಹೊದಿಸಿಕೊಳ್ಳಬೇಕು. ಮಾವನ ಕಾಲಿನ ಮೆಟ್ಟು ಕಣ್ಣಿಗೆ ಬಿದ್ದರೆ ಸಾಕು. ತನ್ನ ಪುಟ್ಟಕಾಲುಗಳನ್ನು ಅದರೊಳಗೆ ಹೇಗೋ ಸಿಕ್ಕಿಸಿಕೊಂಡು ಅತ್ತಿತ್ತ ಓಡಾಡುವ ಅವನ ಮೋಜೇ ಮೋಜು. ಆ ಹೊತ್ತಿನಲ್ಲಿ 'ಅನಂತ, ಅನಂತ' ಅಂತ ಹತ್ತು ಸಲ ಕೂಗಿದರೂ ಅವನಿಗೆ ಕೇಳಿಸಬೇಕಲ್ಲ. ಏನು ತಲ್ಲೀನತೆಯೋ! ಯಾರಾದರೂ ಹುಡುಗರು ಆಟಕ್ಕೆ ಸಿಕ್ಕಿದರೋ ತೀರಿತು. ಈ ಜಗತ್ತಿನ ಗಮನವೇ ಇಲ್ಲ – ಅವನಿಗೆ. ಊಟ ಬೇಡ, ತಿಂಡಿ ಬೇಡ. ಅತ್ತೆಯ ಹಿಂದೆ 'ಅತ್ತೆ, ಅತ್ತೆ' ಅಂತ ತಿರುಗುತ್ತಾನೆ. ಬೆಲ್ಲ ಕೊಬರಿ, ಚಕ್ಕುಲಿ ಅಂತ ಏನನ್ನಾದರೂ ಗಿಟ್ಟಿಸಿಕೊಳ್ಳದೆ ಇರುವುದಿಲ್ಲ. 'ಮಾವ, ಮಾವ' ಎನ್ನುತ್ತ ತೊಡೆಯ ಮೇಲೆ ಆಡುತ್ತಾನೆ. ಆದರೆ ಕೊನೆಗೆ ಆಟವೆಲ್ಲ ಮುಗಿದ ಮೇಲೆ ಅವನಿಗೆ ಕೊನೆಯ ಪಕ್ಷ ತಾಯಿಯೇ. ಹೆದರಿಕೆಯಾದಾಗ, ನಿರಾಶೆ ಆದಾಗ, ತನಗೆ ಆಶ್ರಯ ಬೇಕು ಅನ್ನಿಸಿದಾಗ ಓಡಿಬರುವುದು ಅಮ್ಮನ ಕಡೆಗೆ. ಆ ಪುಟ್ಟ ಪುಟ್ಟ ಹೆಜ್ಜೆಯಿಡುತ್ತ ಪರ್ರಂತ ಬರುವುದೇ ಒಂದು ಚಂದ. 'ಅಮ್ಮಾ ಅಮ್ಮಾ' ಎನ್ನುತ್ತ ಬಂದು ತಾಯಿಯ ತೋಳತೆಕ್ಕೆಯಲ್ಲಿ ಸಿಕ್ಕಿದರೆ ಅವನಿಗೆ ಅದೆಷ್ಟು ಸಂತೋಷ! "ಆಗ ನನ್ನ ಅನಂತುವಿನ ಮುಖ ನೋಡಬೇಕು" ಎಂದುಕೊಂಡಳು ಪದ್ಮಾ. ರಾತ್ರಿ ಅವನು ಮಲಗಬೇಕಾದರೆ ಅಮ್ಮ ಹತ್ತಿರವೇ ಕುಳಿತುಕೊಳ್ಳಬೇಕು. ಇಲ್ಲವಾದರೆ ಅವನು ನಿದ್ದೆ ಮಾಡಲಾರ. ತಾಯಿ ಏನಾದರೂ ಕೆಲಸ ಮಾಡುತ್ತಿದ್ದರೆ ಅವಳು ಬರುವ ತನಕ ಅವನು ಹಾಗೇ ಮುಖ ಇಷ್ಟುದ್ದ ಮಾಡಿಕೊಂಡು ಹಾಸಿದ ಹಾಸಿಗೆಯ ಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದ. ಅಮ್ಮ ಬಂದ ಮೇಲೆ ಅವನು ಮಲಗಿಕೊಳ್ಳುವುದು.

ಆದರೆ ಈಗ 'ಅಮ್ಮಾ, ಅಮ್ಮಾ' ಎಂದು ದಿನಕ್ಕೆ ಎಷ್ಟು ಸಲ ಅಳುತ್ತಾನೋ. "ಪಾಪಿ, ನಾನು ಪಾಪಿ" ಎಂದುಕೊಂಡಳು ಪದ್ಮಾ. ತನಗೆ ಇಷ್ಟು ಯೋಚನೆ ಬರಬೇಡವೇ. ಅಷ್ಟು ಸಣ್ಣ ಕಂದನನ್ನು ಬಿಟ್ಟು ಹೋಗ

ಬಾರದು ಅಂತ ಯಾಕೆ ಅನ್ನಿಸಲಿಲ್ಲ? ' ಅಯ್ಯೋ, ದೇವರೇ! ಈಗ ನಾನೇನು ಮಾಡಬೇಕು ? " ಅನಂತೂ, ಅನಂತೂ " ಎಂದು ಮನಸ್ಸಿನಲ್ಲೇ ಅಂದು ಕೊಳ್ಳುತ್ತಾ ನಿರರ್ಗಳವಾಗಿ ಅತ್ತಳು.

ಅಯ್ಯೋ, ಮಗು ಎಷ್ಟು ಸಂಕಟ ಪಡುತ್ತಿದೆಯೋ ಅಲ್ಲಿ. ಕರೆದುಕೊಂಡು ಬರಬಹುದಾಗಿತ್ತು. ಬಂದಿದ್ದರೆ ಗತಿ ? ತನಗೆ ದಾರಿಯಲ್ಲಿ ಒದಗಿದ ಗಂಡಾಂತರವನ್ನು ನೆನೆದಾಗ ಅವಳ ಮೈ ನಡುಗಿತು. ಆ ಮಳೆಯಲ್ಲಿ, ಆ ಗಾಢಾಂಧಕಾರದಲ್ಲಿ ಅವನ ಗತಿ ಏನಾಗುತ್ತಿತ್ತು? ಕರೆದುಕೊಂಡು ಬಾರದಿದ್ದೇ ಒಳ್ಳೆಯದಾಯಿತಲ್ಲವೆ ?

ತಾಯಿಲ್ಲದ ದುಃಖವಲ್ಲದೆ ಇನ್ನೇನೂ ಕೊರತೆಯಾಗದು ಅವನಿಗೆ ಅಲ್ಲಿ. 'ಅಮ್ಮಾ, ಅಮ್ಮಾ' ಎಂದು ಎರಡು ದಿನ ಅತ್ತಾನು ಆಮೇಲೆ ಎಲ್ಲ ಸರಿಹೋಗುತ್ತದೆ. ಅಮ್ಮನ ನೆನಪು ಮರೆಯುತ್ತದೆ.

ಮರೆಯುತ್ತದೆ. " ಆದರೆ ನನ್ನನ್ನೇ ಮರೆತು ಬಿಟ್ಟರೆ? ಅಯ್ಯೋ ದೇವರೇ, ಆ ಶಿಕ್ಷೆಯನ್ನೂ ನನಗೆ ಕೊಡುತ್ತೀಯಾ? ನಾನು ಮತ್ತೆ ಹೋದರೆ ನನ್ನ ಕಂದ ಮತ್ತೆ ನನ್ನನ್ನು ಗುರುತಿಸಲಾರನೆ ? ಪರಮಾತ್ಮ, ಇನ್ನು ಯಾವ ದಂಡನೆಯನ್ನಾದರೂ ನನಗೆ ಕೊಡು. ಆದರೆ ಈ ಒಂದು ದಂಡನೆ ಬೇಡ, ಬೇಡ, ಬೇಡ " ಎಂದು ಅಳು ತಡೆಯಲಾರದೆ ಬಾಯಿ ಮುಚ್ಚಿಕೊಂಡು ಹಲ್ಲು ಕಚ್ಚಿ ತುಟಿ ಬಿಗಿದಳು.

ಅನಂತರ ತನ್ನ ಗಂಡನ ಯೋಚನೆ. ಅವರು ಕೊಲ್ಲೂರಿಗೆ ಬಂದು ಕಾದು ನಿರಾಶರಾಗಿ ಎಲ್ಲಿಗೆ ಹೋದರೋ. ಸುಬ್ಬ ಎಲ್ಲಿಗೆ ಹೋದ ? ಪುನಃ ಮುಸಾಫಿರ್‌ಖಾನೆಗೆ ಬಂದಾಗ ನಾನು ಕಾಣದೆ ಎಷ್ಟು ಗಾಬರಿಯಾದನೋ! ಅವನೇನಾದರೂ ಕೊಲ್ಲೂರಿಗೆ ಹೋಗಿ ಅವರಿಗೆ ನಡೆದದ್ದನ್ನೆಲ್ಲ ತಿಳಿಸಿದನೋ ? ತಿಳಿಸಿದ್ದರೆ ಅವರಿಗೆ ದುಃಖವಾಗಿರಬಹುದೋ ?

ತನ್ನ ಗಂಡನಿಗೆ ಬಹಳ ದುಃಖವಾಗಿರಬೇಕು ಅಂತ ಅವಳಿಗೆ ಅನ್ನಿಸಲಿಲ್ಲ. ಅವರು ಒಂದು ತರ, ಅದು ಯಾವ ತರ ಅಂತ ಅವಳಿಗೆ ಇಷ್ಟು ವರ್ಷವಾದರೂ ಸರಿಯಾಗಿ ತಿಳಿದಿಲ್ಲ. ಒಂದು ಸಲವಾದರೂ ಕೆಟ್ಟ ಮಾತಾಡಿಲ್ಲ, ಹೊಡೆದಿಲ್ಲ, ಬಡಿದಿಲ್ಲ. ಎಲ್ಲ ಸರಿ. ಆದರೆ ಒಳಗೆ ತನ್ನ ವಿಷಯದಲ್ಲಿ ಅವರಿಗೆ ಏಕೋ, ಔದಾಸೀನ್ಯ ಅಂತ ಅವಳಿಗೆ ಬಹಳ ಸಲ ಅನ್ನಿಸಿತ್ತು. ಕಾರಣವಿಲ್ಲದೆ ಹಾಗೆ ಅನ್ನಿಸುತ್ತಿತ್ತು. ತಾನು ಹತ್ತಿರವಿದ್ದಾಗ ಸರಿ; ದೂರವಾದಾಗಲೆಲ್ಲ

ಅವರು ತನ್ನನ್ನು ಮರೆಯುತ್ತಾರೆ ಅಂತ ಅವಳಿಗೆ ಸಂಶಯ.

ಈಗಲೂ ಹಾಗೆಯೇ ಆಗಿರಬಹುದು ಅಂತ ಅವಳಿಗೆ ಅನ್ನಿಸಿ ಮತ್ತೆ ತನ್ನ ಅಸಾಹಯ ಸ್ಥಿತಿಯ ದಾರುಣತೆ ಅರಿತು ತಲ್ಲಣಿಸಿತು. ಅವರೇನಾದರೂ ತನ್ನನ್ನು ಮರೆತೇ ಬಿಟ್ಟರೆ ಮುಂದೇನು ಗತಿ? ತಾನು ಎಲ್ಲಿಗೆ ಹೋಗಬೇಕು? ಮಗುವಿನ ಗತಿಯೇನು? "ಥೂ, ಈ ರೀತಿ ನಾನು ಏಕೆ ಯೋಚನೆ ಮಾಡಬೇಕು? ಇದು ಸರಿಯಲ್ಲ; ಹೀಗೆಲ್ಲ ಯೋಚನೆ ಮಾಡಿದರೆ ಹುಚ್ಚೇ ಹಿಡಿದೀತು" ಎಂದು ತನ್ನ ಮನಸ್ಸು ಆ ದಾರಿಯಲ್ಲಿ ಹೋಗದಂತೆ ಬಿಗಿಹಿಡಿದಳು.

ಹಾಗೆ ಅವರು ಅವಳನ್ನು ಮರೆಯುವ ಹಾಗಿದ್ದರೆ ಕೊಲ್ಲೂರಲ್ಲಿ ಮನೆ ಮಾಡುವ ಯೋಚನೆ ಮಾಡುತ್ತಿದ್ದರೆ? ತನ್ನನ್ನು ಕರಸಿಕೊಳ್ಳಲು ಸುಬ್ಬನನ್ನು ಕಳಿಸಿಕೊಡುತ್ತಿದ್ದರೆ? "ಇಲ್ಲ, ನನ್ನನ್ನು ಅವರು ಮರೆತಿಲ್ಲ. ಪಾಪ, ಪರದೇಶದಲ್ಲಿ ತಮಗೆ ತಿಳಿಯದ ವ್ಯಕ್ತಿಯನ್ನು ಹಿಡಿದು ಎಷ್ಟು ಕಷ್ಟಪಡುತ್ತಿದ್ದಾರೋ! ಅವರ ಬಗ್ಗೆ ನಾನು ಈ ರೀತಿ ಯೋಚಿಸುವುದು ಪಾಪ" ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಳು.

ಆದರೂ ಸಂಪೂರ್ಣ ಸಮಾಧಾನ ಆಗಲೊಲ್ಲದು. ದಿನವೆಲ್ಲ ಹಾ ಎಂದು ಹೂ ಎನ್ನದಿದ್ದ ಅವಳ ಗಂಡ ರಾತ್ರಿಯಲ್ಲಿ ಮಾತ್ರ ಪ್ರತಿ ದಿನವೂ ಅವಳ ಸಂಗವನ್ನು ಬಯಸುತ್ತಿದ್ದ. ದೇವರ ತಲೆಯ ಹೂವು ತಪ್ಪಿದರೂ ಅದು ತಪ್ಪಬಾರದು. ಆಗಲೂ ಕೂಡಾ ಮಾತು. ಸರಸ ಒಂದೂ ಇಲ್ಲ. ಎಷ್ಟೋ ಸಲ ಪದ್ಮಳಿಗೆ "ಅವರಿಗೆ ಬೇಕಾದ್ದು ಈ ನನ್ನ ಮೈ; ನನ್ನಿಂದ ಅವರಿಗೆ ಏನಾಗಬೇಕಾಗಿದೆ" ಎಂದು ಅನ್ನಿಸಿ ಬಹಳ ಸಿಟ್ಟೂ ಬರುತ್ತಿತ್ತು. ಆದರೆ ಸಿಟ್ಟನಿಂದ ಏನುಪಯೋಗ? ತಾನೇ ಮಾತಾಡಿಸಲು ಯತ್ನಿಸಿದಳು. ಗೃಹಕೃತ್ಯದ ವಿಚಾರ, ಸಾಲಸೋಲದ ವಿಚಾರ ಪ್ರಶ್ನಿಸಿದಳು. ಯಾವುದಕ್ಕೂ ತಕ್ಕ ಉತ್ತರವಿಲ್ಲ. ಒಂದು ಮಾತಿಗೆ ಅರ್ಧ ಮಾತಿನ ಉತ್ತರ. ಇನ್ನೂ ಸ್ವಲ್ಪ ಒತ್ತಿ ಕೇಳಿದರೆ "ನಿನಗೇಕೆ ಅದೆಲ್ಲ ಹೆಂಗಸಿಗೆ" ಎಂಬ ಸಿಡುಕಿನ ಮಾತು; ಸಿಟ್ಟು. ಯಾವ ಬಯಕೆಯನ್ನಾದರೂ ತಡೆದುಕೊಳ್ಳಲು ಶಕ್ತಿಯಿಲ್ಲದವರು ತನ್ನ ಗಂಡ ಅಂತ ಪದ್ಮಾವತಿಗೆ ಬಹಳ ಚೆನ್ನಾಗಿ ಗೊತ್ತು. ಊಟ ಒಂದು ಕ್ಷಣ ತಡವಾದರೆ ದಿನವೆಲ್ಲ ಮುಖ ಗಂಟಾಗುತ್ತಿತ್ತು. ತವರು ಮನೆಗೆ ಅವಳು ಒಂದು ದಿನಸ ಹೋದರೆ ಮತ್ತೆ ನಾಲ್ಕು ದಿನ ಅವನು ಅರ್ಧ ಮಾತು ಕೂಡಾ ಆಡುತ್ತಿರಲಿಲ್ಲ. ಇಂಥವರು ಈಗ ಪರದೇಶದಲ್ಲಿದ್ದಾರೆ. ತಮ್ಮ

ಆಶೆಯನ್ನು ಅಲ್ಲಿ ಹೇಗೆ ತಾನೇ ಹತೋಟಿಯಲ್ಲಿಟ್ಟುಕೊಳ್ಳಬಲ್ಲರು? "ಹೆಂಗಸಿನ ಮೈಯ ಆಶೆ ಯಾವಳ ಹತ್ತಿರಕ್ಕೆ ಅವರನ್ನು ಸೆಳೆಯಿತೋ?" ಎಂಬ ಸಂದೇಹ ಬಂದು ಅವಳ ಮನಸ್ಸು ಅಗ್ನಿಕುಂಡವಾಯಿತು. ಹಾಗೆ ಮಾಡಿ, ತನ್ನನ್ನು ಮರೆತರೆ?

"ಥೂ, ಮತ್ತೆ ಮನಸ್ಸು ಆ ಕಡೆಗೇ ಯಾಕೆ ತಿರುಗುತ್ತದೆ? ಅವರೂ ನನ್ನ ವಿಷಯದಲ್ಲಿ ಹೀಗೆ ಯೋಚನೆ ಮಾಡಿವರೆ? ಸರಿಯಲ್ಲ, ಹೀಗೆ ಯೋಚನೆ ಮಾಡಬಾರದು. ಅವರು ನನ್ನ ಕೈ ಬಿಡುವುದಿಲ್ಲ" ಎಂದು ಮತ್ತೆ ತನಗೆ ತಾನೇ ಸಮಾಧಾನ ಹೇಳಿಕೊಂಡಳು.

ಆದರೂ ಸಂಪೂರ್ಣ ಸಮಾಧಾನ ಆಗದು. ಏನೋ ಹೆದರಿಕೆ, ಏನೋ ತಲ್ಲಣ.

ಇದೆಲ್ಲ ಸರಿ. ಆದರೆ ಈ ಶೀನಪ್ಪನವರು! ಅಬ್ಬಾ ಎಂಥ ಸಜ್ಜನ. ಮಾತು, ಕತೆ, ನಡತೆ ಎಲ್ಲದರಲ್ಲೂ ಎಷ್ಟು ನಯ, ಎಷ್ಟು ಸಂಸ್ಕಾರ! "ನಾನು ಹೇಳಿದ ಮಾತು ಸರಿ. ಅವರು ದೇವರೇ!" ಎಂದು ಮತ್ತೆ ತನಗೆ ತಾನೇ ಹೇಳಿಕೊಂಡಳು. ತನ್ನಿಂದ ಎಂಥ ಸಂಕಷ್ಟಕ್ಕೆ ಅವರು ಸಿಕ್ಕಬೇಕಾಯಿತು. ಆದರೂ ಮುಖದಲ್ಲಿ ಒಂದು ಗಂಟು ಮಾತಿನಲ್ಲಿ ಒಂದು ಕ್ಷಣ ಬಿರುಸು— ಇರಬೇಕಲ್ಲ? "ಈತ ಎಂಥ ಮನುಷ್ಯನಿರಬಹುದು" ಎಂದು ಮತ್ತೆ ಮತ್ತೆ ಅವಳಿಗೆ ಆಶ್ಚರ್ಯ. ಇನ್ನೆಲ್ಲೂ ಇಂಥವನನ್ನು ಅವಳು ಕಂಡಿಲ್ಲ, ಕೇಳಿಯೂ ಇಲ್ಲ. ಅವಳಿಗೆ ಗೊತ್ತು—ಅವಳ ವಿಷಯವಾಗಿಯೇ, ಅವಳಿಗೆ ಒಳ್ಳೆಯದಾಗಲಿ ಎಂತಲೇ ಆತನಿಗೆ ದಿನವೆಲ್ಲ ಯೋಚನೆ. "ಏಕೆ ಒಂದು ಕ್ಷಣವೂ ಕೂಡಾ ನನಗೆ ಆತ ಪರಪುರುಷ ಅಂತ ಅನ್ನಿಸಲಿಲ್ಲ?" ಎಂದು ತನಗೆ ಪ್ರಶ್ನೆ ಹಾಕಿಕೊಂಡಳು. ಪ್ರಶ್ನೆಗೇನೋ ಉತ್ತರ ಸಿಕ್ಕಲಿಲ್ಲ. ಯಾವ ಪ್ರಶ್ನೆಗೆ ತಾನೇ ಉತ್ತರ ಸಿಕ್ಕುತ್ತದೆ? ಆದರೆ ಶೀನಪ್ಪನ ಕೈಲಿ ಪ್ರಾಣವನ್ನೆಲ್ಲ ಏನು ಮಾನವನ್ನೆಲ್ಲ ಕೊಟ್ಟೂ ಸುರಕ್ಷಿತವಾಗಿರಬಹುದು. ಅದರಲ್ಲಿ ಅವಳಿಗೆ ಎಳ್ಳಷ್ಟೂ ಸಂದೇಹವಿಲ್ಲ.

ಅಂಥ ಸಜ್ಜನನಿಗೆ ತನ್ನಿಂದ ಎಂಥ ಅಪವಾದ ಬಂತು ಎಂದು ಯೋಚಿಸಿದಾಗಲೆಲ್ಲ ಪದ್ಮಾ ಕರಗಿ ನೀರಾಗಿ ಹೋಗುತ್ತಿದ್ದಳು. ತನ್ನ ಜೀವಮಾನದಲ್ಲೇ ಎಂದೆಂದೂ ಯಾರ ಬಗ್ಗೆಯೂ ಪಡದೆ ಇದ್ದ ಸಂಕಟವನ್ನು ಈಗ ಪಡುತ್ತಿದ್ದಳು. ಅಂದು ಆ ಭಯಂಕರ ರಾತ್ರಿ ತಾನು ಈ ಮನೆಯಲ್ಲಿ ಮೊದಲ ಬಾರಿಗೆ ಪ್ರಜ್ಞೆ

ಬಂದಾಗ ಕಣ್ಣು ಬಿಟ್ಟು ಕಂಡ ಆ ದೃಶ್ಯ ಈಗಲೂ ಅವಳ ಕಣ್ಣಿಗೆ ಕಟ್ಟಿದಂತೆ ಇತ್ತು. ಪ್ರಶಾಂತವಾದ, ಗಂಭೀರವಾದ ಮುಖ. ಕಾರುಣ್ಯದ ಅಕ್ಷಯ ಪಾತ್ರೆಗಳಂತೆ ನೀರು ತುಂಬಿ ಹೊಳೆಯುತ್ತಿದ್ದ ಕಣ್ಣು. ಜನ್ಮಜನ್ಮಾಂತರದ ಯಾವುದೋ ಬಾಂಧವ್ಯದ ನೆನಪು ಕೊಡುವಂಥ ಮಾತು. ಮಾತು-ಎಂಥ ಮಾತು ಶೀನಪ್ಪನದು ಪ್ರತಿಯೊಂದು ಮಾತೂ ಮನಸ್ಸಿನ ಚಿತ್ರದಂತೆ. ಒಂದು ದನಸ್ಸಾಗಲೂ ಕೋಟಿ, ಮುಚ್ಚುಮರೆ—ಇವುಗಳ ನೆರಳಾದರೂ ಇರಲಿಲ್ಲ ಆತನ ಮಾತಿನಲ್ಲಿ. "ಈ ಪಾಪಿಗೆ ಇಂಥ ಸಜ್ಜನನ ದರ್ಶನವಾದರೂ ಆಯಿತಲ್ಲ— ಎಂಥ ಪುಣ್ಯ" ಎಂದು ಪದ್ಮಾ ನಿಟ್ಟುಸಿರು ಬಿಟ್ಟಳು.

ಆದರೆ ಇಂಥ ಮನುಷ್ಯನಿಗೆ ತಾನು ಎಂಥ ದ್ರೋಹ ಮಾಡಿದೆ ಎಂದು ಯೋಚಿಸಿದಾಗ ಮತ್ತೆ ಅವಳಿಗೆ ತನ್ನಲ್ಲಿ ತನಗೇ ಜುಗುಪ್ಸೆ ಹುಟ್ಟಿತು. "ನನಗೇಕೆ ಅಂಥ ದುರ್ಬುದ್ಧಿ ಕೊಟ್ಟೆ, ದೇವರೇ?" ಎಂದು ಹಲುಬಿದಳು. ಪ್ರತಿದಿನವೂ ಇದೇ ಕೊರಗು ಅವಳಿಗೆ. ತನ್ನ ಕಥೆಯನ್ನೆಲ್ಲ ಅವನಿಗೆ ಹೇಳಿದ್ದಳು ಪದ್ಮಾ. ಆದರೆ ಒಂದೇ ಒಂದು ವಿಷಯವನ್ನು ಮಾತ್ರ ಮುಚ್ಚಿಟ್ಟಿದ್ದಳು. ತನ್ನ ಮಗುವಿನ ವಿಚಾರ ಹೇಳಬೇಕು ಹೇಳಬೇಕು ಅನ್ನಿಸಿದರೂ ಏನೇಕೋ ಆಗ ಹೇಳುವುದು ಬೇಡವೆನ್ನಿಸಿತು. ಹೇಳುವುದು ಸಾಧ್ಯವಾಗಲಿಲ್ಲ. ಏಕೆ ತನ್ನ ಮನಸ್ಸಿಗೆ ಈ ಪಕ್ಷಪಾತ ಆಗ ಬಡಿಯಿತು ಅಂತ ಎಷ್ಟು ಚಿಂತಿಸಿದರೂ ಅವಳಿಗೆ ಬಗೆಹರಿಯದು. ಶೀನಪ್ಪನ ಸಜ್ಜನಿಕೆಯನ್ನು ಕಂಡು ಆಗ ಅವಳು ಮುಗ್ಧಳೇ ಆಗಿದ್ದಳು. ಆತನ ವಿಷಯದಲ್ಲಿ ಅಪಾರ ಗೌರವ ಆಗಲೇ ಹುಟ್ಟಿತ್ತು. ಅವನು ತನ್ನ ವಿಷಯದಲ್ಲಿ ಕೆಟ್ಟ ಅಭಿಪ್ರಾಯ ತಳೆಯಬಾರದು ಅಂತ ಮನಸ್ಸಿನಾಳದಲ್ಲಿ ಅವಳಿಗೆ ಅನ್ನಿಸಿದ್ದಿರಬೇಕು. ನಿಜಸಂಗತಿಯನ್ನು ಹೇಳಿದರೆ "ಹೊಟ್ಟೆಯ ಮಗುವನ್ನು ಬಿಟ್ಟೋಡಿ ಬಂದ ಪಾತಕಿ" ಅಂತ ಅವನು ತಿಳಿದುಕೊಳ್ಳಬಹುದು ಎಂಬ ಸುಪ್ತಭೀತಿ ಅವಳ ಬಾಯಿಂದ ಸುಳ್ಳನ್ನು ನುಡಿಸಿತು.

ಸುಳ್ಳೇ ಅಲ್ಲ. ಸತ್ಯವನ್ನು ಹೇಳಲಿಲ್ಲ. ಮಗುವಿನ ವಿಚಾರ ಅವನೇ ಕೇಳಿದಾಗ ಅವಳಿಗೆ ಸಹಜವಾಗಿಯೇ ಅಳು ಬಂದಿತ್ತು. ಆದರೆ ಆಗಲಾದರೂ ನಿಜ ಹೇಳಬಹುದಾಗಿತ್ತು. ಅವಳ ಅತ್ತುದನ್ನು ಕಂಡು ಶೀನಪ್ಪ ಮತ್ತೆ ಆ ಪ್ರಶ್ನೆಯನ್ನು ಕೇಳಲಿಲ್ಲ. ಕೇಳಿದರೆ ಎಲ್ಲಿ ನೋವಾಗುವುದೋ ಅಂತ ಶೀನಪ್ಪ ಸುಮ್ಮನಾಗಿರಬೇಕು. ಇಂಥ ಅಗಾಧ ಅನುಕಂಪಕ್ಕೆ ತಾನು ಕೊಟ್ಟ ಪ್ರತಿಫಲ? "ಥೂ, ನನ್ನಂಥವಳಿಗೆ ದೇವರು ಎಂಥ ಶಿಕ್ಷೆ ಕೊಟ್ಟರೂ ಕಡಿಮೆಯೇ" ಎಂದು

ಪದ್ಮಾ ತನ್ನನ್ನು ತಾನೇ ಶಪಿಸಿಕೊಂಡಳು.

ಶೀನಪ್ಪ ಪ್ರಶ್ನೆ ಕೇಳಿದಾಗ ಸತ್ಯ ಹೇಳಿಬಿಡಬೇಕು ಅಂತ ಅನ್ನಿಸಿತ್ತು; ಮಾತು ಗಂಟಲ ತನಕ ಬಂದದ್ದು ಹಿಂದೆ ಜಾರಿಹೋಯಿತು. ಯಾವ ದುರ್ಬುದ್ಧಿ ಬಂತ್ರೋ ಆಗ. ಶೀನಪ್ಪನಂಥವರ ಮುಂದೆ ಸತ್ಯ ಹೇಳದೇ ಇನ್ನೆಲ್ಲಿ ಹೇಳಬೇಕು? ಸತ್ಯ ಹೇಳಬೇಕೆಂತಲೇ ಹೊರಟಿದ್ದಳು. ಆದರೆ ಮಧ್ಯದಲ್ಲಿ ಈ ಕೆಟ್ಟ ಕೆಲಸ ನಡೆದುಹೋಯಿತು.

ಆಮೇಲೆ ಪ್ರತಿದಿನವೂ ಈ ಒಂದು ಮಾತನ್ನು ಹೇಳಿಯೇ ಬಿಡಬೇಕು ಅಂತ ಯೋಚಿಸುತ್ತಿದ್ದಳು. ಶೀನಪ್ಪ ಬರುವ ತನಕವೂ ಅದೇ ಯೋಚನೆ. ಆದರೆ ಬಂದಾಗ ಈ ಮಾತನ್ನು ಹೇಳಲು ಏನೋ ಸಂಕೋಚ. 'ನಾಳೆ ಹೇಳಿದರೆ ಸರಿ' ಅಂತ ಅದನ್ನು ಮುಂದೂಡುತ್ತ ಬಂದಿದ್ದಳು. ಅದನ್ನು ಹೇಳುವ ತನಕ ಅವಳಿಗೆ ನೆಮ್ಮದಿ ಇಲ್ಲ. ಆದರೆ ಹೇಳುವುದು ಹೇಗೆ? "ಆ ದಿನ ನಾನು ನಿಮ್ಮ ಕನಿಕರ ಗಳಿಸುವುದಕ್ಕಾಗಿ ಒಂದು ಸುಳ್ಳು ಹೇಳಿದೆ" ಎಂತ ಯಾವ ಬಾಯಿಂದ ಹೇಳಲಿ?

ಹೇಳಬೇಕು ಅಂತ ಮನಸ್ಸು ತುಡಿಯುತ್ತದೆ. ಹೇಳಲು ಮನಸ್ಸಿಗೆ ಧೈರ್ಯವಿಲ್ಲ. "ಅಯ್ಯೋ ದೇವರೆ ಈ ನರಕದಿಂದ ಹೇಗೆ ಪಾರಾಗುವುದಪ್ಪಾ" ಎಂದು ತಲೆ ಚಚ್ಚಿಕೊಂಡಳು.

ಅಲ್ಲಿ ಶೀನಪ್ಪ ಮಲಗಿದ್ದಾರೆ. ಪದ್ಮಾ ಹೇಗೆ ಸುಖವಾಗಿರುವಂತೆ ಮಾಡಲಿ ಅಂತ ಯೋಚನೆಮಾಡುತ್ತಲೇ ಮಲಗಿದ್ದಾರೆ. ಅದರಲ್ಲಿ ಅವಳಿಗೆ ಸಂದೇಹವಿಲ್ಲ. "ಇಂಥವರ ಹತ್ತಿರ ಸುಳ್ಳು ಹೇಳಿದೆನಲ್ಲ!" ಎಂದು ಮತ್ತೆ ದುಃಖ. ಇಲ್ಲ, ಖಂಡಿತವಾಗಿ ಆದಷ್ಟು ಬೇಗ ಸತ್ಯ ಸಂಗತಿಯನ್ನು ಅವರಿಗೆ ತಿಳಿಸಿ ಅವರ ಕಾಲ ಮೇಲೆ ಬಿದ್ದು ಕ್ಷಮೆ ಕೇಳಿಕೊಳ್ಳಬೇಕು ಎಂದು ಮತ್ತೆ ನಿರ್ಧಾರ ಮಾಡಿದಳು.

ರಾತ್ರಿ ಎಷ್ಟಾಗಿತ್ತೋ! ಪದ್ಮಳಿಗೆ ನಿದ್ದೆಯೇ ಬಾರದು. ಮಗು–ಗಂಡ–ಶೀನಪ್ಪ ಈ ಮೂವರ ನಡುವೆ ಮನಸ್ಸು ತುಯ್ಯುತ್ತದೆ. ಸಮಸ್ಯೆಯ ಮೇಲೆ ಸಮಸ್ಯೆ; ಪ್ರಶ್ನೆಯ ಮೇಲೆ ಪ್ರಶ್ನೆ. ಆದರೆ ಒಂದೂ ನಿವಾರಣೆ ಆಗುವುದಿಲ್ಲ; ಒಂದಕ್ಕೂ ಉತ್ತರ ಸಿಕ್ಕುವುದಿಲ್ಲ.

ಮನುಷ್ಯರಿಂದ ನಿವಾರಿಸಲಾರದ ಕಷ್ಟಕ್ಕೆ ಅವಳು ಸಿಕ್ಕಿಬಿದ್ದಿದ್ದಳು. ಯಾರು ಏನು ಮಾಡಿದರೂ ಏನೂ ಆಗದು.

ಹಾಗಾದರೆ—

"ದೇವರೇ ನೀನೇ ಈ ಕಷ್ಟದಿಂದ ಪಾರುಮಾಡಬೇಕು" ಎಂದು ದೇವರಿಗೆ ಮೊರೆಯಿಡುತ್ತ ಮಲಗಿದ್ದಳು. ನಿದ್ದೆ ಯಾವಾಗ ಬಂತೋ ಅವಳಿಗೇ ತಿಳಿಯದು.

# ೧೩

ಮಳೆ, ಮಳೆ, ಮಳೆ. ಮಳೆಯಲ್ಲೇ ನಟ್ಟಿಯ ಕೆಲಸವೆಲ್ಲ ಮುಗಿಯಿತು. ಎಲ್ಲೋ ಒಬ್ಬಿಬ್ಬರು ಸೋಂಭೇರಿಗಳನ್ನು ಬಿಟ್ಟರೆ ಉಳಿದೆಲ್ಲರ ವರ್ಷದ ಕೆಲಸವೂ ಮುಗಿದಂತಾಯಿತು. ಜಾಡು ತಿಂಗಳು ಮುಗಿಯುತ್ತ ಬಂತು. ಇನ್ನು ಆಸಾಡಿ ತಿಂಗಳು ಎಂದರೆ ಬರೀ ಮಳೆಯ ತಿಂಗಳೇ. ಎಲ್ಲೆಲ್ಲೂ ನೀರು; ಸುತ್ತಲೂ ಜಲಪ್ರಳಯದ ಹಾಗೆ. ಆಸಾಡಿ, ಸೋಣೆ, ಕನ್ಯೆ—ಈ ಮೂರು ತಿಂಗಳೂ ಬಿಡುವು. ಗದ್ದೆಯಲ್ಲಿ ಕಳೆ ಕೀಳುವುದು; ಕಾಡಿನಿಂದ ಕೊಟ್ಟಿಗೆಗೆ ಸೊಪ್ಪು ಹೊರೆ ಕಟ್ಟಿ ತರುವುದು.—ಇಷ್ಟು ಬಿಟ್ಟರೆ ಬೇರೆ ಹೆಚ್ಚಿಗೆ ಕೆಲಸವಿಲ್ಲ. ಕೆಲಸವಿಲ್ಲದೆ ಮನೆಯಲ್ಲಿ ಕುಳಿತುಕೊಳ್ಳಬೇಕು. ಹೊರಗೆ ಹೋಗುವುದಂತೂ ಸಾಧ್ಯವೇ ಇಲ್ಲ. ಅಗತ್ಯ ಕೆಲಸವಿಲ್ಲದೆ ಹೊರಗೆ ಹೋಗಬೇಕಾಗುವುದೂ ಇಲ್ಲ. ಪ್ರತಿಯೊಂದು ಹಳ್ಳಿಯೂ ಸಮುದ್ರ ಮಧ್ಯದ ದ್ವೀಪದಂತೆ ತೋರುತ್ತದೆ. ಮಳೆಗಾಲಕ್ಕೆ ಬೇಕಾದ ಸಾಮಾನುಗಳನ್ನೆಲ್ಲ ಬೇಸಗೆಯಲ್ಲೇ ತಂದಿರುವುದರಿಂದ ಅಂಗಡಿಗೆ ಹೋಗಬೇಕಾದ ಪ್ರಮೇಯವೂ ಕಡಿಮೆ.

ಶೀನಪ್ಪನ ನಟ್ಟಿಯೂ ಮುಗಿಯಿತು. ಇನ್ನು ಕೊಯ್ಲಿನ ತನಕ ಬೇರೆ ಕೆಲಸವಿಲ್ಲ. ನಾಗಿಯೋ ಸುಬ್ಬಿಯೋ ಕಳೆ ಕೀಳುತ್ತಾರೆ. ಸುಬ್ಬಿ ದನಕರುಗಳನ್ನು ನೋಡಿಕೊಳ್ಳುತ್ತಾಳೆ, ಕಾಡಿನಿಂದ ಸೊಪ್ಪು ತಂದು ಕೊಟ್ಟಿಗೆಗೆ ಹಾಕುತ್ತಾಳೆ.

ಶೀನಪ್ಪನು ಈಗ ತನ್ನ ಬಂಧುಬಳಗದವರ ಮನೆಗೆ ಹೋಗುತ್ತಿರಲಿಲ್ಲ. ಸ್ವಜಾತಿಯವರ ಮನೆಗೆ ಕಾಲಿಡುತ್ತಿರಲಿಲ್ಲ. ಅವನ ವ್ಯವಹಾರವೆಲ್ಲ ಈಗ ಇತರ ಜಾತಿಯವರೊಡನೆ. ಸೋಮು, ಈರ, ವೆಂಕ, ನಾಗಪ್ಪ, ತಿಮ್ಮ, ಪರಮೇಶ್ವರ, ಸ್ಕೈರ—ಈ ಎಲ್ಲರೂ ಅವನಲ್ಲಿ ಎಂದಿನಂತೆಯೇ ಅಗಾಧ ವಿಶ್ವಾಸ ತೋರಿಸುತ್ತಿದ್ದರು. ಅವನ ಮನೆಗೆ ಬರುವವರೆಂದರೆ ಈಗ ಅವರೇ. ಅವರು ಮುಗ್ಧರು, ಅರಿಯದವರು. ನಿಜ. ಆದರೆ ಅವರೂ ಮನುಷ್ಯರೇ. ದೇವರನ್ನೇ ತಮ್ಮ ಕೈಯೊಳಗಿಟ್ಟುಕೊಂಡಿರುವ ಈ ಉತ್ತಮ ಜಾತಿಯವರಿಗಿಂತ ಬಹುಶಃ ಈ ಇವರಲ್ಲೇ ಹೆಚ್ಚು ಮನುಷ್ಯತ್ವ ಇರಬೇಕು ಅಂತ ಶೀನಪ್ಪನಿಗೆ ಎಷ್ಟೋ ಸಲ ಅನ್ನಿಸಿತ್ತು. ಈಗ ಆ ಅನಿಸಿಕೆ ಇನ್ನಷ್ಟು ದೃಢಪಟ್ಟಿತು.

ಅನೇಕರು ಶೀನಪ್ಪನ ವಿಷಯವಾಗಿ ಹಿಂದಿನಿಂದ ಕುತ್ಸಿತವಾದ ಮಾತುಗಳನ್ನು ಆಡುತ್ತಿದ್ದರು. ಊರಿನಲ್ಲಿ ಅನೇಕರಿಗೆ ಅದೇ ಈಗ ಸಂಭಾಷಣೆಯ ಮುಖ್ಯ ವಸ್ತುವಾಯಿತು. ಕಲ್ಪನಾಶಕ್ತಿಯುಳ್ಳವರೆಲ್ಲ ತಮತಮಗೆ ಬೇಕಾದ ರೀತಿಯಲ್ಲಿ ಕಥೆ ಕಟ್ಟಿಕೊಂಡು ಇತರರಿಗೆ ಹೇಳಿ ಸಮಾಧಾನಪಟ್ಟುಕೊಳ್ಳುತ್ತಿದ್ದರು. ಆ ಹೆಂಗಸು ಪದ್ಮಾ ಹಾಲಾಡಿಯವಳು; ಅವಳು ಕೀಳುಜಾತಿಯವಳೇ ಇರಬೇಕು. ಶೀನಪ್ಪನಿಗೂ ಅವಳಿಗೂ ಬಹಳ ವರ್ಷಗಳ ಸಂಬಂಧ. ಅದಕ್ಕಾಗಿಯೇ ಶೀನಪ್ಪ ಮದುವೆಮಾಡಿಕೊಳ್ಳದೆ ಇದ್ದದ್ದು. ಅವಳನ್ನು ಇಟ್ಟುಕೊಂಡವ ಅವಳ ಆಗುಹೋಗು ನೋಡಿಕೊಳ್ಳದೇ ಇರುವುದು ನ್ಯಾಯವೇ? ಅವಳು ಗರ್ಭಿಣಿ ಆಗುವಂತೆ ಮಾಡಿ ಶೀನಪ್ಪ ಊರಿಗೆ ಬಂದು ಏನೂ ತಿಳಿಯದವನಂತೆ ಇದ್ದುಬಿಟ್ಟ. ಆದರೆ ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ಇತರರಿಗೆ ಕಾಣಿಸದೆ ಇರುತ್ತದೋ? ಸರಿ, ಆ ಹೆಂಗಸೇನು ಸಾಮಾನ್ಯಳೇ? ನೀನೇ ನನಗೆ ಗತಿ ಅಂತ ಇಷ್ಟು ದೂರ ಹುಡುಕಿಕೊಂಡು ಬಂದಿದ್ದಾಳೆ— ಎಂದು ಮುಂತಾಗಿ ಕಥೆ ಹುಟ್ಟಿ ಬೆಳೆಯುತ್ತಿತ್ತು. ಈ ಕಥೆಯು ಬಹಳ ಭಾಗ ಪಾರ್ವತಮ್ಮನ ಅಮೂಲ್ಯ ಪ್ರತಿಭೆಯಿಂದಲೇ ರೂಪುಗೊಂಡದ್ದು.

ಹೀಗೆ ಕಥೆ ಹಬ್ಬಿದ್ದು ಶೀನಪ್ಪನಿಗೂ ಗೊತ್ತು. ಅದರಿಂದ ಒಂದು ದಿನ ಮನಸ್ಸಿಗೆ ಬಹಳ ಖೇದವೂ ಆಯಿತು. ಆದರೆ ಸುಮ್ಮನೆ ನೊಂದುಕೊಂಡರೆ ಏನು ಉಪಯೋಗ? ಊರಿಗೆಲ್ಲ ನಿಜವಾದ ಕಥೆಯನ್ನು ಸಾರಿಕೊಂಡು ಹೋಗುವುದೆ? ಹಾಗೆ ಹೋದರೂ ಕೂಡಾ ಅದರಿಂದ ಏನುಪಯೋಗ? ತನ್ನ ನಿಷ್ಕಲಂಕತೆಯನ್ನು ರುಜುವಾತು ಪಡಿಸುವುದು ಹೇಗೆ? ಆದ ಕಾರಣ ಆ ವಿಚಾರವಾಗಿ ಯೋಚಿಸುವುದೇ ತಪ್ಪು ಅಂತ ತೀರ್ಮಾನಿಸಿದ.

ನಟ್ಟಿ ಮುಗಿದ ಕೂಡಲೇ ಪದ್ಮಾವತಿಯ ಹೆರಿಗೆಗೆ ತಕ್ಕ ವ್ಯವಸ್ಥೆ ಮಾಡಬೇಕು ಎಂದುಕೊಂಡು ಶೀನಪ್ಪ ಆ ಬಗ್ಗೆ ಯೋಚನೆ ಮಾಡತೊಡಗಿದ. ಹೆರಿಗೆಯ ಕಾಲ ಹತ್ತಿರವಾಗುತ್ತಿರಬೇಕು. ಆ ಬಗ್ಗೆ ಕೂಡಲೇ ಏನಾದರೂ ಮಾಡಬೇಕು.

ಏನು ಮಾಡುವುದು ಅಂತ ಯೋಚನೆ ಮಾಡುತ್ತ ಮಾಡುತ್ತ ಎರಡು ದಿನ ಕಳೆಯಿತು. ಪದ್ಮಾ ಈಗ ಮನೆಯಲ್ಲಿ ಅತ್ತಿಂದಿತ್ತ ಓಡಾಡುತ್ತ ಅಡಿಗೆ ಮುಂತಾದ ಎಲ್ಲ ಸಣ್ಣ ಪುಟ್ಟ ಕೆಲಸಗಳನ್ನೂ ತಾನೇ ಮಾಡುತ್ತಿದ್ದಳು. ಬೇಡ

ಎಂದು ಎಷ್ಟು ಸಲ ಹೇಳಿದರೂ ಕೇಳುವುದಿಲ್ಲ. ಅವಳಿಗೂ ತನ್ನ ಮನಸ್ಸಿನ ಚಿಂತೆಯನ್ನು ಕಳೆಯಲು ಏನಾದರೂ ಕೆಲಸ ಬೇಕಾಗಿತ್ತು. ಸ್ವಲ್ಪ ಕೆಲಸ ಮಾಡಿದರೇ ಆಯಾಸ.

ಆಯಾಸವಾದರೂ ಮನಸ್ಸಿಗೆ ಎಷ್ಟೋ ಹಿತ. ಪದ್ಮಾವತಿಗೆ ಯಾವಾಗಲೂ ಅಷ್ಟೇ. ಸುಮ್ಮನೆ ಕುಳಿತುಕೊಳ್ಳುವುದೆಂದರೆ ನರಕದಲ್ಲಿದ್ದ ಹಾಗೆ. ಪದ್ಮ ಅತ್ತಿತ್ತ ಓಡಾಡತೊಡಗಿದ ಮೇಲೆ ಶೀನಪ್ಪನ ಮನೆಯ ಕಳೆಯೇ ಬದಲಾಯಿಸಿತು. ಶೀನಪ್ಪ ಈ ಮೊದಲು ಮನೆ ಬಿಟ್ಟರೆ ಬೀಗ ಹಾಕಿಕೊಂಡು ಹೋಗಬೇಕು. ರಾತ್ರಿ ಬರುವುದು ತಡವಾದರೆ ಕಗ್ಗತ್ತಲೆಯಲ್ಲೇ ಮನೆ ಹೊಕ್ಕು ದೀಪ ಹಚ್ಚಿಕೊಳ್ಳಬೇಕು. ಒಲೆಯುರಿ ಮಾಡಿ ಅನ್ನ ಬೇಯಿಸಿಕೊಳ್ಳಬೇಕು. ಆದರೆ ಈಗ ಎಲ್ಲ ಬದಲಾವಣೆ. ಶೀನಪ್ಪನಿಗೆ ಕೆಲವು ಸಲ ಇಷ್ಟು ದಿನ ಮಾಡುತ್ತಿದ್ದ ಕೆಲಸಗಳು ಈಗ ಇಲ್ಲವಾಗಿ ಏನು ಮಾಡಬೇಕು ಅಂತಲೇ ತೋಚುತ್ತಿರಲಿಲ್ಲ. ಅವನು ಬೆಳಗ್ಗೆ ಏಳುವ ಮೊದಲೇ ಬಚ್ಚಲು ಮನೆಯಲ್ಲಿ ನೀರು ಬಿಸಿಯಾಗಿರುತ್ತಿತ್ತು. ಸ್ನಾನ ಸಂಧ್ಯಾವಂದನೆ ಮುಗಿಸುವಷ್ಟರಲ್ಲಿ ಒಳಗೆ ಬೆಳಗಿನ ತಿಂಡಿ ಸಿದ್ಧವಾಗಿರುತ್ತಿತ್ತು. ಇಷ್ಟೆಲ್ಲ ಕೆಲಸವನ್ನು ಇವಳು ಹೇಗೆ ಇಷ್ಟು ಚೊಕ್ಕವಾಗಿ ಮಾಡುತ್ತಾಳೆಂದೇ ಶೀನಪ್ಪನಿಗೆ ಆಶ್ಚರ್ಯ.

ಆ ದಿನ ಊಟವಾದ ಬಳಿಕ “ ಅಂತೂ ಮನೆಯ ಕೆಲಸಕ್ಕೆ ಬಹಳ ಒಳ್ಳೆಯ ಜನ ಸಿಕ್ಕಿದ ಹಾಗಾಯಿತು ” ಎಂದು ಶೀನಪ್ಪ ಪದ್ಮಾವತಿಗೆ ಹೇಳಿದ.

“ ಏನು ಕಷ್ಟದ ಕೆಲಸ ಇದೆ ಇಲ್ಲಿ? ಇಬ್ಬರಿಗೆ ಅಡಿಗೆ ಮಾಡುವುದು ಬಹಳ ದೊಡ್ಡ ಕೆಲಸವೆ ? ”

“ ದೊಡ್ಡ ಕೆಲಸ ಹೌದೋ ಅಲ್ಲವೋ. ನನ್ನಗಂತೂ ದಿನವೆಲ್ಲ ಇದೇ ಕೆಲಸವಾಗುತ್ತಿತ್ತು.”

“ ನಿಮ್ಮದು ಗಂಡಸರ ಕೆಲಸ. ನನ್ನದು ಹೆಂಗಸಿನ ಕೆಲಸ.”

“ ಆದರೂ ಇಷ್ಟು ಅಚ್ಚುಕಟ್ಟಾಗಿ ಎಲ್ಲವನ್ನೂ ಮಾಡುವ ಹೆಂಗಸರೂ ಹೆಚ್ಚಿಗೆ ಇಲ್ಲ ಅಂತ ಕಾಣುತ್ತದೆ.”

“ ಇಲ್ಲದೆ ಏನು? ಬೇಕಾದಷ್ಟು ಜನ ಇದ್ದಾರೆ. ನೀವು ಕಂಡಿಲ್ಲ ” ಎಂದಳು ಪದ್ಮಾ. ಆ ಮಾತು ಅಲ್ಲಿಗೆ ಮುಗಿಯಿತು.

ಮರುದಿನ ಬೆಳಿಗ್ಗೆ ಮಳೆ ಹೊಳವಾದ ಸಮಯ ನೋಡಿ ಶೀನಪ್ಪ ಪಕ್ಕ

ದೂರು ಹೊಸಕೋಟೆಗೆ ಹೋದ. ಅಲ್ಲಿ ಆವನ ಅಜ್ಜಿ– ತಾಯಿಯ ತಾಯಿ ಇನ್ನೂ ಇದ್ದಳು. ಮುದುಕಿಗೆ ವಯಸ್ಸು ಎಪ್ಪತ್ತಾದರೂ ಇನ್ನೂ ಬಹಳ ಗಟ್ಟಿಯಾಗಿಯೇ ಇದ್ದಳು. ಒಂದು ಹಲ್ಲೂ ಕೂಡ ಬಿದ್ದಿರಲಿಲ್ಲ. ಕಣ್ಣು ಮಂಜಾಗಿರಲಿಲ್ಲ. ಕಿವಿ ಬಲು ಚೆನ್ನಾಗಿ ಕೇಳಿಸುತ್ತಿತ್ತು. ಶೀನಪ್ಪನ ಸೋದರಮಾವ, ಆವನ ಹೆಂಡತಿ, ಎರಡು ಮಕ್ಕಳು – ಇಷ್ಟು ಆವರ ಸಂಸಾರ. ಮಾವ, ವಿಚಿತ್ರ ಮನುಷ್ಯ. ಅವನಿಗೆ ಜನರ ಸಹವಾಸವೇ ಆಗುತ್ತಿರಲಿಲ್ಲ. ತನ್ನ ಕೆಲಸ ತಾನು ಮಾಡಿಕೊಂಡು ಇರುವವನು. ಶ್ರೀಮಂತನಲ್ಲ. ಆದರೂ ಇದ್ದ ಒಂದಿಷ್ಟು ಜಮೀನನ್ನೇ ಬಹಳ ಎಚ್ಚರಿಕೆಯಿಂದ ಸಾಗುವಳಿ ಮಾಡಿ ತನಗೆ ಆಗುವಷ್ಟು ಸಂಪಾದಿಸಿಕೊಳ್ಳುತ್ತಿದ್ದ. ಅವನ ಎರಡು ಮಕ್ಕಳಲ್ಲಿ ದೊಡ್ಡವಳು ಮಗಳು– ಹದಿನಾಲ್ಕು ತುಂಬುತ್ತ ಬಂದಿತ್ತು. ಮದುವೆ ಇನ್ನೂ ಮಾಡಲಿಕ್ಕಾಗಲಿಲ್ಲವಲ್ಲ ಅಂತ ಮಾವ ಸೀತಾರಾಮಯ್ಯನಿಗೆ ಕೊರಗು. ಮದುವೆ ಮಾಡಿಕೋ ಎಂದು ಶೀನಪ್ಪನನ್ನು ಒಂದು ಸಲ ಕೇಳಿದ್ದ. ಶೀನಪ್ಪ ಒಪ್ಪದೆ ಇದ್ದುದರಿಂದ ಸೀತಾರಾಮಯ್ಯನಿಗೆ ಸಂಕೋಚವಾದದ್ದು ಮಾತ್ರವಲ್ಲ, ಬಹಳ ಸಿಟ್ಟು ಬಂದಿತ್ತು. ಸಿಟ್ಟನ್ನೇನೋ ಅವನು ಮಾತಿನಲ್ಲಿ ವ್ಯಕ್ತಪಡಿಸಲಿಲ್ಲ. ಆದರೆ ಆ ದಿನದಿಂದ ಅವನು ಮತ್ತೆ ಶೀನಪ್ಪನ ಮನೆಗೆ ಬರಲಿಲ್ಲ. ಶೀನಪ್ಪನೇ ಆಗಾಗ ಅಜ್ಜಿಗೆ ಕಾಣಿಸಿ ಬರುತ್ತಿದ್ದ. ಆದರೆ ತನ್ನ ಮಾವನಿಗೆ ತನ್ನಲ್ಲಿ ವಿಶ್ವಾಸವಿಲ್ಲವೆಂಬುದು ಶೀನಪ್ಪನಿಗೂ ತಿಳಿದಿತ್ತು.

ಆದರೆ ಅಜ್ಜಿಗೆ ಮಾತ್ರ ಮೊಮ್ಮಗನೆಂದರೆ ಪಂಚಪ್ರಾಣ. ಪಾಪ, ತಾಯಿ ತಂದೆಗಳಿಲ್ಲದ ಮಗು ಎಂದು ಬಹಳ ವಾತ್ಸಲ್ಯ. ಆ ಅಜ್ಜಿಯ ನೆರವನ್ನೇ ಈಗ ಬೇಡಬೇಕೆಂದು ತನ್ನ ಸೋದರಮಾವನ ಮನೆಗೆ ಹೋದ.

ಶೀನಪ್ಪ ಅಲ್ಲಿಗೆ ಹೋದಾಗ ಸೀತಾರಾಮಯ್ಯ ಗದ್ದೆಯ ಕಡೆ ಹೋಗಿದ್ದ. ಮನೆಯ ಮುಂದೆ ಜಗಲಿಯ ಮೇಲೆ ಮುದುಕಿ ಕೂತುಕೊಂಡು ಎಲೆ ಅಡಿಕೆ ಜಗಿಯುತ್ತಿದ್ದಳು. ಶೀನನು ಬರುವುದನ್ನು ಕಂಡ ಕೂಡಲೇ ಅಜ್ಜಿ “ಬಾ ಶೀನಾ; ಬಾ. ಬಹಳ ಅಪರೂಪವಾಗಿಬಿಟ್ಟೆ” ಎಂದಳು.

“ಏನೋ ತಾಪತ್ರಯ. ತೋಟದ ನಟ್ಟಿಯ ಕೆಲಸ. ಬರುವುದಕ್ಕಾಗಲಿಲ್ಲ. ಮಾವಯ್ಯ ಎಲ್ಲಿ? ಕಾಣಿಸುವುದಿಲ್ಲವಲ್ಲ?” ಎಂದ.

“ಎಲ್ಲೋ ಗದ್ದೆಯ ಕಡೆ ಹೋಗಿದ್ದಾನೆ ಬಂದಾನು. ನಟ್ಟಿ ಮುಗಿಸಿದೆಯಾ, ಶೀನ?” ಎಂದು ಅಜ್ಜಿ ಕೇಳಿದಳು.

" ನನ್ನ ಸಟ್ಟಿಯೆಲ್ಲ ಮುಗಿಯಿತು. ನಿಮಗೆ ಇನ್ನೂ ಸ್ವಲ್ಪ ಇರಬೇಕು ಅಲ್ಲವೇ ಅಜ್ಜಿ ?"

" ಹೂ, ಇನ್ನೂ ಒಂದೂವರೆ ಮುಡಿ ಇದೆ." ಎಂದಳು.

ಶೀನಪ್ಪ ಸ್ವಲ್ಪ ಹೊತ್ತು ಸುಮ್ಮನಿದ್ದು " ಅಜ್ಜಿ ನಿನ್ನಿಂದ ಒಂದು ಕೆಲಸ ಆಗಬೇಕಾಗಿತ್ತು. ಅದಕ್ಕೋಸ್ಕರ ಬಂದೆ." ಎಂದು ಸಂಕ್ಷೇಪವಾಗಿ ನಡೆದದ್ದನ್ನೆಲ್ಲ ಅವಳಿಗೆ ತಿಳಿಸಿ. " ಅಜ್ಜಿ, ಎರಡು ತಿಂಗಳು ನನ್ನ ಮನೆಯಲ್ಲಿದ್ದುಬಿಡು, ನನಗೆ ಬಹಳ ಉಪಕಾರ ಮಾಡಿದ ಹಾಗೆ ಆಗುತ್ತದೆ, ನಿನ್ನ ಕಾಲಿಗೆ ಬೇಕಾದರೆ ಬೀಳುತ್ತೇನೆ " ಎಂದ.

ಮೊಮ್ಮಗನ ಮಾತು ಕೇಳಿ ಅಜ್ಜಿಯ ಕಣ್ಣಲ್ಲಿ ನೀರು ತುಂಬಿತ್ತು. " ಶೀನಾ, ಊರಲ್ಲಿ ಏನೇನೋ ಹೇಳುತ್ತಾರಲ್ಲ, ಮಗೂ. ನಿಜವೇ ?"

" ಅದೆಲ್ಲ ಸುಳ್ಳು ಅಂತ ದೇವರಿಗೆ ಗೊತ್ತು. ಮನುಷ್ಯರಿಗೆ ಹೇಗೆ ತಿಳಿಸುವುದು ಅಜ್ಜಿ? "

" ಹೌದು ಕಂದ, ದೇವರನ್ನಾದರೂ ನಂಬಿಸಬಹುದು; ಆದರೆ ಮನುಷ್ಯರನ್ನು ನಂಬಿಸುವುದಕ್ಕೆ ಆಗುವುದಿಲ್ಲ. ನಾನು ಹೇಗಪ್ಪಾ ಮನೆ ಬಿಟ್ಟು ಬರುವುದು ? ಸೀತಾರಾಮು ಏನು ಹೇಳುತ್ತಾನೋ " ಎಂದು ಅಜ್ಜಿ ಹೇಳುತ್ತಿರುವಾಗಲೇ ಸೀತಾರಾಮಯ್ಯ ಗದ್ದೆಯಿಂದ ಬಂದ. ಬಂದವನ ಶೀನಪ್ಪನನ್ನು ಕಂಡು ಒಣನಗೆ ನಕ್ಕು " ಏನು, ಶೀನಾ, ಮತ್ತೆ ವಿಶೇಷ ? " ಎಂದು ಕೇಳಿದ. ಮಾತಿನಲ್ಲಿ ಔದಾಸೀನ್ಯ ತುಂಬಿ ತುಳುಕುತ್ತಿತ್ತು.

" ವಿಶೇಷವೇನೂ ಇಲ್ಲ ಮಾವಯ್ಯ. ಸಟ್ಟಿಯೆಲ್ಲ ಮುಗಿದ ಹಾಗೆ, ಆಯಿತು. ಹಾಗೇ ನಿಮ್ಮನ್ನೆಲ್ಲ ನೋಡಿಕೊಂಡು ಹೋಗುವಾ ಅಂತ ಬಂದೆ.

" ಬಂಧುಗಳು ಅಂತ ಇಷ್ಟು ವಿಶ್ವಾಸವಾದರೂ ಇಟ್ಟಿದ್ದೀಯಲ್ಲ, ಸಂತೋಷ" ಎಂದ ಸೀತಾರಾಮಯ್ಯ. ಮಾತಿನಲ್ಲಿ ಅಣಕದ ಹೊಗೆ ಆಡುತ್ತಿತ್ತು. ಇದನ್ನು ಕಂಡ ಅಜ್ಜಿ, ' ಪಾಪ, ಶೀನ ಬಹಳ ತೊಂದರೆಗೆ ಸಿಕ್ಕಿ ಬಿದ್ದಿದ್ದಾನೆ, ಸೀತಾರಾಮು " ಎಂದಳು.

" ಏನು, ಎಂಥ ತೊಂದರೆ ?"

" ಯಾರೋ ಅನಾಥ ಹೆಂಗಸು ಬಂದು ಶೀನನ ಮನೆಯಲ್ಲಿದ್ದಾಳಂತೆ. ಬಸುರಿ, ಪಾಪ" ಎಂದಳು ಅಜ್ಜಿ.

" ಬೀದಿಯಲ್ಲಿ ಹೋಗುವ ಮಾರಿಯನ್ನು ಮನೆಗೆ ಕರೆದುಕೊಂಡು

ಬಂದು ತೊಂದರೆ ಅಂತ ಹೇಳಿದರೆ ?''

" ತೊಂದರೆ ಅಂತ ನಾನು ಹೇಳಲಿಲ್ಲ, ಮಾವಾ. ಹೆರಿಗೆ ಎಲ್ಲ ಆಗ ಬೇಕಲ್ಲ. ದಿಕ್ಕಿಲ್ಲದವಳಿಗೆ ಏನಾದರೂ ಮಾಡದಿದ್ದರೆ ಹೇಗೆ ? ಅದಕ್ಕೆ.... "

" ಅದಕ್ಕೇ– ಏನು ?"

" ಏನೋ ನಾನು ಒಂದೆರಡು ತಿಂಗಳು ತನ್ನ ಮನೆಯಲ್ಲಿರಬೇಕು ಅಂತ ಹೇಳುತ್ತಿದ್ದಾನೆ" ಎಂದಳು ಅಜ್ಜಿ.

" ಮಾವಯ್ಯ, ಇದು ನನಗೆ ಬಹಳ ದೊಡ್ಡ ಉಪಕಾರವಾಗುತ್ತದೆ" ಎಂದು ಶೀನಪ್ಪ ಬಹಳ ವಿನಯದಿಂದ ಕೇಳಿಕೊಂಡ.

ಸೀತಾರಾಮಯ್ಯ ಕೊಂಚ ಸುಮ್ಮನಿದ್ದು ಅನಂತರ, " ಶೀನಾ, ನಿಜ ಸ್ಥಿತಿಯೇನೋ ನನಗೆ ತಿಳಿಯದು. ನಿನ್ನನ್ನು ಜಾತಿಯಿಂದ ಹೊರಕ್ಕೆ ಹಾಕಿದ್ದಾರೆ, ಅದು ನನಗೆ ಗೊತ್ತು. ನಾನು ಜಾತಿಭ್ರಷ್ಟನಾಗುವುದಕ್ಕೆ ನನಗೆ ಇಷ್ಟವಿಲ್ಲ. ನಮ್ಮ ತಾಯಿ ನಿನ್ನ ಮನೆಗೆ ಹೋಗಿ ಇರುವುದು ಸರಿಯಿಲ್ಲ. ಅದು ನನಗೆ ಇಷ್ಟವಿಲ್ಲ. ಇನ್ನು ಅಮ್ಮ ಇದ್ದಾಳೆ, ನೀನಿದ್ದೀ. ಬೇಕಾದ್ದು ಮಾಡಿ " ಎಂದು ಸೀತಾರಾಮಯ್ಯ ಒಳಕ್ಕೆ ಹೊರಟುಹೋದ.

ಅಜ್ಜಿ ದೀನಳಾಗಿ ಶೀನಪ್ಪನ ಮುಖದ ಕಡೆಗೆ ನೋಡಿದಳು. ಶೀನಪ್ಪ ಮತ್ತೆ ಮಾತಾಡಲಿಲ್ಲ " ಬರುತ್ತೇನೆ, ಅಜ್ಜಿ " ಎಂದು ಹೊರಟುಬಿಟ್ಟ. " ಶೀನಾ, ಸ್ವಲ್ಪ ಇರು ಮಗು, ಕುಡಿಯುವುದಕ್ಕೆ ಏನಾದರೂ ತಂದು ಕೊಡುತ್ತೇನೆ. " ಎಂದಳು ಅಜ್ಜಿ.

" ಇಲ್ಲ, ಅಜ್ಜಿ. ಮತ್ತೆ ಬರುತ್ತೇನೆ " ಎಂದು ಶೀನಪ್ಪ ಹಿಂದಿರುಗಿ ನೋಡದೆ ಮನೆಯ ಕಡೆಗೆ ರಭಸದಿಂದ ಹೆಜ್ಜೆಯಿಟ್ಟ.

ಸರಿ, ಒಂದು ಆಶೆ ತೀರಿತು. ಇನ್ನು ಮುಂದೇನು ?

ಮತ್ತೊಂದು ದಿನವೆಲ್ಲ ಇದೇ ಯೋಚನೆಯಾಯಿತು. ನಾಗಿಯೇನೋ ಇದ್ದಾಳೆ. ಹೊರಗಿನ ಕೆಲಸಕ್ಕೆ ಯಾವ ತೊಂದರೆಯೂ ಇಲ್ಲ. ನಾಗಿ ಸೂಲಗಿತ್ತಿಯೂ ಹೌದು. ಎಷ್ಟೋ ಹೆರಿಗೆಗಳನ್ನು ಆ ಹಳ್ಳಿಯಲ್ಲಿ ಅವಳೇ ಮಾಡಿಸಿದ್ದಳು. ಆ ಬಗ್ಗೆ ತೊಂದರೆಯಿಲ್ಲ. ಆದರೆ ಒಳಗಿನ ಕೆಲಸ ಆಗಬೇಕಲ್ಲ ? ಹೊತ್ತು ಹೊತ್ತಿಗೆ ಸರಿಯಾಗಿ ಬಾಣಂತಿಗೆ ಬೇಕಾದ ಆಹಾರ, ಉಪಚಾರ ಆಗಬೇಡವೇ ? ಅದೂ ಅಲ್ಲದೆ ಅಂಥ ಕಾಲದಲ್ಲಿ ಮನೆಯಲ್ಲೊಬ್ಬ ಹೆಂಗಸು ಇಲ್ಲದಿದ್ದರೆ ಹೇಗೆ ?

ತನ್ನ ಅಕ್ಕ ಸಾವಿತ್ರಮ್ಮನನ್ನು ಕೇಳೋಣವೇ ಅಂತ ಒಂದು ಕ್ಷಣ ಅವನಿಗೆ ಅನ್ನಿಸಿತು. ಸಾವಿತ್ರಮ್ಮನಿಗೆ ತಮ್ಮನಲ್ಲಿ ಬಹಳ ಪ್ರೀತಿ. ತಾನು ಕೇಳುವುದು, ತನ್ನ ಅಜ್ಜಿಗೆ ಆದ ಹಾಗೇ ಅವಳಿಗೆ ಬರುವುದು ಮನಸ್ಸಿದ್ದರೂ ಬರಲು ಸಾಧ್ಯವಾಗದೆ ಇರುವುದು— ಆಗ ಸುಮ್ಮನೆ ಅವಳು ನೊಂದುಕೊಳ್ಳ ಬೇಕಾಗುತ್ತದೆ. ಜಾತಿಭ್ರಷ್ಟನಾದ ತನ್ನ ಮನೆಯಲ್ಲಿ ಬಂದಿರಲು ಜಾತಿ ಯುಳ್ಳ ಯಾರು ಒಪ್ಪುತ್ತಾರೆ ? ಅವನ ಭಾವನೋ ಬಹಳ ಮಡಿವಂತರು, ಆಚಾರಸಿಷ್ಠರು; ಪುರೋಹಿತರು ಬೇರೆ. ಅವರು ಖಂಡಿತ ತನ್ನ ಹೆಂಡತಿ ಯನ್ನು ಜಾತಿಗೆಟ್ಟವನ ಮನೆಗೆ ಕಳಿಸುವುದಿಲ್ಲ. " ನನ್ನ ತೊಂದರೆ ಹೇಳಿ ಕೊಂಡು ವೃಥಾ ಅಕ್ಕನಿಗೆ ಯಾಕೆ ದುಃಖ ಕೊಡಲಿ ? " ಎನ್ನಿಸಿ ಶೀನಪ್ಪ ಆ ಯೋಚನೆಯನ್ನೂ ಬಿಟ್ಟುಬಿಟ್ಟ.

ಇನ್ನೇನು ಮಾಡಬೇಕು ? ಊರಿನವರನ್ನೆಲ್ಲ ನೆನಸಿಕೊಂಡ. ಯಾರೂ ಈಗ ತನ್ನ ಸಹಾಯಕ್ಕೆ ಬರುವಂತೆ ಅವನಿಗೆ ತೋರಲಿಲ್ಲ ಯಾವುದೂ ಬಗೆಹರಿಯಲಿಲ್ಲ.

ಹೀಗೆ ಮೂರು ನಾಲ್ಕು ದಿನ ಕಳೆಯಿತು. ಹೀಗೆ ಸುಮ್ಮನಿದ್ದರೆ ಹೇಗೆ ? ಹೆರಿಗೆಯ ಕಾಲ ಹತ್ತಿರವಾದ ಹಾಗೆ ಯಾವ ದಿನ ಹೆರಿಗೆ ಆಗುತ್ತದೆ ಅಂತ ಹೇಳುವುದು ಕಷ್ಟ. " ಇನ್ನು ಹೆಚ್ಚು ದಿನ ಇಲ್ಲ " ಎಂದು ನಾಗಿಯೂ ಹೇಳಿದ್ದಳು.

ಸರಿ, ಏನು ಮಾಡುವುದು, ಏನು ಮಾಡುವುದು ? ಬಗೆ ಹರಿಯದ ಸಮಸ್ಯೆ ಇದು. ಈ ರೀತಿಯಲ್ಲಿ ಚಿಂತೆ ಹತ್ತಿಸಿಕೊಂಡು ಶೀನಪ್ಪ ಮೂರು ನಾಲ್ಕು ದಿನ ತಣ್ಣಗೆ ಕುಳಿತಿದ್ದ. ಮನಸ್ಸು ಉದಾಸ. ಮಾತಾಡಲೂ ಇಷ್ಟವಿಲ್ಲ. ಪದ್ಮಾವತಿ ಎರಡು ಮೂರು ಸಲ ಮಾತಾಡಿಸಿದರೂ ಉಪಯೋಗ ವಾಗಲಿಲ್ಲ. ತನಗೋಸ್ಕರವಾಗಿಯೇ ಶೀನಪ್ಪ ಈ ರೀತಿ ಚಿಂತಿಸುತ್ತಿದ್ದಾನೆ ಅಂತ ಅವಳಿಗೂ ಗೊತ್ತು. ಅವಳಿಗೂ ಇದೊಂದೇ ಸಮಸ್ಯೆ: " ನನ್ನಲ್ಲಿ ಇಷ್ಟು ಕನಿಕರ, ಸಹಾನುಭೂತಿ ತೋರಿಸಿದರು ಈ ದೇವರಂಥ ಮನುಷ್ಯ. ಆದರೆ ನನಗಾಗಿ ಇನ್ನೂ ಅವರು ಚಿಂತಿಸುವುದು ತಪ್ಪಲಿಲ್ಲ. ನನ್ನಿಂದ ತೊಂದರೆ ಯಾಗುವುದು ನಿಲ್ಲಲಿಲ್ಲ. ಇದಕ್ಕೇನು ಮಾಡಬೇಕು ? "

ಒಂದು ದಿನ ಸಂಜೆ ಶೀನಪ್ಪ ಅನ್ಯಮನಸ್ಕನಾಗಿ ಚಾವಡಿಯ ಮೇಲೆ ಕುಳಿತಿದ್ದ. ಪದ್ಮಾ ಹತ್ತಿರ ಹೋಗಿ ನಿಂತರೂ ಅವನಿಗೆ ಅವಳು ಬಂದದ್ದು

ಗೊತ್ತಾಗಲೇ ಇಲ್ಲ. ಸ್ವಲ್ಪ ಹೊತ್ತು ಹಾಗೇ ನಿಂತಿದ್ದು ಪದ್ಮಾ

"ಮತ್ತೆ ಚಿಂತೆ ಅಲ್ಲವೇ? ನನ್ನಿಂದ ನಿಮಗೆ ಎಷ್ಟು ತೊಂದರೆಯಾಗುತ್ತದೆ. ಒಂದು ಚಿಂತೆ ತಪ್ಪಿದರೆ ಇನ್ನೊಂದು ಚಿಂತೆ" ಎಂದಳು.

"ಇಲ್ಲ, ಪದ್ಮಾ. ನಿನ್ನಿಂದ ಏನು ತೊಂದರೆ? ನಾನು ಚಿಂತಿಸುತ್ತಿರುವ ಸಂಗತಿಯೇ ಬೇರೆ."

"ಸುಮ್ಮನೆ ಮಾತು ಹಾರಿಸಬೇಡಿ. ನೀವು ಯೋಚಿಸುತ್ತಿರುವುದೇನು ಅಂತ ನನಗೆ ಗೊತ್ತಾಗುವುದಿಲ್ಲವೇ?"

"ಎಂದರೆ ನನ್ನ ಮನಸ್ಸು ನಿನಗೆ ಕಾಣಿಸುತ್ತದೆ—ಅನ್ನು."

"ಕನ್ನಡಿಯಂಥ ಮನಸ್ಸು ಕಾಣದಿದ್ದರೆ ಇನ್ನೇನು ಕಾಣಿಸಬೇಕು?"

"ಹಾಗಾದರೆ ಬಹಳ ಕಷ್ಟ. ಮನಸ್ಸಿಗೆ ಒಂದು ಮುಚ್ಚಳ ಹಾಕಬೇಕು."

"ಹಾ, ಕಷ್ಟ ಹೌದು. ಅದು ಇನ್ನೊಂದು ಕಷ್ಟ. ಆದರೆ ಮನಸ್ಸಿಗೆ ಮುಚ್ಚಳ ಹಾಕುವುದು ಮಾತ್ರ ನಿಮಗೆ ಸಾಧ್ಯವಿಲ್ಲ" ಎಂದು ಪದ್ಮಾ ನಸುನಕ್ಕಳು.

"ಹಾಗಾದರೆ ಮಾತಾಡುವ ಅಗತ್ಯವೇ ಇಲ್ಲ. ನಾನು ಸುಮ್ಮನೆ ಕುಳಿತಿದ್ದರೇ ಸಾಕು. ನಿನಗೆ ನಾನು ಹೇಳಬೇಕಾದ್ದೆಲ್ಲ ತಿಳಿದುಬಿಡುತ್ತದೆ."

"ಅದಕ್ಕೇ ನೀವು ಎರಡು ಮೂರು ದಿನಗಳಿಂದ ಏನೂ ಮಾತಾಡದೆ ಇರುವುದು ಅಂತ ಕಾಣುತ್ತದೆ." ಎಂದಳು.

ಶೀನಪ್ಪ ಮಾತು ತಿರುಗಿಸಲು ಯತ್ನಿಸಿ, "ಪದ್ಮಾ, ನಾನು ಇನ್ನು ಮೂರು ನಾಲ್ಕು ದಿನ ಮನೆಯಲ್ಲಿರುವುದಿಲ್ಲ" ಎಂದ.

"ಯಾವುದಾದರೂ ಊರಿಗೆ ಹೋಗುತ್ತೀರೋ?"

"ಹೌದು."

"ಎಲ್ಲಿಗೆ?"

"ಪಕಜಿತ ಅಂತ ಒಂದು ಊರಿದೆ. ಇಲ್ಲಿಗೆ ತರೇಳು ಮೈಲಿ ದೂರ. ಅಲ್ಲಿ ನಮ್ಮ ಸೋದರತ್ತೆ ಇದ್ದಾರೆ. ನೋಡದೆ ಬಹಳ ದಿನವಾಯಿತು. ನೋಡಿ ಬರಬೇಕು ಅಂತ ಅನ್ನಿಸುತ್ತದೆ."

"ಬಹಳ ಮಳೆ ಬರುತ್ತಿದೆಯಲ್ಲ; ಸ್ವಲ್ಪ ಮಳೆ ನಿಂತ ಕಾಲ ನೋಡಿ ಹೋದರೆ ಆಗದೆ?"

ಸುತ್ತಿದ್ದಾಳೋ. ಒಂದು ಸ್ವಲ್ಪ ಸಮಾಚಾರ ತಿಳಿದರೆ ಮನಸ್ಸಿಗೆ ಅಷ್ಟೇ ಸಮಾಧಾನ. ಸರಿ, ಅಷ್ಟು ದೂರ ಹೋದವನು ಕೋಲೂರಿಗೂ ಹೋಗಿ ಬರಬೇಕು.

ಅವನ ಆಶೆಯೆಲ್ಲ ಈಗ ತನ್ನ ಸೋದರತ್ತೆಯಲ್ಲಿ ಕೇಂದ್ರೀಕೃತವಾಗಿತ್ತು. ಆಕೆ ಉಳಿದವರಿಗಿಂತ ಭಿನ್ನಳಾದ ಹೆಂಗಸು. ತನಗೆ ಸರಿ ಕಂಡದ್ದನ್ನು ಯಾರು ಏನೇ ಹೇಳಿದರೂ ಮಾಡದೆ ಬಿಡುವವಳಲ್ಲ. ಅವಳ ಕಾಲಿಗಾದರೂ ಬಿದ್ದು ಕರೆದುಕೊಂಡು ಬರಲೇಬೇಕೆಂದು ನಿಶ್ಚಯಿಸಿ ಮಾರನೆಯ ದಿನ ಬೆಳಗ್ಗೆ ಆದಷ್ಟು ಬೇಗ ಮನೆ ಬಿಟ್ಟು ಹೊರಟ. ಹೊರಡುವಾಗ ದೇವರ ದಯೆಯಿಂದ ಮಳೆ ಇರಲಿಲ್ಲ.

ಏಳಜಿತ ಹತ್ತಿರ ಹತ್ತಿರವಾಗುತ್ತಿದ್ದಾಗ ಮಾತ್ರ ಭಾರೀ ಮಳೆ ಶುರುವಾಯಿತು. ಆಕಾಶಪಾತಾಳವನ್ನು ಒಂದು ಮಾಡುವಂಥ ಮಳೆ. ಕಂಬಳಿಯನ್ನು ಮೈಗೆ ಬಿಗಿಯಾಗಿ ಹೊದೆದುಕೊಂಡು ಶೀನಪ್ಪ ಮಳೆಯ ಹೊಡೆತವನ್ನು ಇದಿರಿಸುತ್ತಾ ಮುನ್ನಡೆದ. ದಾರಿಯುದ್ದಕ್ಕೂ ಸಣ್ಣ ಸಣ್ಣ ಹಳ್ಳಗಳು. ದಾರಿ ತುಂಬ ನೀರು. ಆಗಾಗ ಹಳ್ಳಕ್ಕೆ ಕಾಲು ಸಿಕ್ಕಿ ಮುಗ್ಗರಿಸಿ ಏಳುತ್ತ ಅಂತೂ ಸೋದರತ್ತೆಯ ಮನೆಯನ್ನು ತಲುಪಿದ.

ಮನೆ ಬಾಗಿಲು ಹಾಕಿತ್ತು. ಮಳೆಯ ಶಬ್ದವೊಂದಲ್ಲದೆ ಇನ್ನೇನೂ ಕೇಳಿಸುತ್ತಿರಲಿಲ್ಲ.

"ಅತ್ತೆ, ಅತ್ತೆ" ಎಂದು ಎರಡು ಸಲ ಕೂಗಿದರೂ ಉತ್ತರವಿಲ್ಲ. ಏನು ಕೆಲಸದಲ್ಲಿದ್ದಾಳೋ ಎಂದು ಸ್ವಲ್ಪ ಹೊತ್ತು ಹಾಗೇ ಕುಳಿತಿದ್ದು ಅನಂತರ ಮತ್ತೆ ಬಾಗಿಲು ತಟ್ಟಿದ. ಆಗ ಬಾಗಿಲು ತೆರೆಯಿತು.

ಸೀತಮ್ಮ ಹೊರಗೆ ಮುಖಹಾಕಿ ಯಾರು ಅಂತ ನೋಡಿದರು. ಮರುಕ್ಷಣವೇ "ಓಹೋ ಶೀನ, ಶೀನಾ! ಬಾ, ಬಾ" ಎಂದು ಅವನನ್ನು ಒಳಕ್ಕೆ ಕರೆದು "ಇದೇನು ಶೀನಾ, ಇಷ್ಟು ಬಡರೂಪವಾಗಿಬಿಟ್ಟೆ. ?" ಎಂದಳು. ಹೀಗೆ ಹೇಳುತ್ತಿರುವಾಗಲೇ ತನ್ನ ಮಗಳ ನೆನಪು ಬಂದು ಕಣ್ಣೀರು ಮಿಡಿದಳು. ಶೀನಪ್ಪನಿಗೂ ಆ ಮನೆಯನ್ನು ಹೊಕ್ಕೊಡನೆ ಅಲ್ಲಿನ ಪೂರ್ಣಚಂದ್ರನಂತಿದ್ದ ಶಾರದೆಯ ನೆನಪು ಬಂದು ಕಂಠ ಗದ್ಗದನಾಯಿತು. ಅವನಿಗೆ ಮನೆ ಈಗ ಹಾಳು ಸುರಿಯುತ್ತಿರುವಂತೆ ಕಂಡಿತು. ಮನೆ ಎನ್ನುವ ಹಾಗೇ ಇಲ್ಲ. ಸೀತಮ್ಮನನ್ನೂ ನೋಡಿದ. ಅವಳ ಮುಖದಲ್ಲೂ ಆ ಕಾಲದಲ್ಲಿ ಕಾಣುತ್ತಿದ್ದ ಕಳೆ

ಯಿಲ್ಲ, ಸತ್ವವಿಲ್ಲ. ತೀರ ಸೊರಗಿಹೋಗಿದ್ದಳು. ವೃದ್ಧಾಪ್ಯದ ಗೆರೆ ಮುಖದ ಮೇಲೆಲ್ಲ ಮೂಡಿತ್ತು. ಅಲ್ಲಲ್ಲಿ ಗೋಡೆ ಕುಸಿದುಬಿದ್ದ ದಿವ್ಯ ಭವನದಂತೆ ಅವಳು ಶೀನಪ್ಪನಿಗೆ ಕಂಡಳು. ಅವನಿಗೂ ಅಳುವನ್ನು ತಡೆಯಲಾಗಲಿಲ್ಲ.

ಸೀತಮ್ಮನಿಗೂ ಶೀನಪ್ಪನ ಗುಣ ಚೆನ್ನಾಗಿ ಗೊತ್ತು. ತಾನು ಮೆಚ್ಚಿದ ಹುಡುಗಿ ತೀರಿಕೊಂಡಾಗಿಂದ ಎಂಟು–ಹತ್ತು ವರ್ಷಗಳ ಕಾಲ ಮದುವೆಯೇ ಬೇಡ ಎನ್ನುವುದಕ್ಕೆ ಅಂತಃಸತ್ವ ಇರಬೇಕು. ಮದುವೆ ಬೇಡವೆಂದು ಮದುವೆಯ ಸುಖವನ್ನು ಹೊರಗಡೆ ಪಡೆಯುತ್ತಿದ್ದರೆ ಆ ಮಾತು ಬೇರೆ. ಶೀನ ಅಂಥವನಲ್ಲ. ಆತನಾಗಿ ಅನುಭವಿಸುವವ, ಹೃದಯಪೂರ್ವಕವಾಗಿ ಮಾತನಾಡುವವ; ದುಃಖವನ್ನು ಹೊರಕ್ಕೆ ತೋರಿಸದೆ ಒಳಗೆ ಸುಟ್ಟುಹೋಗುವವ–ಅಂತ ಸೀತಮ್ಮ ಬಲ್ಲಳು. ಆದಕ್ಕಾಗಿ ಅವಳಿಗೆ ಅವನಲ್ಲಿ ಅಭಿಮಾನ. ಬಹಳ ದಿನಗಳಿಂದ ಶೀನಪ್ಪನನ್ನು ನೋಡಬೇಕು ಅಂತ ಅನ್ನಿಸುತ್ತಿತ್ತು. ಅವನು ಬರಲಿಲ್ಲ. ಸೀತಮ್ಮ ಎಷ್ಟೋ ಸಲ ಹೋಗಬೇಕು ಎಂದುಕೊಂಡರೂ ಮನೆ ಬಿಟ್ಟು ಹೊರಡುವುದು ಆಗಲಿಲ್ಲ.

"ಶೀನಾ, ಬಹಳ ದಿನಗಳಿಂದ ನಿನ್ನನ್ನು ನೋಡಬೇಕೆಂತ ಮನಸ್ಸು ಹಾತೊರೆಯುತ್ತಿತ್ತು. ನೀನೂ ಉದಾಸೀನ ಮಾಡಿದೆ. ನನಗೂ ಈ ಮನೆ ಬಿಟ್ಟು ಹೊರಡುವುದಾಗಲಿಲ್ಲ. ಕೊನೆಗಾದರೂ ಈ ಅತ್ತೆಯ ನೆನಪಾಯಿತಲ್ಲ" ಎಂದಳು.

ಶೀನಪ್ಪನಿಗೆ ಈ ಮಾತು ಕೇಳಿ ಕೊಂಚ ಸಂಕೋಚವಾಯಿತು. ಅತ್ತೆಯನ್ನು ನೋಡುವುದಕ್ಕಷ್ಟೇ ಆಗಿದ್ದರೆ ಅವನು ಈ ಕಡೆ ಬರುತ್ತಿದ್ದನೋ ಇಲ್ಲವೋ. ಅವನಿಗೂ ನೋಡಬೇಕು ಅನ್ನಿಸಿತ್ತು. ಆದರೆ ಮೈಯೆಲ್ಲ ಸಿಡುಬಾಗಿ ಯಮಯಾತನೆಪಡುತ್ತಾ ಕಣ್ಣು ಮುಚ್ಚಿದ ಶಾರದೆಯ ಚಿತ್ರ ಕಣ್ಣು ಮುಂದೆ ಬಂದಂತಾಗಿ ಆ ಮನೆಗೆ ಹತ್ತಿ ಹೋಗುವುದೆಂದರೆ ತತ್ತರಿಸುತ್ತಿದ್ದ. ಬಹುಶಃ ಇಂಥ ಸಂದಿಗ್ಧ ಪರಿಸ್ಥಿತಿ ಬಂದೊದಗದೆ ಇದ್ದರೆ ಶೀನಪ್ಪ ಜೀವಮಾನದಲ್ಲೇ ಆ ಕಡೆ ಬರುತ್ತಿದ್ದಿರಲಿಲ್ಲವೋ ಏನೋ. ಆದರೆ ಈಗ ಅಲ್ಲಿಗೆ ಬಂದು ತನ್ನ ಶಾರದೆಯ ನೆನಪು ಮರುಕೊಳಿಸಿ ಹೃದಯ ಕರಗುತ್ತಿದ್ದರೂ ತನ್ನಲ್ಲಿ ಮಗನಷ್ಟೇ ವಾತ್ಸಲ್ಯವಿಟ್ಟಿರುವ ಅತ್ತೆಯನ್ನು ಕಂಡು ಅವನಿಗೆ ಸಂತೋಷವಾಗದೆ ಇರಲಿಲ್ಲ.

"ಬರಬೇಕು ಅಂತ ಅನ್ನಿಸುತ್ತಿತ್ತು, ಅತ್ತೆ. ಆದರೆ ಶಾರದೆಯ ನೆನಪು

ಬಂದಾಗಲೆಲ್ಲ ಇಲ್ಲಿ ಬರಲು ಹೆದರಿಕೆಯಾಗುತ್ತಿತ್ತು. ಈಗ ಬರಲೇ ಬೇಕಾಯಿತು. ಬಂದೆ. ನಿನ್ನಿಂದಲ್ಲದೆ ಇನ್ನಾರಿಂದಲೂ ಆಗದ ಒಂದು ಕೆಲಸಕ್ಕಾಗಿ ಬಂದೆ." ಎಂದ.

"ಆಗಲಿ ಮಗು; ಹೇಳು, ನನ್ನಿಂದ ಏನು ಕೆಲಸವಾದೀತು? ಮೊದಲಿನ ಶಕ್ತಿಯೂ ಇಲ್ಲ, ಉತ್ಸಾಹವೂ ಇಲ್ಲ. ಏನೋ ಒಂದು ತಾಣ, ಭೂಮಿ ಇರುವುದರಿಂದ ಇಲ್ಲೇ ಇರಬೇಕಾಗಿದೆ. ಎಲ್ಲಾದರೂ ಕಾಶಿಗೋ ರಾಮೇಶ್ವರಕ್ಕೋ ಹೊರಟುಬಿಡೋಣ ಅಂತಲೂ ಬಹಳ ಸಲ ಅನ್ನಿಸುತ್ತದೆ. ಆದರೆ ಇನ್ನೂ ಕಾಲ ಬಂದಿಲ್ಲ." ಎಂದು ಸೀತಮ್ಮ ನಿಟ್ಟುಸಿರುಬಿಟ್ಟಳು.

"ಹೌದು ಅತ್ತೆ; ಈ ಜೀವನವೇ ಹಾಗೆ. ಏನು ಮಾಡಿದರೂ ಸರಿ ಹೋಗುವುದಿಲ್ಲ. ನಾವು ಒಂದೆಣಿಸಿದರೆ ದೈವ ಇನ್ನೊಂದೆಣಿಸುತ್ತದೆ. ಕಾಣುವ ಕನಸುಗಳೆಲ್ಲ ಕನಸುಗಳಾಗಿಯೇ ಉಳಿಯುತ್ತವೆ. ಯಾವಯಾವುದೋ ರೀತಿಯಲ್ಲಿ ಜೀವನ ಹರಿಯುತ್ತದೆ. ಹುಟ್ಟು-ಸಾವು ಈ ಎರಡರ ವಿಷಯದಲ್ಲಿ ಮಾತ್ರ ಖಾತ್ರಿಯಾಗಿ ಹೇಳಬಹುದು. ಉಳಿದದ್ದೆಲ್ಲ ದೈವಾಧೀನ."

"ಹೌದು, ಶೀನಾ. ನೀನು ಹೇಳುವ ಮಾತು ನಿಜ. ಎಲ್ಲಾ ಇದ್ದು ಒಂದಿಲ್ಲದೆ ಜೀವನ ಹಾಳಾಗಿ ಹೋಗುತ್ತದೆ" ಎಂದು. "ಅದೆಲ್ಲ ಇರಲಿ, ಶೀನಾ. ನೀನು ಹೇಗಿದ್ದೀಯಪ್ಪಾ? ಮದುವೆಗಿದುವೆ ಮಾಡಿಕೊಂಡೆಯಾ?"

"ಇಲ್ಲ ಅತ್ತೆ; ಮದುವೆಯ ಯೋಚನೆಯೇ ಈ ವರೆಗೆ ಬರಲಿಲ್ಲ. ಆದರೆ—ಜೀವನದಲ್ಲಿ ಏನೇನೋ ನಡೆದಿದೆ. ಯಾವುದೂ ಬಗೆ ಹರಿಯಲಿಲ್ಲ. ನೀನು ಏನು ಹೇಳುತ್ತೀ ಎಂದು ಕೇಳುವಾ ಅಂತ ಬಂದೆ. ನೀನಲ್ಲದೆ ಬಹುಶಃ ನನ್ನಲ್ಲಿ ಸಹಾನುಭೂತಿ ಇಡುವವರು ಬಹಳ ಕಡಿಮೆ, ಅತ್ತೆ."

"ಅದೇನು ಪೇಚಿಗೆ ಸಿಕ್ಕಿಹಾಕಿಕೊಂಡಿದ್ದೀ, ಶೀನಾ? ನಿನ್ನಂಥವರು ಬಹುಶಃ ತಾಪತ್ರಯಕ್ಕೆ ಸಿಕ್ಕಿಬೀಳುವುದಕ್ಕೇ ಸುಮ್ಮಸುಮ್ಮನೆ ಸಂಕಟ ಪಡುವುದಕ್ಕೇ ಹುಟ್ಟಿದ್ದಾರೋ ಅಂತ ನನಗೆ ಬಹಳ ಸಲ ಅನ್ನಿಸಿದೆ. ಅದೇನು ಹೇಳು."

"ಅದು ಕೊಂಚ ದೊಡ್ಡ ಕಥೆಯೇ ಅತ್ತೆ. ಪುರಸೊತ್ತಿದೆಯೇ? ಹೇಳಲಾ?"

"ಹಾಗಾದರೆ ಈಗ ಬೇಡ. ನೀನೂ ದಣಿದು ಬಂದಿದ್ದೀ. ಸ್ನಾನ ಮಾಡಿ ಸಂಧ್ಯಾವಂದನೆ ಮಾಡು. ಅಷ್ಟರಲ್ಲಿ ನಾನೂ ಅಡಿಗೆ ಮುಗಿಸುತ್ತೇನೆ.

ಊಟವಾದ ಮೇಲೆ ಹೇಳು" ಎಂದು ಶೀನಪ್ಪನನ್ನು ಸ್ನಾನಕ್ಕೆ ಎಬ್ಬಿಸಿದಳು.

ಊಟವಾದ ಮೇಲೆ ಶೀನಪ್ಪ ನಡೆದದ್ದೆಲ್ಲವನ್ನೂ ವಿವರವಾಗಿ ಸೀತಮ್ಮ ನಿಗೆ ಹೇಳಿದ. ತನ್ನ ಉಭಯಸಂಕಟವೇನೆಂಬುದನ್ನು ಒತ್ತಿ ಹೇಳಿದ. ತಾನು ಜಾತಿಭ್ರಷ್ಟನಾದದ್ದು, ತನ್ನ ಅಜ್ಜಿಗೆ ತನ್ನ ಮನೆಯಲ್ಲಿ ಬಂದಿರಲು ಅಸಾಧ್ಯ ವಾದದ್ದು ಎಲ್ಲವನ್ನೂ ಚಾಚೂ ತಪ್ಪದೆ ಹೇಳಿ ಮುಗಿಸಿದ.

ಸೀತಮ್ಮ ಮನಸ್ಸು ಕೊಟ್ಟು ಎಲ್ಲವನ್ನೂ ಕೇಳಿದಳು. ಶೀನಪ್ಪನ ಮಾತೆಲ್ಲ ಮುಗಿದ ಮೇಲೆ ದೀರ್ಘವಾಗಿ ನಿಟ್ಟುಸಿರು ಬಿಟ್ಟು "ಸರಿ, ಶೀನಾ. ನಾನು ಯೋಚಿಸಿದಂತೆಯೇ ಆಯಿತು. ಚಿತ್ರಹಿಂಸೆ ಕೊಟ್ಟು ನೋಡಲು ದೇವರು ಮನುಷ್ಯರಲ್ಲಿ ಕೆಲವರನ್ನು ಆರಿಸಿಕೊಳ್ಳುತ್ತಾನೆ. ಅಂಥವರಲ್ಲಿ ನೀನೊಬ್ಬ, ನಿನ್ನ ಹುಟ್ಟೇ ಹಾಗೆ ಅಂದುಕೊಳ್ಳಬೇಕು. ಇನ್ನೇನು ಮಾಡು ವುದು ?" ಎಂದು ಮತ್ತೆ ನಿಟ್ಟುಸಿರು ಬಿಟ್ಟಳು.

"ನನ್ನ ಮಾತಿನಲ್ಲಿ ನಿನಗೆ ನಂಬಿಕೆ ಹುಟ್ಟಿತೇ, ಅತ್ತೆ ? ಊರಲ್ಲಿ ನಾನಾ ತರಹದ ಕಥೆಗಳನ್ನು ಹೇಳುತ್ತಾರೆ. ಕೆಲವು ಸಲ ನನಗೇ ಸಂದೇಹ ಉಂಟಾ ಗುತ್ತದೆ–ಅಷ್ಟು ಚೆನ್ನಾಗಿ ಕಥೆಯನ್ನು ಹೆಣೆದಿದ್ದಾರೆ, ಅತ್ತೆ" ಎಂದ.

"ಹೌದು ಶೀನಾ; ಈ ಜಗತ್ತಿನ ರೀತಿಯೇ ಹಾಗೆ. ನಂಬಿದರೆ ನಂಬಿತು; ಇಲ್ಲವಾದರೆ ಇಲ್ಲ. ನಂಬದಿರುವುದೇ ಹೆಚ್ಚು. ನಂಬುವುದೇ ಅಪ ರೂಪ. ಅದಕ್ಕೆ ಚಿಂತಿಸಿ ಫಲವಿಲ್ಲ. ನಮನಮಗೆ ಏನನ್ನಿಸುತ್ತದೋ ಹಾಗೇ ನಾವು ಮಾಡಬೇಕು. ಅದಕ್ಕಿಂತ ದೊಡ್ಡ ಧರ್ಮ ಇಲ್ಲ ಅಂತ ನನಗೆ ತೋರು ತ್ತದೆ, ಶೀನಾ. ನಾನು ಏನೂ ಅರಿಯದ ಹೆಂಗಸು. ಆದರೂ ಈ ಮಾತು ಸರಿ ಅಂತ ನನ್ನ ಅಂತರಾತ್ಮ ಹೇಳುತ್ತದೆ."

"ಎಂದರೆ ನಾನು ಮಾಡಿದ್ದು ಸರಿ ತಾನೇ !"

"ಸರಿ– ನಿನ್ನ ದೃಷ್ಟಿಯಿಂದ ಜಗತ್ತಿನಲ್ಲಿ ಎರಡು ಬಗೆಯ ಜನರಿರು ತ್ತಾರೆ. ಈ ಲೋಕದಲ್ಲಿ ಏಳ್ಗೆ ಹೊಂದುವವರು ಒಂದು ಜಾತಿ. ಪರಲೋ ಕದಲ್ಲಿ ಒಳ್ಳೆಯದಾಗುವವರು ಇನ್ನೊಂದು ಜಾತಿ. ಇಲ್ಲಿ ಕಷ್ಟಪಡದೆ ಅಲ್ಲಿ ಸುಖವಿಲ್ಲ. ಅಲ್ಲಿ ಕಷ್ಟವಿಲ್ಲದೆ ಇಲ್ಲಿ ಸುಖವಿಲ್ಲ. ಈ ಜಗತ್ತಿನಲ್ಲಿ ಮೊದಲ ನೆಯ ಜಾತಿಯವರೇ ಹೆಚ್ಚು. ನೀನು ಈ ಎರಡನೆಯ ಗುಂಪಿಗೆ ಸೇರಿದ ವನು, ಶೀನಾ. ಏನು ಮಾಡುವುದು ? ಇದು ಅವರವರ ಜಾಯಮಾನ." ಎಂದಳು.

" ಆದರೆ, ಅತ್ತೆ, ಈಗ ನೋಡು ಆವಳು ಪದ್ಮಾ ತುಂಬು ಬಸುರಿ. ಹೆರಿಗೆಯ ಸಮಯ ಹತ್ತಿರವಾಗುತ್ತಿದೆ. ಮನೆಯಲ್ಲಿ ಯಾರೂ ಇಲ್ಲ. ನೀನು ಒಂದು ಎರಡು ತಿಂಗಳು ನನ್ನ ಮನೆಯಲ್ಲಿ ಇರಬೇಕು. ಅಂಗಲಾಚಿ ಬೇಡಿಕೊಳ್ಳುತ್ತೇನೆ" ಎಂದು ಶೀನಪ್ಪ ತುಂಬು ಕಂಠದಿಂದ ಹೇಳಿದ. ತನ್ನ ಸೋದರತ್ತೆಯ ಮಾತಿನ ಮೇಲೇ ಅವನ ಜೀವನದ ಆಶೆಯೆಲ್ಲ ಕೇಂದ್ರೀಕೃತವಾಗಿರುವಂತೆ ಕಂಡಿತು.

" ಬರುತ್ತಿದ್ದೆ, ಶೀನಾ. ಆದರೆ.... "

" ಆದರೆ ಏನು ಅತ್ತೆ ?" ನಾನು ಜಾತಿಭ್ರಷ್ಟ, ನನ್ನ ಮನೆಗೆ ಕಾಲಿಡಕೂಡದು ಅಂತ ನೀನು ತಿಳಿಯುತ್ತೀಯಾ, ಅತ್ತೆ ? " ಎಂದ ಶೀನಪ್ಪ ವಿಹ್ವಲನಾಗಿ. ಅತ್ತೆ ಬರಲು ಒಪ್ಪದೇ ಹೋದರೆ ಇನ್ನೇನು ಗತಿ ಎಂದು ಅವನ ಮನಸ್ಸು ದಿಗ್ಭ್ರಾಂತವಾಗಿತ್ತು.

" ಹಾಗೆ ನಾನು ತಿಳಿಯುವುದಿಲ್ಲ, ನೀನು ಸತ್ಯವಂತ. ನಿನಗೆ ಸುಳ್ಳು ತಿಳಿಯದು. ನೀನು ಜಾತಿಭ್ರಷ್ಟನಾದರೆ ಜಾತಿಯೊಳಕ್ಕೆ ಇರಲು ಇನ್ನು ಯಾರಿಗೂ ಯೋಗ್ಯತೆಯಿಲ್ಲ, ಶೀನಾ. ಆ ರೀತಿಯ ಭಯವನ್ನೆಲ್ಲ ನಾನು ಎಂದೋ ಬಿಟ್ಟುಬಿಟ್ಟೆ. ಶೀನಾ. ಇಲ್ಲಿ ಈ ಮನೆಯಲ್ಲಿ ಏಕಾಂಗಿಯಾಗಿ ಬಾಳುತ್ತಿದ್ದದ್ದರಿಂದಲೋ ಏನೋ ನನಗೆ ಯೋಚಿಸಲು ಬಹಳ ಅವಕಾಶ ಸಿಕ್ಕಿತ್ತು. ಹಾಗೆ ಯೋಚಿಸಿ ಒಂದು ತೀರ್ಮಾನಕ್ಕೆ ನಾನು ಬಂದಿದ್ದೇನೆ."

" ಯಾವುದು ನಿನ್ನ ತೀರ್ಮಾನ, ಅತ್ತೆ ? "

" ಭೂತದಯೆಗಿಂತ ದೊಡ್ಡ ಗುಣ ಇನ್ನೊಂದಿಲ್ಲ. ಅದು ಎಲ್ಲಿ ಇದೆಯೋ ಅಲ್ಲೇ ದೇವರೂ ಇರುವುದು; ಧರ್ಮವೂ ಇರುವುದು. ?"

" ಆದರೆ ಎಂದೆ ಯತ್ತೆ "

" ಈ ಮನೆಯನ್ನು ಬಿಟ್ಟು ಹೇಗೆ ಬರಲಿ ಅಂತ ಒಂದು ಕ್ಷಣ ಯೋಚಿಸಿದೆ. ನೋಡು ಶೀನಾ; ಕಾಡಿನ ಮಧ್ಯೆ ಮನೆ. ಕಳ್ಳರುಕಾಕರು ಯಾರಾದರೂ ಬಂದರು ಏನು ಬೇಕಾದರೂ ಮಾಡಬಹುದು."

" ತಿಮ್ಮ ಇಲ್ಲವೆ ಹತ್ತಿರದಲ್ಲಿ. ನೋಡಿಕೊಳ್ಳುತ್ತಾನೆ, ಅತ್ತೆ. ನೀನು ಖಂಡಿತ ಬರಬೇಕು. ಆ ಬಡ ಹೆಂಗಸಿನ ಗತಿಯನ್ನು ಯೋಚಿಸು, ಅತ್ತೆ. ಅವಳೂ ನಿರಾಪರಾಧಿ. ಎಷ್ಟು ಯಾತನೆ ಪಟ್ಟಿದ್ದಾಳೆ. ಹೆರಿಗೆಯಾದ ಮೇಲೆ ಅವಳ ಗಂಡನ ಕಡೆಗೆ ಕಳಿಸಿ ಬಿಡುವ ತನಕ ಅವಳ ಯೋಗಕ್ಷೇಮ ನೋಡಿ

ಕೊಳ್ಳುವುದು ಧರ್ಮವಲ್ಲವೆ ? ನೀನು ಆಗುವುದಿಲ್ಲ ಎಂದರೆ ನಾನು ಕೇಳುವುದಿಲ್ಲ. ನೀನು ಬರುವ ತನಕ ಇಲ್ಲಿಂದ ಹೊರಡುವುದಿಲ್ಲ " ಎಂದ ಶೀನಪ್ಪ, ಅಳುವನ್ನು ತಡೆದುಕೊಂಡು.

ಈ ಮಾತಿಗೆ ಕೂಡಲೇ ಸೀತಮ್ಮ ಉತ್ತರ ಹೇಳಲಿಲ್ಲ. ಏನೋ ಯೋಚಿಸುತ್ತಿದ್ದಂತೆ ಕಂಡಿತು. ಮತ್ತೆ ಮಾತಾಡಿದಾಗ ಮುಖಕ್ಕೆ ಹೊಸ ಕಳೆ ಬಂದಿತ್ತು. " ಆಗಲಿ ಶೀನಾ; ಆಗುವುದಾಗಲಿ, ನಾನು ಒಂದು ಅವಳ ಬಾಣಂತನ ಮುಗಿಸಿಕೊಟ್ಟು ಬರುತ್ತೇನೆ. ಸರಿಯೇ ? " ಎಂದು ಸೀತಮ್ಮ ಹೇಳಲು, ಸಂತೋಷದಿಂದ ಶೀನಪ್ಪನಿಗೆ ಮಾತೇ ಹೊರಡಲಿಲ್ಲ. ಸುಮ್ಮನೆ ಚಿಕ್ಕ ಮಗುವಿನಂತೆ ಅತ್ತುಬಿಟ್ಟ. ಅವನು ಹಾಗೆ ಅಳುವುದನ್ನು ಕಂಡು ಸೀತಮ್ಮ,

" ಶೀನಾ, ಸಾಕು. ಅಳುವುದೇಕೆ ಇದಕ್ಕೆ ? ನಾನು ಬರುತ್ತೇನೆನ್ನಲಿಲ್ಲವೆ ?"

" ಅದಕ್ಕೇ ಅತ್ತದ್ದು ಅತ್ತೆ, ನೀನು ಸಾಮಾನ್ಯಳಲ್ಲ. ಮನುಷ್ಯರಿಗೆ ಮೀರಿದವಳು. ನಿನ್ನ ಈ ಪ್ರೀತಿಗೆ ಪ್ರತಿಯಾಗಿ ನಾನು ಏನು ಕೊಡಲಿ. ನಿನ್ನ ಋಣ ಏಳೇಳು ಜನ್ಮಕ್ಕೂ ನಾನು ತೀರಿಸಲಾರೆ."

" ಹೀಗೆಲ್ಲಾ ಮಾತಾಡಿದರೆ ನೋಡಿಕೋ, ಶೀನಾ, ನಾನು ಖಂಡಿತ ಬರುವುದಿಲ್ಲ. ನಾನು ಬರುವುದು ನಿನಗೆ ಉಪಕಾರ ಮಾಡುವುದಕ್ಕಲ್ಲ. ಇಲ್ಲೇ ಇದ್ದು ಇದ್ದು ಬೇಜಾರಾಗಿದೆ. ಒಂದೆರಡು ತಿಂಗಳು ನನ್ನ ಅಣ್ಣನ ಮನೆಯಲ್ಲಿ ಇದ್ದು ಬರುವಾ ಅಂತ ತಿಳಿಯಿತೋ ?"

" ಸರಿ ತಿಳಿಯಿತು, ಅತ್ತೆ. ಅಲ್ಲಿ ಮನೆಗೆಲಸ ಬಾಣಂತಿಯ ಶುಶ್ರೂಷೆ ಎಲ್ಲ ಮಾಡುವುದು ತವರು ಮನೆಗೆ ಹೋಗಿ ವಿಶ್ರಾಂತಿ ತೆಗೆದುಕೊಂಡು ಬಂದ ಹಾಗೆ. ಹೌದು ಒಪ್ಪಿದೆ " ಎಂದ.

" ಅಲ್ಲದೇ ಇನ್ನೇನು ? ಇಷ್ಟು ವರ್ಷವಾದರೂ ನೀನು ಕೇವಲ ಮಗು, ಶೀನಾ. ನಿನಗೆ ಏನೇನೂ ತಿಳಿಯುವುದಿಲ್ಲ." ಎಂದಳು. ಅದಕ್ಕೆ ಶೀನಪ್ಪ ನೇರವಾಗಿ ಉತ್ತರ ಹೇಳದೆ,

" ಹಾಗಾದರೆ ನಾಳೆಯೇ ಹೊರಡೋಣವೋ ?" ಎಂದು ಕೇಳಿದ.

" ಇನ್ನು ಮೂರು ದಿನ ಸಮಯ ಕೊಡು, ಮಾರಾಯ. ಒಂದು ಅರ್ಧ ಮುಡಿ ಗದ್ದೆ ಇನ್ನೂ ನಟ್ಟಿ ಆಗಬೇಕಾಗಿದೆ. ಇವತ್ತಿನ ಮಳೆಗೆ ಆ ಏರುಗದ್ದೆ

ನೀರಾಗಿದೆ. ನಟ್ಟಿ ಮುಗಿಸಿ ನಾಲ್ಕನೆಯ ದಿನ ಬೆಳಗ್ಗೆ ಇಲ್ಲಿಂದ ಹೊರಡು ತ್ತೇನೆ."

"ಹಾಗೇ ಆಗಲಿ, ಅತ್ತೆ. ಈ ನಡುವೆ ನಾನು ನಾಳೆ ಬೆಳಗ್ಗೆ ಸ್ವಲ್ಪ ಕೊಲ್ಲೂರಿಗೆ ಹೋಗಿ ಸಂಜೆಯೇ ಬರುತ್ತೇನೆ. ಒಟ್ಟಿಗೇ ಊರಿಗೆ ಹೋಗೋಣ."

"ನೀನು ಹೆಚ್ಚು ದಿನ ಇರುವುದು ಬೇಡ—ಶೀನಾ. ನೀನು ಕೊಲ್ಲೂ ರಿಂದ ಹಾಗೇ ಊರಿಗೆ ಹೋಗು. ಪಾಪ ಬಡ ಹೆಂಗಸು ಒಬ್ಬಳೇ ಮನೆ ಯಲ್ಲಿ; ಯಾವ ಹೊತ್ತಿಗೆ ಏನೋ. ಹೆದರಬೇಡ ಖಂಡಿತ ನಾನು ಬರು ತ್ತೇನೆ."

"ಆದರೆ ನೀನೊಬ್ಬಳೇ ಮಳೆಗಾಲದಲ್ಲಿ ಹೇಗೆ ಬರುತ್ತೀ ?"

"ಆ ಬಗ್ಗೆ ಯೋಚನೆ ಬೇಡ ಶೀನಾ. ತಿಮ್ಮನನ್ನು ಕರೆದುಕೊಂಡು ಅಷ್ಟು ಹೊತ್ತಿಗೇ ಎದ್ದು ಬರುತ್ತೇನೆ. ಸಂಜೆಗೆ ಅವನು ಹಿಂತಿರುಗಿ ಬರು ಬರುತ್ತಾನೆ. ಸರಿಯೇ ?"

"ಸರಿ" ಎಂದ ಶೀನ. ಅವನ ಮನಸ್ಸು ಕೃತಜ್ಞತೆಯಿಂದ ಮೂಕ ವಾಗಿತ್ತು. ದೇವರು ನಮ್ಮನ್ನು ಎಷ್ಟೋ ಪರೀಕ್ಷಿಸಿದರೂ ತೀರ ಕೈ ಬಿಡುವು ದಿಲ್ಲ ಎಂದುಕೊಂಡ. ಅನಂತರ

"ಅತ್ತೆ, ನಿನ್ನ ಉಪಕಾರ" ಎಂದು ಏನೋ ಹೇಳುವುದಕ್ಕೆ ಹೊರ ಬಿದ್ದ. ಆದರೆ ಸೀತಮ್ಮ ಅವನನ್ನು ಮಧ್ಯದಲ್ಲೇ ತಡೆದು,

"ಮತ್ತೆ ಹಾಗೆಲ್ಲ ಮಾತಾಡಲು ಶುರು ಮಾಡಿದರೆ ನಾನು ಮನಸ್ಸು ಬದಲಾಯಿಸಬೇಕಾದೀತು. ಜೋಕೆ. ಸುಮ್ಮನಿರು." ಎಂದು ಅವನನ್ನು ನಿರುತ್ತರಗೊಳಿಸಿದಳು.

ಶೀನಪ್ಪ ಅವಳನ್ನು ಮನಸ್ಸಿನಲ್ಲೇ ವಂದಿಸಿದ. ಬಂದ ಕೆಲಸವಾದ್ದರಿಂದ ಮನಸ್ಸು ತುಂಬ ಗೆಲವಾಗಿತ್ತು.

ಮಾರನೆಯ ದಿನ ಬೆಳಗ್ಗೆ ಕೊಲ್ಲೂರಿಗೆ ಹೊರಟ. ಸುಮಾರು ಮಧ್ಯಾ ಹ್ನದ ಹೊತ್ತಿಗೆ ಕಾಡು ದಾರಿಯಲ್ಲಿ ಒಬ್ಬನೇ ನಡೆಯುತ್ತ ಹೋಗಿ ಕೊಲ್ಲೂ ರನ್ನು ಸೇರಿದ. ಅಲ್ಲಿ ಇಲ್ಲಿ ವಿಚಾರಿಸಿದಾಗ ಅಲ್ಲಿಗೆ ಕೆಲವು ದಿನಗಳ ಹಿಂದೆ ರಾಮಚಂದ್ರಶಾಸ್ತ್ರಿ ಅಂತ ಒಬ್ಬರು ಬಂದು ಒಂದೆರಡು ದಿನವಿದ್ದು ಮತ್ತೆ ಹೊರಟು ಹೋದರು ಎಂದು ಮಾತ್ರ ತಿಳಿಯಿತು. ಎಲ್ಲಿಗೆ ಹೋದರು ಅಂದರೆ

ಸರಿಯಾಗಿ ಯಾರೂ ಹೇಳಲಿಲ್ಲ. " ಕಳೂರುಕಟ್ಟೆಗೋ ಸಾಗರಕ್ಕೋ ಹೋಗಿರಬೇಕು " ಎಂದು ತಿಳಿಯಿತು. ಸುಬ್ಬ ಅಲ್ಲಿಗೆ ಹೋಗಿದ್ದು ಶೀನಪ್ಪನಿಗೆ ಗೊತ್ತಿರಲಿಲ್ಲವಾಗಿ ಅವನ ಬಗ್ಗೆ ಅಲ್ಲಿ ವಿಚಾರಿಸಲಿಲ್ಲ. ಬಂದದ್ದು ತೀರ ನಿರರ್ಥಕವಾಗಲಿಲ್ಲವಲ್ಲ ಎಂದು ಸ್ವಲ್ಪ ಸಮಾಧಾನಪಟ್ಟುಕೊಂಡ. ಆ ರಾತ್ರಿ ಅಲ್ಲೇ ಕಳೆದು ಮರುದಿನ ಬೆಳಿಗ್ಗೆ ಊರಿನ ಕಡೆಗೆ ಹೊರಟ.

ಮಧ್ಯಾಹ್ನ ಮಧ್ಯ ಮಾರ್ಗದಲ್ಲಿರುವ ಅರೇಶಿರೂರಿಗೆ ಬಂದು ಒಂದು ಗಳಿಗೆ ವಿಶ್ರಾಂತಿ ತೆಗೆದುಕೊಂಡು ಮತ್ತೆ ಹೊರಟ. ಮಳೆ ಜರಜರೋ ಅಂತ ಸುರಿಯುತ್ತಲೇ ಇತ್ತು. ಹಳ್ಳಗಳನ್ನು ಸಣ್ಣ ಪುಟ್ಟ ಪೊದೆಗಳನ್ನು ದಾಟುತ್ತ ಸಂಜೆ ಮೂರು ನಾಲ್ಕು ಗಳಿಗೆ ಹೊತ್ತಿರುವಾಗಲೇ ಊರು ಸೇರಿದ.

ಮೂರು ನಾಲ್ಕು ಗಳಿಗೆ ಹೊತ್ತಿದ್ದರೂ ಕತ್ತಲಾದ ಹಾಗೇ ಇತ್ತು. ಮೋಡ ದಟ್ಟವಾಗಿತ್ತು ಆಕಾಶದಲ್ಲಿ. ಆಗಾಗ ಮಿಂಚುತ್ತಿದ್ದರೂ ಗುಡುಗಾಗಲಿ ಸಿಡಿಲಾಗಲೀ ಇಲ್ಲ. ಈಗ ಮಳೆರಾಯ ತನ್ನ ಆಡಂಬರವನ್ನೆಲ್ಲ ಬಿಟ್ಟು ಕೇವಲ ಕೆಲಸದಲ್ಲಿ ಮಾತ್ರ ಮಗ್ನನಾಗಿದ್ದ.

ಶೀನಪ್ಪ ಮನೆಯನ್ನು ಹೊಕ್ಕಾಗ ಚಾವಡಿಯ ಮೇಲೆ ಪದ್ಮಾ ಮತ್ತು ನಾಗಿ ಮಾತಾಡುತ್ತ ಕುಳಿತಿದ್ದರು. ಶೀನಪ್ಪನನ್ನು ಕಂಡ ಕೂಡಲೇ ಪದ್ಮಾ " ಓಹೋ ಬಂದೇ ಬಿಟ್ಟರು. ನೂರು ವರ್ಷ ಆಯುಷ್ಯ, ನಿಮ್ಮ ಮಾತೇ ಆಡುತ್ತಿದ್ದೆವು " ಎಂದಳು.

" ನಿಮಗೆ ಬೇರೆ ಕೆಲಸ ಇರಲಿಲ್ಲ ಅಂತ ಕಾಣುತ್ತದೆ." ಎಂದ ಶೀನಪ್ಪ ನಗುತ್ತ.

" ಇನ್ನೇನು ಕೆಲಸ ನಮಗೆ. ಊಟ ಮಾಡುವುದು, ಕುಳಿತುಕೊಂಡು ಹರಟೆ ಹೊಡೆಯುವುದು " ಎಂದಳು ಪದ್ಮಾ .

" ಒಡೇರು ನಾಳೆ ಬರಬಹುದು ಅಂತ ನಾನು ಹೇಳುತ್ತಿದ್ದೆ. ಇಲ್ಲ, ಇವತ್ತೇ ಬರುತ್ತಾರೆ ಅಂತ ಅಮ್ಮ ಹೇಳುತ್ತಿದ್ದರು. ಅವರ ಮಾತೇ ಸತ್ಯವಾಯಿತು " ಎಂದಳು ನಾಗಿ.

" ಸತ್ಯವಾಗದೆ ಏನು ? ನಾಗಿ, ನಿನಗೆ ಗೊತ್ತಿದೆಯೋ ? ನಮ್ಮ ಪದ್ಮಳಿಗೆ ನಿನ್ನ ಮನಸ್ಸಿನಲ್ಲಿ ಏನು ನಡೆಯುತ್ತದೋ ಅದೆಲ್ಲ ಕಾಣಿಸುತ್ತದೆ." ಎಂದ ಶೀನಪ್ಪ ನಗುತ್ತ.

" ಅದು ಹೌದಾ ಅಮ್ಮ " ಎಂದು ಮುಗ್ಧೆ ನಾಗಿ ಬೆರಗಾಗಿ ಕೇಳಿದಳು.

" ಅದೆಲ್ಲಾ ಸುಳ್ಳು ನಾಗಿ; ಸುಮ್ಮನೆ ತಮಾಷೆ ಮಾಡುತ್ತಿದ್ದಾರೆ " ಎಂದು ಶೀನಪ್ಪನ ಕಡೆಗೆ ತಿರುಗಿ " ತಮಾಷೆ ಸಾಕು, ಕೈ ಕಾಲು ತೊಳೆದು ಕೊಂಡು ಬನ್ನಿ. ಆಯಾಸವಾಗಿರಬೇಕು. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ಮಧ್ಯಾಹ್ನ ಊಟ ಆಗಿದೆಯೋ ಇಲ್ಲವೋ ?"

" ಆಗಿದೆ ಆ ಬಗ್ಗೆ ಚಿಂತೆ ಮಾಡಬೇಡ " ಎನ್ನುತ್ತ ಶೀನಪ್ಪ ಬಚ್ಚಲು ಮನೆಯ ಕಡೆಗೆ ನಡೆದ. ಅವನು ಆ ಕಡೆ ಹೋದಕೂಡಲೇ ಪದ್ಮಾ,

"ಏನೇ ನಾಗಿ, ನಿಮ್ಮ ಶೀನಪ್ಪ ಮಗುವಿನ ಹಾಗೆ ಅಲ್ಲವಾ ?" ಎಂದು ಕೇಳಿದಳು.

" ಹೌದಮ್ಮ, ನನಗೂ ಎಷ್ಟೋ ಸಲ ಹಾಗೇ ಅನ್ನಿಸುತ್ತಿತ್ತು. ಮೊದ ಲಿನಿಂದಲೂ ಹೀಗೇ " ಎಂದು ನಾಗಿ ಸೈ ಗುಟ್ಟಿದಳು.

ಶೀನಪ್ಪ ಕಾಲು ತೊಳೆದುಕೊಂಡು ಬಂದು ಚಾಪೆಯ ಮೇಲೆ ಕುಳಿತ ಬಳಿಕ ಪದ್ಮಾ ಅವನ ಮುಖವನ್ನೇ ಒಂದು ಕ್ಷಣ ನೋಡಿ,

" ನೀವು ಹೋದ ಕೆಲಸ ಆಯಿತು, ಅಲ್ಲವೆ ?" ಎಂದು ಕೇಳಿದಳು.

" ಅದು ನಿನಗೆ ಹೇಗೆ ತಿಳಿಯಿತು ?"

" ನಿಮ್ಮ ಮುಖ ನೋಡಿ."

" ನೋಡಿದೆಯಾ ನಾಗಿ, ನಾನು ಹೇಳಲಿಲ್ಲವೆ? ಇವಳು ಮುಖ ನೋಡಿ ಮನಸ್ಸನ್ನು ಓದುತ್ತಾಳೆ—ಅಂತ."

" ಅದರಲ್ಲೇನು ವಿಶೇಷ ? ಯಾರು ಬೇಕಾದರೂ ಹೇಳಬಹುದು. ಇಲ್ಲಿಂದ ಹೋಗುವಾಗ ನಿಮ್ಮ ಮುಖದ ಮೇಲೆ ಕಾರ್ಮೋಡ ಕವಿದಿತ್ತು. ಈಗ ಮೋಡವೆಲ್ಲ ಚೆದರಿದೆ."

" ಸರಿ, ಪದ್ಮಾ ನಾನು ಹೋದ ಕೆಲಸ ಆಯಿತು."

" ನಿಮ್ಮ ಸೋದರತ್ತೆ ಇಲ್ಲಿಗೆ ಯಾವಾಗ ಬರುತ್ತಾರೆ ?"

" ನನಗೇನು ಗೊತ್ತು ? "

" ನೀವು ಹೋಗಿದ್ದು ಅವರನ್ನು ಕರೆತರುವುದಕ್ಕಲ್ಲವೆ ?"

"ಇದೆಲ್ಲಾ ನಿನಗೆ ಹೇಗೆ ಗೊತ್ತಾಗುತ್ತದೆ ಅಂತ ?"

" ಅದೇನು ಬ್ರಹ್ಮವಿದ್ಯೆಯೇ ? ನಿಮ್ಮ ಸ್ವಭಾವ ಸರಿಯಾಗಿ ತಿಳಿದರೆ ನೀವು ಏನು ಮಾಡುತ್ತೀರಿ ಅಂತ ಹೇಳುವುದು ಕಷ್ಟವೆ ?"

"ಇರಲಿ. ನಾನು ಹೇಳಿದ್ದಂತೂ ನಿಜವಾಯಿತು, ನಾಗಿ. ನೋಡು ನಾನು

ಹೇಳದೇ ಇದ್ದದ್ದನ್ನೂ ಎಷ್ಟು ಸರಿಯಾಗಿ ಊಹಿಸುತ್ತಾಳೆ ” ಎಂದು ಶೀನಪ್ಪ, “ ಹೌದಮ್ಮ, ಹೌದು ನಮ್ಮ ಸೋದರತ್ತೆ ಇಂದಿಗೆ ಮೂರನೆಯ ದಿನ ಇಲ್ಲಿ ಹಾಜರು ” ಎಂದ. ಇದಕ್ಕೆ ಪದ್ಮಾ ಏನೂ ಪ್ರತಿ ಹೇಳದೆ ಇರಲು ಶೀನಪ್ಪನೇ ಮತ್ತೆ

“ ಕೊಲ್ಲೂರಿಗೂ ಹೋಗಿದ್ದೆ.” ಎಂದ.

“ ಹಾ, ಕೊಲ್ಲೂರಿಗೂ ಹೋಗಿದ್ದಿರಾ ? ”

“ ಇದನ್ನು ನೀನು ಊಹಿಸಿರಲಿಲ್ಲ—ಅಲ್ಲವೆ ? ”

“ ಊಹಿಸುತ್ತಿದ್ದೆ. ಆದರೆ ಏಳಜಿತಕ್ಕೆ ಕೊಲ್ಲೂರು ಹತ್ತಿರದಲ್ಲಿದೆ ಅಂತ ನನಗೆ ಗೊತ್ತಿರಲಿಲ್ಲ.” ಎಂದಳು.

“ ಕೊಲ್ಲೂರಿಗೆ ಹೋಗಿದ್ದೆ. ಹೆಚ್ಚು ಸಮಾಚಾರ ತಿಳಿಯಲಿಲ್ಲ. ರಾಮಚಂದ್ರಶಾಸ್ತ್ರಿಗಳು ಕೆಲವು ದಿನಗಳ ಹಿಂದೆ ಅಲ್ಲಿಗೆ ಬಂದು ಎರಡು ದಿನವಿದ್ದು ಕಳೂರುಕಟ್ಟೆಗೋ ಸಾಗರಕ್ಕೋ ಹೋದರು ಅಂತ ಕೇಳಿದೆ ಅಷ್ಟೇ.” ಎಂದು ಪದ್ಮನ ಮುಖದ ಕಡೆ ಶೀನಪ್ಪ ದೃಷ್ಟಿ ಬೀರಿದ.

ಅವಳ ಮುಖದ ಮೇಲೆ ಮೋಡ ಬಂದು ಕವಿದಂತೆ ಅವನಿಗೆ ತೋರಿತು. ಮತ್ತೆ ಅವಳು ಮಾತಾಡಲಿಲ್ಲ. ಶೀನಪ್ಪನೂ ಮತ್ತೆ ಮಾತಾಡದೆ ಅಲ್ಲೇ ಒರಗಿಕೊಂಡ. ಪದ್ಮಾ ಎದ್ದು ಅಡಿಗೆ ಮನೆಯ ಕಡೆಗೆ ನಡೆದಳು.

ಸೀತಮ್ಮ ಬಂದ ನಾಲ್ಕೈದು ದಿನಗಳಲ್ಲೇ ಹೆರಿಗೆ ಆಯಿತು. ಹೆರಿಗೆಯ ಸಮಯದಲ್ಲಿ ಪದ್ಮಾ ಭಯಂಕರ ಯಾತನೆ ಪಟ್ಟಳು. ಒಂದು ದಿನವೆಲ್ಲ ನರಕ ಯಾತನೆ. ಎಷ್ಟು ಕಷ್ಟಪಟ್ಟರೂ ತಡೆಯಲಾರದ ನೋವಿನ ನರಳಾಟ ಒಳಗಡೆಯಿಂದ ಕೇಳಿ ಬರುತ್ತಿತ್ತು. ಹೊರಗಡೆ ಶೀನಪ್ಪ ಕಾತರನಾಗಿ ಆದರೆ ನಿರುಪಾಯನಾಗಿ ಕುಳಿತುಕೊಂಡು ಅವಳಿಗಾದ ನೋವನ್ನೆಲ್ಲ ತಾನೇ ಅನುಭವಿಸುತ್ತಿದ್ದ. ಗಂಟೆ ಗಂಟೆಗಳು ಹೀಗೇ ಕಳೆದುವು. ಬೆಳಗ್ಗೆ ಶುರುವಾದ ಪ್ರಸವ ವೇದನೆ ರಾತ್ರಿಯಾಗಿ ಮತ್ತೆ ಬೆಳಗಾದರೂ ಮುಗಿಯಲಿಲ್ಲ.

ನಾಗಿ ಬಳಿಯಲ್ಲೇ ಕುಳಿತು ತನ್ನ ಕೈಲಾದ ಪ್ರಯತ್ನವನ್ನೆಲ್ಲ ಮಾಡುತ್ತಿದ್ದಳು. ಸುಖ ಪ್ರಸವಕ್ಕೆ ಶೀನಪ್ಪ ಪಂಡಿತರಿಂದ ಮದ್ದೂ ತಂದುಕೊಟ್ಟಿದ್ದ. ಆದರೆ ಯಾವುದರಿಂದಲೂ ಉಪಯೋಗವಾಗಲಿಲ್ಲ. ಒಳಗಡೆಯಿಂದ ಕರುಳು ಕತ್ತರಿಸುವಂತೆ ನರಳಾಟದ ಸದ್ದು ಕೇಳಿ ಬಂದಂತೆಲ್ಲ ಶೀನಪ್ಪನಿಗೆ ತನ್ನ ಕರುಳಿಗೇ ಕತ್ತರಿ ಹಾಕಿದಂತೆ ಆಗುತ್ತಿತ್ತು.

ಮೂರನೆಯ ದಿನ ಬೆಳಗ್ಗೆ ಎಂಟು ಹತ್ತು ಗಳಿಗೆಯ ಹೊತ್ತಿಗೆ ಹೆರಿಗೆಯಾಯಿತು. ಮಗು ಒಂದು ಸಲ ಕೂಗಿದ್ದು ಕೇಳಿಸಿತು. ಮತ್ತೆ ನಿಶ್ಶಬ್ದ.

ಸೀತಮ್ಮ ಒಳಗಡೆಯಿಂದ ಬಂದು "ಶೀನಾ" ಎಂದಳು. ಶೀನಪ್ಪ ಸುಮ್ಮನೆ ಕತ್ತೆತ್ತಿ ನೋಡಿದ, ಸೀತಮ್ಮ ತಲೆ ತಗ್ಗಿಸಿಕೊಂಡು

"ಶೀನಾ, ಹೆರಿಗೆಯಾಯಿತು. ಮಗು ಬದುಕಲಿಲ್ಲ" ಎಂದಳು.

ಪದ್ಮಾ ಅನುಭವಿಸಿದ ನೋವನ್ನು ನೆನಸಿದಾಗ ಅದೆಲ್ಲಾ ವ್ಯರ್ಥವಾದದ್ದನ್ನು ಕೇಳಿ ಶೀನಪ್ಪನಿಗೆ ಅತ್ಯಂತ ವೇದನೆಯಾಯಿತು. ಕಣ್ಣು ಮಂಜಾಯಿತು. ಇದನ್ನು ಕಂಡು ಸೀತಮ್ಮ

"ತಾಯಿ ಬದುಕಿದ್ದೇ ಹೆಚ್ಚು. ಹೆರಿಗೆ ಬಹಳ ಕಷ್ಟವಾಯಿತಪ್ಪಾ, ಏನಾಗುವುದೋ ಎಂದು ನಾನು ಕೂಡ ಹೆದರಿದ್ದೆ. ತಾಯಿಯಾದರೂ ಬದುಕಿಕೊಂಡಳಲ್ಲ— ಅದಕ್ಕೆ ಸಂತೋಷ ಪಡಬೇಕು." ಎಂದಳು.

"ಪದ್ಮ ಈಗ ಹೇಗಿದ್ದಾಳೆ?" ಎಂದು ಶೀನಪ್ಪ ಕೇಳಿದ.

"ಬಹಳ ಆಯಾಸವಾಗಿ ಮಲಗಿದ್ದಾಳೆ. ಅವಳ ಜೀವಕ್ಕೇನೂ

ತೊಂದರೆಯಿಲ್ಲ. ಆರೈಕೆ ಸರಿಯಾಗಿ ನಡೆದರೆ ಸಾಕು" ಎಂದು ಸೀತಮ್ಮ ಮತ್ತೆ ಒಳಕ್ಕೆ ಹೋದಳು.

ಶೀನಪ್ಪ ಹೊರಗೆ ಕುಳಿತು ಯೋಚಿಸುತ್ತಿದ್ದ. ಪದ್ಮ ಇಷ್ಟು ಸಂಕಟ ಪಟ್ಟದ್ದೂ ಇಷ್ಟಕ್ಕೇನೆ? ಆ ಲೋಕಾಪವಾದ ಭೀತಿ ಮನೆಯ ಒಳಗೂ ಹೊರಗೂ ಕೆಟ್ಟ ಮಾತುಗಳ ವಿಷಬಾಣ, ಅದಕ್ಕಾಗಿ ಗರ್ಭಿಣಿಯಾಗಿಯೂ ಊರುಬಿಟ್ಟು ಹೊರಟದ್ದು, ದಾರಿತಪ್ಪಿ ನಿರ್ಗತಿಕಳಾಗಿ ತನ್ನ ಮನೆಯ ಮುಂದೆ ಬಂದುಬಿದ್ದದ್ದು—ಇದೆಲ್ಲ ಈ ಒಂದು ನಿಷ್ಫಲಯಾತನೆಗಾಗಿಯೆ? ಮಗುವಾದರೂ ಬದುಕಿದ್ದರೆ ಇಷ್ಟು ಕಷ್ಟ ಪಟ್ಟಿದ್ದಕ್ಕೂ ಸಾರ್ಥಕವಾಗುತ್ತಿತ್ತು. ಈಗ ಪದ್ಮ ಮನಸ್ಸಿನಲ್ಲಿ ಏನು ಯಾತನೆ ಪಡುತ್ತಿದ್ದಾಳೋ! ಪಾಪ, ಈಗ ಅವಳು ನಿರ್ವಿಣ್ಣಳಾಗಿರಬೇಕು. ಮಗು ಸತ್ತದ್ದು ತಿಳಿದು ಎಷ್ಟು ಸಂಕಟ ಪಡುತ್ತಿದ್ದಾಳೋ! ಅಯ್ಯೋ ದೇವರೆ, ಬಿದ್ದವರ ಮೇಲೆ ನೀನೂ ಕೂಡ ದೊಡ್ಡ ಬಂಡೆಯನ್ನೇ ಎಸೆಯುವೆಯಲ್ಲ! ಶೀನಪ್ಪನೂ ಹಾಗೆ ಸ್ವಲ್ಪ ಯೋಚಿಸುತ್ತಿದ್ದ. 'ಅತ್ತೆ' ಎಂದು ಸೀತಮ್ಮನನ್ನು ಕೂಗಿ ಕರೆದ.

"ಏನು ಶೀನಾ?" ಎಂದು ಸೀತಮ್ಮ ಕೇಳಿದಳು.

"ಏನೂ ಇಲ್ಲ. ಪದ್ಮ ಹೇಗಿದ್ದಾಳೆ ಅಂತ ಕೇಳುವಾ ಅಂತ ಕರೆದೆ. ಪಂಡಿತರಿಂದ ಏನಾದರೂ ಔಷಧಿ ತರಬೇಕಾದರೆ ಹೇಳು, ಹೋಗಿ ಬರುತ್ತೇನೆ" ಎಂದ.

"ಪದ್ಮಾ ಸರಿಯಾಗಿದ್ದಾಳೆ, ಶೀನಾ. ಔಷಧಿಯ ಅಗತ್ಯವಿಲ್ಲ. ನನಗೇನೂ ಮದ್ದು ಗೊತ್ತಿಲ್ಲ ಅಂತ ತಿಳಿದೆಯಾ? ಬೇಕಾದ್ದೆಲ್ಲ ಮಾಡುತ್ತೇನೆ. ನೀನು ನಿಶ್ಚಿಂತೆಯಾಗಿರು" ಎಂದಳು.

ಇದನ್ನು ಕೇಳಿ ಶೀನಪ್ಪನಿಗೆ ಸ್ವಲ್ಪ ಸಮಾಧಾನವೇನೋ ಆಯಿತು. ಆದರೆ ನಿಶ್ಚಿಂತೆ ಆಗುವುದು ಹೇಗೆ? ಹಾಗೇ ಅಲ್ಲಿ ಕಂಬಕ್ಕೆ ಒರಗಿ ಚಾವಡಿಯ ಮೇಲೆ ಕಂಭದಂತೇ ಬಹಳ ಹೊತ್ತು ಕುಳಿತಿದ್ದ.

ಸೀತಮ್ಮ ಮತ್ತೆ ಹೊರಗೆ ಬಂದಾಗ ಶೀನಪ್ಪ ಹಾಗೆ ಕುಳಿತಿದ್ದನ್ನು ಕಂಡು 'ಶೀನಾ' ಎಂದು ಕರೆದರು. ಎರಡು ಸಲ ಕರೆದ ಮೇಲೆ ಶೀನಪ್ಪ "ಏನು, ಏನು, ಅತ್ತೆ?" ಎಂದು ಅವಳ ಕಡೆ ತಿರುಗಿದ.

"ನೀನು ಈಗ ಬೇಕಾದರೆ ಪದ್ಮಾ ಹೇಗಿದ್ದಾಳೆ? ಅಂತ ನೋಡಿ ಬರಬಹುದು" ಎಂದಳು.

ಶೀನಪ್ಪ ಕೋಣೆಯೊಳಕ್ಕೆ ಹೋದ. ಒಂದು ಕಡೆ ನಿರ್ಜೀವವಾಗಿರುವ ಹಾಗೆ ಬಿದ್ದಿದ್ದಳು. ಶೀನಪ್ಪ ಒಳಕ್ಕೆ ಹೋದ ಕೂಡಲೇ ಅವಳು ಕ್ಷೀಣಸ್ವರದಿಂದ "ಮಗು ಹೋಯಿತು, ನಾನು ಹೋಗಲಿಲ್ಲ. ಹೋಗಿದ್ದರೇ ಮೇಲಾಗಿತ್ತು" ಎಂದಳು.

ಶೀನಪ್ಪನಿಗೆ ಇದರಿಂದ ಬಹಳ ದುಃಖವಾಯಿತು. "ಹಾಗೆಲ್ಲ ಹೇಳಬೇಡ, ಪದ್ಮಾ. ನೀನು ಬಹಳ ಸಹಿಸಿದವಳು. ಇವನ್ನೂ ಸಹಿಸಬೇಕು." ಎಂದು, ಇನ್ನೊಂದು ಕಡೆ ಮಲಗಿಸಿದ್ದ ಮಗುವಿನ ಕಡೆಗೆ ದೃಷ್ಟಿಹರಿಸಿದ; ಬಲು ಮುದ್ದಾದ ಹೆಣ್ಣು ಮಗು. ಅಗಲವಾದ ಕಣ್ಣು; ನೀಳವಾದ ಮೂಗು, ಎಲ್ಲ ಇತ್ತು; ಆದರೆ ಜೀವವಿಲ್ಲ. ಅದನ್ನು ಕಂಡು ಶೀನಪ್ಪನ ಕಣ್ಣು ಹನಿಗೂಡಿತು. ಅಲ್ಲಿ ನಿಲ್ಲಲಾರದೆ ಹೊರಬಂದ.

ಆಗ ಸೀತಮ್ಮ ಶೀನಪ್ಪನನ್ನು ಕರೆದು, "ಆ ಮಗು ಹೆಚ್ಚು ಹೊತ್ತು ಅಲ್ಲಿದ್ದರೆ ಅವಳ ದುಃಖ ಹೆಚ್ಚುತ್ತದೆ. ಅದನ್ನು ಮಣ್ಣುಮಾಡಬೇಕಪ್ಪಾ" ಎಂದಳು.

"ಯಾರು ಮಣ್ಣುಮಾಡಬೇಕು?"

"ನೀನು."

"ನಾನೆ?"

"ಹೌದು ಶೀನಾ, ನೀನೇ, ಇನ್ನಾರು ಆ ಕೆಲಸ ಮಾಡಬೇಕು? ಮಾಡಿ ಮುಗಿಸಿಬಿಡು."

ಬಹು ಕಷ್ಟದಿಂದ ಮನಸ್ಸನ್ನು ಕಲ್ಲುಮಾಡಿಕೊಂಡು ಶೀನಪ್ಪ ಹಿತ್ತಲಿಗೆ ಹೋಗಿ ಅಲ್ಲಿ ಒಂದು ಕಡೆ ಕುಣಿ ತೋಡಿ ಬಂದು ಸದ್ದಿಲ್ಲದೆ ಮಗುವನ್ನೆತ್ತಿಕೊಂಡು ಹೋಗಿ ಕುಣಿಯಲ್ಲಿಟ್ಟು ಮಣ್ಣು ತಳ್ಳಿದ. ಮಣ್ಣು ತಳ್ಳುವಾಗ ದುಃಖ ತಡೆಯಲಾಗಲಿಲ್ಲ. ಕೆಲಸ ಮುಗಿದ ಮೇಲೆ ಅಲ್ಲೇ ಹತ್ತಿರ ಕುಸಿದು ಕುಳಿತು ಬಹಳ ಹೊತ್ತಿನವರೆಗೆ ಮಂಕಾಗಿ ಶೂನ್ಯದೃಷ್ಟಿಯಿಂದ ನೆಲವನ್ನೇ ನೋಡುತ್ತಿದ್ದ.

ಈ ಮನುಷ್ಯಜೀವನದಲ್ಲಿ ಎಲ್ಲವೂ ಎಷ್ಟು ಅನಿಶ್ಚಿತ ಎಂದು ಶೀನಪ್ಪ ಯೋಚಿಸುತ್ತಿದ್ದ. ಇದು ಹೀಗೇ ಆಗುತ್ತದೆ ಎಂತ ಯಾರೂ ಹೇಳಲು ಸಾಧ್ಯವಿಲ್ಲ. ಭವಿಷ್ಯದಲ್ಲಿ ಏನೇನು ಅಡಗಿರುತ್ತದೋ ಅದನ್ನು ತಿಳಿಯುವುದು ಮನುಷ್ಯ ಬುದ್ಧಿಗೆ ಮೀರಿದ್ದು. ಈಗ ಒಂದು ತಿಂಗಳಿನಿಂದ ನಡೆಯುತ್ತ ಬಂದ ಘಟನೆ

ಗಳು ಎಷ್ಟು ಅಪೂರ್ವ! ಇವು ಏಕೆ ಹೀಗೆ ನಡೆಯಬೇಕು? ನಡೆದ ಮೇಲೆ ಅದು ಹೀಗೆ ಇದು ಹೀಗೆ ಅಂತ ನಾವು ಒಂದಕ್ಕೊಂದಕ್ಕೆ ಕಾರ್ಯಕಾರಣ ಸಂಬಂಧವನ್ನು ಹುಡುಕಲು ಯತ್ನಿಸುತ್ತೇವೆ. ಆದರೆ ಯಾವಾಗಲೂ ಆ ಕೆಲಸ ಸಮರ್ಪಕವಾಗಿ ಆಗುವುದಿಲ್ಲ. ಎಷ್ಟೋ ಸಲ ಇದಕ್ಕೆ ಇದೇ ಕಾರಣ ಎಂದು ನಾವು ತೃಪ್ತಿಪಟ್ಟುಕೊಂಡರೂ ಕೂಡ ಆ ಕಾರಣದ ಬೆನ್ನ ಹಿಂದೆ ಇನ್ನಾವುದೋ ಕಾರಣವಿರಬೇಕು ಅಂತ ಅಸ್ಪಷ್ಟವಾಗಿ ಅನ್ನಿಸಿ ನಮ್ಮ ತೃಪ್ತಿ ಹದಗೆಡುತ್ತದೆ.

ಎಲ್ಲಿಂದಲೋ ಬಂದು ಈ ಗರ್ಭದಲ್ಲಿ ನೆಲಸಿರುವ ಒಂದು ಜೀವ, ಈ ಜಗತ್ತಿಗೆ ಬಂದ ಕ್ಷಣವೇ ಹಿಮ್ಮೆಟ್ಟಿ ಹಾರಿತು. ಇದಕ್ಕೆ ದುಃಖಿಸಬೇಕೋ ಸಂತೋಷಿಸಬೇಕೋ ಹೇಳುವುದು ಕಷ್ಟ ಎನ್ನಿಸಿತು ಶೀನಪ್ಪನಿಗೆ ಈ ಜಗತ್ತಿನಲ್ಲಿ ಎಷ್ಟು ಜನ ತಾನೆ ಸುಖವಾಗಿದ್ದಾರೆ? ಅದರಲ್ಲೂ ಸೂಕ್ಷ್ಮವಾದ ಮನಸ್ಸಿದ್ದರೆ, ತೀರಿತು. ಜೀವನವೆಂದರೆ ಪ್ರತಿ ನಿಮಿಷವೂ ಒಂದು ಅಗ್ನಿದಿವ್ಯವೇ ಆಗುತ್ತದೆ.

ಇಲ್ಲಿ ಹೀಗೆ ಮಗು ಹುಟ್ಟಿ ಸತ್ತು ದುಃಖದ ವಾತಾವಾರಣ ತುಂಬಿದ್ದರೆ ಪಕ್ಕದ ಮನೆಯಲ್ಲಿ ಪಾರ್ವತಮ್ಮ ತನ್ನ ಹಾಸ್ಯಬುದ್ಧಿಯನ್ನು ಪ್ರದರ್ಶಿಸುತ್ತಿದ್ದಳು.

ನಾರಣಪ್ಪ ಸ್ನಾನಮಾಡಿ ಸಂಧ್ಯಾವಂದನೆ ಮಾಡುತ್ತ ಕುಳಿತಿದ್ದ. ಪಾರ್ವತಮ್ಮ ದೇವರ ಕೋಣೆಯ ಹೊರಗೆ ಅಕ್ಕಿ ಆರಿಸುತ್ತ ಕುಳಿತಿದ್ದಳು. ಕೈ ಯಾಂತ್ರಿಕವಾಗಿ ಓಡುತ್ತಿತ್ತು ಅಕ್ಕಿಯ ಮೇಲೆ. ಬಾಯಿ ತನ್ನಪಾಡಿಗೆ ತಾನು ವಟಗುಟ್ಟಲು ಶುರುಮಾಡಿತು.

" ಶೀನನ ಮನೆಯಲ್ಲೇನು ದೊಡ್ಡ ಉತ್ಸವ " ಎಂದಳು.

ನಾರಣಪ್ಪ ಅದಕ್ಕೆ ಏನೂ ಪ್ರತಿ ಹೇಳಲಿಲ್ಲ.

" ನಿಮ್ಮ ಶೀನನಿಗೆ ಪುತ್ರೋತ್ಸವ ಆಗಬಹುದು. ನಿಮಗೆ ಎಷ್ಟು ಸಂತೋಷವಾಗಿದೆಯೋ ಏನೋ. ಮಾತು ಹೊರಡದಿದ್ದಷ್ಟು ಸಂತೋಷವಾಗಿದೆಯೆ?" ಎಂದು ಕೇಳಿದಳು.

" ನಾರಣಪ್ಪ ಅದಕ್ಕೂ ಉತ್ತರ ಹೇಳಲಿಲ್ಲ."

" ನೀವು ಇಲ್ಲಿ ಸಂಧ್ಯಾವಂದನೆಮಾಡುತ್ತ ಕುಳಿತದ್ದು ಆಶ್ಚರ್ಯ, ಶೀನನ ಮನೆಗೆ ಹೋಗಿದ್ದರೆ ಏನಾದರೂ ಸಹಾಯ ಮಾಡಬಹುದಾಗಿತ್ತು" ಎಂದಳು.

ಇದನ್ನು ಕೇಳಿ ನಾರಣಪ್ಪನಿಗೆ ಬಹಳ ಬೇಸರವಾಯಿತು. ಬೇಸರದಿಂ

ದಲೇ ಹೇಳಿದ ; " ನಾನು ಹೋಗಿ ಏನು ಉಪಯೋಗ ? ನೀನು ಹೆಂಗಸು ಹೋಗಿದ್ದರೆ ಏನಾದರೂ ಸಹಾಯ ಮಾಡಬಹುದಾಗಿತ್ತಲ್ಲ ! " ಎಂದ.

ಪಾರ್ವತಮ್ಮನಿಗೂ ಇಷ್ಟೇ ಬೇಕಾಗಿತ್ತು. ಸ್ವಲ್ಪ ಮಾತಾಡಿದರೆ ಸಾಕು, ತಾನು ಹೇಳಬೇಕಾದ್ದನ್ನೆಲ್ಲ ಹೇಳಿಬಿಡಬಹುದು—ಅಂತ. ಈಗ ಆ ಅನುವು ಸಿಕ್ಕಿತು.

" ಹಾಗೆಲ್ಲ ಬೀದಿಯಲ್ಲಿ ಹೋಗುವ ಹಾದರಗಿತ್ತಿಯರ ಸೇವೆ ಮಾಡುವುದಕ್ಕೆ ನಾನು ನಿಮ್ಮ ತಂಗಿ ಸೀತಮ್ಮ ಅಂತ ತಿಳಿದುಕೊಂಡಿರಾ ?" ಎಂದಳು.

ನಾರಣಪ್ಪನಿಗೆ ತನ್ನ ತಂಗಿಯ ವಿಷಯದಲ್ಲಿ ಬಹಳ ಮಮತೆ. ಅವಳ ಗುಣದ ಬಗ್ಗೆ ಗೌರವ. ಅದಕಾರಣ ತನ್ನ ಹೆಂಡತಿಯ ಈ ಮಾತು ಕೇಳಿ ಅವನಿಗೆ ಬಹಳ ಸಿಟ್ಟು ಬಂತು. ಮಾತಾಡಬಾರದು ಅಂತ ಇದ್ದರೂ ಮಾತು ಕುದಿದು ಹೊರಬಂತು.

" ನಿನ್ನದು ಬಹಳ ಕೆಟ್ಟ ಮನಸ್ಸು, ಎಲ್ಲರನ್ನೂ ಆಡಿಕೊಳ್ಳುವುದೊಂದೇ ನಿನಗೆ ಗೊತ್ತು. ನಮ್ಮ ಸೀತೆಯ ಪಾದ ತೊಳೆದು ನೀರು ಕುಡಿದರೆ ನಿನಗೆ ಬುದ್ಧಿ ಬರುವುದು."

ಇಷ್ಟು ಜೋರಾಗಿ ನಾರಣಪ್ಪ ಎಂದೂ ತನ್ನ ಹೆಂಡತಿಯನ್ನು ಕುರಿತು ಮಾತಾಡಿರಲಿಲ್ಲ. ಕೇಳಿ ಒಂದು ಕ್ಷಣ ಪಾರ್ವತಮ್ಮ ದಿಗ್ಭ್ರಾಂತಳಾಗಿ ಮೂಗಿನ ಮೇಲೆ ಬೆರಳಿಟ್ಟುಕೊಂಡಳು. ಏನು ಮಾತಾಡುವುದೆಂದೇ ಅವಳಿಗೆ ತೋಚಲಿಲ್ಲ. ನಾರಣಪ್ಪನ ಮಾತಿನ ರೀತಿ ಅಷ್ಟು ಅನಿರೀಕ್ಷಿತವಾಗಿತ್ತು.

ಪಾರ್ವತಮ್ಮನಿಗೆ ಸಾವರಿಸಿಕೊಳ್ಳಲು ಬೇಕಾದದ್ದು ಒಂದೇ ನಿಮಿಷ. ಮರು ನಿಮಿಷವೇ ಅವಳು ರಣಚಂಡಿಯಾದಳು. ಕೈಯಲ್ಲಿದ್ದ ಅಕ್ಕಿ ತುಂಬಿದ ಮೊರವನ್ನು ನೆಲಕ್ಕೆ ಕುಕ್ಕಿದಳು. ಸೊಂಟದ ಮೇಲೆ ಕೈಯಿಟ್ಟುಕೊಂಡು ಕಿರಿಚಿ ಹೇಳಿದಳು.

" ಓಹೋ, ಇಷ್ಟಕ್ಕೂ ಬಂತೋ. ನಾನೆಂದರೆ ನಿಮಗೆ ಕಾಲಕಸಕ್ಕೂ ಕೀಳಾಯಿತೊ ? ಸರಿ, ಸರಿ. ಈ ಮನೆಗೆ ಬಂದು ನಾನು ಕೆಟ್ಟೆ, ನಿಮ್ಮಿಂದ ಸುಖ ಪಡೆದದ್ದು ಅಷ್ಟರಲ್ಲೇ ಇದೆ ನನ್ನನ್ನು ನೀವು ಏಕೆ ಮದುವೆ ಮಾಡಿಕೊಂಡು ಬಂದಿರಿ? ಈಗ ನನಗೆ ಮನೆಯ ಆಳಿಗೆ ಇರುವಷ್ಟು ಗೌರವವೂ ಇಲ್ಲ. ಅಯ್ಯೋ ದೇವರೆ, ಎಂದು ಇಲ್ಲಿಂದ ನನ್ನನ್ನು ಬಿಡುಗಡೆ ಮಾಡುತ್ತೀಯೋ ? ನಾನೇನು ಪಾಪ ಮಾಡಿದ್ದೆನೋ ಹಿಂದಿನ ಜನ್ಮದಲ್ಲಿ. ಅಯ್ಯೋ, ಸಾಕಪ್ಪಾ

ಸಾಕು, ಸಾಕು ” ಎಂದು ನೆಲಕ್ಕೆ ಹಣೆ ಚಚ್ಚಿಕೊಂಡು ಗೋಳೋ ಎಂದು ಅಳತೊಡಗಿದಳು. “ ನನಗೆ ಯಾರೂ ಹೇಳುವವರು ಕೇಳುವವರು ಇಲ್ಲ ಅಂತ ಅಲ್ಲವೇ ನೀವು ಹೀಗೆ ಮಾಡುವುದು ? ದೇವರ ದಯದಿಂದ ಒಬ್ಬ ತಮ್ಮನಾದರೂ ಇದ್ದಾನೆ. ಇನ್ನು ಈ ಮನೆಯಲ್ಲಿ ಒಂದು ಗಳಿಗೆಯೂ ಇರುವುದಿಲ್ಲ ” ಎಂದು ರೇಗುತ್ತ, ಕೂಗುತ್ತ ಅತ್ತಿತ್ತ ಓಡಾಡುತ್ತ ತನ್ನ ಸೀರೆಗಳನ್ನೆಲ್ಲ ತೆಗೆದುಕೊಂಡು ಗಂಟುಕಟ್ಟುತ್ತಾ ಎಗರಾಡಿದಳು.

ನಾರಣಪ್ಪನಿಗೆ ತನ್ನ ಹೆಂಡತಿಯ ಈ ಅವತಾರ ಹೊಸದೇನೂ ಅಲ್ಲ. ಆಗಾಗ್ಗೆ ಈ ರೀತಿ ಕುಣಿದಾಡದಿದ್ದರೆ ಪಾರ್ವತಮ್ಮನಿಗೆ ನಿದ್ದೆಯೇ ಬಾರದು. ಗಂಡನನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಬೇಕಾದರೆ ಹೀಗೆ ಆಗಾಗ- ತನ್ನ ಬಲವನ್ನು ಪ್ರದರ್ಶಿಸಲೇಬೇಕು ಅಂತ ಅವಳ ಅಭಿಪ್ರಾಯ.

ನಾರಣಪ್ಪನ ಸಂಧ್ಯಾವಂದನೆ ಮುಗಿದಿತ್ತು; ಅಥವಾ ಅದನ್ನು ಇನ್ನು ಸಾಗಿಸುವುದು ಸಾಧ್ಯವಿಲ್ಲ ಎಂತ ಮುಗಿಸಿಬಿಟ್ಟು ಹೊರಕ್ಕೆ ಬಂದು ಒಂದು ಪಂಚೆಯನ್ನು ಹೆಗಲ ಮೇಲೆ ಹಾಕಿಕೊಂಡು “ ನೀನು ಈ ಮನೆಬಿಟ್ಟು ಹೋಗಬೇಕಾದ ಅಗತ್ಯವಿಲ್ಲ. ನಾನೇ ಹೋಗುತ್ತೇನೆ ” ಎಂದು ಮತ್ತೆ ಯಾವ ಮಾತು ಕೇಳಲೂ ನಿಲ್ಲದೆ ಹೊರಟೇ ಬಿಟ್ಟ. ಬಾಗಿಲು ದಾಟಿ ಹೊರಗೆ ಕಾಲಿಡುವ ವರೆಗೂ ನಾರಣಪ್ಪನಿಗೆ ತನ್ನ ಹೆಂಡತಿಯ ಧ್ವನಿ ಕೇಳಿಸುತ್ತಿತ್ತು: “ಗಂಡನನ್ನು ಮನೆಯಿಂದ ಓಡಿಸಿದಳು ಎನ್ನುವ ಅಪವಾದವನ್ನೂ ನನ್ನ ತಲೆಗೆ ಕಟ್ಟುತ್ತೀರಿ. ಬೇಡಿ, ಹೋಗಬೇಡಿ, ನಾನೇ ಎಲ್ಲಾದರೂ ಹಾಳಾಗಿ ಹೋಗುತ್ತೇನೆ. ಕೆರೆ ಬಾವಿ ಬೀಳುತ್ತೇನೆ. ರಾಮಾ, ಗೋವಿಂದಾ, ನಾರಾಯಣಾ.”

ನಾರಣಪ್ಪ ನೇರವಾಗಿ ಊರ ದೇವಸ್ಥಾನದ ಕಡೆಗೆ ನಡೆದ. ದಾರಿಯಲ್ಲಿ ರಾಮಕೃಷ್ಣ ದೇವರ ಪೂಜೆ ಮುಗಿಸಿಕೊಂಡು ಬರುತ್ತಿದ್ದವ ಸಿಕ್ಕಿದ.

“ ಪೂಜೆ ಆಯಿತೇನೋ ? ” ಎಂದು ನಾರಣಪ್ಪ ಕೇಳಿದ.

“ ಆಯಿತು. ನೀನು ಯಾವ ಕಡೆ ಹೊರಟೆ ಅಣ್ಣಯ್ಯ? ” ಎಂದು ರಾಮಕೃಷ್ಣ ಕೇಳಿದ. ಆಗ ನಾರಣಪ್ಪ ಕೊಂಚ ಯೋಚಿಸಿ “ ಇಲ್ಲೇ ಶ್ಯಾನುಭಾಗರ ಮನೆಗೆ ಹೋಗಿ ಬರುತ್ತೇನೆ ” ಎಂದು ಮುಂದಡಿಯಿಟ್ಟ. ಆದರೆ ರಾಮಕೃಷ್ಣ ಅದಕ್ಕೆ ಬಿಡದೆ,

“ ಏನು, ಶೀನನ ಮನೆಯಲ್ಲಿ ಬಹಳ ಗಲಾಟೆ ಅಂತ ಕಾಣುತ್ತದೆ.

ಯಾವುಯಾವುದನ್ನೋ ತಲೆಗೆ ಕಟ್ಟಿಕೊಂಡು ಹುಡುಗ ಹಾಳಾದ" ಎಂದ.

"ಹೌದು ಪಾಪ; ಅವನ ಗ್ರಹಚಾರವೇ ಕೆಟ್ಟದ್ದು. ಈಗಂತೂ ಸಾಡೇ ಸಾತಿ ಶನಿ."

"ಬೇಕು ಬೇಕಂತ ಮಾಡಿಕೊಂಡಿದ್ದಲ್ಲವೇ ಇದು? ಸುಖವಾಗಿ ನಮ್ಮ ಮಾತು ಕೇಳಿ ಮದುವೆ ಮಾಡಿಕೊಂಡಿದ್ದರೆ?"

"ಏನಾಗುತ್ತಿತ್ತು? ಇನ್ನೊಂದು ರೀತಿಯ ಕಷ್ಟ ಬರುತ್ತಿತ್ತು. ಬರುವ ಕಷ್ಟ ತಪ್ಪಿಸುವುದಕ್ಕಾಗುವುದಿಲ್ಲಪ್ಪಾ."

"ಆದರೆ ಸೂಳೆಗಾರಿಕೆ ಮಾಡಿ ಯಾವಳನ್ನೋ ಮನೆಯಲ್ಲಿ ತಂದಿಟ್ಟು ಕೊಂಡು ಈ ರೀತಿ ಜಾತಿ ಕೆಡಬೇಕಾಗಿರಲಿಲ್ಲವಲ್ಲ?"

"ನೋಡು ರಾಮಕೃಷ್ಣ, ಊರೆಲ್ಲ ಏನು ಬೇಕಾದರೆ ಹೇಳಲಿ, ಶೀನ ಸೂಳೆಗಾರಿಕೆ ಮಾಡಿದವನಲ್ಲ; ಅನಾಥೆಗೆ ಆಶ್ರಯ ಕೊಟ್ಟ ಅಷ್ಟೆ. ಅದೇ ದೊಡ್ಡ ಅಪರಾಧವಾಯಿತು. ಈ ವಿಷಯದಲ್ಲಿ ನನಗೆ ಸಂದೇಹವಿಲ್ಲ."

"ನೀನು ಯಾವಾಗಲೂ ಹಾಗೇ, ಶೀನನೆಂದರೆ ನಿನಗೇಕೆ ಇಷ್ಟು ಪಕ್ಷ ಪಾತವೋ ಕಾಣೆ. ನನಗೇಕೆ ಈ ಮಾತು?" ಎಂದು ರಾಮಕೃಷ್ಣ ತನ್ನ ದಾರಿ ಹಿಡಿದ.

ನಾರಣಪ್ಪ ಅಲ್ಲಿಂದ ದೇವಸ್ಥಾನಕ್ಕೆ ಬಂದು ಚಾವಡಿಯಲ್ಲಿ ಗೋಡೆಗೆ ಒರಗಿ ಕುಳಿತುಕೊಂಡ. ಇವರಿಗೆಲ್ಲ–ತನ್ನ ಹೆಂಡತಿಗೆ, ರಾಮಕೃಷ್ಣನಿಗೆ ಶೀನನ ಮೇಲೆ ಏಕೆ ಇಷ್ಟು ಆಕ್ರೋಶ ಎಂದು ಎಷ್ಟು ಯೋಚಿಸಿದರೂ ನಾರಣಪ್ಪನಿಗೆ ಬಗೆ ಹರಿಯಲಿಲ್ಲ. ಪಾರ್ವತಮ್ಮನ ಬಾಯಿ ಕೆಟ್ಟದ್ದು, ಎಷ್ಟೋ ಸಲ ಜನ್ಮವೇ ಸಾಕು ಅನ್ನಿಸಿಯೂ ಬಿಡುತ್ತಿದ್ದಳು. ಆದರೂ ಮನೆ ಮನೆ ಎಂತ ದಿನವೆಲ್ಲ ದುಡಿಯುತ್ತಾಳೆ. ಗಂಡ ಅಂತ ತಾತ್ಸಾರವೂ ಇಲ್ಲ. ಒಂದು ದಿನವೂ ಗಂಡ ಊಟಮಾಡದೆ ತಾನು ಊಟಮಾಡಿದವಳಲ್ಲ. ಎಷ್ಟೇ ಹೊತ್ತಾಗಲಿ, ಹಾಗೇ ಕಾದು ಕುಳಿತಿರುತ್ತಾಳೆ. ಒಂದು ಸ್ವಲ್ಪ ನಾರಣಪ್ಪನಿಗೆ ಮೈ ಚೆನ್ನಾಗಿಲ್ಲ ದಿದ್ದರೆ ಸರಿ. ದಿನವೆಲ್ಲ ಅವಳಿಗೆ ಅವನ ಶುಶ್ರೂಷೆಯ ಕೆಲಸವೇ. ಊಟದ ಪರಿವೆಯಾಗಲೀ ನಿದ್ದೆಯ ಯೋಚನೆಯಾಗಲೀ ಇಲ್ಲ. ವಿಚಿತ್ರ ಹೆಂಗಸು. ಇದನ್ನೆಲ್ಲ ಯೋಚಿಸಿದಾಗ ಯಾವಾಗಲೂ ನಾರಣಪ್ಪನಿಗೆ ಅವಳ ವಿಷಯದಲ್ಲಿ ಕನಿಕರ ಹುಟ್ಟುತ್ತಿತ್ತು. ತಿಳಿವಳಿಕೆಯಿಲ್ಲ, ಸಂಸ್ಕಾರವಿಲ್ಲ; ಮನಸ್ಸಿಗೆ ಬಂದ ದ್ದನ್ನು ಹೇಳುವುದು ಅಷ್ಟೇ. ಶೀನನ ಸ್ವಭಾವ ತಿಳಿಯಬೇಕಾದರೆ ಸ್ವಲ್ಪ

ಸೂಕ್ಷ್ಮವಾದ ಸಂಸ್ಕೃತವಾದ ಮನಸ್ಸು ಬೇಕು. ಅವಳಿಗೆ ಶೀನನ ಅರ್ಥವೇ ಆಗುವುದಿಲ್ಲ. ಶೀನನು ಇನ್ನಾರೋ ಆಗಿದ್ದರೆ ಪಾರ್ವತಮ್ಮ ಹೇಳುವ ಮಾತೆಲ್ಲ ಸರಿಯೇ. ಆದರೆ ಶೀನ ಶೀನನೇ ಆಗಿರುವುದರಿಂದ ಈ ಎಲ್ಲ ತೊಂದರೆ. ಹೀಗೆ ಯೋಚಿಸಿದಾಗ ತಾನು ಅಷ್ಟು ಕಟುವಾಗಿ ಮಾತಾಡಬಾರದಿತ್ತು ಅಂತ ನಾರಣಪ್ಪನಿಗೆ ಅನ್ನಿಸಿತು. ನನಗೇಕೆ ಇವತ್ತು ಇಷ್ಟು ಕೋಪ ಬಂತೋ ಎಂದು ಪಶ್ಚಾತ್ತಾಪ ಪಡುತ್ತ ಕುಳಿತ.

ಇಷ್ಟು ಹೊತ್ತಿಗೆ ಯಾರೋ ದೇವಸ್ಥಾನದ ಬಾಗಿಲು ತೆರೆದು ಬಂದರು. ಒಂದು ಮೂಲೆಯಲ್ಲಿ ಕುಳಿತಿದ್ದ ನಾರಣಪ್ಪನಿಗೆ ಅದು ಶೀನ ಎಂಬುದು ತಿಳಿಯಿತು. ಆದರೆ ಶೀನಪ್ಪನಿಗೆ ಮಾತ್ರ ನಾರಣಪ್ಪ ಕಾಣಿಸಲಿಲ್ಲ. ಅಲ್ಲದೆ, ಆ ಕಡೆ ಈ ಕಡೆ ನೋಡುತ್ತಲೂ ಇರಲಿಲ್ಲ. ನೇರವಾಗಿ ಬೀಗ ಹಾಕಿದ ಗರ್ಭಗುಡಿಯ ಬಾಗಿಲ ಬಳಿ ಹೋಗಿ ಹೊಸ್ತಿಲ ಮೇಲೆ ತಲೆಯಿಟ್ಟು ಹಾಗೇ ಕುಳಿತುಕೊಂಡ. ನಾರಣಪ್ಪ ನೋಡುತ್ತಿದ್ದ. ಶೀನಪ್ಪ ಬಹಳ ಹೊತ್ತಾದರೂ ಹೊಸ್ತಿಲಿನಿಂದ ತಲೆ ಎತ್ತಲೇ ಇಲ್ಲ. ಅವನ ಕಣ್ಣಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು.

ಬಹಳ ಹೊತ್ತಾದ ಬಳಿಕ ನಾರಣಪ್ಪ ಶೀನಪ್ಪನ ಹತ್ತಿರ ಹೋಗಿ ಅವನ ತಲೆಯ ಮೇಲೆ ಕೈಯಿಟ್ಟು, " ಏನು, ಶೀನಾ, ಏನಾಯಿತು ? " ಎಂದು ಕೇಳಿದ.

ಶೀನಪ್ಪ ತಲೆಯೆತ್ತಿ ನೋಡಿ " ದೊಡ್ಡಪ್ಪಾ" ಎಂದ ಅಷ್ಟೆ. ಇನ್ನೇನೂ ಹೇಳಲಿಲ್ಲ. ಕಣ್ಣಿಂದ ಮಾತ್ರ ನೀರು ಧಾರಾಕಾರವಾಗಿ ಹರಿಯುತ್ತಿತ್ತು.

" ಹೆರಿಗೆ ಸುಖವಾಗಿ ಆಯಿತೇ ? " ಎಂದು ನಾರಣಪ್ಪನೇ ಕೇಳಿದ.

" ಹೆರಿಗೆ ಸುಖವಾಗಿ ಆಯಿತು, ದೊಡ್ಡಪ್ಪ, ಆದರೆ ಮಗು ಹೋಯಿತು."

" ತಾಯಿಗೆ ಏನೂ ತೊಂದರೆ ಇಲ್ಲವಷ್ಟೆ! "

" ಇಲ್ಲ ಅಂತ ಅತ್ತೆ ಹೇಳುತ್ತಾಳೆ. ಏನಾಗುವುದೋ ? "

" ಈಗ ದೇವಸ್ಥಾನಕ್ಕೆ ಏಕೆ ಬಂದೆ ಶೀನಾ ? "

" ಏನೋ ಮನೆಯಲ್ಲಿ ಮನಸ್ಸು ನಿಲ್ಲಲಿಲ್ಲ. ಅಲ್ಲದೆ ದೊಡ್ಡಪ್ಪಾ, ಇಷ್ಟು ವರ್ಷ ಪೂಜೆಮಾಡಿದ ಈ ದೇವರು ಈ ದೇವಸ್ಥಾನ ಅಂದರೆ ನನಗೆ ನನ್ನ ಜೀವನದ ಒಂದು ಅಂಗದ ಹಾಗೇ ಆಗಿದೆ. ಇಲ್ಲಿಗೆ ಬಂದು ಹೋಗದಿದ್ದರೆ ಮನಸ್ಸಿಗೆ ನೆಮ್ಮದಿಯೇ ಇಲ್ಲ " ಎಂದ.

ನಾರಣಪ್ಪನಿಗೂ ಈ ಮಾತು ಕೇಳಿ ಬಹಳ ದುಃಖವಾಯಿತು.

ಅನಂತರ ಶೀನಪ್ಪ "ನೀನೇಕೆ ಇಷ್ಟು ಹೊತ್ತಿಗೆ ದೇವಸ್ಥಾನಕ್ಕೆ ಬಂದೆ ದೊಡ್ಡಪ್ಪಾ?" ಎಂದು ಕೇಳಿದ.

"ನನಗೂ ಅಷ್ಟೇ ಶೀನಾ, ಮನೆಯಲ್ಲಿ ಇರಲು ಆಗಲಿಲ್ಲ. ಮನಸ್ಸು ಕೆಟ್ಟರೆ ದೇವಸ್ಥಾನವೇ ಗತಿ ಎಂದು ಇಲ್ಲಿಗೆ ಬಂದೆ" ಎಂದ.

ಅದು ನಿಜ. ದೇವಸ್ಥಾನ ಬಹಳ ಪ್ರಶಾಂತವಾದ ಸ್ಥಳದಲ್ಲಿತ್ತು. ಯಾವ ಗದ್ದಲವೂ ಇಲ್ಲ. ಬಂದು ಕುಳಿತರೆ ಸಾಕು, ಮನಸ್ಸಿನ ಚಿಂತೆ ಕಳೆಯುತ್ತದೆ.

ಸ್ವಲ್ಪ ಹೊತ್ತು ಹಾಗೇ ಕುಳಿತಿದ್ದು ಶೀನಪ್ಪ ಎದ್ದು ನಿಂತು "ದೊಡ್ಡಪ್ಪಾ, ನಾನು ಹೋಗುತ್ತೇನೆ, ನೀನೂ ಬರುತ್ತೀಯಾ ?" ಎಂದು ಕೇಳಿದ.

"ಇಲ್ಲ, ಶೀನಾ ; ನೀನು ಹೋಗು ; ನಾನು ಸ್ವಲ್ಪ ಹೊತ್ತು ಇಲ್ಲೇ ಇದ್ದು ಆಮೇಲೆ ಬರುತ್ತೇನೆ." ಎಂದ.

ಶೀನಪ್ಪ ಹೊರಟು ಹೋದ.

ನಾರಣಪ್ಪ ಯೋಚಿಸುತ್ತ ಕುಳಿತ. ತನ್ನ ಹೆಂಡತಿಗೆ ಸರಿಯಾದ ತಿಳಿವಳಿಕೆ ಕೊಡಲು ತಾನು ಯತ್ನಿಸದೆ ಇದ್ದದ್ದು ಬಹಳ ತಪ್ಪಾಯಿತು ಎಂದುಕೊಂಡ. ಜನ್ಮಕ್ಕೆ ಅಂಟಿಕೊಂಡು ಬಂದ ಆಲಸ್ಯವೇ! ಈ ಎಲ್ಲ ತೊಂದರೆಗೂ ಕಾರಣ ಎಂದು ಅವನಿಗೆ ತೋರಿತು. ಮದುವೆಯಾಗಿ ಬಂದ ಹೊಸದರಲ್ಲೇ ಮಾಡಬೇಕಿದ್ದ ಕೆಲಸ ಅದು. ಆದರೆ ಆಗ ಮಾಡಲಿಲ್ಲ. ಈಗ ಅನುಭವಿಸಬೇಕಾಗಿದೆ— ಎಂದುಕೊಂಡ. ಆದರೆ ಇದು ಆಲಸ್ಯವೋ ಅಥವಾ ಹೇಡಿತನವೋ ? ಒಂದು ಮಾತಾಡಿದರೆ ಹೇಗೋ, ಯಾವ ಜಗಳವಾಗುತ್ತದೋ ಅಂತ ಹೆದರಿ ಹೆದರಿ ಬಾಯಿ ಬಿಗಿಹಿಡಿದು ಮನಸ್ಸಿನಲ್ಲೇ ಕುದಿಯುತ್ತ ಬಂದದ್ದು ಇದಕ್ಕೆ ಕಾರಣ. "ತಪ್ಪು ನನ್ನದೇ, ಸುಮ್ಮನೆ ಅವಳನ್ನು ಯಾಕೆ ಬಯ್ಯಲಿ" ಎಂದುಕೊಂಡ.

ಮಧ್ಯಾಹ್ನವಾಯಿತು. ಹೊತ್ತು ನೆತ್ತಿಗೆ ಬಂದು ಪಶ್ಚಿಮಕ್ಕೆ ತಿರುಗಿತ್ತು. ಬೆಳಗಿನಿಂದ ಮಳೆಯಿಲ್ಲ. ಸೆಖೆ ವಿಪರೀತ. ಹಿಂದಿನ ದಿನ ಶನಿವಾರ. ರಾತ್ರಿ ನಾರಣಪ್ಪನಿಗೆ ಊಟವಿಲ್ಲ. ಕಟ್ಟುನಿಟ್ಟಾಗಿ ಉಪವಾಸವನ್ನೇ ಮಾಡಿದ್ದ. ಹೊಟ್ಟೆ ಹಸಿಯಲು ಯಾವಾಗಲೋ ಶುರುವಾಗಿತ್ತು. ಈಗ ಹಸಿವೆ ತಾಳಲು ಕಷ್ಟ ಎನ್ನುವಷ್ಟಾಯಿತು. ಇನ್ನೇನು ಮನೆಗೆ ಹೋಗುವುದು ಅಂತ ನಿಶ್ಚಯಿಸಿಕೊಳ್ಳುತ್ತಿದ್ದ.

ಅಷ್ಟರಲ್ಲಿ ಯಾರೋ ಹೊರಗೆ ಬರುತ್ತಿರುವ ಸದ್ದು ಕೇಳಿತು ಬಾಗಿಲು ತೆರೆಯಿತು. ಮುಖ ಒಳಗೆ ಇಣಿಕಿತು.

ಯಾರದು? ಪಾರ್ವತಮ್ಮ!

ನೋಡಿ ನಾರಣಪ್ಪನಿಗೆ ಆಶ್ಚರ್ಯವಾಯಿತು. ಪಡಸಾಲೆಯಲ್ಲಿ ಕುಳಿತಿದ್ದ ನಾರಣಪ್ಪ ಕಣ್ಣಿಗೆ ಬೀಳಲು ಪಾರ್ವತಮ್ಮನಿಗೆ ಸ್ವಲ್ಪ ಕಾಲ ಹಿಡಿಯಿತು. ನೋಡಿದವಳು ಕೂಡಲೇ

"ಓಹೋ ಇಲ್ಲೇ ಇದ್ದೀರೋ, ರಾಮಕೃಷ್ಣಭಟ್ಟರು ಹೇಳಿದ್ದು ಸರಿ ಹಾಗಾದರೆ" ಎಂದಳು. ನಾರಣಪ್ಪ ಮಾತಾಡಲಿಲ್ಲ.

"ಸಾಕು ನಿಮ್ಮ ಸಿಟ್ಟು, ಏಳಿ, ಅಡಿಗೆ ಆರಿ ಹೋಗುತ್ತಿದೆ. ನಿನ್ನೆ ರಾತ್ರಿಯೂ ನಿಮಗೆ ಊಟವಿಲ್ಲ. ಇಷ್ಟು ದೊಡ್ಡವರಾದರೂ ನಿಮಗೆ ಎಳ್ಳಷ್ಟೂ ಬುದ್ಧಿಯಿಲ್ಲ; ಏನೋ ಸಿಟ್ಟಿನಿಂದ ಏನು ಮಾತು ಆಡಿದರೆ ಮನೆಬಿಟ್ಟು ಹೊರಡುತ್ತಾರೋ; ಸಾಕು, ಸಾಕು. ಏಳಿ" ಎಂದಳು.

"ನೀನೂ ಮನೆಯಲ್ಲಿರುವುದಿಲ್ಲ; ಇನ್ನೆಲ್ಲಿ ಊಟ ಅಂತ ಇಲ್ಲೇ ಕುಳಿತುಕೊಂಡೆ" ಎಂದ ನಾರಣಪ್ಪ.

"ನಾನು ಮನೆಯಲ್ಲಿಲ್ಲದೆ ಇನ್ನೆಲ್ಲಿ ಸಾಯುತ್ತೇನೆ. ಒಳ್ಳೇ ಮಾತು ಹೇಳುತ್ತೀರಿ."

"ಮತ್ತೆ ತಮ್ಮನ ಮನೆ, ಕೆರೆ, ಬಾವಿ, ಅಂತ ಏನೇನೋ ಹೇಳುತ್ತಿದ್ದೆ?"

"ಸರಿ, ಆ ಮಾತನ್ನೆಲ್ಲ ಕಟ್ಟಿಕೊಂಡರೆ ಆಯಿತು. ಆಡಿದ ಹಾಗೇ ಎಲ್ಲರೂ ಮಾಡುವ ಹಾಗಿದ್ದಿದ್ದರೆ ಏನೇನೋ ಆಗುತ್ತಿತ್ತು."

ಸರಿ. ಈ ಮಾತು ಸರಿ ಎನ್ನಿಸಿತು ನಾರಣಪ್ಪನಿಗೆ. ಅವನು ಉತ್ತರ ಕೊಡುವ ಮೊದಲೇ ಪಾರ್ವತಮ್ಮ 'ಬರುತ್ತೀರೋ ಇಲ್ಲವೋ?' ಎಂದು ಅವನ ಹತ್ತಿರ ಬಂದು ಕೈ ಹಿಡಿದೆತ್ತಿ ಎಳೆದುಕೊಂಡೇ ಹೋದಳು— ಮನೆಯ ಕಡೆಗೆ.

# ೧೫

ದಿನಗಳು ಹೇಗೋ ಕಳೆಯುತ್ತಿದ್ದುವು ; ಬೆಳಗು, ಹಗಲು, ಇರುಳು— ಮತ್ತೆ ಬೆಳಗು. ಮಳೆಗಂತೂ ಬಿಡುವೇ ಇರಲಿಲ್ಲ. ಹಗಲಿರುಳೂ ಧಾರೆಧಾರೆಯಾಗಿ ಮಳೆ ಬಂದು ನಾಲ್ಕು ದಿನ ಆಗೀಗ ಸೊಳವಾಗುತ್ತಿತ್ತು. ಆಗ ವಿಪರೀತ ಶಖೆ.

ಪದ್ಮಳ ಹೆರಿಗೆಯಾಗಿ ಆಗಲೇ ಒಂದು ತಿಂಗಳು. ಸೀತಮ್ಮ ಯಾವ ಯಾವ ಮದ್ದು ಬೇಕೋ ಅವನ್ನು ಕಾಲಕಾಲಕ್ಕೆ ಮಾಡುತ್ತ, ಪದ್ಮ ತನ್ನ ಮಗಳೇ ಆಗಿದ್ದರೆ ಹೇಗೋ ಹಾಗೆ ಅವಳನ್ನು ನೋಡಿಕೊಂಡಳು. ಪೆರಿಗೆ ಕೆಲಸವನ್ನು ನಾಗಿ ಮಾಡುತ್ತಿದ್ದಳು. ಸೆಟ್ಟಿ ಮುಗಿದಿತ್ತು. ಶೀನಪ್ಪನಿಗೆ ಈಗ ಯಾವ ಕೆಲಸವೂ ಇಲ್ಲ. ತನ್ನ ಪುಸ್ತಕಗಳ ಗಂಟನ್ನು ಬಿಚ್ಚಿ ದಿನವೆಲ್ಲ ಓದುವುದರಲ್ಲೇ ಕಳೆಯುತ್ತಿದ್ದ.

ಮನೆಯಿಂದ ಹೊರಕ್ಕೆ ಶೀನಪ್ಪ ಹೆಚ್ಚಾಗಿ ಹೋಗುತ್ತಿಲ್ಲ. ಹೋದರೆ ಊರ ದೇವಸ್ಥಾನಕ್ಕೆ ಆಗಾಗ ಹೋಗುತಾನೆ. ಹೋಗಿ ಹೊರಗಿನಿಂದಲೇ ದೇವರ ದರ್ಶನ ಮಾಡಿಕೊಂಡು ಮಹಾಬಲೇಶ್ವರನಿಗೆ ತನ್ನ ಆತ್ಮನಿವೇದನ ಮಾಡಿಕೊಂಡು ಬರುತ್ತಿದ್ದ. ದೇವಸ್ಥಾನಕ್ಕೆ ಹೋಗಿ ಬಂದಾಗಲೆಲ್ಲ ಅವನ ಮನಸ್ಸು ಪ್ರಶಾಂತವಾಗಿರುತ್ತಿತ್ತು. ಚಿಂತೆಯ ಮಬ್ಬು ಕಳೆದು ಮನಸ್ಸಿನಲ್ಲಿ ಮತ್ತೆ ಅರುಣೋದಯವಾಗುತ್ತಿತ್ತು.

ಪದ್ಮ ಇಷ್ಟು ಹೊತ್ತಿಗೆ ಆಗಲೇ ಬಹುಮಟ್ಟಿಗೆ ಚೇತರಿಸಿಕೊಂಡಿದ್ದಳು. ಮೊದಲ ಕೆಲವು ದಿನ ಮನಸ್ಸನ್ನು ತಿನ್ನುತ್ತಿದ್ದ ದುಃಖದ ವೇಗ ಈಗ ಕೊಂಚ ಕಡಿಮೆ ಆಗಿತ್ತು. ಬಹಿರಂಗದಲ್ಲಿಯಾದರೂ ಗೆಲುವಾಗಿರುವುದು ಸಾಧ್ಯವಾಗಿತ್ತು. ಅಲ್ಲಿ ದೂರದಲ್ಲಿ ಬಿಟ್ಟು ಬಂದ ಅನಂತನ ಚಿಂತೆ ಮಾತ್ರ ಸದಾ ಕಾಲ ಮನಸ್ಸಿನಲ್ಲಿ ಹೊಗೆಯಾಡುತ್ತಿತ್ತು. ಹಸನ್ಮುಖದ ಮೇಲೆ ಯಾರೂ ಹತ್ತಿರ ಇಲ್ಲದೆ ಇದ್ದಾಗ ಚಿಂತೆಯ ಮೋಡ ಕವಿಯುತ್ತಿತ್ತು. ತಾನು ಈ ಮನೆಯಲ್ಲಿದ್ದು ಮೂರು ಹೊತ್ತೂ ಅಳುತ್ತಿರುವುದು, ವಿಷಣ್ಣ ಮುಖವನ್ನೇ ತೋರಿಸುತ್ತಿರುವುದು ಸರಿಯಲ್ಲ. ಶೀನಪ್ಪನಿಗೆ ಅದರಿಂದ ಬಹಳ ದುಃಖವಾಗುತ್ತದೆ. "ನಾನು ದುಃಖವನ್ನು ತೋರಿಸಿ ಅವರ ಕರುಳಿಗೆ ಕತ್ತರಿ ಆಡಿಸಬಾರದು"

ಎಂದು ಅವಳು ನಿಶ್ಚಯಿಸಿಕೊಂಡಿದ್ದಳು. ಆದರೆ ಇದರಿಂದ ಮನಸ್ಸಿನ ಬೇಗೆ ತಗ್ಗುವುದಿಲ್ಲ. ಇಬ್ಬಗೆ ಬಾಳಿನ ಎರಡು ದೋಣಿಗಳಲ್ಲಿ ಕಾಲಿಟ್ಟು ಅವಳು ಹೊರಟಿದ್ದಾಳೆ. ಯಾವ ಹೊತ್ತಿಗೆ ಜಲಸಮಾಧಿಯೋ ಯಾರು ಬಲ್ಲರು ?

ದಿನದಿನಕ್ಕೆ ಅವಳಿಗೆ ಶ್ರೀನಪ್ಪನ ಮೇಲಿದ್ದ ಗೌರವ ಹೆಚ್ಚುತ್ತಿತ್ತು. ಅವನ ನಗು. ಅವನ ಸಹಾನುಭೂತಿ, ಅವನ ಪ್ರೀತಿ, ತನ್ನ ಸುಖವನ್ನೆಲ್ಲ ಮರೆತು ಯಾವಳೋ ಅನಾಥೆಯ ಸುಖಕ್ಕೋಸ್ಕರ ಚಿಂತಿಸುತ್ತಿರುವ ಅವನ ಉದಾತ್ತ ಚರಿತ್ರೆ - ಇವು ದಿನದಿನಕ್ಕೂ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಿದ್ದವು. ಅವು ಹೆಚ್ಚು ಹೆಚ್ಚು ತಿಳಿದ ಹಾಗೆ ಅವಳ ಮನಸ್ಸು ಸ್ವಲ್ಪ ಸ್ವಲ್ಪವಾಗಿ ಅವಳಿಗೆ ಗೊತ್ತಾಗದ ಹಾಗೆ ಶ್ರೀನಪ್ಪನ ಕಡೆಗೆ ಸೆಳೆಯುತ್ತಿತ್ತು. ಗಂಡನ ನೆನಪೂ ಬರುತ್ತಿತ್ತು. ಆದರೆ ಎಷ್ಟೋ ಪೂರ್ವಜನ್ಮದಲ್ಲಿ ಅನುಭವಿಸಿದ ಒಂದು ಸಾಮಾನ್ಯ ಸಂಬಂಧದಂತೆ ಮಸುಕು ಮಸುಕಾಗಿ ಮನಸ್ಸಿನಲ್ಲಿ ಆವರಿಸಿದ್ದವರು ಇದ್ದರೇ : ಅನಂತರ ಮತ್ತೆ ಶ್ರೀನಪ್ಪ. ಇದನ್ನು ಕಂಡು ಹಲವು ಸಲ ಅವಳಿಗೆ ಹೆದರಿಕೆಯಾಗುತ್ತಿತ್ತು : ತನ್ನ ಮನಸ್ಸಿಗೆ ಏನು ಆಗುತ್ತಿದೆ— ಅಂತ. ಶ್ರೀನಪ್ಪನ ಕಡೆಗೆ ತನ್ನ ಮನಸ್ಸು ಏಕೆ ತುಯ್ಯುತ್ತದೆ. ಇದರ ಕೊನೆ ಹೇಗೆ, ಎಲ್ಲಿ? ಎಂದು ಯೋಚಿಸಿ ಎಷ್ಟೋ ಸಲ ನಡುಗುತ್ತಿದ್ದಳು.

ಆದರೆ— ಶ್ರೀನಪ್ಪನನ್ನು ಕುರಿತು ಯೋಚಿಸುವುದೇ ಒಂದು ಸಂತೋಷ. ಎಷ್ಟು ಬೇಡವೆಂದರೂ ಮನಸ್ಸು ಮತ್ತೆ ಮತ್ತೆ ಆ ಪ್ರಶಾಂತವೂ ಸ್ನೇಹಪರವೂ ಆದ ಮುಖದ ಕಡೆಗೆ ಓಡುತ್ತದೆ. ಶ್ರೀನಪ್ಪನ ಹತ್ತಿರ ಮಾತನಾಡುತ್ತಿರುವಾಗ ಮನಸ್ಸು ಅರಳಿ ರೆಕ್ಕೆ ಬಂದಂತೆ ನರ್ತಿಸುತ್ತದೆ. ಮಾತಿನಲ್ಲಿ ಹಿಂದೆ ಎಂದೂ ಇಲ್ಲದೆ ಇದ್ದ ನಯ ನವುರು, ಆತ್ಮೀಯತೆ, ಸರಸ, ಚಂಚಲತೆ, ಅವಳಿಗೆ ಗೊತ್ತಿಲ್ಲದಂತೆಯೇ ಹಠಾತ್ತಾಗಿ ಪ್ರತಿಬಿಂಬಿಸುತ್ತದೆ. ಶ್ರೀನಪ್ಪನ ಮಾತು ಕೇಳಿದಾಗಲೆಲ್ಲ ಮನಸ್ಸಿಗೆ ಮಿಂಚು ತಟ್ಟಿದಂತೆ ಆಗುತ್ತದೆ. ಹಿಂದೆಂದೂ ಅನುಭವಿಸದೆ ಇದ್ದಂಥ ಒಂದು ಬಗೆಯ ಸೆಳೆತ, ಸಂತೋಷ.

ಇದು ಬಹಳ ಹಿತಕರವಾದ ಅನುಭವ. ಗೂಟಕ್ಕೆ ಕಟ್ಟಿದ ಕರು ಹಚ್ಚ ಹಸುರು ಹುಲ್ಲಿನ ಕಡೆಗೆ ಹಗ್ಗವನ್ನು ಜಗ್ಗುವಂತೆ ಮನಸ್ಸು ಆ ಕಡೆಗೇ ಓಡುತ್ತದೆ. ಆದರೆ ಯಾವುದೂ ಸ್ಪಷ್ಟವಲ್ಲ. ಯಾವ ಭಾವನೆಯೂ ಸ್ಫುಟವಾಗುವುದಿಲ್ಲ. ಮನಸ್ಸಿನಲ್ಲಿ ಮಾತ್ರ ಗೊಂದಲ.

ಮನಸ್ಸಿನ ಕೆಲಸವೇ ಹಾಗೆ. ಮುಕ್ಕಾಲು ಮೂರು ವೀಸಭಾಗ ಗುಪ್ತ

ವಾಗಿಯೋ ನಡೆಯುತ್ತದೆ— ಹೊಟ್ಟೆಯ ಒಳಗಡೆ ಹೊತ್ತಿ ಉರಿಯುತ್ತಿದ್ದರೂ ಹೊರಗೆ ಏನೂ ಕಾಣಿಸದ ಬೆಂಕಿಯ ಹಾಗೆ. ಭುಗ್ಗೆಂದು ಉರಿದಾಗಲೇ ಆ ಬೆಂಕಿಯ ಭೀಕರ ಸ್ವರೂಪ ನಮಗೆ ಅರಿವಾಗುವುದು. ಪದ್ಮಳಿಗೆ ತನ್ನ ಜಾಗ್ರತ ಮನಸ್ಸಿನದು ಮಾತ್ರ ನಿಜವಾದ ಅರಿವು ಗುಪ್ತಮನಸ್ಸಿನ ಬಗ್ಗೆ ಸಂದೇಹ, ಮುಸುಕು ತಿಳಿವು, ಏನೂ ಇಲ್ಲ ಎಂಬ ಹುಸಿ ನಂಬಿಕೆ.

ಶೀನಪ್ಪನ ಮನಸ್ಸಿನಲ್ಲೂ ಇದೇ ರೀತಿಯ ಕಲಸು ಭಾವನೆ. ಪದ್ಮಾ ಎಂದರೆ ಸಾಕು ಅವನ ಮನಸ್ಸಿಗೆ ರೆಕ್ಕೆ ಮೂಡುತ್ತದೆ. ಅವಳೊಡನೆ ಮಾತಾಡುತ್ತಿದ್ದರೆ ಜಗತ್ತೇ ಮರೆಯುತ್ತದೆ. ಅವಳ ಮಾತು ಕೇಳುತ್ತಿದ್ದರೆ ಮಂಜುಳವಾದ ಕೋಕಿಲ ಗಾನವನ್ನು ಕೇಳಿದ ಹಾಗೆ. ಕೂತರೆ, ನಿಂತರೆ ಎಲ್ಲೆಲ್ಲಿ ಹೋದರೂ ಅವಳ ಮುಗ್ಧ ಸುಂದರ ಮುಖ ಕಣ್ಣೆದಿರು ಮೂಡಿ ಬರುತ್ತದೆ. ಅವಳಿಗೆ ಯಾವ ರೀತಿ ಏನು ಸಹಾಯ ಮಾಡಿದರೂ ಮನಸ್ಸಿಗೆ ತೃಪ್ತಿಯಿಲ್ಲ. ಅವಳ ಜೀವನ ಸುಂದರವಾಗಿ ಸಂತೋಷಪೂರ್ಣವಾಗಿ ಆಗಬೇಕೆಂಬ ಆಶೆ ಮನಸ್ಸನ್ನೆಲ್ಲ ಆಳುತ್ತದೆ. ಆಗಾಗ ತನ್ನ ಮನಸ್ಸಿನ ಈ ಪರಿಸ್ಥಿತಿಯ ಅರಿವು ಬಂದಾಗ ಅವನ ಮನಸ್ಸೂ ತಲ್ಲಣಿಸುತ್ತದೆ. ತನ್ನ ಮನಸ್ಸು ಯಾವ ಕಡೆ ಹೋಗುತ್ತಿದೆ ಎಂದು ಹೇಳಲಾರದ ದಿಗಿಲು. ಆದರೂ ಏನೋ ಸಮಾಧಾನ; ಅಯ್ಯೋ ಪಾಪ, ಅನಾಥೆ, ನಿರಾಧಾರೆ, ಗುಣವಂತೆ. ಇಂಥವಳಿಗಲ್ಲದೆ ಇನ್ನಾರಿಗೆ ಸಹಾಯಮಾಡಬೇಕು? ಇನ್ನಾರಲ್ಲಿ ಕನಿಕರ ತೋರಿಸಬೇಕು?

ಪದ್ಮಾವತಿಗೆ ಸೀತಮ್ಮ ತಾಯಿಯಂತೇ ಕಂಡಳು. ಅದೇ ಪ್ರೀತಿ, ಅದೇ ವಿಶ್ವಾಸ; ಅದೇ ಹಿತಚಿಂತನೆ. ಕೆಲಸ ಮುಗಿದ ಕೂಡಲೇ ಸೀತಮ್ಮ ಪದ್ಮಳ ಹತ್ತಿರ ಬಂದು ಕುಳಿತುಕೊಳ್ಳುತ್ತಾಳೆ. ಇಬ್ಬರೂ ಮನಸ್ಸುಬಿಚ್ಚಿ ಮಾತನಾಡುತ್ತಾರೆ. ಪದ್ಮ ತನ್ನ ಕರುಣ ಕಥೆಯನ್ನು ಹೇಳಿದರೆ ಸೀತಮ್ಮ ತನ್ನ ಜೀವನದ ರುದ್ರಕಥೆಯನ್ನು ವಿವರಿಸುತ್ತಾಳೆ. ಮಾತಾಡಲು ವಿಷಯ ಬೇಕಾದಷ್ಟು ಸಿಕ್ಕುತ್ತಿತ್ತು. ತಮ್ಮ ವಿಷಯ ಮುಗಿದರೆ ಇಬ್ಬರಿಗೂ ಸಾಮಾನ್ಯವಾದದ್ದು ಶೀನಪ್ಪನ ವಿಚಾರ. ಅವನ ವಿಷಯವಾಗಿ ಮಾತಾಡುವುದೆಂದರೆ ಇಬ್ಬರಿಗೂ ಎಲ್ಲಿಲ್ಲದ ಉತ್ಸಾಹ. ಪದ್ಮಳಿಗಂತೂ ಶೀನಪ್ಪನನ್ನು ಕುರಿತು ಎಷ್ಟು ಮಾತಾಡಿದರೂ ಸಾಲದು.

ಒಂದು ದಿನ ಸಂಜೆ ಸೀತಮ್ಮ ಪದ್ಮ ಇಬ್ಬರೂ ಮಾತಾಡುತ್ತ ಕುಳಿತಿದ್ದರು. ಶೀನಪ್ಪ ಮನೆಯಲ್ಲಿರಲಿಲ್ಲ. ಎಲ್ಲೋ ಹೊರಗೆ ಹೋಗಿದ್ದ.

" ಸೀತಮ್ಮನವರೇ, ನಿಮ್ಮ ಉಪಕಾರ ನಾನು ಏಳೇಳು ಜನ್ಮಕ್ಕೂ ಮರೆಯಲಾರೆ. ನಾನು ಯಾರೋ. ನೀವು ಯಾರೋ. ನಾನೋ ಭಿಕಾರಿ, ಪರದೇಶಿ. ಆದರೂ ನನ್ನನ್ನು ತಾಯಿಗಿಂತ ಹೆಚ್ಚಾಗಿ ನೋಡಿಕೊಂಡಿರಿ. ಈ ಋಣ ನಾನು ಹೇಗೆ ತೀರಿಸಲಿ ? " ಎಂದಳು ಪದ್ಮಾ.

" ಪದ್ಮಾ, ನೀನು ಈ ರೀತಿ ಮಾತಾಡಬೇಡಮ್ಮ. ನಾನು ಹೆಚ್ಚಿಗೆ ಏನು ಮಾಡಿದೆ ನಿನಗೆ? ನನ್ನ ಮಗಳು ಇದ್ದರೆ ಅವಳಲ್ಲಿ ಇದೇ ರೀತಿ ಪ್ರೀತಿ ತೋರಿಸುತ್ತಿದ್ದೆ. ಅವಳು ಹೋದಳು. ಈಗ ನೀನು ಸಿಕ್ಕಿದೆ. ಇದರಿಂದ ನನಗೆ ಸುಖವಿಲ್ಲ ಅನ್ನುತ್ತೀಯಾ ? ಅದು ತಪ್ಪು. ಇನ್ನೊಬ್ಬರಿಂದ ಸಹಾಯ ಹೊಂದುವುದಕ್ಕೆ ಮಾತ್ರವಲ್ಲ, ಇನ್ನೊಬ್ಬರಿಗೆ ಸಹಾಯ ಮಾಡುವುದಕ್ಕೂ ಪಡೆದು ಬಂದಿರಬೇಕು. "

" ನೀವು ಹಾಗೆ ಹೇಳುವುದು ಸರಿ. ನಿಮ್ಮ ಗುಣವೇ ಅಂಥಾದ್ದು. ಆದರೆ ಈ ಜಗತ್ತಿನಲ್ಲಿ ಎಷ್ಟು ಜನ ನಿಮ್ಮಂಥವರು ಇದ್ದಾರೆ? ಇನ್ನೊಬ್ಬರಿಗೆ ಕನಿಕರ ತೋರಿಸುವುದಿರಲಿ, ಗಾಯಕ್ಕೆ ಉಪ್ಪು ಹಾಕುವವರೇ ಬಹಳವಲ್ಲವೆ?"

" ಅದು ಸರಿ, ಪದ್ಮಾ. ಆದರೆ ಅಂಥವರು ತಿಳಿವಳಿಕೆ ಇಲ್ಲದವರು. ಅವರಿಗಾದರೂ ಅದರಿಂದ ಸುಖವಾಗುತ್ತದೆ ಅಂತ ತಿಳಿದೆಯಾ? ಇನ್ನೊಬ್ಬರಿಗೆ ನೋವು ಮಾಡಿದರೆ ತಮಗೆ ಸುಖವಾಗುತ್ತದೆ ಎಂತ ಅವರಿಗೆ ಭ್ರಮೆ. ಆದರೆ ನಿಜವಾದ ಸುಖ ಸಿಕ್ಕುವುದು ಸುಖ ಕೊಟ್ಟಾಗ."

ಪದ್ಮಾವತಿಗೆ ಈ ಮಾತು ಕೇಳಿ ಆಶ್ಚರ್ಯವಾಯಿತು. ಆದರೂ ಇದು ಸತ್ಯ ಎಂದು ಅನ್ನಿಸದೆ ಇರಲಿಲ್ಲ.

" ನಿಮ್ಮ ಮಾತು ಕೇಳುತ್ತಿದ್ದರೆ ನೀವು ಎಷ್ಟು ಜ್ಞಾನಿಗಳು ಅಂತ ತಿಳಿಯುತ್ತದೆ. ಸುಖ ಕೊಟ್ಟರೆ ಸುಖ ಸಿಕ್ಕುತ್ತದೆ—ಇಲ್ಲವಾದರೆ ಇಲ್ಲ ; ಹೌದಮ್ಮ, ನನಗೂ ಯೋಚನೆಮಾಡಿದರೆ ಈಮಾತು ನಿಜ ಅನ್ನಿಸುತ್ತದೆ." ಎಂದಳು ಪದ್ಮಾ.

" ಇದು ಜ್ಞಾನವಲ್ಲ, ಪದ್ಮಾ, ಇದು ಇಷ್ಟು ವರ್ಷ ಇಲ್ಲಿ ಬದುಕಿದ ಅನುಭವದಿಂದ ನಾನು ಹೇಳುತ್ತಿರುವ ಮಾತು. ನಾನೇನು ಪಂಡಿತಳಲ್ಲ. ಸರಿಯಾಗಿ ಓದುವುದಕ್ಕೂ ನನಗೆ ಬರುವುದಿಲ್ಲ. ಆದರೆ ನಾವು ಜೀವಿಸುತ್ತ ಹೋದ ಹಾಗೆ ಎಷ್ಟೋ ವಿಷಯ ನಮಗೆ ತಿಳಿಯುತ್ತದೆ. ಬಹಳ ಜನ ಅವನ್ನು ಉಪಯೋಗಿಸಿಕೊಳ್ಳದೆ ಕೆಡುತ್ತಾರೆ. "

" ನಿಮ್ಮ ಮಾತೂ ಶೀನಪ್ಪನವರ ಮಾತೂ ಒಂದೇ ತರ. ಅವರೂ

ಹೀಗೇ ಹೇಳುತ್ತಾರೆ."

"ಅವನು ಹೇಳದೆ ಇನ್ಯಾರು ಹೀಗೆ ಹೇಳಬೇಕು? ಪಾರ್ವತಮ್ಮನೇ ಅಥವಾ ಅವನ ಚಿಕ್ಕಪ್ಪನೇ? ಆ ಇಬ್ಬರೂ ಕೂಡಾ ಅರಿಯದ ಜನ. ಅವರಿಗೆ ಶೀನ ಏನು ಯೋಚಿಸುತ್ತಾನೆ ಏನು ಮಾಡುತ್ತಾನೆ ಅಂತ ಅರ್ಥವೇ ಆಗುವುದಿಲ್ಲ. ಅದಕ್ಕೇ ಸುಮ್ಮನೆ ಅವನನ್ನು ದೂಷಿಸುತ್ತಾರೆ."

ಇದನ್ನು ಕೇಳಿ ಪದ್ಮಾ

"ನನಗಾಗಿ ಶೀನಪ್ಪ ಎಷ್ಟು ಕಷ್ಟ ಪಡುತ್ತಿದ್ದಾರೆ! ಎಂಥ ಅಪವಾದಕ್ಕೆ ಸಿಕ್ಕಿಬಿದ್ದರು! ಇದನ್ನೆಲ್ಲ ಯೋಚಿಸಿದಾಗ ನನಗೆ ಈ ಜನ್ಮವೇ ಬೇಡ ಅನ್ನಿಸುತ್ತದಮ್ಮ" ಎಂದಳು.

"ಮತ್ತೆ ಅದೇ ಮಾತು ಹೇಳುತ್ತಿದ್ದೀ ಪದ್ಮಾ. ಈ ರೀತಿ ಮಾಡದೆ ಶೀನ ಒಂದು ಕ್ಷಣವೂ ನೆಮ್ಮದಿಯಿಂದಿರುತ್ತಿರಲಿಲ್ಲ. ಪಾರ್ವತಮ್ಮನಿಗೆ ಶೀನನನ್ನು ಅಡಿಕೊಳ್ಳದಿದ್ದರೇ ನೆಮ್ಮದಿ ಇಲ್ಲ ಎನ್ನಿಸುತ್ತದೆ. ಅದು ಅವರವರ ಜಾಯಮಾನ. ಶೀನ ನೀನು ಅಂತ ಇಷ್ಟು ಮಾಡಿದನೇ?"

"ಇಲ್ಲ, ನನ್ನ ಸ್ಥಿತಿಯಲ್ಲಿರುವ ಯಾರಿಗೇ ಆದರೂ ಅವರು ಇದೇ ರೀತಿ ಸಹಾಯ ಮಾಡುತ್ತಿದ್ದರು. ಆದರೂ ನನ್ನಿಂದ ಇಷ್ಟು ಕಷ್ಟವಾಯಿತಲ್ಲ ಅವರಿಗೆ ಅಂತ ನನ್ನ ಚಿಂತೆ."

"ನಿನಗೆ ಹಾಗೆನ್ನಿಸುವುದು ಸರಿ, ಪದ್ಮಾ. ನಿನ್ನಂಥವಳಿಗೆ ಇಷ್ಟು ಕಷ್ಟ ಬರಬಾರದಾಗಿತ್ತು. ಆದರೆ ಈ ಜಗತ್ತೇ ಹಾಗೆ. ಯಾರಿಗೆ ಕಷ್ಟ ಬರಬಾರದೋ ಅವರಿಗೇ ಕಷ್ಟ ಬರುತ್ತದೆ. ಯಾರಿಗೆ ಶಿಕ್ಷೆ ಆಗಬೇಕೋ ಅವರಿಗೆ ಬಹುಮಾನ ದೊರೆಯುತ್ತದೆ. ಆದರೆ ನಾವು ಈ ರಾಜ್ಯವನ್ನು ಮಾತ್ರವಲ್ಲ ಆ ಇನ್ನೊಂದು ರಾಜ್ಯವನ್ನೂ, ದೇವರ ರಾಜ್ಯವನ್ನೂ ಗಣನೆಗೆ ತಂದುಕೊಳ್ಳಬೇಕು. ಬಹುಶಃ ಇಲ್ಲಿ ಕಷ್ಟಪಟ್ಟವರಿಗೆ ಅಲ್ಲಿ ಸುಖ ಸಿಕ್ಕೀತು. ಈ ರಾಜ್ಯದ ಕಾನೂನೇ ಬೇರೆ; ಆ ರಾಜ್ಯದ್ದೇ ಬೇರೆ. ಇದನ್ನು ಅನೇಕರು ತಿಳಿಯುವುದಿಲ್ಲ. ತಿಳಿದರೂ ಹಾಗೆ ಆಚರಿಸುವುದಿಲ್ಲ. ಹಾಗೆ ಆಚರಿಸಿದವರನ್ನು ಶೂಲಕ್ಕೇರಿಸದೆ ಬಿಡುವುದೂ ಇಲ್ಲ."

"ಅಮ್ಮಾ ನಿಮ್ಮ ಮಾತಿನಿಂದ ಎಷ್ಟು ತಿಳಿವಳಿಕೆ ಬರುತ್ತದೆ ನನಗೆ! ಇಷ್ಟು ತಿಳಿದವರಾದ್ದರಿಂದಲೇ ಇಲ್ಲಿಗೆ ಬಂದು ಈ ಜಾತಿಗೆಟ್ಟವಳ ಸೇವೆ ಮಾಡಲು ಒಪ್ಪಿಕೊಂಡಿರಿ. ಇಲ್ಲವಾದರೆ ಸಮಾಜವನ್ನೆದುರಿಸಿ ಇಲ್ಲಿಗೆ ಬರು

ತ್ತಿರಲಿಲ್ಲ." ಎಂದಳು. ಹೀಗೆ ಹೇಳುವಾಗ ಸೀತಮ್ಮ ತನಗೆ ತೋರಿದ ಪ್ರೀತಿಯನ್ನು ನೆನೆದು ಅವಳ ಕಂಠ ಗದ್ಗದವಾಗಿತ್ತು.

"ಪದ್ಮಾ, ನಾನು ನಿನಗೋಸ್ಕರವಾಗಿ ಖಂಡಿತ ಬರಲಿಲ್ಲ. ನಾನು ಬಂದಿದ್ದು ಶೀನನಿಗಾಗಿ. ಆದರೆ ಇಲ್ಲಿಗೆ ಬಂದ ಮೇಲೆ ನೀನು ನನ್ನ ಮಗಳು ಎಂಬುದು ತಿಳಿಯಿತು" ಎಂದಳು. ಸೀತಮ್ಮನ ಕಂಠವೂ ಕೊಂಚ ಗದ್ಗದವಾಗಿತ್ತು.

ಒಂದಷ್ಟು ಹೊತ್ತು ಇಬ್ಬರೂ ಹಾಗೇ ಮಾತಾಡದೆ ಮೌನವಾಗಿ ಕುಳಿತರು.

ಹೊರಗೆ ಮಳೆ ಸುರಿಯುತ್ತಿತ್ತು. ಚಳಿಗಾಳಿ ಸುಯ್ಯೆಂದು ಬೀಸುತ್ತಿತ್ತು.

"ಶೀನಪ್ಪನವರು ಇನ್ನೂ ಬರಲಿಲ್ಲ. ಮಳೆ ಬಹಳ ಜೋರಾಗಿ ಬಿಟ್ಟಿತಲ್ಲ" ಎಂದಳು ಪದ್ಮಾ.

"ಹೌದು ಎಲ್ಲಿಗೆ ಹೋದನೋ ಏನೋ. ಹೊತ್ತು ಮುಳುಗುತ್ತ ಬಂತು." ಎಂದು ಸೀತಮ್ಮ ಹೇಳುತ್ತಿರುವಾಗಲೇ ಶೀನಪ್ಪ ಮನೆಯೊಳಕ್ಕೆ ಬಂದ.

"ಶೀನಾ, ನಿನಗೆ ನೂರು ವರ್ಷ ಆಯುಷ್ಯ. ನಿನ್ನ ಮಾತೇ ಆಡುತ್ತಿದ್ದೆವು" ಎಂದಳು ಸೀತಮ್ಮ.

"ಅತ್ತೆ, ನೂರು ವರ್ಷ ಬೇಡ, ದಮ್ಮಯ್ಯ. ಅದನ್ನು ಸ್ವಲ್ಪ ಕಡಿಮೆ ಮಾಡು" ಎಂದು ನಗುತ್ತ "ನಿಮಗೇನು ಬೇರೆ ಕೆಲಸ? ಬೆಚ್ಚಗೆ ಕುಳಿತುಕೊಂಡು ಯಾರನ್ನಾದರೂ ಆಡಿಕೊಳ್ಳುವುದು" ಎಂದು ಹೇಳಿದ.

"ಇಲ್ಲ, ಶೀನಪ್ಪನವರೇ, ನಾವು ನಿಮ್ಮನ್ನು ಆಡಿಕೊಳ್ಳುತ್ತಿರಲಿಲ್ಲ. ನಿಮ್ಮ ಗುಣಗಾನ ಮಾಡುತ್ತಿದ್ದೆವು, ಅಲ್ಲವೇ ಅತ್ತೆ?" ಎಂದಳು ಪದ್ಮ.

"ಅವಕ್ಕೆ ಸಾಕ್ಷಿ ಏನೂ ಬೇಡ, ಪದ್ಮಾ. ನಾನು ಹೇಳಿದ್ದೂ ಅದನ್ನೇ" ಎಂದ ಶೀನಪ್ಪ. "ನನ್ನನ್ನು ಹೀಗೆ ಹೇಳುವುದಕ್ಕೆ ಅತ್ತೆ, ನೀನು ಪದ್ಮಾವತಿಯಿಂದ ಕಲಿತೆ ಅಂತ ಕಾಣುತ್ತೆ. ಅವಳಿಗೆ ಬೇರೆ ಕೆಲಸವೇ ಇಲ್ಲ."

"ಇದೇ ಸರಿ, ಶೀನಾ" ಎಂದಳು ಸೀತಮ್ಮ. "ನಾವು ಒಬ್ಬರನ್ನೊಬ್ಬರು ಹೊಗಳದೆ ಹೋದರೆ ನಮ್ಮನ್ನು ಇನ್ನಾರು ಹೊಗಳಬೇಕು? ಬಯ್ಯುವುದಕ್ಕಿಂತ ಹೊಗಳುವುದೇ ಮೇಲು, ಅಲ್ಲವೆ?" ಎಂದು ಕೇಳಿದಳು.

"ಹಾಗಾದರೆ ನಾನು ಬಂದು ಕುಳಿತುಕೊಳ್ಳುತ್ತೇನೆ. ಒಬ್ಬರನ್ನೊಬ್ಬರು

ಹೊಗಳುವ ಕೆಲಸವನ್ನು ಶುರುಮಾಡಿಬಿಡೋಣ—ಆಗಬಹುದೆ ?" ಎಂದ.

"ಅಪ್ಪಾ ಶೀನಾ ; ಇವತ್ತಿಗೆ ಇಷ್ಟು ಸಾಕು. ಅಡಿಗೆ ಏನೂ ಮಾಡುವುದು ಬೇಡವೆ ? ಮಾತಿನಿಂದ ಹೊಟ್ಟೆಯಂತೂ ತುಂಬುವುದಿಲ್ಲವಲ್ಲ. ನಾಳೆ ಮಧ್ಯಾಹ್ನ ಊಟವಾದ ಮೇಲೆ ಆ ಕೆಲಸ ಮಾಡುವ. ಸರಿಯೆ ?" ಎಂದಳು ಸೀತಮ್ಮ ನಗುತ್ತ.

"ಸರಿ, ಅತ್ತೆ. ನಾನು ಮತ್ತೇನು ಹೇಳಲಿ ? ನೀನು ದೊಡ್ಡವಳು ನಿನ್ನ ಮಾತನ್ನು ಹೇಗೆ ಮೀರಲಿ ? ಹಾಗೇ ಆಗಲಿ" ಎಂದ ಶೀನಪ್ಪ.

ಸೀತಮ್ಮ ಅಡಿಗೆ ಮನೆಗೆ ನಡೆದಳು.

ಪದ್ಮಾ ಒಂದು ಕ್ಷಣ ಶೀನಪ್ಪನ ಮುಖದ ಕಡೆಗೇ ನೋಡುತ್ತ ಕುಳಿತ್ತಳು. ಅದೇ ಸಮಯಕ್ಕೆ ಶೀನಪ್ಪನೂ ಅವಳ ಮುಖದ ಕಡೆಗೆ ದೃಷ್ಟಿ ಹಾರಿಸಿದ.

ಕಣ್ಣು ಕಣ್ಣನ್ನು ಸಂಧಿಸಿತು.

ಇಬ್ಬರಿಗೂ ಏನೋ ಅಪೂರ್ವ ಸಂತೋಷ. ಆದರೆ ಗಾಬರಿ. ಏನೋ ಮಾತಾಡಬೇಕೆಂದಿದ್ದ ಶೀನಪ್ಪ ಹಾಗೇ ಎದ್ದು ಹೊರಟು ಹೋದ.

ಪದ್ಮಾ ಡವಗುಟ್ಟುತ್ತಿದ್ದ ಎದೆಯನ್ನು ಕೈಯಿಂದ ಅದುಮಿ ಹಿಡಿದು ನಿಟ್ಟುಸಿರು ಬಿಟ್ಟಳು.

## ೧೬

ಒಂದು ತಿಂಗಳು, ಎರಡು ತಿಂಗಳು, ಮೂರು ತಿಂಗಳು.

ಕಾಲ ಮುಂದು ಮುಂದಕ್ಕೆ ಓಡಿತು. ಮಳೆ ನಿಂತು ಆಕಾಶ ನಿರ್ಮಲವಾಯಿತು; ಗಣೇಶನ ಹಬ್ಬ, ದಸರೆ ಬಂತು. ಆಕಾಶದಲ್ಲಿ ಬೆಳ್ಳಿ ಮೋಡಗಳು ಆಡತೊಡಗಿದುವು. ಸುತ್ತುಮುತ್ತಲೂ ಹಚ್ಚ ಹಸುರು. ಕೆರೆ ಬಾವಿಗಳ ತುಂಬ ನೀರು. ಭತ್ತದ ತೆನೆ ಮಾಗುತ್ತಿತ್ತು. ಗದ್ದೆ ಗದ್ದೆಗಳಲ್ಲಿ ಭತ್ತದ ಪೈರು ಹಳದಿ ಬಣ್ಣದ ತನ್ನ ಐಶ್ವರ್ಯವನ್ನು ಪ್ರದರ್ಶಿಸುತ್ತಿತ್ತು.

ಮಳೆಗಾಲದ ಸೆರೆಮನೆಯ ವಾಸ ಮುಗಿಯಿತು. ಮೋಡ ತೊಲಗಿದಂತೆಯೇ ಜನದ ಮನಸ್ಸಿನ ಮೋಡವೂ ಕಳೆಯಿತು. ಆಹಾರವಿಲ್ಲದೆ ಕಷ್ಟಪಟ್ಟದ್ದು, ಸಾಲ ಸೋಲಮಾಡಿದ್ದು, ಪಡಬಾರದ ಪಾಡು ಪಟ್ಟದ್ದು, ಧಣಿಗಳ ಮನೆಗೆ ಅಲೆದು ಅಂಗಲಾಚಿದ್ದು—ಎಲ್ಲವೂ ಮರೆಯಿತು. ಕೊಯ್ಲಿನ ಕಾಲ ಹತ್ತಿರ ಹತ್ತಿರವಾಗುತ್ತಿತ್ತು. ಎಲ್ಲರಿಗೂ ಅದೊಂದೇ ಯೋಚನೆ. ಕೆಲವರು ಆಗಲೇ ಕೊಯ್ಲಿಗೂ ಕೈಹಚ್ಚಿಬಿಟ್ಟಿದ್ದರು. ಹೊಸ ಜೀವನಕ್ಕೆ ಸಿದ್ಧರಾಗುತ್ತಿರುವರೋ ಎನ್ನುವ ಹಾಗೆ ಜನದಲ್ಲಿ ಏನೋ ಉತ್ಸಾಹ, ಕಾತರ, ಹೊಸ ನಂಬಿಕೆ ಸುತ್ತುಮುತ್ತಲಿನ ಪ್ರಕೃತಿಯ ಈ ರಮ್ಯತೆಯ ಪ್ರಭಾವ ಪ್ರತಿಯೊಂದು ಮನಸ್ಸಿನ ಮೇಲೂ ಬಿದ್ದಿತ್ತು. ಎಲ್ಲರಲ್ಲೂ ವಿವರಿಸಲಾರದ ಒಂದು ಹೊಸ ಹುರುಪು. ನಾಳದಲ್ಲಿ ರಕ್ತಾಭಿಸರಣದ ವೇಗ ಕೊಂಚ ಹೆಚ್ಚಿದ ಹಾಗೆ. ಶ್ವಾಸೋಚ್ಛ್ವಾಸ ಕ್ರಿಯೆಯಲ್ಲಿ ಏನೋ, ಒಂದು ಹೊಸ ಲಯ ಕಂಡ ಹಾಗೆ. ಹಿತ್ತಲಲ್ಲಿ ಎಲ್ಲ ಗಿಡಮರಗಳು ಮಳೆಯಲ್ಲಿ ಮಿಂದು ಶುದ್ಧವಾಗಿ ಬೇಸಗೆಯ ಬಾಯಾರಿಕೆಯೆಲ್ಲ ಕಳೆದು ಹಸುರು ಹುಸುರಾಗಿ ಕಂಗೊಳಿಸುತ್ತದೆ. ತೆಂಗಿನಮರದ ತುಂಬ ಮಿಳ್ಳಿಗಳು. ಬಾಳೆಗೆ ಮೈಯೆಲ್ಲ ಎಲೆಗಳೇ. ಬಾವಿಗಳಲ್ಲಿ ಕೈಗೆ ಸಿಲುಕುವಷ್ಟು ನೀರು. ಕೆರೆ ತುಂಬಿ ತುಳುಕುತ್ತದೆ. ತಾವರೆ ಹೂವು ಅರಳಿ ಸುತ್ತಲೂ ಸುಗಂಧವನ್ನು ಬೀರುತ್ತವೆ. ದುಂಬಿಗಳು ಹೂವಿನ ಸುತ್ತ ಝೇಂಕರಿಸುತ್ತ ಪರಿಭ್ರಮಿಸುತ್ತವೆ.

ಮೋಡಗಳ ಮರೆಯಲ್ಲೇ ಅಡಗಿದ್ದ ಸೂರ್ಯ ಈಗ ನಿರಭ್ರ ಆಕಾಶದಲ್ಲಿ ತನ್ನ ವೈಭವವನ್ನು ಮೆರೆಯುತ್ತಾನೆ. ಸೂರ್ಯನ ಬಿಸಿಲಿನಲ್ಲಿ ಹಳದಿಯ ಪೈರು ಹೊಳೆಯುತ್ತದೆ. ಆಕಾಶದಲ್ಲಿ ಬೆಳ್ಳಿಮೋಡದ ಹಾಯಿದೋಣಿ ತೇಲು

ತ್ತದೆ. ರಾತ್ರಿಯಾದರೆ ನಕ್ಷತ್ರಗಳ ಲಕ್ಷದೀಪೋತ್ಸವ.

ಪದ್ಮಳಿಗೆ ಇಷ್ಟು ಹೊತ್ತಿಗೆ ಹೋದ ತ್ರಾಣವೆಲ್ಲ ಮತ್ತೆ ಮೈಗೂಡಿತ್ತು. ದೇಹದಲ್ಲಿ ಹೊಸ ಲವಲವಿಕೆ. ಮನಸ್ಸಿನ ಮೇಲೆ ರಾಶಿಬಿದ್ದಿದ್ದ ಹಿಮವೆಲ್ಲ ಕರಗಿ ಹೊಸ ಗಂಗಾಪ್ರವಾಹ ಹರಿಯುತ್ತಿರುವ ಹಾಗೆ. ಏನೋ ಔದಾಸೀನ್ಯ, ಏನೋ ಕಾತರ. ಹಳೆಯ ನೆನಪುಗಳ ಮೀಸಲು ಚೌಕಟ್ಟಿನೊಳಗೆ ವರ್ತಮಾನ ಜೀವನದ ನವ್ಯ ಚಿತ್ರ ಕಣ್ಣು ಸೆಳೆಯುವಂತೆ ಲಕಲಕಿಸುತ್ತದೆ. ಅವಳಿಗೆ ಮನೆಯೊಳಗೆ ಎಷ್ಟು ಓಡಾಡಿದರೂ ಸಾಲದು; ಎಷ್ಟು ಕೆಲಸ ಮಾಡಿದರೂ ಸಾಲದು. ಹೊಸ ಚುರುಕು ; ಅದರ ಜೊತೆಗೇ ಮನಸ್ಸಿನಾಳದಲ್ಲಿ ಏನೋ ಒಂದು ತರದ ಆಲಸ್ಯ, ಉದಾಸಭಾವ. ಏನೋ ಕನಸಿನಲ್ಲಿ ನಡೆಯುತ್ತಿರುವ ಹಾಗೆ. ಹೆಜ್ಜೆ ಹಗುರ. ಗಾಳಿಯಲ್ಲಿ ತೇಲಿದ ಹಾಗೆ.

ಯೋಚಿಸುತ್ತಾಳೆ. ಹಳೆಯ ಚಿಂತೆಗಳ ಕಂತೆಕಂತೆಯೇ ಬಿಚ್ಚಿಕೊಳ್ಳುತ್ತದೆ. ಆದರೆ ಈಗ ಏಕೋ ಅವು ತನ್ನಿಂದ ಭಿನ್ನವಾಗಿರುವ ಹಾಗೆ ಅವಳಿಗೆ ತೋರುತ್ತದೆ. ಈ ಚಿಂತೆಗಳೆಲ್ಲ ತನ್ನವು ಸರಿ.— ಆದರೆ ಅವು ಈಗ ತೆಗೆದಿಟ್ಟ ಹಳೆಬಟ್ಟೆಗಳ ಹಾಗೆ ಕಾಣುತ್ತವೆ. ಅನಂತ ನೆನಪೂ ಆಗಾಗ ದಳ್ಳುರಿಯುತ್ತದೆ. ಆದರೆ ಈ ಕಾಲದಲ್ಲಿ ಈ ವಿಶೇಷ ಸನ್ನಿವೇಶದಲ್ಲಿ ಆ ನೆನಪೂ ಕೂಡಾ ಮೊದಲಿನಷ್ಟು ಪ್ರಖರವಲ್ಲ; ಮೋಡದ ಮರೆಯ ಸೂರ್ಯನ ಬಿಸಿಲಿನಂತೆ. ವರ್ತಮಾನದ ವರ್ಷದೊಳಗೇ ಮನಸ್ಸು ಸುತ್ತುತ್ತದೆ. ಆ ಪರಿಭ್ರಮಣದ ವೇಗದಲ್ಲಿ ಗತಕಾಲ ಮತ್ತೆ ಬರುವ ಕಾಲ ಎರಡೂ ಮಾಸಿ ಮಸುಳಿ ಹೋಗುತ್ತವೆ.

ಎರಡು ತಿಂಗಳ ಮಟ್ಟಿಗೆ ಅಂತ ಬಂದ ಸೀತಮ್ಮ ಮೂರು ತಿಂಗಳ ಕಾಲ ಶೀನಪ್ಪನ ಮನೆಯಲ್ಲೇ ನಿಂತಳು. ಅವಳಿಗೂ ಪದ್ಮಳಿಗೂ ನಡುವೆ ವಿಚಿತ್ರವಾದ ಬಾಂಧವ್ಯ ತಿಳಿಯದಂತೆಯೇ ಬೆಳೆಯಿತು. ಎಷ್ಟೋ ಸಲ ಸೀತಮ್ಮನಿಗೆ ತನ್ನ ಊರಿನ ನೆನಪು ಬರುತ್ತದೆ. ತಿಮ್ಮ ಮನೆಯನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದಾನೋ— ಇಲ್ಲವೋ. ಕಪಿಲೆ ಹಸು ಹೇಗಿದೆಯೊ ಆ ಸಣ್ಣ ಕರು ಬಡವಾಗಿದೆಯೋ ಏನೋ. ಅವಕ್ಕೆ ಸರಿಯಾಗಿ ಮೇವು ನೀರು ದೊರೆಯುತ್ತದೋ ಇಲ್ಲವೋ. ಗದ್ದೆ ಪೈರು ಹೇಗೆ ಆಗಿದೆಯೋ. ಕಾಡ ಹಂದಿಗಳ ಗಲಾಟೆ ಈ ವರ್ಷ ಉಂಟೋ ಇಲ್ಲವೋ. ಹೀಗೆ ತನ್ನ ಮನೆ ಗದ್ದೆಗಳ ಕುರಿತು ಹಲವಾರು ಚಿಂತೆ. ಈ ಮಧ್ಯೆ ತಿಮ್ಮ ಒಂದು ಸಲ ಬಂದು

ಸೀತಮ್ಮನನ್ನು ನೋಡಿ ಹೋಗಿದ್ದ. ಎಲ್ಲ ಸರಿಯಾಗಿದೆ ಎಂತಲೂ ಹೇಳಿದ್ದ. ಆದರೂ ಚಿಂತೆ ತಪ್ಪುವುದಿಲ್ಲ. ಈ ಮನೆಯಲ್ಲಿ ಎಷ್ಟು ಹಿತವಾಗಿದ್ದರೂ ತನ್ನ ಮನೆಗೆ ಹೋಗಬೇಕೆಂದು ಅಂತರಂಗದ ತವಕ.

ಎರಡು ತಿಂಗಳಾಗುತ್ತಲೇ ಸೀತಮ್ಮ ತಾನು ಹೋಗುತ್ತೇನೆಂದು ರಾಗ ತೆಗೆದಳು. ಶೀನಪ್ಪ ಅದಕ್ಕೆ ಒಪ್ಪಲೊಲ್ಲ. "ನೀನು ಬಂದದ್ದು ಎಲ್ಲೋ ಒಂದು ಸಲ. ಇನ್ನೂ ಎರಡು ತಿಂಗಳು ಇಲ್ಲೇ ಇರಬೇಕು. ಅಂಥದ್ದೇನು ಕೊಳ್ಳೆ ಹೋಗುವುದು ಅಲ್ಲಿ ?" ಎಂದ. ಪದ್ಮಾವತಿಯಂತೂ ಕಣ್ಣಲ್ಲಿ ನೀರು ತಂದು ಬೇಡಿಕೊಂಡಳು. "ಈಗ ನೀವು ಹೊರಟು ಹೋದರೆ ನನ್ನಾಣೆ" ಎಂದಳು.

ಸೀತಮ್ಮನಿಗೆ ಒಂದು ಬಗೆಯ ಉಭಯ ಸಂಕಟವೇ ಆಯಿತು. ಹೋಗಬೇಕು ಅಂತ ಒಂದು ಕಡೆ; ಇನ್ನೂ ಸ್ವಲ್ಪ ಇದ್ದುಬಿಡುವಾ ಅಂತ ಇನ್ನೊಂದು ಕಡೆ. ಆದರೆ ತನ್ನ ಕೊನೆಯ ಮಾತನ್ನು ಹೇಳಿಬಿಟ್ಟಳು: "ಆಗಲಿ ಇನ್ನೊಂದು ತಿಂಗಳು ಇರುತ್ತೇನೆ. ಕೊಯ್ಲಿಗೆ ನಾನು ಅಲ್ಲಿ ಇರಲೇಬೇಕು; ಮತ್ತೆ ನೀವು ಹಾಗೆ ಹೀಗೆ ಅನ್ನಬಾರದು." ಈ ಮಾತಿಗೆ ಶೀನಪ್ಪ ಪದ್ಮಾ ಇಬ್ಬರೂ ಒಪ್ಪಬೇಕಾಯಿತು.

ಈ ನಡುವೆ ಸೀತಮ್ಮನೇ ಬಂಧುಗಳನ್ನೆಲ್ಲ ಹೋಗಿ ನೋಡಿ ಬಂದಳು. ನಾರಣಪ್ಪ ಒಬ್ಬನೇ ಅವಳನ್ನು ನೋಡಲು ಬಂದದ್ದು. ಒಂದು ದಿನ ನಾರಣಪ್ಪ ಶೀನಪ್ಪನ ಮನೆಗೆ ಬಂದು ತಂಗಿಯನ್ನು ಮಾತಾಡಿಸಿಕೊಂಡು ಹೋದ. ಪಾರ್ವತಮ್ಮನಾಗಲೀ, ರಾಮಚಂದ್ರನಾಗಲೀ ಅವನ ಮನೆಯವರಾಗಲೀ ಆ ಕಡೆ ಸುಳಿಯಲೇ ಇಲ್ಲ. ಸೀತಮ್ಮನಿಗೆ ಹೋಗಿ ಒಂದೆರಡು ಗಳಿಗೆ ಮಾತಾಡಿ ಬಂದಳು. "ಊಟ ಮಾಡಿಕೊಂಡು ಹೋಗು" ಅಂತ ಕೂಡಾ ಯಾರೂ ಹೇಳಲಿಲ್ಲ. ಪಾರ್ವತಮ್ಮ ಒಂದೆರಡು ಕೊಂಕು ಮಾತು ಆಡದೆ ಇರಲಿಲ್ಲ. ಆದರೆ ಸೀತಮ್ಮ ಅದನ್ನು ಮನಸ್ಸಿಗೆ ಹಾಕಿಕೊಳ್ಳಲಿಲ್ಲ.

ಕೊನೆಗೂ ಸೀತಮ್ಮ ಹೊರಡುವ ದಿನ ಬಂತು. ಶೀನಪ್ಪ, ಪದ್ಮಾ ಇಬ್ಬರಿಗೂ ಅತ್ಯಂತ ವೇದನೆಯಾಯಿತು. ತನ್ನ ಹೃದಯದ ಒಂದು ಭಾಗವೇ ಕತ್ತರಿಸಿ ಹೋಗುತ್ತದೆ ಎನ್ನುವಷ್ಟು ದುಃಖ ಪದ್ಮಳಿಗೆ. ಆ ದಿನ ಅವಳಿಗೆ ಮಾತೇ ಹೊರಡದು.

"ನೀವು ಹೊರಟು ಹೋಗುತ್ತೀರಿ—ಈಗ. ನಾನು ಮತ್ತೆ ಅನಾಥೆ

ಯಾವೆ. ಇದೇ ನನ್ನ ಹಣೆಯ ಬರಹ. ”

“ ಹಾಗೆ ಹೇಳಬೇಡ, ಮಗೂ. ನಿನಗೆ ದೇವರು ಒಳ್ಳೆಯದು ಮಾಡು ತ್ತಾನೆ. ಇದ್ದ ಕಾಲ ಇದ್ದ ಹಾಗೇ ಇರುವುದಿಲ್ಲ, ಪದ್ಮಾ. ನಾನು ಕೊಯ್ಲಾದ ಮೇಲೆ ಮತ್ತೆ ಬರುತ್ತೇನೆ” ಎಂದು ಸೀತಮ್ಮ ಕಣ್ಣೊರಸಿಕೊಂಡಳು.

ಶೀನಪ್ಪನಿಗೂ ಅವಳು ಹೋಗುತ್ತಾಳೆ ಎಂದು ಬಹಳ ದುಃಖ. ಆದರೆ ಏನು ಮಾಡಲಿ ?

“ ಅತ್ತೆ, ನೀನು ಬಂದೆ; ಹೋಗುತ್ತೀ ಈಗ. ನಿನ್ನ ಉಪಕಾರ ಮಾತ್ರ ನಾನು ಎಂದೆಂದಿಗೂ ಮರೆಯುವುದಿಲ್ಲ. ನೀನೊಬ್ಬಳಾದರೂ ನನಗೆ ಬಂಧು ಬಳಗ ಇಲ್ಲ ಅನ್ನಿಸಲಿಲ್ಲ. ನಾನು ಹೆಚ್ಚಿಗೆ ಏನು ಹೇಳಲಿ ? ಮತ್ತೆ, ಬಾ. ಅಲ್ಲಿ ಒಬ್ಬಳೇ ಏನು ಮಾಡುತ್ತೀ? ” ಎಂದ.

“ ಸರಿ, ಶೀನಾ. ನಿನ್ನ ಹತ್ತಿರ ಬರದೆ ನಾನು ಇನ್ನೆಲ್ಲಿಗೆ ಹೋಗಲಿ ? ನೀನೂ ಆಗಾಗ ಬರುತ್ತಿರು ” ಎಂದು ಹೊರಟು ಹೋದಳು. ಶೀನಪ್ಪ, ಪದ್ಮಾ ಇಬ್ಬರೂ ಅಷ್ಟು ದೂರ ಹೋಗಿ ಅವಳನ್ನು ಕಳಿಸಿಕೊಟ್ಟು ಬಂದರು.

ಸೀತಮ್ಮ ಹೊರಟು ಹೋದ ಮೇಲೆ ಇಬ್ಬರಿಗೂ ತಮ್ಮ ತಮ್ಮ ಬಾಳಿನಲ್ಲಿ ಏನೋ ಅರಕೆ ಕಂಡುಬಂತು. ತಮ್ಮ ಕೈಗೆ ಸಿಕ್ಕಿದ ಒಂದು ದೊಡ್ಡ ನಿಧಿಯೇ ಕಳೆದು ಹೋದ ಹಾಗೆ ಆಯಿತು. ಸೀತಮ್ಮ ತನ್ನ ವಾತ್ಸಲ್ಯದಿಂದ ಇಡೀ ಮನೆಯನ್ನೇ ಪವಿತ್ರಗೊಳಿಸಿ ಹೋಗಿದ್ದಳು. ಮಾಡುವ ಕೆಲಸದಲ್ಲಿ ಶ್ರದ್ಧೆ: ತನ್ನ ಹತ್ತಿರ ಇರುವವರಲ್ಲಿ ಪ್ರೀತಿ— ಇದಕ್ಕಿಂತ ಮಿಗಿಲಾದ್ದು ಮನುಷ್ಯಜೀವನದಲ್ಲಿ ಇನ್ನೇನು ಇದೆ ? ಇಷ್ಟಿದ್ದರೆ ಇನ್ನೇನು ಬೇಕು.?

“ ನಿಮ್ಮ ಅತ್ತೆ, ನೀವು — ಇಬ್ಬರೂ ಒಂದೇ. ನೀವು ಈ ಲೋಕದ ಜನರಲ್ಲ” ಎಂದಳು ಪದ್ಮಾ .

“ ಆದರೂ ಇಲ್ಲೇ ಇದ್ದೇವಲ್ಲ ! ಆಶ್ಚರ್ಯ ” ಎಂದ ಶೀನಪ್ಪ, ನಗುತ್ತ.

“ ಅದೇ ನನಗೂ ಆಶ್ಚರ್ಯ. ನೀವು ಹೇಗೆ ಈ ಲೋಕದಲ್ಲಿದ್ದೀರಿ ಅಂತ. ”

“ ಆದರೆ ಮನುಷ್ಯರು ಮನುಷ್ಯರೇ ಪದ್ಮಾ ; ಅವರು ದೇವರಾಗುವುದು ಸಾಧ್ಯವಿಲ್ಲ. ಒಂದಲ್ಲ ಒಂದು ಸಲ ನಾವೂ ಬೀಳುವವರೇ. ಆದರೆ ಒಟ್ಟಿನಲ್ಲಿ ಮನುಷ್ಯತ್ವದಿಂದ ಚ್ಯುತಿ ಹೊಂದಬಾರದೆಂದು ನಾವು ಪ್ರಯತ್ನಿಸುತ್ತೇವೆ. ಅನೇಕ ಜನ ಈ ರೀತಿ ಪ್ರಯತ್ನ ಮಾಡುತ್ತಾರೆ. ಎಲ್ಲೋ ಕೆಲವರು ಮಾತ್ರ

ಅಂಥ ಪ್ರಯತ್ನವನ್ನೇ ಮಾಡುವುದಿಲ್ಲ. ಒಳ್ಳೆಯವರು ಕೆಟ್ಟವರು —ಈ ಇಬ್ಬರ ನಡುವೆ ಇರುವ ವ್ಯತ್ಯಾಸ ಇದೇ." ಎಂದು ಶೀನಪ್ಪ ಹೇಳಲು ಪದ್ಮಾ ಕೊಂಚ ಹೊತ್ತು ಸುಮ್ಮನಿದ್ದು

" ನಿಮ್ಮ ಅತ್ತೆ ಹೊರಟು ಹೋದ ಮೇಲೆ ಮನಸ್ಸು ಒಂದು ತರ ಆಗುತ್ತದೆ. ನಮ್ಮ ತಾಯಿ ಹೋದಾಗಲೂ ಇದಕ್ಕಿಂತ ಹೆಚ್ಚು ವ್ಯಥೆ ಆಗಲಿಲ್ಲ." ಎಂದಳು.

" ಹೌದು, ನಮ್ಮ ಅತ್ತೆ ಮಹಾ ತಾಯಿ. ಅವಳ ಗುಣವೇ ಅಂಥದು. ಅವಳು ಇಲ್ಲಿ ಇದ್ದಾಗ ನನಗೂ ನನ್ನ ತಾಯಿಯೇ ಇದ್ದಿದ್ದರೆ ಹೇಗೋ ಹಾಗೇ ಆಯಿತು. ಅವಳು ಯಾವಾಗಲೂ ಹಾಗೇಯೇ" ಎಂದು ನಿಟ್ಟುಸಿರು ಬಿಟ್ಟ. " ಇಲ್ಲಿ ಇರು ಎಂದರೆ ಅವಳು ಇರುವುದಿಲ್ಲ. ಹೊರಟೇ ಬಿಟ್ಟಳು." ಎಂದ.

ಆಮೇಲೆ ಯಾರೂ ಮಾತಾಡಲಿಲ್ಲ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಸೀತಮ್ಮ ಬಾರದೆ ಹೋಗಿದ್ದರೆ ಎಷ್ಟು ತೊಂದರೆಯಾಗುತ್ತಿತ್ತು, ಎಂದು ಶೀನಪ್ಪ ಯೋಚಿಸುತ್ತಿದ್ದ. ಅವನಿಗೆ ಮತ್ತೆ ಶಾರದೆಯ ನೆನಪು ಬಂತು. ಆದರೆ ಅವಳ ಮುಖದ ನೆನಪು ಬಂದ ಕೂಡಲೇ ಅದರ ಮೇಲೆ ಪದ್ಮಳ ಮುಖ ಮೂಡಿ ಬಂದು ನಸು ನಕ್ಕ ಹಾಗೆ ಆಯಿತು. ಶಾರದೆಯನ್ನು ನೆನಸಿದಾಗ ಈ ಮೊದಲು ಮನಸ್ಸಿನಲ್ಲಿ ಆಗುತ್ತಿದ್ದ ಕಸಿವಿಸಿ ಈಗ ಆಗಲಿಲ್ಲ. ಅದರ ಬದಲಾಗಿ ಪದ್ಮಳ ಕಡೆಗೆ ಮನಸ್ಸು ಓಡಿತು.

ಪದ್ಮಳೂ ಯೋಚಿಸುತ್ತಿದ್ದಳು. ಅಲ್ಲಿಗೆ ಅವಳು ಬಂದು ಆಗಲೇ ಸುಮಾರು ನಾಲ್ಕು ತಿಂಗಳು. ಅಷ್ಟರಲ್ಲೇ ಇದು ತನ್ನ ಮನೆಯೇ ಎಂದು ಅವಳಿಗೆ ಅನ್ನಿಸತೊಡಗಿತ್ತು. ಸೀತಮ್ಮ ಮತ್ತು ಶೀನಪ್ಪನ ಸಹವಾಸದಲ್ಲಿ ಅವಳು ಜೀವನದಲ್ಲೇ ಹೊಸ ಬೆಳಕು ಕಂಡಳು. ಸೌಜನ್ಯ, ಔದಾರ್ಯ, ಉನ್ನತ ಮನಸ್ಸು– ಇವುಗಳ ಸ್ಪಷ್ಟವಾದ ಚಿತ್ರ ಅವಳ ಮನಸ್ಸಿನಲ್ಲಿ ಮೂಡಿತು. ಸೀತಮ್ಮನ ವಾತ್ಸಲ್ಯವನ್ನು ಯೋಚಿಸುತ್ತ ಯೋಚಿಸುತ್ತ ಅವಳ ಮನಸ್ಸು ಶೀನಪ್ಪನಲ್ಲಿ ನಟ್ಟಿತು. ಆಕಾಶವನ್ನೆಲ್ಲ, ಸುತ್ತಿ ಕೊನೆಗೂ ತನ್ನ ಗೂಡಿಗೇ ಬರುವ ಹಕ್ಕಿಯಂತೆ ಉಳಿದೆಲ್ಲ ನೆನಪುಗಳು ಮನಸ್ಸಿನಿಂದ ಮರೆಯಾದುವು. ಕೊನೆಗೆ ಅಲ್ಲಿ ಉಳಿದದ್ದು ಶೀನಪ್ಪನ ಪ್ರಶಾಂತ ಗಂಭೀರ ಮುಖ; ಅವನ ದೇವ ಸಮಾನವೆನ್ನಿಸುವ ಗುಣ.

## ೧೭

ಇನ್ನೂ ಒಂದು ತಿಂಗಳು. ಪದ್ಮಾ ಹೆತ್ತು ಆಗಲೇ ಐದು ತಿಂಗಳು. ಮೈ ತುಂಬಿಕೊಂಡು ಅಂಗಾಂಗದಲ್ಲಿ ಹೊಸ ಕಾಂತಿ ಸೂಸುತ್ತಿತ್ತು. ಗರ್ಭಿಣಿಯಾಗಿ ಬಂದಾಗ ಇದ್ದ ಆ ಪೇಲವತೆ ಈಗಿಲ್ಲ. ಮುಖದಲ್ಲಿ ರಕ್ತ ತುಳುಕುತ್ತಿತ್ತು. ಕಣ್ಣುಗಳಲ್ಲಿ ಕಳೆ ಚಿಮ್ಮುತ್ತಿತ್ತು. ನಗೆಯಲ್ಲಿ ಲಾಸ್ಯದ ಭಂಗಿ. ಅವಳ ಸುತ್ತಲೂ ಸಹಜ ಸೌಂದರ್ಯದ ಮಿಂಚಿನ ವಾತಾವರಣ.

ಎಲ್ಲ ಕೆಲಸಗಳನ್ನೂ ಈಗ ತಾನೇ ಮಾಡುವಳು. ಎಷ್ಟು ಕೆಲಸಮಾಡಿದರೂ ಆಯಾಸವೆನ್ನಿಸದು. ರುಚಿರುಚಿಯಾದ ಅಡಿಗೆ. ಮನೆಯಲ್ಲಿ ಓರಣ ಅಚ್ಚುಗಟ್ಟು. ಶೀನಪ್ಪನಿಗೆ ಮನೆಯೊಳಗೆ ಯಾವ ಕೆಲಸವನ್ನೂ ಮಾಡಬಿಡಳು.

ಅವನಿಗೆ ಓದುವುದು, ಆಗಾಗ ಏನಾದರೂ ಬರೆಯುವುದು—ಇಷ್ಟೇ ಕೆಲಸ.

ಈಗ ಪದ್ಮಾ ಮನೆಯಲ್ಲಿ ಹೊಸಬಳಲ್ಲ; ಅಪರಿಚಿತಳಲ್ಲ. ಅವಳಿಗೆ ಅದು ತನ್ನ ಮನೆಯ ಹಾಗೇ ಆಗಿದೆ. ಯಾವ ಸಾಮಾನು ಎಲ್ಲಿ ಇರಬೇಕು. ಯಾವ ಕೆಲಸ ಯಾವಾಗ ಆಗಬೇಕು— ಇವೆಲ್ಲವನ್ನೂ ಪದ್ಮಾ ಯೋಚಿಸಿ ನಿರ್ಧರಿಸಿದ್ದಳು. ಎಲ್ಲವೂ ಸುಸೂತ್ರವಾಗಿ ನಡೆಯುತ್ತದೆ. ಶೀನಪ್ಪನಿಗೂ ಈಗ ನಿರಂತರವಾದ ಬಿಡುವು. ಅಡಿಗೆ ಮಾಡುವ ಫಜೀತಿ ಇಲ್ಲ. ಹೊತ್ತು ಹೊತ್ತಿಗೆ ಸರಿಯಾಗಿ ಎಲ್ಲವೂ ಅಣಿಯಾಗುತ್ತದೆ. ಆಗಾಗ ಅಂಗಡಿಯಿಂದ ಸಾಮಾನು ತಂದರೆ ಸರಿ.

ಊರಿನ ಜನ ಏನೇನೋ ಹೇಳುತ್ತಲೇ ಇದ್ದರು. ಆಡಿಕೊಳ್ಳುತ್ತಿದ್ದರು. ಆದರೆ ಎಷ್ಟು ದಿನ ಅಂತ ಈ ಒಂದು ವಿಷಯವನ್ನೇ ಹೇಳುವುದು ? ವಿಷಯ ಕೊಂಚ ಹಳತಾದಂತೆಯೇ ಆಗಿತ್ತು . ಈಗೀಗ ಈ ಮಾತು ಬಂದರೂ ಅದರಲ್ಲಿ ಈ ಮೊದಲಿನ ಉದ್ವೇಗವಿಲ್ಲ ದ್ವೇಷವಿಲ್ಲ, ಆಸಕ್ತಿಯೂ ಇಲ್ಲ.

ಆದರೆ ಕೆಲವರಿಗೆ ಮಾತ್ರ ಒಂದು ವಿಷಯದ ಕೊನೆ ಕಂಡ ಹೊರತು ತೃಪ್ತಿಯಿಲ್ಲ. ಅಂಥವರಲ್ಲಿ ಪಾರ್ವತಮ್ಮ ಮುಖ್ಯಸ್ಥೆ. "ಅಲ್ಲ, ನಿಮ್ಮ ಶೀನ ಅಂಥವನಲ್ಲ, ಎನ್ನುತ್ತೀರಿ. ಆದರೆ ಅವಳಿಗೆ ಹೆರಿಗೆ ಆಗಿ ಆಗಲೇ ಐದು ತಿಂಗಳು. ಇನ್ನಾದರೂ ಅವಳನ್ನು ತನ್ನ ಗಂಡನ ಹತ್ತಿರಕ್ಕೆ ಕಳಿಸಿಬಿಡಬಾರದೆ ? ಯಾಕೆ ಕಳಿಸುವುದಿಲ್ಲ, ಹೇಳಿ. ಅದಕ್ಕೇ ನಾನು ಹೇಳಿದ್ದು, ಈಗ ಹೇಳು

ತ್ತಿರುವುದು– ಆದರಲ್ಲಿ ಏನೋ ಇದೆ ಅಂತ. ಇಲ್ಲವಾದರೆ ನನಗೆ ಶೀನನ ಮೇಲೆ ಏನು ದ್ವೇಷವಪ್ಪಾ; ಅವನು ನನಗೆ ಏನು ಮಾಡಿದ್ದಾನೆ ?" ಎಂದು ಅವಳು ನಾರಣಪ್ಪನಿಗೆ ಹೇಳುತ್ತಾಳೆ... ನಾರಣಪ್ಪ ಯಥಾ ಪ್ರಕಾರ ಆ ಮಾತಿಗೆ ಏನೂ ಉತ್ತರ ಹೇಳುವುದಿಲ್ಲ.

ಶೀನಪ್ಪ ಮತ್ತು ಪದ್ಮಾ ಒಬ್ಬರಿಗೊಬ್ಬರು ಆಗಲೇ ಹೊಂದಿಕೊಂಡಿದ್ದರು. ಪದ್ಮಾ ಈ ಮನೆಯಲ್ಲಿ ಯಾವ ಕಾಲದಿಂದಲೋ ನೆಲಸಿದವಳು; ಅವಳು ತನ್ನ ಜೀವನದ ಒಂದು ಅಂಗ ಎಂದೇ ಶೀನಪ್ಪನಿಗೆ ಅನ್ನಿಸಿತ್ತು. ಅವಳು ಇಲ್ಲದ ಮನೆಯನ್ನು ಊಹಿಸುವುದೇ ಈಗ ಅವನಿಗೆ ಕಷ್ಟವಾಗತೊಡಗಿತ್ತು. ಅವಳ ಮಾತು ಕೇಳದ, ಅವಳ ಮೆಲ್ನಗೆ ಕುಲುಕದ, ಅವಳ ಒಳಿಗಳ ಸದ್ದು ಮೊಳಗದ ಮನೆ ಮನೆಯೇ ಎಂದು ಎಷ್ಟೋ ಸಲ ಅವನಿಗೆ ಅನ್ನಿಸುತ್ತಿತ್ತು.

ಆದರೆ ಕೊನೆಗೂ ಪದ್ಮಾ ಯಾರು ? ಶೀನಪ್ಪ ಯಾರು ? ಅವಳು ಜೀವನ ಸಮುದ್ರದಲ್ಲಿ ಎತ್ತಣಿಂದಲೋ ತೇಲಿ ಬಂದವಳು. ಶೀನಪ್ಪನ ಈ ಮನೆಯ ದ್ವೀಪದಲ್ಲಿ ಹಡಗೊಡೆದು ಬಿದ್ದವಳು. ಅವಳು ಇಂದಲ್ಲ ನಾಳೆ ಅಲ್ಲಿಂದ ಹೋಗತಕ್ಕವಳು. ಅವಳ ಗಂಡ ಎಲ್ಲೋ ಇದ್ದಾನೆ. ಬಂದೇ ಬರುತ್ತಾನೆ. ಆಗ ?

ಈ ಯೋಚನೆಯಿಂದ ಮನಸ್ಸು ವಿಹ್ವಲವಾಗುತ್ತಿತ್ತು ಶೀನಪ್ಪನಿಗೆ. "ಅವಳು ಇಲ್ಲೇ ಇರಲಿ; ಇದೇ ರೀತಿ ನನ್ನ ಮನೆಯನ್ನು ಬೆಳಗುತ್ತಾ ಇರಬಾರದೆ ?" ಅಂತ ಅವನ ಮನಸ್ಸು ದಿನಕ್ಕೆ ನೂರು ಬಾರಿ ಹುಚ್ಚೆದ್ದು ಕೂಗುತ್ತದೆ. ಆದರೆ ವಿವೇಕ ಬಂದು ಅವನನ್ನು ಎಚ್ಚರಿಸುತ್ತದೆ. ಅವನು ತನ್ನ ಸುಖವನ್ನು ಮಾತ್ರ ನೋಡ ಕೂಡದು. ಅವಳ ಇಷ್ಟ ಹೇಗೋ ಅವಳ ಮನಸ್ಸು ಹೇಗೋ ಹಾಗೆ ಆಗಬೇಕು. ಇಷ್ಟು ಅಪವಾದ ಸಹಿಸಿದವಳು ಅವಳು; ಪಡಬಾರದ ಪಾಡು ಪಟ್ಟಳು. ತನ್ನ ಗಂಡನ ಪಾದ ಸೇರಿದರೇ ಅವಳಿಗೆ ಕ್ಷೇಮ. ಅದಕ್ಕೆ ವಿರೋಧವಾಗಿ ತಾನು ಯೋಚಿಸುವುದೂ ಪಾಪ ಎಂದು ಶೀನಪ್ಪ ತನ್ನ ಮನಸ್ಸಿಗೆ ಬುದ್ಧಿ ಹೇಳುತ್ತಿದ್ದ.

ಆದರೆ ಪದ್ಮಾ ಎಷ್ಟು ಒಳ್ಳೆಯವಳು- ಆ ಮುಖದಲ್ಲಿ ಎಷ್ಟು ಸೌಜನ್ಯ ಎಷ್ಟು ಶಾಂತಿ ? ಮಾತಿನಲ್ಲಿ, ಕಥೆಯಲ್ಲಿ, ನಡತೆಯಲ್ಲಿ ಎಂಥ ಆತ್ಮೀಯತೆ. ತನ್ನ ಹೃದಯದ ನೋವು ಎಷ್ಟೇ ಇದ್ದರೂ ಒಂದು ಕ್ಷಣ ಕೂಡಾ ಅಳು ಮೋರೆ

ಯನ್ನು ತೋರಿ ಮನೆಯಲ್ಲೆಲ್ಲ ಕತ್ತಲನ್ನು ತುಂಬುವುದಿಲ್ಲ. ನಗುತ್ತಾಳೆ, ಮಾತನಾಡುತ್ತಾಳೆ. ತನ್ನ ಸಹಜ ವರ್ತನೆಯಿಂದ, ತನ್ನ ಮುಗ್ಧಭಾವದಿಂದ ಮನೆಯಲ್ಲೆಲ್ಲ ಸರಳ ಸೌಂದರ್ಯವನ್ನು ತುಂಬುತ್ತಾಳೆ.

ಶೀನಪ್ಪನ ಮನಸ್ಸಲೆಲ್ಲಾ ಈಗ ಪದ್ಮಾ. ಬೇಡ ಬೇಡವೆಂದರೂ ಮನಸ್ಸು ಅವಳನ್ನೇ ಕುರಿತು ಸದಾ ಚಿಂತಿಸುತ್ತದೆ. ತನ್ನ ಜೀವನದಲ್ಲಿ ಅವನು ಬಯಸುತ್ತಿದ್ದ ಎಲ್ಲ ಚೆಲುವೂ, ಎಲ್ಲ ಸದ್ಗುಣವೂ, ಎಲ್ಲ ಸ್ವಭಾವಗಳೂ ಅವಳಲ್ಲಿ ಒಂದುಗೂಡಿರುವಂತೆ ತೋರುತ್ತಿತ್ತು. ಕನಸಿನಲ್ಲಿ ಬಯಸಿದ್ದು ಇಲ್ಲಿ ಮೈವೆತ್ತ ಹಾಗೆ. ಮನೆಯಿಲ್ಲದವನು ತೊಳಲಿ ತೊಳಲಿ ಕೊನೆಗೆ ಒಂದು ಹಕ್ಕೆಯನ್ನು ಕಂಡುಕೊಂಡ ಹಾಗೆ.

ಇದು ಕೈಗೆಟುಕದ ವಸ್ತು ಅಂತ ಶೀನಪ್ಪ ಬಲ್ಲ. ಆದರೆ ಬಹುಶಃ ಅಂಥದನ್ನೇ ಮನಸ್ಸು ಕೋರುತ್ತದೋ ಏನೋ. ಅವಳು ತನ್ನವಳಾಗಬೇಕೆಂಬ ಆಶೆ ಹೀಗೆ ಪ್ರಬಲಿಸುತ್ತಿರುವುದನ್ನು ಕಂಡು ಶೀನಪ್ಪ ಹೆದರುತ್ತಾನೆ. ದೇವಸ್ಥಾನಕ್ಕೆ ಹೋಗಿ ದೇವರ ಮುಂದೆ ತನ್ನ ದೌರ್ಬಲ್ಯವನ್ನು ತೋಡಿಕೊಂಡು 'ಈ ಅಗ್ನಿಪರೀಕ್ಷೆಯಿಂದ ಪಾರಾಗುವ ಶಕ್ತಿಯನ್ನು ಕೊಡು, ದೇವರೇ!' ಎಂದು ಬೇಡಿಕೊಳ್ಳುತ್ತಾನೆ.

ಮೊದಲಿನ ಹಾಗೆ ಹತ್ತಿರ ಹತ್ತಿರ ಕುಳಿತು ಮನಸ್ಸು ಬಿಚ್ಚಿ ಮಾತಾಡುವುದಕ್ಕೆ ಈಗ ಇಬ್ಬರಿಗೂ ಹೆದರಿಕೆ. ಏನೋ ಸಂಕೋಚ ಶೀನಪ್ಪನಿಗೆ ಏನೋ ನಾಚಿಕೆ ಪದ್ಮಳಿಗೆ. ಮಾತಾಡುತ್ತಿದ್ದರೆ ಇಬ್ಬರಿಗೂ ಮಾತಿನಲ್ಲಿ ಗಮನವಿಲ್ಲ. ಮನಸ್ಸು ಎಲ್ಲೆಲ್ಲೋ ಸುತ್ತುತ್ತದೆ. ಮಾತು ಅರ್ಧದಲ್ಲಿ ನಿಲ್ಲುತ್ತದೆ. ತಾವು ಒಬ್ಬರನ್ನೊಬ್ಬರು ಎವೆ ಇಕ್ಕದೆ ನೋಡುತ್ತಾ ಕುಳಿತಿದ್ದೇವೆ ಎಂಬುದು ಅರಿವಾದಾಗ ಇಬ್ಬರೂ ಬೆಚ್ಚಿ ಬೀಳುತ್ತಾರೆ. ತತ್‌ಕ್ಷಣ ಎದ್ದು ಅಲ್ಲಿಂದ ಹೊರಟು ಹೋಗುತ್ತಾರೆ. ಆದರೆ ಮತ್ತೆ ಮತ್ತೆ ದೃಷ್ಟಿ ಕೂಡುತ್ತದೆ. ತುಟಿ ಅದುರುತ್ತದೆ. ಎದೆಯನ್ನು ಯಾರೋ ಅದುಮಿ ಹಿಂಡಿದಂತೆ ಆಗುತ್ತದೆ.

ಕಾರ್ತಿಕ ಮಾಸದ ಜ್ವಲಂತ ರಾತ್ರಿ ಮನಸಿನಲ್ಲೂ ನಕ್ಷತ್ರಗಳನ್ನು ಬಿತ್ತುತ್ತದೆ. ಚಂದ್ರನ ಬೆಳ್ಳಿನೊರೆಯ ಬೆಳಕಿನಲ್ಲಿ ಮನಸ್ಸು ಮಿಂದು ಪುಳಕಿತವಾಗುತ್ತದೆ. ಬಿಳಿಮೋಡಗಳ ಜೊತೆಗೆ ಮನಸ್ಸು ಹಾಯಾಗಿ ಸುತ್ತುತ್ತದೆ. ಚಂದ್ರನ ಕಾಂತಿ, ನಕ್ಷತ್ರಗಳ ಮಿನುಗು– ರಕ್ತನಾಳಗಳಲ್ಲೂ ಸೇರಿ ಅಲ್ಲೂ ತೆರೆ ನೊರೆಯ ವಿಲಾವನ್ನು ತೋರುತ್ತವೆ.

ಮಳೆಗಾಲದಲ್ಲಿ ನೆನೆದು ಕೆಸರು ಕೆಸರಾಗಿದ್ದ ಅಂಗಳ ಈಗ ಗಾರಾಗಿದೆ. ರಾತ್ರಿಯಾದ ಕೂಡಲೇ ಅಂಗಳದಲ್ಲಿಟ್ಟ ಮಂಚದ ಮೇಲೆ ಹೋಗಿ ಶೀನಪ್ಪ ಕುಳಿತುಕೊಂಡು ಯೋಚಿಸುತ್ತಾನೆ. ಅಲ್ಲೇ ಹಾಗೇ ಹಾಯಾಗಿ ಮಲಗಿ ಆಕಾಶದಲ್ಲೇ ದೃಷ್ಟಿಯನ್ನು ನೆಡುತ್ತಾನೆ. ಗಾಳಿ ಸೊಗಸಾಗಿ ಹಿತಕರವಾಗಿ ಬೀಸುತ್ತದೆ. ತೆಂಗಿನ ಗರಿಗಳು ಗಾಳಿಯಲ್ಲಿ ಮರ್ಮರಿಸುತ್ತವೆ ಒಳಗೆ ಅಡಿಗೆಮನೆಯಲ್ಲಿ ಪಾತ್ರೆಗಳ ಒಳೆಗಳ ಸದ್ದು. ಏನೋ ಸಣ್ಣಗೆ ಬಾಯೊಳಗೇ ಹಾಡಿಕೊಳ್ಳುತ್ತಿದ್ದ ಪದಗಳು. ದೇವರ ಭಜನೆಯ ಸ್ವರ ಗಾಳಿಯಲ್ಲಿ ದೂರದ ಸುಗಂಧದಂತೆ ತೇಲಿ ಬರುತ್ತದೆ ಶೀನಪ್ಪನ ಮನಸ್ಸು ಆರ್ದ್ರವಾಗುತ್ತದೆ. ಮನಸ್ಸಿನ ಶಕ್ತಿಯೆಲ್ಲ ಕಳೆದು ತಾನು ಸಣ್ಣ ಮಗು ಆಗುತ್ತಿರುವ ಹಾಗೆ ಅನ್ನಿಸುತ್ತದೆ. ತಾಯಿಯ ಆಸೆ, ಮೃದುವಾದ ತೋಳುಗಳ ಅಪ್ಪುಗೆಯ ಆಸೆ ಧಗ ಧಗ ಎಂದು ಹೊತ್ತಿ ಉರಿಯುತ್ತದೆ. ಕಣ್ಣು ಮಂಜಾಗುತ್ತದೆ. ಒಂದು ನಿಮಿಷ. ಮತ್ತೆ ಮನಸ್ಸು ಶಾಂತವಾಗಿ ಆಕಾಶಯಾನದಲ್ಲಿ ತಲ್ಲೀನನಾದ ಚಂದ್ರನನ್ನು ನೋಡುತ್ತಾನೆ. ಮೋಡದ ಹಿಂದೆ ಹೋಗಿ ಮುಖ ಮರೆಸಿ ಮತ್ತೆ ಹೊರಬಿದ್ದು ನರ್ತಿಸುತ್ತ, ಮೋಡಗಳನ್ನು ದೋಣಿ ಮಾಡಿ ತೇಲುತ್ತ, ಮತ್ತೆ ಮೋಡದ ಪರದೆಯಲ್ಲಿ ಮರೆಯಾಗುತ್ತ ಕಣ್ಣುಮುಚ್ಚಾಲೆ ಆಡುವ ಮುಸ್ನುಗ್ಗುವ ಚಂದ್ರನಲ್ಲಿ ಮನಸ್ಸು ರತವಾಗುತ್ತದೆ; ಹಾಗೆಯೇ ಮನಸ್ಸು ಯೋಚನೆಯಲ್ಲೂ ಮುಳುಗುತ್ತದೆ.

ಎಷ್ಟು ವಿಶಾಲವಾದ ಆಕಾಶ. ಅದಕ್ಕೆ ಅನಂತ ಎನ್ನುವುದು ಸರಿ. ಎಲ್ಲಿ ಮೊದಲು, ಕೊನೆ? ಆಕಾಶವನ್ನು ಹೀಗೆ ನೋಡುತ್ತ ಮಲಗಿದರೆ ನಮ್ಮ ಮನಸ್ಸೂ ವಿಸ್ತಾರವಾದಂತೆ ಅನ್ನಿಸುವುದು ಏಕೆ? ಯಾವ ಮೋಡಿಯಿದೆ ಆಕಾಶದಲ್ಲಿ? ಆಕಾಶವನ್ನು ನೋಡುತ್ತಿದ್ದರೆ ಜಾತಿ ಮತ ಕುಲ—ಈ ಬಂಧನಗಳೆಲ್ಲ ಎಷ್ಟು ಅಲ್ಪ ಎನ್ನಿಸುತ್ತವೆ! ಆದರೆ ನಮಗೆ ಈ ಅಲ್ಪ ವಸ್ತುಗಳೇ ಬಹು ಮಹತ್ವದ್ದಾಗಿ ಕಾಣಿಸುತ್ತದೆ. ಆದರೆ ನಿಜವಾಗಿ ನೋಡಿದರೆ ಮನುಷ್ಯತ್ವವೊಂದಲ್ಲದೆ ಇನ್ನು ಯಾವುದನ್ನು ನಾವು ಗಣಿಸಬೇಕು—ಮನುಷ್ಯರಲ್ಲಿ? ಒಬ್ಬನಿಗೂ ಇನ್ನೊಬ್ಬನಿಗೂ ಇರುವ ವ್ಯತ್ಯಾಸವಾದರೂ ಎಷ್ಟು ಅಲ್ಪ! ಆದರೂ ನಾವು ಇಲ್ಲಿ ಯಾವ ಯಾವುದೋ ಗೊಂದಲದಲ್ಲಿ ತೊಡಗುತ್ತೇವೆ. ಸಣ್ಣ ಸಣ್ಣದಕ್ಕೇ ನಮ್ಮ ಸತ್ವವನ್ನೆಲ್ಲ ಬಲಿಗೊಡುತ್ತೇವೆ. ದೊಡ್ಡದನ್ನು ಕಾಣುವುದಿಲ್ಲ; ದೊಡ್ಡದನ್ನು ಕುರಿತು ಚಿಂತಿಸುವುದಿಲ್ಲ; ಕನಸು ಕಾಣ

ತ್ತಿಲ್ಲ. ಅದನ್ನು ಮಾಡುತ್ತೇನೆ, ಇದನ್ನು ಸಾಧಿಸಿಯೇ ತೀರುತ್ತೇನೆನ್ನುವ ಜಂಭ. ಎಲ್ಲಿಂದಲೋ ಒಂದು ಹುಲ್ಲು ಕಡ್ಡಿ ಆಡುತ್ತದೆ ಜಂಭದ ಪರ್ವತ ಕುಸಿದು ಬೀಳುತ್ತದೆ.

ಅಲ್ಲಿ ಅಡಿಗೆ ಮನೆಯಲ್ಲಿ ಪದ್ಮಾ. ಅವಳಿಗೂ ಯೋಚನೆ. ತನ್ನ ಮನಸ್ಸೇಕೆ ಹೀಗೆ ಮಂಕಾಗಿದೆ ಎಂದು ಆಶ್ಚರ್ಯ ಪಡುತ್ತಾಳೆ. ಬುದ್ಧಿ ಓಡುವುದೇ ಇಲ್ಲ. ಮನಸ್ಸಿನಲ್ಲೆಲ್ಲ ಮೃದುವಾದ ಮಧುರವಾದ ಆಲಸ್ಯ. ಏಕೋ ಏನೋ ತನ್ನ ಜೀವನ ಈಗ ತಾನೇ ಆರಂಭವಾಗುತ್ತಿದೆ ಎಂಬ ಭಾವನೆ. ಭೂತಕಾಲವೆಲ್ಲ ಕನಸಿನ ಹಾಗೆ, ಕೆಟ್ಟ ಕನಸಿನ ಹಾಗೆ ಮನಸ್ಸಿನ ತಳದಲ್ಲಿ ಹೂತು ಹೋಗಿದೆ ಎಂಬ ಹಾಗೆ. ಆ ಕನಸಿನ ಕತ್ತಲಲ್ಲಿ ಒಂದೇ ಒಂದು ಉಜ್ವಲ ಮಣಿ ಬೆಳಗುತ್ತದೆ— ಇದು ಅವಳ ಮಗ— ಅನಂತ. ಅನಂತನನ್ನು ಕುರಿತು ತಾನು ಶೀನಪ್ಪನವರಿಗೆ ಹೇಳಬೇಕಾಗಿತ್ತು, ಏಕೆ ಹೇಳಲಿಲ್ಲ? ಯಾವ ಮೃತ್ಯು ಬಂದು ಆಗ ನನ್ನ ಗಂಟಲನ್ನು ಒತ್ತಿತ್ತು ಎಂದು ಈಗ ದಿನವೂ ಹಳಹಳಿಸುತ್ತಾಳೆ ಪ್ರತಿ ದಿನವೂ ಈ ಮಾತನ್ನು ಹೇಳಿಬಿಡಬೇಕೆಂದು ನಿಶ್ಚಯಿತ್ತಾಳೆ. ಶೀನಪ್ಪನೊಡನೆ ಮಾತನಾಡುತ್ತಿದ್ದಾಗಲೆಲ್ಲಾ ಈ ಒಂದು ವಿಷಯವನ್ನು ಹೇಳಿಬಿಡಬೇಕೆಂದು. ಮನಸ್ಸು ಗಟ್ಟಿ ಮಾಡುತ್ತಾಳೆ. ಮಾತು ಗಂಟಲ ತನಕ ಬಂದದ್ದು ನಾಲಗೆ ತುದಿಯ ವರೆಗೆ ಏರಿದ್ದು ಫಟಕ್ಕನೆ ಕೆಳಕ್ಕೆ ಬಿದ್ದು ಹೋಗುತ್ತದೆ. ಇಂದೂ ಅದನ್ನೇ ಕುರಿತು ಯೋಚಿಸುತ್ತಾಳೆ; ಶೀನಪ್ಪನ ಮುಖ, ಆ ಮುಖದ ಪ್ರಸನ್ನತೆ ಸೌಜನ್ಯ ಸರಳತೆಗಳನ್ನು ಕಂಡಾಗ ತಾನು ಸುಳ್ಳು ಹೇಳಿದೆ ಅಂತ ಹೇಳುವುದು ಅವಳಿಗೆ ಅಸಾಧ್ಯವಾಗುತ್ತಿತ್ತು.

ಈಗಲೋ ಶೀನಪ್ಪನೊಡನೆ ಮಾತಾಡಲೂ ಹೆದರಿಕೆ. ತನ್ನ ಮನಸ್ಸಿನಲ್ಲಿ ಏನೇನೋ ಆಗುತ್ತಿದೆ ಅಂತ ಮಾತ್ರ ಅವಳು ಬಲ್ಲಳು. ಅದು ಏನು ಅಂತ ಹುಡುಕಿ ಹಿಡಿಯಲು ಹೆದರಿಕೆ, ಆಲಸ್ಯ. ಏನಿದು ಯಾವ ತಿರುಗಣೆ ಮಡುವಿನಲ್ಲಿ ಸಿಕ್ಕಿದೆ ನಾನು ಎಂದು ಎಷ್ಟೋ ಸಲ ಕೆಲಸದ ಮಧ್ಯೆ ಹಾಗೆ ಶೂನ್ಯ ದೃಷ್ಟಿಯಿಂದ ನೋಡುತ್ತ ಕುಳಿತಿರುತ್ತಾಳೆ. ಮರವು, ಆಲಸ್ಯ, ಪರವಶತೆ.

ಶೀನಪ್ಪನ ಕಡೆಗೇ ಮನಸ್ಸು. ಆ ಕಡೆ ಹೋಗಬೇಡ ಎಂದು ಎಷ್ಟು ಹೇಳಿದರೂ ಕೇಳಿಸುವುದಿಲ್ಲ. ಅನಂತನ ಚಿಂತೆಯನ್ನು ಮೆಟ್ಟಿನಿಂತ ಈ ಹೊಸ ಚಿಂತೆಗೆ ಅವಳು ಪರವಶಳಾಗುತ್ತಾಳೆ. ಹಗಲು, ಇರುಳು, ಬೆಳಗು, ಸಂಜೆ. ಒಂದೇ ಚಿಂತೆ. ಯೋಚನೆ. 'ಅಯ್ಯೋ ದೇವರೇ, ಇದು ಏನಾಗುತ್ತದೆ

ನನ್ನಲ್ಲಿ ?" ಎಂದು ತಿಳಿಯದೆ ನಿಸ್ತಬ್ಧವಾಗಿ ಮರುಗುತ್ತಾಳೆ.

ಮತ್ತೆ ಮತ್ತೆ ಅವಳ ಕಣ್ಣು ತನ್ನ ದೇಹದ ಕಡೆಗೆ ಹೊರಳುತ್ತದೆ. ತುಂಬು ಮೈಯ ಸೊಬಗನ್ನು ನೋಡಬೇಕೆನ್ನಿಸುತ್ತದೆ. ಎಷ್ಟೋ ತಿಂಗಳುಗಳ ಕಾಲ ಹಣೆಗಿಟ್ಟುಕೊಳ್ಳುವಾಗ ಅಲ್ಲದೆ ಕನ್ನಡಿಯನ್ನು ನೋಡದೆ ಇದ್ದ ಅವಳು ಈಗ ದಿನಕ್ಕೆ ಎಷ್ಟೋ ಸಲ ಕನ್ನಡಿಯಲ್ಲಿ ತನ್ನನ್ನು ತಾನು ನೋಡಿ ಮುಗುಳು ನಗುತ್ತಾಳೆ. ತಲೆಯನ್ನು ಚೆನ್ನಾಗಿ ಬಾಚಿ ಹೆರಳು ಹಾಕಿಕೊಳ್ಳುತ್ತಾಳೆ. ಹಿತ್ತಲಲ್ಲಿ ತಿರುಗಿ ಗೋರಟೆ, ಪಾರಿಜಾತ, ಮಲ್ಲಿಗೆ ಹೂವುಗಳನ್ನು ತಂದು ಮಾಲೆ ಕಟ್ಟಿ ಮುಡಿಯುತ್ತಾಳೆ. ಎಷ್ಟೋ ಸಲ ಇದು ಯಾರಿಗಾಗಿ ಈ ಶೃಂಗಾರ ಎಂದು ಹೂ ದಂಡೆಯನ್ನು ಹರಿದೆಸೆಯೋಣ ಎನ್ನಿಸುತ್ತದೆ. ಆದರೆ ಮರು ಕ್ಷಣವೇ ಶೀನಪ್ಪನ ನೆನಪು ಮನಸ್ಸಿಗೆ ನುಗ್ಗಿ ಬಂದು ಹೂ ದಂಡೆಯನ್ನು ಮೆಲ್ಲನೆ ನೇವರಿಸುತ್ತಾಳೆ. ಮುಡಿದು ನಸು ನಗುತ್ತಾಳೆ.

ಅಡಿಗೆ ಮನೆಯಲ್ಲಿ ಅಡಿಗೆಯೆಲ್ಲ ಮುಗಿಯಿತು. ಇನ್ನೇನು ಮಾಡಬೇಕು ಸೌಟಿನಲ್ಲಿ ಒಗ್ಗರಣೆಗಿಟ್ಟು ಹಾಗೇ ಒಲೆಯ ಮುಂದೆ ಕುಳಿತಳು. ಮನಸ್ಸು ಎತ್ತಲೆತ್ತಲೋ ಅಲೆಯುತ್ತಿತ್ತು. ಆ ಬೆಂಕಿಯ ಜ್ವಾಲೆಯೊಳಗಿನಿಂದ ಶೀನಪ್ಪನ ಮುಖ ಮೂಡಿ ಬಂದು ನಸುನಗುತ್ತಿತ್ತು ಮೈ ಪುಳಕಿತ ಪದ್ಮಳಿಗೆ. ಒಗ್ಗರಣೆ ಸೀದುಹೋದಾಗಲೇ ಮೈಅರಿವು ಬಂದದ್ದು. "ಸರಿ. ಎಲ್ಲ ಕೆಲಸವೂ ಮುಗಿಯಿತು. ಇನ್ನು ? "

ಅವಳಿಗೆ ಅರಿವಿಲ್ಲದಂತೆಯೇ ಅವಳು ಅಡಿಗೆ ಮನೆಯನ್ನು ಬಿಟ್ಟು ಚಾವಡಿಗೆ ಬಂದಿದ್ದಳು. ಹಾಗೆಯೇ ಅಲ್ಲಿಂದ ಕೆಳಗಿಳಿದು ಅಂಗಳಕ್ಕೆ ಬಂದಳು. ಮೋಟೆಕಂಭದ ಹತ್ತಿರದ ಮಂಚದ ಮೇಲೆ ಶೀನಪ್ಪ ಒರಗಿಕೊಂಡು ಆಕಾಶವನ್ನೇ ನೋಡುತ್ತಿದ್ದ. ಪದ್ಮ ತಾನೂ ಆಕಾಶದ ಕಡೆಗೆ ನೋಡಿದಳು. ಶುಭ್ರವಾದ ಆಕಾಶ, ಅಲ್ಲೊಂದು ಇಲ್ಲೊಂದು ಬೆಳ್ಳಿ ಮೋಡ. ನಕ್ಷತ್ರಗಳು ; ಚಂದ್ರ, ರಾತ್ರಿ ಶಾಂತವಾಗಿತ್ತು. ಗಾಳಿ ಸುಖವಾಗಿ ಬೀಸುತ್ತಿತ್ತು. ಅವಳ ಮುಂಗುರುಳು ಗಾಳಿಗೆ ಕೆದರಿ ಮುಖದ ಮೇಲೆ ತುಂಟಾಟವಾಡಿತು. ಅವಳ ಮನಸ್ಸಿಗೆ ಏನೋ ಮಾದಕತೆ ಬಂದು ತುಂಬಿದಂತಾಯಿತು. ತಲೆ ಕೊಂಚ ಸುತ್ತುತ್ತಿರುವ ಹಾಗೆ. ತನ್ನ ದೇಹದ ಮೇಲೆ ತನಗೆ ಏನೂ ಸ್ವಾಧೀನವಿಲ್ಲದಿರುವ ಹಾಗೆ ; ತನ್ನ ದೇಹದಿಂದ ತಾನು ಬೇರೆಯಾಗಿ ಸಾಕ್ಷಿಭೂತಳಾಗಿ ದೇಹವ್ಯಾಪಾರವನ್ನು ಗಮನಿಸುತ್ತಿರುವ ಹಾಗೆ ಅವಳಿಗೆ ತೋರಿತು.

ಅದೇ ರೀತಿ ಪರವಶಳಾದವಳ ಹಾಗೆ ಅವಳು ಶೀನಪ್ಪ ಒರಗಿದ್ದ ಮಂಚದ ಕಡೆಗೆ ನಡೆದಳು. ಅವಳು ಬರುವ ಸದ್ದು ಕೇಳಿ ಶೀನಪ್ಪ ಮಂಚದಲ್ಲಿ ಎದ್ದು ಒಂದು ಪಕ್ಕದಲ್ಲಿ ಕುಳಿತು "ಬಾ, ಪದ್ಮ; ಕುಳಿತುಕೋ" ಎಂದ. ಪದ್ಮ ನಿಧಾನವಾಗಿ ಹೋಗಿ ಮಂಚದ ಒಂದು ಪಕ್ಕದಲ್ಲಿ ಕುಳಿತಳು. ಅವಳ ಎದೆ ಡವಗುಟ್ಟುತ್ತಿತ್ತು. ಉಸಿರು ವೇಗವಾಗಿ ಆಡುತ್ತಿತ್ತು. ಏನೇನೋ ಮಾತಾಡಬೇಕು ಅಂತ ಹೃದಯವೇ ಬಾಯಿಯಾಗಿತ್ತು. ಆದರೆ ಬಾಯಿಯಿಂದ ಮಾತ್ರ ಮಾತೇ ಹೊರಡದು.

ಮಂತ್ರಮುಗ್ಧರಾದವರ ಹಾಗೆ ಇಬ್ಬರೂ ಕುಳಿತರು. ಚಂದ್ರ ಮೋಡದ ಕೂಡ ಸರಸವಾಡುತ್ತ ಮುನ್ನುಗ್ಗುತ್ತಿದ್ದ. ಗಾಳಿ ಬೀಸುತ್ತಲೇ ಇತ್ತು. ಪದ್ಮಳಿಗೆ ತನ್ನ ಎದೆ ಡವಗುಟ್ಟುತ್ತಿರುವುದು ಸ್ಪಷ್ಟವಾಗಿ ಕೇಳಿಸುತ್ತಿತ್ತು. ಶೀನಪ್ಪನಿಗೂ ಅದು ಕೇಳಿಸಿದರೆ? "ನಿನ್ನ ಈ ಉದ್ವೇಗಕ್ಕೆ ಕಾರಣವೇನೆಂದು ಅವರು ಕೇಳಿದರೆ?" ಎಂಬ ಭೀತಿ.

ಶೀನಪ್ಪನಿಗೂ ಕೂಡ ಮಾತಾಡಬೇಕೆಂದರೆ ಏಕೋ ದಿಗಿಲು. ತನ್ನ ನಾಲಗೆಯ ಮೇಲೆ ತನಗೇ ಹಿಡಿತವಿಲ್ಲ ಎಂಬ ಭಯ, ಸಂಕೋಚ. ಅಲ್ಲಿಂದ ಎದ್ದು ಸಂಧ್ಯಾವಂದನೆ ಮಾಡಲು ಹೊರಡಬೇಕು ಅಂತ ಮನಸ್ಸಿನ ಒಂದು ಭಾಗ ಹೇಳುತ್ತಿತ್ತು. ಆದರೆ ಏಳಬೇಕೆಂದರೆ ಆಗುವುದಿಲ್ಲ. ಹಾಗೇ ಕುಳಿತುಕೊಂಡ.

ನಿಮಿಷ ನಿಮಿಷಗಳು ಜಾರಿದುವು. ಇಬ್ಬರ ನಡುವೆ ಮೌನ ತನ್ನ ದುರ್ಗವನ್ನು ಕಟ್ಟಿತ್ತು. ಅದನ್ನು ಈಗ ದಾಟಿ ಹೋಗುವುದು ಹೇಗೆ ಅಂತ ಇಬ್ಬರಿಗೂ ಸಮಸ್ಯೆ. ಸಮಸ್ಯೆ ಬಗೆ ಹರಿಯಲಿಲ್ಲ.

ಚಂದ್ರನ ಪ್ರಕಾಶ ಇನ್ನಷ್ಟು ಉಜ್ವಲವಾಯಿತು. ಅಂಗಳದಲ್ಲೆಲ್ಲ ಹಾಲುಚೆಲ್ಲಿದಂತೆ ಬೆಳ್ದಿಂಗಳು ಹರಡಿತು. ಅಂಗಳದ ಪ್ರಾಗಾರದ ಗೋಡೆ, ಹೆಬ್ಬಾಗಿಲು ಛಾವಣಿಯ ಹುಲ್ಲು, ಬಿಳಿಯ ತೆಂಗಿನ ಮರ— ಈ ಎಲ್ಲಕ್ಕೂ ಕನಸಿನ ಒಂದು ಹೊಸ ಕಳೆ ಬಂತು. ಯಾವನೋ ಮಾಟಗಾರನ ಮಂತ್ರದಂಡ ಸೋಂಕಿದ ಹಾಗೆ ಎಲ್ಲವೂ ಮಾರ್ಪಾಟುಗೊಂಡು ಸಮ್ಮೋಹನದ ಜಾಲದಲ್ಲಿ ಬದ್ಧವಾದುವು.

ದೂರದಲ್ಲಿ ಯಾವುದೋ ಹಕ್ಕಿ ಕೊರಳೆತ್ತಿ ಕೂಗಿತು. ಮೋಡದ ತುಂಡೊಂದು ಆಕಾಶದಲ್ಲಿ ಚಂದ್ರನನ್ನು ಚುಂಬಿಸಿ ಚಂಗನೆ ದೂರ ಸಿಡಿಯಿತು.

ಪದ್ಮಾ ಮತ್ತು ಶೀನ ಮಾತಾಡುವ ಅಗತ್ಯವೇ ಇರಲಿಲ್ಲ. ಅವರ ಮಾತು ಕತೆಯನ್ನು ಹೊರಜಗತ್ತೇ ನಡಸುತ್ತಿತ್ತು. ಚಂದ್ರ ಸಮ್ಮೋಹನ ಜಾಲವನ್ನು ಬೀರುತ್ತಿದ್ದ. ನಕ್ಷತ್ರಗಳು ಕಣ್ಣುಮಿಟುಕಿಸಿ ಮಿನುಗುತ್ತಿದ್ದುವು. ಗಾಳಿ ಅಲೆ ಅಲೆಯಾಗಿ ಬಂದು ಮೈ ತಡವುತ್ತಿತ್ತು. ಮರಮರದ ಎಲೆ ಎಲೆಯೂ ನಿಮಿರಿ ಪಿಸುಗುಟ್ಟುತ್ತಿತ್ತು.

ಎಷ್ಟು ಹೊತ್ತು ಹಾಗೇ ಅವರು ಕುಳಿತಿದ್ದರೋ ಅವರಿಗೆ ತಿಳಿಯದು. ಕ್ಷಣಕ್ಷಣಕ್ಕೆ ಒಬ್ಬರಿಗೊಬ್ಬರು ಹತ್ತಿರ ಹತ್ತಿರ ಬರುತ್ತಿದ್ದರು ಅವರಿಗೆ ಅರಿವಿಲ್ಲದಂತೆಯೇ ಆ ಎರಡು ದೇಹಗಳು ಒಂದನ್ನೊಂದು ಆಕರ್ಷಿಸುತ್ತಿದ್ದುವು. ಹೊರಗೆ ಗಾಳಿ ತಂಪಾಗಿ ಬೀಸುತ್ತಿದ್ದರೂ ಇಬ್ಬರಿಗೂ ಒಳಗೆ ಧಗೆ. ಮೈ ನರನರವೆಲ್ಲ ಕಾವುಗೊಂಡಿತ್ತು. ಉಸಿರು ಬಿಡುವುದೇ ಕಷ್ಟವೆನ್ನುವಷ್ಟು ಉದ್ವೇಗ. ಇಬ್ಬರಿಗೂ ಹೊರಜಗತ್ತೇ ಮರೆತಿತ್ತು.

ಇನ್ನೊಂದು ಕ್ಷಣದಲ್ಲೇ ಪದ್ಮಳ ಕೈ ಶೀನಪ್ಪನ ಕೈಯಲ್ಲಿ ಬದ್ಧವಾಗಿತ್ತು. ಪದ್ಮಳಿಗೆ ಮೈ ಜುಮ್ಮೆಂದು ರೋಮರೋಮಕ್ಕೂ ವಿದ್ಯುತ್ತು ಹರಿಯಿತು. ಫಕ್ಕನೆ ಮುಖ ತಿರುಗಿನೋಡಿದಳು. ಶೀನಪ್ಪನ ಕಣ್ಣಿನಲ್ಲಿ ಆ ಪ್ರಶಾಂತಿ ಈಗ ಇಲ್ಲ. ಮಾದಕತೆ ತುಂಬಿತ್ತು. ಶೀನಪ್ಪನೂ ನೋಡಿದ. ಪದ್ಮಳ ಕಣ್ಣು ಅರ್ಧ ಮುಚ್ಚಿತ್ತು. ಮುಖದಲ್ಲಿ ಚಂದ್ರನಂತಹದೇ ಕಳೆ. ಕೆನ್ನೆ ಕೆಂಪೇರಿತ್ತು. ತುಟಿ ಅದುರುತ್ತಿತ್ತು.

ಒಂದು ಕ್ಷಣ. ಶೀನಪ್ಪ 'ಪದ್ಮಾ' ಎಂದ. ಪದ್ಮಾ ಕೈ ಕೊಸರಿಕೊಂಡು ದೂರ ಸರಿದಳು.

ಶೀನಪ್ಪ ತತ್‌ಕ್ಷಣವೇ ಎದ್ದು ಸಂಧ್ಯಾವಂದನೆಗೆ ಹೊರಟ.

ಪದ್ಮಾ ಅಲ್ಲೇ ಕುಳಿತಳು. ನಿಧಾನವಾಗಿ ಅವಳಿಗೆ ಮೈ ಅರಿವು ಬಂತು. "ಅಯ್ಯೋ! ಎಂಥ ಅನರ್ಥವಾಗುವುದು ತಪ್ಪಿತು. ದೇವರೇ ನೀನೇ ಕಾಪಾಡಿದೆ ನಮ್ಮನ್ನು" ಎಂದುಕೊಂಡಳು. ತನ್ನ ಮನಸ್ಸನ್ನು ಹೀಗೆ ಈ ರೀತಿ ಏಕೆ ಮಬ್ಬು ಕವಿಯಿತೋ— ಎಂದು ಯೋಚಿಸಿದಳು. ಇದು ಶುಭದ ಸಂಕೇತವಲ್ಲ ಎಂದು ಅವಳ ಅಂತರಾತ್ಮ ಹೇಳಿತು. "ಅಬ್ಬಾ ಬದುಕಿದೆ, ಸದ್ಯಕ್ಕೆ" ಎಂದು ನಿಟ್ಟುಸಿರು ಬಿಟ್ಟಳು.

ಈಗ ಬದುಕಿದ್ದು ಸರಿ. ಆದರೆ ಹೀಗೆ ಎಷ್ಟು ಸಲ ಬಚಾವಾಗುವುದು ಸಾಧ್ಯ? ಇಬ್ಬರ ಮನಸ್ಸೂ ಯಾವಾಗಲೋ ಒಂದುಗೂಡಿತ್ತು. ಒಬ್ಬರನ್ನು

ಬಿಟ್ಟು ಇನ್ನೊಬ್ಬರಿಗೆ ಇರುವುದು ಅಸಾಧ್ಯ ಎನ್ನುವಂಥ ಪರಿಸ್ಥಿತಿಯೂ ಆಗಲೇ ಪ್ರಾಪ್ತವಾಗಿತ್ತು. ಹೀಗಿರುವಾಗ ದೇಹದ ಹಸಿವನ್ನು ಎಷ್ಟು ದಿನ ತಡೆಯುವುದು ಸಾಧ್ಯವಾದೀತು ? ಪಂಜರದ ಬಾಗಿಲು ಹಾಕಿರುವ ತನಕ ಸರಿ. ಆದರೆ ಅದು ಯಾವಾಗಲೂ ಹಾಕಿರುತ್ತದೆ ಎಂತ ಹೇಗೆ ಹೇಳಲಿ ? ಅಥವಾ ಅದು ಯಾವ ಹೊತ್ತಿಗೆ ತೆರೆಯುತ್ತದೆ ಎಂದು ಯಾರು ಬಲ್ಲರು ?

ಶೀನಪ್ಪನ ಸಂಧ್ಯಾವಂದನವೂ ಆಯಿತು. ಊಟವೂ ಆಯಿತು. ಊಟ ಮಾಡುತ್ತಿದ್ದಾಗ ಒಂದು ಸಲವೂ ಅವನು ಪದ್ಮಳ ಕಡೆಗೆ ಕಣ್ಣೆತ್ತಿ ನೋಡಲಿಲ್ಲ. ಸರಿಯಾಗಿ ಊಟವನ್ನೂ ಮಾಡಲಿಲ್ಲ. ಏನೋ ಅನುಚಿತಕಾರ್ಯ ತಾನು ಮಾಡಿರುವ ಹಾಗೆ, ಅದಕ್ಕಾಗಿ ನಾಚಿಕೊಂಡಿರುವ ಹಾಗೆ ಅವನು ವರ್ತಿಸಿದ. ಇದನ್ನು ಕಂಡು ಪದ್ಮಳಿಗೆ ಬಹಳ ದುಃಖವಾಯಿತು.

" ಏಕೆ, ನನ್ನ ಮೇಲೆ ಸಿಟ್ಟು ಬಂತೇ ?" ಎಂದು ಕೇಳಿದಳು.

ಈಗ ಶೀನಪ್ಪ ಕಣ್ಣೆತ್ತಿ ನೋಡಿದ. ಅವನ ಕಣ್ಣಿನಲ್ಲಿ ನೀರು.

" ನಿನ್ನ ಮೇಲೆ ಸಿಟ್ಟೇ ಪದ್ಮಾ? ಇಲ್ಲ. ನನ್ನ ಮೇಲೇ ನನಗೆ ಸಿಟ್ಟು ಬಂದಿದೆ. ಎಂಥ ಕೆಲಸ ಮಾಡುತ್ತಿದ್ದೆ! ನಾನು ಪಾಪಿ, ಪದ್ಮಾ. ನನ್ನನ್ನೇ ನೀನು ದೇವರು ಅಂತ ಕರೆದದ್ದು" ಎಂದ.

" ಈಗಲೂ ನೀವು ನನ್ನ ದೃಷ್ಟಿಯಲ್ಲಿ ದೇವರೇ, ಶೀನಪ್ಪಾ. ಇದಕ್ಕೆಲ್ಲ ನಾನೇ ಕಾರಣಳೆಂದು ನನಗೆ ಗೊತ್ತಿಲ್ಲವೇ? ನನ್ನ ಮೇಲೆ ನನಗೆ ಎಷ್ಟು ಸಿಟ್ಟು ಬಂದಿದೆ ಬಲ್ಲಿರಾ ?" ಎಂದು ಪದ್ಮಾ ಅಳತೊಡಗಿದಳು.

" ಇಬ್ಬರದ್ದೂ ತಪ್ಪಿಲ್ಲ ಅಂತಲೇ ಇಟ್ಟುಕೊಳ್ಳೋಣ " ಎಂದ ಶೀನಪ್ಪ. "ಏನೋ ಕೆಟ್ಟ ಕಾಲ. ಕೆಟ್ಟ ಮುಹೂರ್ತ. ಸದ್ಯ ಅದರಿಂದ ಬಚಾವಾದೆವಲ್ಲ!"

" ಬಚಾವಾದೆವಲ್ಲ" ಎಂದು ಹೇಳಿ ಶೀನಪ್ಪ ಕೈ ತೊಳೆದುಕೊಂಡು ಹೋಗಿ ಮತ್ತೆ ಅಂಗಳದಲ್ಲಿ ಮಂಚದ ಮೇಲೆ ಕುಳಿತುಕೊಂಡ. ಆಗ ಅವನಿಗೆ ತಾನು ಇದರಿಂದ ಬಚಾವಾದೆ ಎಂದು ಹೇಳಿಕೊಂಡರೂ ನಿಜವಾಗಿಯೂ ತಾನು ಈ ಗಂಡಾಂತರದಿಂದ ಪಾರಾಗಲಿಲ್ಲ, ಎಂದು ಅನ್ನಿಸಿತು. " ಇದು ಪದ್ಮವ್ಯೂಹ. ಇದರಿಂದ ಬದುಕಿ ಬರುವುದು ಕಷ್ಟ" ಎಂದುಕೊಂಡ.

ದೇಹದ ಹಸಿವು, ಕಾಮವಾಸನೆ ಯಾವಾಗಲೂ ಇದ್ದದ್ದೇ. ಅದೇನೂ ಹೊಸದಲ್ಲ. ಆದರೆ ಅದರ ಜೊತೆಗೆ ಈ ಮನಸ್ಸಿನ ಹಸಿವು ಈ ಆತ್ಮೀಯತೆ ಸೇರಿದರೆ ಮಾತ್ರ ಬಹಳ ಕಷ್ಟ. ಮನಸ್ಸಿನಲ್ಲಿ ಹುಟ್ಟಿದ್ದ ಪ್ರೀತಿ

ದೇಹದ ತನಕವೂ ಧಾಳಿಯಿಟ್ಟಿದೆ. ಇದರಿಂದ ಬಿಡುಗಡೆ ಸಾಧ್ಯವೇ ಎನ್ನಿಸಿತು ಶೀನಪ್ಪನಿಗೆ. ಬಹಳ ದಿನಗಳ ತನಕ ಶೀನಪ್ಪನಿಗೆ ಇದು ಕೇವಲ ಬಂಧುಭಾವನೆ, ಮನುಷ್ಯ ಸಹಜವಾದ ಆತ್ಮೀಯತೆ ಎನ್ನಿಸುತ್ತಲಿತ್ತು. ಎಷ್ಟೋ ಸಲ ಇದರಲ್ಲಿ ಕಾಮವಾಸನೆಯ ಅಂಶವೂ ಸೇರಿದೆ ಎನ್ನಿಸಿದಾಗ ಮನಸ್ಸು ದಿಗ್ಭ್ರಾಂತವಾಗುತ್ತಿತ್ತು. ಆದರೆ "ಛೇ, ಛೇ, ಹಾಗೇನೂ ಇಲ್ಲ" ಎಂದು ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದ.

ಆದರೆ ಈಗ? ಎಲ್ಲವೂ ಅಂಗೈನೆಲ್ಲಿಯಂತೆ ಸ್ಪಷ್ಟವಾಗಿದೆ. ಇದರಿಂದ ಬಿಡುಗಡೆ ಹೇಗೆ ಎಂದು ಯೋಚಿಸುತ್ತಿರುವಾಗಲೇ ಇದರಿಂದ ಬಿಡುಗಡೆ ಅಗತ್ಯವೇ? ಎಂದು ಮನಸ್ಸು ಕಾತರವಾಗಿ ಕೇಳುತ್ತಿತ್ತು; 'ಈ ಮಧುರ ಬಂಧನದಿಂದ ಬಿಡುಗಡೆಯನ್ನು ಕೋರಬೇಡವೋ' ಎಂದು ಅವನಿಗೆ ಅಂಗಲಾಚುತ್ತಿತ್ತು.

ಅದೇ ಆಕಾಶ, ಅದೇ ರೀತಿ ಮೋಡವಿಲ್ಲದ ನಿರ್ಮಲ ತಾರಾಪಥ ಅದೇ ಚಂದ್ರ, ಅದೇ ಶುದ್ಧ ಸ್ಫಟಿಕಚಂದ್ರಿಕೆ. ಅದೇ ತಂಪುಗಾಳಿ. ಅವೇ ನಕ್ಷತ್ರಗಳು.

ಕೊನೆಯಿರದ ದಾರಿಯಲ್ಲಿ ಶೀನಪ್ಪನ ಮನಸ್ಸು ತೊಳಲಿತು. ಎಷ್ಟು ದೂರ ಹೋದರೂ ದಾರಿ; ನಡೆದಷ್ಟೂ ದಾರಿ; ತೀರದ ದಾರಿ. ಮನಸ್ಸು ಯಾವ ನಿಲುಗಡೆಗೂ ಬಾರದು. ಅತ್ತ ತುಯ್ಯುತ್ತದೆ. ಇತ್ತ ತುಯ್ಯುತ್ತದೆ. ಈ ತುಯ್ದಾಟದಲ್ಲಿ ಬಳಲಿ ಸೋತು ಹೋಗುತ್ತದೆ.

ಹೀಗೆ ಆದೀತೆಂದು ಅಂದು ಅವನು ಕನಸಿನಲ್ಲಿಯೂ ಎಣಿಸಿರಲಿಲ್ಲ. ಈ ಭಾವನೆ ಎಂದು ಯಾವಾಗ ತನ್ನ ಮನಸ್ಸನ್ನು ಹೊಕ್ಕಿತು ಎಂತಲೂ ಅವನಿಗೆ ತಿಳಿಯದು. ಮೃದುವಾದ ಸೂಕ್ಷ್ಮವಾದ ರೇಶ್ಮೆಯ ದಾರದಿಂದ ಅವನ ಹೃದಯವನ್ನು ಯಾವಾಗಲೋ ವಿಧಿ ಪದ್ಮಾಳ ಹೃದಯಕ್ಕೆ ಬಂಧಿಸಿಬಿಟ್ಟಿದೆ. ಬಹು ಸೂಕ್ಷ್ಮವಾದ ಬಂಧ. ಆದರೆ ಅದನ್ನು ಕತ್ತರಿಸುವ ಶಕ್ತಿಮಾತ್ರ ತನಗಿಲ್ಲ ಎಂದು ಶೀನಪ್ಪ ಅಳಲಿದ.

ಎಲ್ಲಿಂದಲೋ ಬಂದಳು. ಅನಾಥೆಯಾಗಿ ಬಂದಳು. ನಿರ್ಗತಿಕಳಾಗಿ ಬಂದಳು. ಆದರೆ ಈಗ ಅವನ ಮನಸ್ಸನೇ ತನ್ನ ಸಿಂಹಾಸನ ಮಾಡಿ ಕುಳಿತಿದ್ದಾಳೆ. "ಪದ್ಮಾ, ಪದ್ಮಾ, ಪದ್ಮಾ" ಎಂದು ತನ್ನಷ್ಟಕ್ಕೆ ಮೂರು ಸಲ ಜಪಿಸಿಕೊಂಡ. ಆದರೆ ಅವಳು ಇಲ್ಲೂ ನಿರಪರಾಧಿಯೇ. ಆ ಸಚ್ಚರಿತ್ರ, ಆ ಆತ್ಮೀಯತೆ, ಆ ಸಹಾನುಭೂತಿ, ಆ ವಿಶ್ವಾಸ, ಆ ಕೃತಜ್ಞತೆ—ಇವು ಅವಳ

ಸಹಜಗುಣಗಳು. ಮುಗ್ಧವಾದ ಚಂಚಲವಾದ ಕಣ್ಣುಗಳು; ಮಾಟವಾದ ಅಂಗಾಂಗ ಸೌಂದರ್ಯ, ಆ ಮೋಹಕ ಮುಖ; ಇಂದ್ರಜಾಲವನ್ನು ಹರಡುವ ಆ ನಲ್ನಗೆ— ಇವು ಇರುವುದೇ ಅವಳ ತಪ್ಪೇ? "ತಪ್ಪು ನನ್ನದೇ" ಎಂದು ಶೀನಪ್ಪ ತನ್ನನ್ನು ತಾನೇ ಶಪಿಸಿಕೊಂಡ.

ಶೀನಪ್ಪ ಸಂನ್ಯಾಸಿಯೂ ಅಲ್ಲ; ಅತೀಂದ್ರಿಯ ಚೇತನಸ್ವರೂಪನೂ ಅಲ್ಲ. ಕಾಮುಭಾವನೆಯ ಆಳವನ್ನು ಅವನು ಬಲ್ಲ. ದೇಹದ ಹಸಿವೆಯ ವಿಚಿತ್ರ ಸಂಕಟವನ್ನೂ ಅವನು ಅನುಭವಿಸಿದವನೇ. ಅವನು ದುರಾಚಾರಿ ಅಲ್ಲವಾದರೂ ವ್ಯಭಿಚಾರಿಯಲ್ಲವಾದರೂ ಈಗ್ಗೆ ಮೂರು ನಾಲ್ಕು ವರ್ಷಗಳ ಹಿಂದೆ ಹತ್ತಾರು ಸಲ ದೇಹ ಸುಖವನ್ನೂ ಅನುಭವಿಸಿದ್ದ. ತಾಳಮದ್ದಲೆಯ ಆ ಏರಾಟದ ಕಾಲದಲ್ಲಿ ಯಾವ ಯಾವುದೋ ಊರು ಸುತ್ತುತ್ತಿದ್ದಾಗ ಅನಾಯಾಸವಾಗಿ ಅಯಾಚಿತವಾಗಿ ಸ್ತ್ರೀ ಸಂಸರ್ಗದ ಅನುಭವ ದೊರೆತಿತ್ತು. ಬೈಂದೂರಿನಲ್ಲಿ ನಡೆದ ಪ್ರಸಂಗ ಮಾತ್ರ ಇನ್ನೂ ಅವನಿಗೆ ನೆನಪಿದೆ. ತಾಳ ಮದ್ದಲೆ ಮುಗಿದಾಗ ರಾತ್ರಿ ಎರಡೋ ಮೂರೋ ಗಂಟೆ ಇದ್ದಿರಬೇಕು. ತಾಳ ಮದ್ದಲೆಯಲ್ಲಿ ಭಾಗವಹಿಸಿದವರೆಲ್ಲ ತಮ್ಮ ತಮ್ಮ ಸ್ನೇಹಿತರ, ನೆಂಟರಿಷ್ಟರ ಮನೆಗಳನ್ನು ಹುಡುಕಿಕೊಂಡು ಹೊರಟಿದ್ದರು, ಮಲಗುವುದಕ್ಕೆ.

ಮಾಲೆಯುವರ ನಾರಾಯಣ ಬಹಳ ದಿನಗಳಿಂದ ಶೀನಪ್ಪನಿಗೆ ಗೊತ್ತು. ಅವನೂ ಭಾಗವತನೇ. ಶೀನಪ್ಪನೆಂದರೆ ಬಹಳ ಗೌರವ ಅವನಿಗೆ. ತಾಳ ಮದ್ದಲೆ ಮುಗಿದ ಮೇಲೆ ಅವನು "ಶೀನಪ್ಪನವರು ನಮ್ಮ ಮನೆಗೆ ಬನ್ನಿ ಹೋಗೋಣ" ಎಂದು ಅವನನ್ನು ಕರೆದುಕೊಂಡು ಹೋದ. ಅಲ್ಲಿ ಹೋದಾಗ ಬಾಗಿಲು ತೆಗೆದವಳು ಯಾರೋ ಹೆಂಗಸು. ಶೀನಪ್ಪ ಅವಳು ಯಾರು ಅಂತ ನೋಡಲೂ ಇಲ್ಲ. ಒಳಗೆ ಹೋಗಿ ಚಾಪೆಯ ಮೇಲೆ ಕುಳಿತುಕೊಂಡ ಮೇಲೆ ನಾರಾಯಣ ಒಳಗೆ ಹೋದ. ಆಗ ಅವಳು ಕೈಲಿ ಲಾಟೀನು ಹಿಡಿದುಕೊಂಡು ಮತ್ತೆ ಬಂದಳು. ಈಗ ಶೀನಪ್ಪ ಅವಳ ಕಡೆಗೆ ಕಣ್ಣೆತ್ತಿ ನೋಡಿದ್ದ; ತಾರುಣ್ಯದಿಂದ ತುಂಬಿ ತುಳುಕುವ ಹೆಣ್ಣು. ಇವನನ್ನು ನೋಡಿ ನಕ್ಕಳು. "ಶೀನಪ್ಪನವರು ಅಂತ ನಮ್ಮ ಅಣ್ಣ ಬಹಳ ಸಲ ಹೇಳುತ್ತಿದ್ದ. ಇವತ್ತು ನೋಡಿದಹಾಗಾಯಿತು" ಎಂದು ಮತ್ತೆ ನಕ್ಕಳು. ಕಣ್ಣು ಮಿಟುಕಿಸಿ ಒಳಗೆ ಹೋದಳು. ದೀಪವಾರಿಸಿ ಶೀನಪ್ಪ ಮಲಗಿ ಅರ್ಧನಿದ್ರಾವಸ್ಥೆಯಲ್ಲಿದ್ದಾಗ ಯಾವುದೋ ಎರಡು ಮೃದು ಬಾಹುಗಳು ಅವನನ್ನು ಬಿಗಿದುವು. ಕೊಂಚ

ಗಾಬರಿಯಾಗಿ ಶೀನಪ್ಪ "ಯಾರದು ?" ಎನ್ನುತ್ತಿರುವಾಗಲೇ ತುಟಿಗಳು ಅವನ ತುಟಿಗಳನ್ನು ಮುಚ್ಚಿಬಿಟ್ಟುವು. ಶೀನಪ್ಪನ ಮೈಯಲ್ಲೆಲ್ಲ ಕಾವು ಹರಡಿ ವಿಚಿತ್ರವಾದ ಸಂತೋಷ ಮಿಶ್ರಿತವಾದ ನೋವು ನರನರವನ್ನೂ ವ್ಯಾಪಿಸಿತು. "ನಾನು, ನಾನು ; ಸುಮಿತ್ರಾ" ಎಂದು ಪಿಸುಗುಟ್ಟಿದ್ದಳವಳು. ಅಂದಿನ ಕೆಲಸ ಹಾಗೇ ಮುಗಿದಿತ್ತು. "ಮತ್ತೆ ಯಾವಾಗ ಬರುತ್ತೀರಿ, ಬೇಗ ಬನ್ನಿ" ಅಂತಲೂ ಅವಳು ಹೇಳಿದ್ದಳು. ಆದರೆ ಶೀನಪ್ಪನಿಗೇಕೋ ಮತ್ತೆ ಅಲ್ಲಿಗೆ ಹೋಗಬೇಕು ಅನ್ನಿಸಲಿಲ್ಲ. ನಾರಾಯಣನೇ ಸಿಕ್ಕಿದಾಗಲೆಲ್ಲ "ನಮ್ಮ ಸುಮಿತ್ರಾ ನಿಮ್ಮನ್ನು ಬಹಳ ನೆನಸುತ್ತಾಳೆ" ಅಂತಲೂ ಹೇಳಿದ್ದ. ಆದರೆ ಮತ್ತೆ ಶೀನಪ್ಪ ಅಲ್ಲಿಗೆ ಹೋಗಿರಲಿಲ್ಲ. ಹೀಗೇ ಕುಂದಾಪುರದಲ್ಲಿ, ಗಂಗೊಳ್ಳಿಯಲ್ಲಿ, ಕೊಲ್ಲೂರಿನಲ್ಲಿ ಈ ಅನುಭವವಾಗಿತ್ತು.

ಆದರೆ ಅಂಥ ಆ ಅನುಭವವೂ ಈಗ ತನ್ನ ಮನಸ್ಸಿನಲ್ಲಿ ಹುಟ್ಟುತ್ತಿರುವ ಭಾವನೆಯೂ ಬೇರೆ ಬೇರೆ ಅಂತ ಮಾತ್ರ ಶೀನಪ್ಪನಿಗೆ ಸ್ಪಷ್ಟವಾಗಿತ್ತು. ಇದು ಮುಖ್ಯವಾಗಿ ಮನಸ್ಸಿಗೆ ಸಂಬಂಧಿಸಿದ್ದು. ಆದರೆ ಮನಸ್ಸಿನಲ್ಲಿ ಮೊಳೆತು ದೇಹದಲ್ಲೇ ತಾನು ಹಣ್ಣಾಗುವುದು ಎಂದು ಸಾರುತ್ತದೆ. ಅದೇ ಕಷ್ಟ. ಇದಕ್ಕೇನು ಪರಿಹಾರ ?

ಅಲ್ಲಿ ಇಷ್ಟು ಹೊತ್ತಿಗೆ ಪದ್ಮಳ ಕೆಲಸವೆಲ್ಲಾ ಮುಗಿದಿರಬೇಕು. ಅಡಿಗೆ ಮನೆಯ ಬಾಗಿಲು ಹಾಕಿತು. ಪಡುಸಾಲೆಯ ಬಾಗಿಲು ತೆರೆಯಿತು. ಪದ್ಮಾ ಈಗ ಹಾಸಿಗೆ ಹಾಸಿಕೊಳ್ಳುತ್ತಿರಬೇಕು ಎಂದುಕೊಂಡ ಶೀನಪ್ಪ. ಪಡುಸಾಲೆಯ ಬಾಗಿಲು ಮುಚ್ಚಿದ ಸದ್ದು. ಪದ್ಮಾ ಮಲಗಿಕೊಂಡಿರಬೇಕು.

ರಾತ್ರಿ ಹನ್ನೆರಡು ಗಳಿಗೆ ಆಗಿರಬೇಕು. ಸಪ್ತಮಿಯ ಚಂದ್ರ ಮುಳುಗಲು ಇನ್ನೂ ಎರಡು ಗಳಿಗೆ. ನಾಗಿ ಈ ದಿನ ಮಲಗುವುದಕ್ಕೆ ಬರುವುದಿಲ್ಲ ಎಂದಿದ್ದಳು. ಅವಳೂ ಅವಳ ಮಗಳು ಸುಬ್ಬಿಯೂ ಅವರ ನೆಂಟರ ಮನೆಗೆ ಉಪ್ಪುಂದಕ್ಕೆ ಹೋಗಿದ್ದರು. "ಬರುವುದು ಬಹಳ ತಡವಾಗಬಹುದು, ಒಡೇರೇ" ಎಂದಿದ್ದಳು. ಮನೆಯಲ್ಲಿ ಈಗ ಇಬ್ಬರೇ. ಪಡುಸಾಲೆಯೊಳಗೆ ಪದ್ಮಾ; ಇಲ್ಲಿ ಅಂಗಳದಲ್ಲಿ ಮಂಚದ ಮೇಲೆ ಶೀನಪ್ಪ.

"ಇನ್ನು ಮಲಗುವುದೇ ಸರಿ" ಎಂದು ಶೀನಪ್ಪ ಚಾವಡಿಗೆ ಬಂದು ಹಾಸಿಗೆ ಹಾಸಿಕೊಂಡು ಮಲಗಿದ. ಆದರೆ ನಿದ್ರೆ ಹತ್ತದು. ಮನಸ್ಸು ಕಾತರವಾಗಿತ್ತು. "ಪದ್ಮಾ, ಪದ್ಮಾ" ಎಂದು ಅಂತಃಕರಣ ಕೂಗುತ್ತಿತ್ತು. ಎಷ್ಟು

ಪ್ರಯತ್ನ ಪಟ್ಟರೂ ಮನಸ್ಸು ಶಾಂತವಾಗಲಿಲ್ಲ. ಯಾವ ಮಗ್ಗುಲಲ್ಲಿ ಮಲಗಿದರೂ ಹಿತವೆನಿಸದು. ಹೊರಳಾಡುತ್ತ ಹೊರಳಾಡುತ್ತ ಎಷ್ಟು ಸಮಯ ಕಳೆಯಿತೋ— ತಿಳಿಯದು.

ಗಳಿಗೆ ಗಳಿಗೆಗೂ ಶೀನಪ್ಪನ ಮನಸ್ಸಿನ ಜ್ವರ ಹೆಚ್ಚುತ್ತಿತ್ತು. ಸ್ತ್ರೀ ಸಂಗದ ಆಶೆಯಿಂದ ನರನರವೂ ಉದ್ವಿಗ್ನವಾಗಿತ್ತು. ವಿವೇಕದ ಉಸುರು ಅಡಗಿಹೋಗಿತ್ತು. ಯಾವುದು ಸರಿ ಯಾವುದು ತಪ್ಪು ಎಂದು ನಿರ್ಧರಿಸಲು ಬುದ್ಧಿ ನಿರಾಕರಿಸಿತು. ಈಗ ಕೇವಲ ಭಾವನೆಯೊಂದೇ. ಮನಸ್ಸಿನಲ್ಲಿ ಅದು ಕಾಡುನರಿಯಂತೆ ಭೋರ್ಗರೆಯುತ್ತ ನರನಾಡಿಗಳಲ್ಲೆಲ್ಲ ಜಲಪಾತದಂತೆ ಧುಮುಕಿ ಭೋರ್ಗರೆದು ನೊರೆ ಕಾರಿತು.

“ಇಲ್ಲ, ಈ ದಿವಸ ನಿದ್ದೆ ಬರುವ ಹಾಗೇ ಇಲ್ಲ” ಎಂದು ಹಾಸಿಗೆಯಲ್ಲಿ ಎದ್ದು ಕುಳಿತ. ತನ್ನ ಮೇಲೆ ತನಗೇ ಹತೋಟಿ ಇಲ್ಲದ ಹಾಗೆ ಎದ್ದು ನಿಂತು ಅತ್ತಿಂದಿತ್ತ ಓಡಾಡತೊಡಗಿದ. ಚಾವಡಿಯಲ್ಲಿ ಉದ್ದಕ್ಕೂ ಆ ತುದಿಯಿಂದ ಈ ತುದಿಯ ವರೆಗೆ ಪಂಜರದ ಸಿಂಹದಂತೆ ತಿರುಗಿದ. ಎಷ್ಟು ಮಾಡಿದರೂ ಮನಸ್ಸು ದಣಿಯದು. ಆಶೆ, ಕಾಮ ನರನರದಲ್ಲೂ ಕುದಿಯಿತು. ಮನಸ್ಸನ್ನು ಕಾವಳ ಕವಿಯಿತು.

ಚಂದ್ರ ಮುಳುಗಿದ. ಸುತ್ತಲೂ ಕತ್ತಲು. ಮತ್ತೆ ಮತ್ತೆ ಶೀನಪ್ಪನ ಕಾಲು ಪಡುಸಾಲೆಯ ಬಾಗಿಲ ಹತ್ತಿರ ಹೋಗುತ್ತದೆ. ಅಲ್ಲಿ ಕೊಂಚ ನಿಲ್ಲುತ್ತದೆ. ಮತ್ತೆ ಹಿಮ್ಮೆಟ್ಟುತ್ತದೆ. ನಿದ್ದೆಯಲ್ಲಿ ಎದ್ದು ಓಡಾಡುವವರಂತೆ ಶೀನಪ್ಪ ಪರವಶನಾಗಿ ಸಂಚರಿಸುತ್ತಿದ್ದ.

ಮತ್ತೆ ಬಾಗಿಲ ಹತ್ತಿರ ನಿಂತ. ಕೈ ಬಾಗಿಲ ಹತ್ತಿರ ಹೋದರೂ ಮತ್ತೆ ಹಿಂದಕ್ಕೆ ಚಿಮ್ಮಿತು. ಮತ್ತೆ ಶತಪಥ. ಮತ್ತೆ ದಿಗ್ಭ್ರಾಂತಿ, ತವಕ, ಕಾತರ. ಎದೆಯ ತುಡಿತ, ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲ.

ಅತ್ತ ಪದ್ಮಳಿಗೂ ನಿದ್ದೆಯಿಲ್ಲ. ಹಾಸಿಗೆಯಲ್ಲಿ ಹೊರಳಾಡುತ್ತ ಮಲಗಿದ್ದಳು. ಎಷ್ಟು ಕಷ್ಟ ಪಟ್ಟರೂ ಎವೆಗೆ ಎವೆ ತಾಗದು. ಹೊರಗಡೆ ಶೀನಪ್ಪ ಅತ್ತಿಂದಿತ್ತ ಸುತ್ತುತ್ತಿರುವುದು ಕೇಳಿಸುತ್ತಿತ್ತು. ಆಗಾಗ ಕಾಲು ಸಪ್ಪಳ ಬಾಗಿಲ ಮುಂದೆ ನಿಲ್ಲುತ್ತಿರುವುದನ್ನೂ ಅವಳು ಬಲ್ಲಳು. “ಬಾಗಿಲು ತೆರೆದು ಒಳಗೆ ಬಂದರೇನು ಗತಿ ?” ಎಂದು ಬುದ್ಧಿ ಕೇಳಿದರೆ “ಗತಿ ಏನು ? ನಿನ್ನ ಕೈ ತೋಳುಗಳಲ್ಲಿ ಹಿಡಿದು ಬಿಗಿಯುವುದು” ಎಂದು ಆಶೆ ಉತ್ತರವೀಯು

ತ್ತಿತ್ತು. ದೇಹವೆಲ್ಲ ಬಿಗಿದು ಉಸಿರು ತಡೆದು ಏನೋ ಅನಿರೀಕ್ಷಿತವಾದದ್ದನ್ನು ಕಾಯುತ್ತಿರುವಂತೆ ಅವಳು ಮಲಗಿದಳು.

ಅವಳ ಕಣ್ಣೆಲ್ಲ ಬಾಗಿಲ ಕಡೆ. ಮನಸಿನಲ್ಲಿ ಶೀನಪ್ಪ. "ಏನಾದರೂ ಆದರೆ ಏನು ಗತಿ ? ಅವರ ಗತಿ ? ನನ್ನ ಗತಿ" ಎಂಬ ಯೋಚನೆಯೂ ಬರುತ್ತದೆ. ಆದರೆ ಮರುಕ್ಷಣವೇ ಮಧುರಭಾವದ ಅಲೆಯೊಂದು ಬಂದು ಮನಸ್ಸಿನ ಈ ಸಂದೇಹಗಳನ್ನೆಲ್ಲ ಕೊಚ್ಚಿಕೊಂಡು ಹೋಗುತ್ತವೆ.

ಕೊನೆಗೂ! ಯಾರೋ ಮೆಲ್ಲನೆ ಬಹು ಮೆಲ್ಲನೆ ಬಾಗಿಲು ತೆರೆದ ಸದ್ದು. ನಿಧಾನವಾಗಿ ಅರ್ಧದಷ್ಟು ಬಾಗಿಲು ತೆರೆದಿರಬಹುದು.

ಪದ್ಮಳ ಎದೆ ಒಂದೇ ಸಮನೆ ಡವಗುಟ್ಟುತ್ತಿತ್ತು— ಭೇರಿಯನ್ನು ಬಾರಿಸಿದ ಹಾಗೆ. ಶ್ವಾಸೋಚ್ಛ್ವಾಸ ಬಹು ರಭಸದಿಂದ ಸಾಗುತ್ತಿತ್ತು. ಒಂದು ಕ್ಷಣ ಉಸಿರನ್ನು ಬಿಗಿಹಿಡಿದಳು. "ಅಯ್ಯೋ ಅವರು ಒಳಕ್ಕೆ ಬಂದೇ ಬಿಟ್ಟರೆ !" ಎಂದು ದಿಗಿಲು. ಇನ್ನೊಂದು ಕ್ಷಣವೇ "ಬರಲಿ, ಬರಲಿ, ನನ್ನ ದೇವರು ಬರಲಿ. ಅವರು ಬಾರದಿದ್ದರೆ ಇನ್ನೇನು ಗತಿ ?" ಎಂದು ಕಾತರ.

ತೆರೆದ ಬಾಗಿಲು ಹಾಗೆಯೇ ಮುಚ್ಚಿಕೊಂಡಿತು. "ಅಯ್ಯೋ" ಎಂದು ಪದ್ಮಾ ದಿಂಬಿನಲ್ಲಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಶೀನಪ್ಪನಿಗೆ ಕೇಳಿಸಲಿಲ್ಲ. ಶೀನಪ್ಪ ಕಂದೀಲು ಹಚ್ಚಿಕೊಂಡು ಬಾವಿ ಕಟ್ಟೆಗೆ ನಡೆದ. "ನನಗೆ ಹುಚ್ಚು ಹಿಡಿದಿದೆ, ಹುಚ್ಚು" ಎಂದುಕೊಳ್ಳುತ್ತಾ ತಲೆಯ ಮೇಲೆ ಮೂರು ಕೊಡ ತಣ್ಣೀರು ಸುರುವಿಕೊಂಡ. ಮೈ ಶಾಂತವಾಯಿತು. ಮನಸ್ಸು ತಿಳಿಯಿತು.

ಅವನು ಮೈ ಒರಸಿಕೊಂಡ ಬರುತ್ತಿದ್ದಾಗ ಪಡಸಾಲೆಯ ಬಾಗಿಲು ತೆರೆದು ಅಲ್ಲಿ ಹೊಸ್ತಿಲಿನಾಚೆ ಪದ್ಮಾ ನಿಂತದ್ದು ಕಾಣಿಸಿತು. ಶೀನಪ್ಪನಿಗೆ ಅವಳ ಕಡೆ ಮುಖವೆತ್ತಿ ನೋಡುವುದು ಸಾಧ್ಯವಾಗಲಿಲ್ಲ.

ಬಾಗಿಲಿನ ಹತ್ತಿರ ಬಂದಾಗ "ಪದ್ಮಾ, ನಾಳೆಯಿಂದ ಬಾಗಿಲ ಚಿಲುಕ ಹಾಕಿಕೋ" ಎಂದು ಹೇಳಿ ತನ್ನ ಹಾಸಿಗೆಯ ಮೇಲೆ ಬಿದ್ದುಕೊಂಡ.

ಶೀನಪ್ಪ ಪದ್ಮಳ ಮುಖವನ್ನು ಕಾಣಲಿಲ್ಲ. ಅತ್ತು ಅತ್ತು ಕೆಂಪಾದ ಕಣ್ಣು; ಕಂಬನಿ ತುಂಬಿದ ಕಪೋಲ–ಇವು ಅವನ ಕಣ್ಣಿಗೆ ಬೀಳಲಿಲ್ಲ.

ಆಮೇಲೆ ಎಷ್ಟೋ ಹೊತ್ತು ಪದ್ಮಾ ಹಾಸಿಗೆಯಲ್ಲಿ ಅಳುತ್ತ ಮಲಗಿದ್ದಳೆಂಬುದೂ ಅವನಿಗೆ ತಿಳಿಯದು.

# ೧೮

ಕತ್ತಲು ಕಳೆದು ಬೆಳಗಾದ ಹಾಗೆಯೇ ಶೀನಪ್ಪನಲ್ಲಿ ವಿವೇಕ ಸೂರ್ಯನ ಉದಯವೂ ಆಯಿತು. ಸನ್ನಿಪಾತ ಜ್ವರ ಬಿಟ್ಟವನ ದೇಹದಂತೆ ಮನಸ್ಸು ಪ್ರಕ್ಷುಬ್ಧವಾದರೂ ಈಗ ಶಾಂತವಾಗಿದ್ದರೂ ಬಹಳ ದುರ್ಬಲವಾಗಿತ್ತು. ಚೆನ್ನಾಗಿ ಏಟು ತಿಂದು ಸ್ಮೃತಿ ತಪ್ಪಿ ಬಿದ್ದು ಈಗ ನಿಧಾನವಾಗಿ ಚೇತರಿಸಿಕೊಳ್ಳುತ್ತಿತ್ತು.

ಯಥಾಪ್ರಕಾರ ದಿನದ ಕೆಲಸ ಆರಂಭವಾಯಿತು. ಬಚ್ಚಲು ಮನೆಗೆ ಹೋಗುವಷ್ಟರಲ್ಲೇ ಬಿಸಿಬಿಸಿಯಾದ ನೀರು ಸಿದ್ಧವಾಗಿತ್ತು. ಸ್ನಾನವಾಯಿತು. ದೇವರ ಕೋಣೆಗೆ ಹೋದರೆ ಅಲ್ಲಿ ಮಣೆ ಹಾಕಿ ಅದರ ಮುಂದೆ ಸಂಧ್ಯಾವಂದನಕ್ಕೆ ಬೇಕಾದ ಸಾಮಗ್ರಿಗಳೆಲ್ಲ ಸಿದ್ಧವಾಗಿದ್ದುವು. ದೇವರ ಮುಂದೆ ದೀಪ ಪ್ರಕಾಶಮಾನವಾಗಿ ಉರಿಯುತ್ತಿತ್ತು.

ಅಡಿಗೆ ಮನೆಯಲ್ಲಿ ಪದ್ಮಾ ತನ್ನ ನಿತ್ಯದ ಕೆಲಸದಲ್ಲಿ ಮಗ್ನಳಾಗಿದ್ದಳು. ಅವಳ ಬಳೆಗಳುಲುಹು ದೇವರ ಕೋಣೆಗೂ ಕೇಳಿಸುತ್ತಿತ್ತು.

ಸಂಧ್ಯಾವಂದನ ಮಾಡುತ್ತಿದ್ದರೂ ಶೀನಪ್ಪನಿಗೆ ನಿನ್ನೆ ರಾತ್ರಿಯ ಕೋಲಾಹಲದ್ದೇ ನೆನಪು. ಅಬ್ಬಾ, ಎಂಥ ಅಚಾತುರ್ಯವಾಗುತ್ತಿತ್ತು! ದೇವರೇ ಬದುಕಿಸಿದ. ಎಷ್ಟು ಅನ್ಯಾಯವಾಗುತ್ತಿತ್ತು ಪದ್ಮಳಿಗೆ! ಅವಳ ಜೀವನದಲ್ಲಿ ಬೆಳಕು ಬರಬೇಕು, ಸವಿ ಮೂಡಬೇಕು ಎಂದು ಹಂಬಲಿಸುತ್ತಿದ್ದ ತಾನೇ ಅವಳ ತಲೆಯ ಮೇಲೆ ಚಪ್ಪಡಿ ಎಳೆಯುತ್ತಿದ್ದೆ ಎಂಬುದನ್ನು ನೆನಸಿದಾಗ ಶೀನಪ್ಪನಿಗೆ ಮೈ ತತ್ತರಿಸಿತು.

ಪದ್ಮಾ ಪರಸ್ತ್ರೀ. ಅನಾಥೆ. ಅಂಥವಳ ಮೇಲೆ ಕೈ ಮಾಡಿದ್ದರೆ ಶೀನಪ್ಪ ಬಹುಶಃ ಜೀವಮಾನದಲ್ಲೆಲ್ಲ ಕೊರಗುತ್ತಿದ್ದ. ಹಾಗೆ ಮಾಡಿದ್ದರೆ ಅದು ಧರ್ಮವೋ ಅಧರ್ಮವೋ ಅಂತ ಈಗಲೂ ಅವನಿಗೆ ಯೋಚನೆ ಬರಲಿಲ್ಲ. ಯೋಚನೆಯೊಂದೇಕೆ ಅದರಿಂದ ತನಗೇನೋ ಕ್ಷಣಿಕವಾದ ಸುಖ ಸಿಕ್ಕುತ್ತಿತ್ತು. ಆದರೆ ಆಗಲೇ ಭಗ್ನವಾಗಿದ್ದ ಪದ್ಮಳ ಬಾಳು ಸಂಪೂರ್ಣವಾಗಿ ಧ್ವಂಸವಾಗುತ್ತಿತ್ತು. ಆದ ಕಾರಣ ಆ ಅಚಾತುರ್ಯ ನಡೆಯದಿದ್ದೇ ಸರ್ವೋತ್ತಮ ಎನ್ನಿಸಿತು. ನಾವು ಮಾಡುವ ಯಾವ ಕೆಲಸದಿಂದಲೇ ಆಗಲಿ ಇತರ

ರಿಗೆ ಹಾನಿ ತಟ್ಟಬಾರದು, ನಮಗೂ ಹಾನಿ ಆಗಬಾರದು. ಬಹುಶಃ ಧರ್ಮದ ತಿರುಳು ಇದೇ ಇರಬೇಕು— ಎನ್ನಿಸಿತ್ತು ಎಷ್ಟೋ ಸಲ ಶೀನಪ್ಪನಿಗೆ. ಈಗಲೂ ಹಾಗೆಯೇ ಅನ್ನಿಸಿತು.

ಸಂಧ್ಯಾವಂದನ ಮುಗಿಸಿ ಶೀನಪ್ಪ ಹಾಗೇ ದೇವಸ್ಥಾನದ ಕಡೆಗೆ ಹೊರಟ. ಒಳಗೆ ಹೋಗುತ್ತಿದ್ದ ಹಾಗೇ ಮನಸ್ಸಿಗೆ ಅಪೂರ್ವವಾದ ಶಾಂತಿ ಬಂದಂತೆ ಆಯಿತು. ಮನಸ್ಸಿನ ದೌರ್ಬಲ್ಯ ಕಳೆದು ಅದು ಈಗ ಸಾರಾಸಾರ ವಿವೇಚನೆಗೆ ಸಮರ್ಥವಾದಂತೆ ಅವನಿಗೆ ಅನ್ನಿಸಿತು. ಜನರಿಂದ ದೂರವಾಗಿ ಕೇವಲ ದೇವರ ಮುಂದೇ ನಿಂತು ಯೋಚಿಸಿದರೆ ಆಗ ಖಂಡಿತವಾಗಿ ಸರಿದಾರಿ ತೋರುತ್ತದೆ. ದೇವರ ಮುಂದೆ ಎಲ್ಲವನ್ನೂ ಹೇಳಿಕೊಳ್ಳಬೇಕು. ಪಶ್ಚಾತ್ತಾಪ ಪಡಬೇಕು. ಮತ್ತೆ ಶುಚಿಯಾದ ಮನಸ್ಸಿನಿಂದ ಯೋಚಿಸಬೇಕು. ಆಗಲೇ ನಿಜವಾದ ಅರಿವು ಮೂಡುವುದು.

ಶೀನಪ್ಪ ದೇವರ ಮುಂದೆ ನಿಂತು ಗದ್ಗದ ಕಂಠದಲ್ಲಿ ಎಲ್ಲವನ್ನೂ ಹೇಳಿಕೊಂಡ. ' ಪ್ರಭೂ, ಕಾಮದಿಂದ ಕುರುಡನಾಗಿ ಮಾಡಬಾರದ್ದು ಮಾಡುತ್ತಿದ್ದೆ. ಒಂದು ಜೀವವನ್ನು ಬದುಕಿಸ ಹೋಗಿ ಹಾಳುಮಾಡುತ್ತಿದ್ದೆ. ನೀನೇ ನನ್ನನ್ನು ಬದುಕಿಸಿದೆ ಮತ್ತೆ ಇಂಥ ಪರಾಭವ ಆಗದಂತೆ ಶಕ್ತಿಯನ್ನು ಅನುಗ್ರಹಿಸು " ಎಂದು ಬೇಡಿಕೊಂಡು ಬಂದು ದೇವಸ್ಥಾನದ ಚಾವಡಿಯಲ್ಲಿ ಕುಳಿತ.

ಮನಸ್ಸು ಬಹುವೇಗವಾಗಿ ಕೆಲಸ ಮಾಡುತ್ತಿತ್ತು. ಈ ವಿಷ ವ್ಯೂಹದಿಂದ ಹೇಗೆ ಪಾರಾಗಬೇಕು ಎಂದು ಬಹಳವಾಗಿ ಯೋಚಿಸಿದ. ತನ್ನ ಮನಸ್ಸು ಪದ್ಮಳಿಗೆ ಮಾರಿಹೋಗಿತ್ತೆಂಬುದನ್ನು ಅವನು ಬಲ್ಲ. ಆ ವಿಷಯವಾಗಿ ಅವನಿಗೆ ಏನಾದರೂ ಸಂದೇಹವಿದ್ದಿದ್ದರೆ ಅದು ನಿನ್ನೆ ರಾತ್ರಿಯೇ ಪರಿಹಾರವಾಗಿತ್ತು. ಈಗ ಉಳಿದದ್ದು ವಿವೇಕಪೂರ್ಣವಾಗಿ ಎಂದರೆ ಪದ್ಮಳಿಗೆ ಯಾವ ಹಾನಿಯೂ ತಟ್ಟದಂತೆ ಹೇಗೆ ನಡೆಯಬೇಕೆಂಬುದನ್ನು ನಿರ್ಧರಿಸುವುದು; ನಿರ್ಧರಿಸಿದ ಮೇಲೆ ಹಾಗೇ ನಡೆಯುವುದು. ಹಾಗೆ ನಡೆಯಲು ತಕ್ಕ ತ್ರಾಣವನ್ನು ದೇವರಿಂದ ಬೇಡಿಕೊಳ್ಳುವುದು.

ಹೌದು, ಇದು ಬಹಳ ಕಷ್ಟವಾದ ಕೆಲಸ. ಹೃದಯವನ್ನೇ ಕಿತ್ತು ತಟ್ಟೆಯಲ್ಲಿಟ್ಟು ದಾನಕೊಟ್ಟ ಹಾಗೆ. ಪದ್ಮಳನ್ನು ಬಿಟ್ಟು ಇರಬೇಕು ಎಂದು ಯೋಚಿಸಿದಾಗಲೆಲ್ಲ ಶೀನಪ್ಪನಿಗೆ ಕರುಳು ಕಿತ್ತು ತೆಗೆದ ಹಾಗೇ ಆಗುತ್ತಿತ್ತು.

ಇದು ಯಾವ ಜನ್ಮದ ಸಂಬಂಧವೋ ಏನೋ. ಆಕಸ್ಮಿಕವಾಗಿ ಆರಂಭವಾದದ್ದು ಈಗ ರೂಢಮೂಲವಾಗಿ ನಿಂತಿದೆ. ಯಾವ ಬಿರುಗಾಳಿಯೂ ಈಗ ಆತ್ಮೀಯಬಂಧವನ್ನು ಸಡಿಲಿಸಲಾರದು. ಹೀಗೆ ಅಲ್ಲೇ ಆ ಮನೆಯಲ್ಲೇ ಅವರಿಬ್ಬರೂ ಇರುವ ಹಾಗಿದ್ದಿದ್ದರೆ ಎಷ್ಟು ಸೊಗಸಾಗಿರುತ್ತಿತ್ತು. ಎಲ್ಲಾದರೂ ದೂರ, ದೂರ ಓಡಿ ಹೋಗುವ ಹಾಗಿದ್ದಿದ್ದರೆ ಈ ಮನೆ ಮಠ, ಈ ಜಾತಿ ಜನ ಎಲ್ಲವನ್ನೂ ಬಿಟ್ಟು. ತಾನು ಮತ್ತು ಪದ್ಮಾ. ಒಬ್ಬರಿಗೊಬ್ಬರು ಆಶ್ರಯವಾಗಿ ಒಬ್ಬರಿಗೊಬ್ಬರು ಸಂತೋಷವಾಗಿ ಎಷ್ಟು ಸುಖವಾಗಿ ಎಷ್ಟು ನೆಮ್ಮದಿಯಿಂದ ಬದುಕ ಬಹುದಾಗಿತ್ತು!

ಒಂದು ಗಳಿಗೆ ಶೀನಪ್ಪನ ಮನಸ್ಸು ಕನಸಿನ ಈ ಗಾಳಿಗುದುರೆಯ ಬೆನ್ನೇರಿ ಸವಾರಿ ಮಾಡಿತು. ಆಗ ಈ ಜಗತ್ತಿನ ಯಾವ ನೆನಪೂ ಇಲ್ಲ. ಯಾವ ಪ್ರತಿಬಂಧಕವೂ ಅಡ್ಡ ಹಾಯುವುದಿಲ್ಲ. ದಾರ ಹರಿದ ಗಾಳಿಪಟದಂತೆ ಮನಸ್ಸು ಗಾಳಿಯೊಡನೆ ಹಾಯಾಗಿ ತೇಲುತ್ತದೆ. ಆದರೆ ಮನುಷ್ಯರಿಗೆ ಹೀಗೆ ಇರುವುದಕ್ಕೆ ಆಗುವುದಿಲ್ಲ. ಗಾಳಿಗುದುರೆಗೂ ವಿಶ್ರಾಂತಿ ಬೇಕು. ಎಷ್ಟು ಹೊತ್ತು ಹಾರಿದರೂ ಗಾಳಿಪಟ ಕೊನೆಗೆ ಕೆಳಕ್ಕಿಳಿಯಲೇಬೇಕು. ಕನಸು ಕಳೆದು ಜಾಗ್ರತಿಯ ಹಗಲು ಬೆಳಕು ಬೆಳಗಲೇಬೇಕು. ಆದರೆ ಕನಸು ಕಳೆದರೂ ಕನಸಿನ ನೆನಪು ಅಳಿಯುವುದಿಲ್ಲ. ಮನಸ್ಸಿನ ತಳದಲ್ಲಿ ಬೀಡುಬಿಟ್ಟು ಮತ್ತೆಮತ್ತೆ ಜಾಗ್ರತ ಮನಸ್ಸಿನ ಡೇರೆಯ ಬಟ್ಟೆಯನ್ನು ತಿವಿದು ಒಳ ನುಗ್ಗುತ್ತದೆ. ಮನಸ್ಸು ವಿಹ್ವಲವಾಗುತ್ತದೆ, ಅಲ್ಲೋಲ ಕಲ್ಲೋಲವಾಗುತ್ತದೆ.

ಪದ್ಮಾವತಿಯ ಬಾಳು ಹಸನಾಗಬೇಕು; ಅದನ್ನು ಕವಿದ ಅಂಧಕಾರ ತೊಲಗಿ ಸುಖದ ಅರುಣೋದಯವಾಗಬೇಕು ಎಂಬ ಒಂದು ಮಂತ್ರವನ್ನೇ ಜಪಿಸುತ್ತ ಶೀನಪ್ಪ ಅಲ್ಲಿಂದ ಹೊರಟ. ಏನು ಮಾಡಿದರೆ ಅವಳು ಸುಖವಾದಾಳು ಎಂದು ಈಗ ಹೇಳುವುದು ಕಷ್ಟವೇ. ಅವಳು ಸುಖವಾಗುವುದಕ್ಕೆ ದಾರಿ ಒಂದೇ: ಅವಳು ತನ್ನ ಗಂಡನ ಸಾನ್ನಿಧ್ಯವನ್ನು ಸೇರುವುದು. ಅದಕ್ಕೆ ಏನು ಬೇಕೋ ಅದನ್ನೆಲ್ಲ, ಅದೊಂದನ್ನೇ ತಾನು ಮಾಡತಕ್ಕದ್ದು ಎಂದು ಶೀನಪ್ಪ ನಿರ್ಧರಿಸಿಕೊಂಡ. ಈ ನಿಶ್ಚಯ ಎಂದೂ ಸಡಿಲಬಾರದು ಎಂದು ತನ್ನ ಮನಸ್ಸಿಗೆ ಕಟ್ಟಪ್ಪಣೆ ಕೊಟ್ಟ. ಇದಕ್ಕೆಲ್ಲ ಬುನಾದಿಯಾಗಿ ತಾನು ತನ್ನ ಮನಸ್ಸಿನಲ್ಲಿ ಪದ್ಮಳ ಬಗ್ಗೆ ಬೇರು ಬಿಟ್ಟಿರುವ ಮೋಹವನ್ನು ಕತ್ತರಿಸಿ ಹಾಕಬೇಕು. ಇದು ಸುಲಭವಲ್ಲ. ಆದರೆ ಮಾಡಲೇ ಬೇಕಾದ ಕೆಲಸ.

ಈಗ ಒಂದೆರಡು ದಿವಸ ತಾನು ಮನೆಬಿಟ್ಟು ಎಲ್ಲಾದರೂ ಹೋಗಿ ಇದ್ದು ಬರಬೇಕು. ಅದರಿಂದ ಮನಸ್ಸು ತನ್ನ ಹತೋಟಿಗೆ ಬರಬಹುದು ಎಂದು ಯೋಚಿಸಿದ. ಹೌದು, ಬೈಂದೂರಿಗೆ ಹೋಗದೆ ಬಹಳ ದಿನ ಕಳೆಯಿತು. ಅಲ್ಲಿ ಸುಮಿತ್ರ ಇದ್ದಾಳೆ. ದೇಹದ ಈ ಹಸಿವು ತೃಪ್ತಿಯಾಗಬೇಕು. ಅತೃಪ್ತವಾದ ದೇಹ ಭೀಕರ ಪಶುವಾಗುತ್ತದೆ. ಅದಕ್ಕಷ್ಟು ಅನ್ನ ಹಾಕಿ ಗೂಟಕ್ಕೆ ಕಟ್ಟಿ ಹಾಕಿಬಿಟ್ಟರೆ ಆಮೇಲೆ ಎಲ್ಲವೂ ಸರಿಯಾಗುವುದೆಂದು ಅವನಿಗೆ ತೋರಿತು. ಆದರೆ ಸುಮಿತ್ರೆಯು ನನಪು ಬಂದುದ್ದೇನೋ ಸರಿಯೆ. ಆದರೆ ಅಲ್ಲಿ ಸುಖಪಡೆಯುವ ಈ ಆಶೆ ಎಷ್ಟು ಹೊತ್ತು ತನ್ನ ಮನಸಿನಲ್ಲಿ ಇದ್ದೀತು ಎಂದು ಅವನು ಆಗ ಯೋಚಿಸಲಿಲ್ಲ.

ಸರಿ, ಹೀಗೆ ಸರಿ ಎಂದು ಶೀನಪ್ಪ ಮನೆಗೆ ಬಂದ. ಮಧ್ಯಾಹ್ನದ ಊಟವಾಯಿತು. ವಿಶ್ರಾಂತಿಯೂ ಮುಗಿಯಿತು. ಇಡೀ ದಿನ ಅವನು ಪದ್ಮಳೊಡನೆ ಒಂದು ಮಾತೂ ಆಡಿರಲಿಲ್ಲ. ಆಡುವ ಧೈರ್ಯ ಇರಲಿಲ್ಲ. ಅವಳೂ ಇವನನ್ನು ಮಾತಾಡಿಸಿರಲಿಲ್ಲ. ವಿಶ್ರಾಂತಿ ತೆಗೆದುಕೊಂಡು ಒಟ್ಟೆ ಹಾಕಿಕೊಂಡು ಶೀನಪ್ಪ,

" ಪದ್ಮಾ, ನನಗೆ ಬೈಂದೂರಿನಲ್ಲಿ ಸ್ವಲ್ಪ ಕೆಲಸವಿದೆ. ನಾಳೆ ಸಂಜೆಯೊಳಗೆ ಬಂದುಬಿಡುತ್ತೇನೆ. ರಾತ್ರಿ ಮಲಗುವುದಕ್ಕೆ ನಾಗಿ ಸುಬ್ಬಿ ಬರುತ್ತಾರೆ" ಎಂದ.

" ಈಗಲೇ ಹೊರಡುತ್ತೀರಾ ? " ಎಂದಳು ಪದ್ಮಾ .

" ಹೌದು, ಯಾಕೆ ?"

" ಇನ್ನೇನಿಲ್ಲ, ಹೋಗುವ ಮೊದಲು ನನಗೆ ಆಶೀರ್ವಾದ ಮಾಡಿ ಹೋಗಿ."

" ಆಶೀರ್ವಾದ ಈಗ ಏಕೆ ಪದ್ಮಾ ; ನಾನು ನಾಳೆ ಬರುವುದಿಲ್ಲವೆ ?"

" ಬರುತ್ತೀರಿ. ಅದಕ್ಕಲ್ಲ. ಏನೋ ನಿಮ್ಮ ಆಶೀರ್ವಾದ ಬೇಕು ಅನ್ನಿಸಿತು " ಎನ್ನುತ್ತ ಪದ್ಮಾ ಅವನ ಕಾಲಿಗೆ ಎರಗಿದಳು.

ಶೀನಪ್ಪ ಮನಃಪೂರ್ವಕವಾಗಿ ಅವಳನ್ನು ಹರಸಿ " ಪದ್ಮಾ, ಹಾಗಾದರೆ ಹೋಗಿ ಬರುತ್ತೇನೆ " ಎಂದು ಹೇಳಿ ಅಲ್ಲಿಂದ ಹೊರಟು ಬಿಟ್ಟ.

ಶೀನಪ್ಪ ಹೊರಟು ಹೋದ ಕೂಡಲೇ ಪದ್ಮಾ ಬಾಗಿಲು ಹಾಕಿಕೊಂಡು ಬಂದು ಚಾಪೆಯ ಮೇಲೆ ಬಿದ್ದುಕೊಂಡು ಒಂದು ಗಳಿಗೆ ಬಿಕ್ಕಿಬಿಕ್ಕಿ ಅತ್ತಳು.

ಅಷ್ಟು ಅತ್ತದ್ದರಿಂದ ಮನಸ್ಸಿನ ಭಾರ ಕೊಂಚ ಕಡಿಮೆ. ಆದಂತಾಗಿ ಯೋಚಿಸುವುದು ಸಾಧ್ಯವಾಯಿತು. ಯೋಚಿಸಿ ಒಂದು ನಿರ್ಧಾರಕ್ಕೆ ಬಾರದೆ ಬೇರೆ ವಿಧಿಯೇ ಇಲ್ಲ ಎಂದು ಅವಳಿಗೆ ಖಚಿತವಾಗಿತ್ತು.

ಚಕ್ರವ್ಯೂಹದ ಕಥೆಯನ್ನು ಪದ್ಮಾ ಹೇಳಿದ್ದಳು. ಅಂಥ ಒಂದು ಚಕ್ರವ್ಯೂಹದೊಳಗೆ ಇದ್ದ ಹಾಗೆ ಆಗಿತ್ತು ಈಗ ಅವಳಿಗೆ. ಸುತ್ತಿದಷ್ಟೂ ದಾರಿ. ಎಷ್ಟು ಸುತ್ತಿದರೂ ಬರುವುದು ಹೊರಟಲ್ಲಿಗೇ.

ಈಗ ತನ್ನ ಕರ್ತವ್ಯವೇನು ಎಂದು ಅವಳು ಬಹುವಾಗಿ ಯೋಚಿಸಿದಳು. ಶೀನಪ್ಪನಲ್ಲಿ ಪ್ರೀತಿ ಹುಟ್ಟಿ ಬೆಳೆದಿದೆ. ಅದಕ್ಕೆ ಅವಳ ದೇಹವ ನಯನವೂ ಸಾಕ್ಷಿ. ಅದನ್ನು ಈ ಜನ್ಮದಲ್ಲಿ ಕಿತ್ತು ಬಿಸುಡುವುದೂ ಸಾಧ್ಯವಿಲ್ಲ. ದೇಹದ ಸುಖ ಅವಳು ಕಂಡವಳೇ. ಆದರೆ ಮನಸ್ಸನ್ನೆಲ್ಲ ತುಂಬಿ ಇನ್ನೂ ಅಂತರಂಗದಲ್ಲಿ ಮೇಲಕ್ಕೇರಿ ನಿಲ್ಲುವಂಥ ಈ ಬಗೆಯ ಪ್ರೀತಿಯನ್ನು ಅವಳು ಕಂಡದ್ದು ಇದೇ ಮೊದಲು. ಇಂಥದು ಜೀವನದಲ್ಲಿ ಮತ್ತೆ ಮತ್ತೆ ಸಂಭವಿಸುವ ವಿದ್ಯಮಾನವಲ್ಲ. ಯಾವ ಯಾವ ಜನ್ಮದ್ದೋ ಪುಣ್ಯವೆಲ್ಲ ಸೇರಿ ಜೀವನದಲ್ಲಿ ಒಂದೇ ಒಂದು ಸಲ ಬಂದು ಮನಸ್ಸನ್ನೆಲ್ಲ ಸುಗಂಧಮಯವನ್ನಾಗಿ ಮಾಡುವ, ಹೃದಯವನ್ನು ಕರಗಿಸಿ ಮಧುರ ಭಾವದ ಪ್ರವಾಹವನ್ನು ಹರಿಸುವ ಇಂಥ ಮೃದು ಸಂಬಂಧ ಅಪೂರ್ವ, ಅದ್ವಿತೀಯ. ಇದನ್ನು ಅಲ್ಲಗಳೆದು ಅವಳು ತನ್ನ ಹೃದಯಕ್ಕೆ ದ್ರೋಹ ಬಗೆಯಲಾರಳು.

ಶೀನಪ್ಪನನ್ನು ಬಿಟ್ಟು ಬದುಕುವುದು ಕಷ್ಟ. ಅವನಿಂದ ಬೇರೆಯಾದರೆ ಲಂಗರು ಕಿತ್ತ ಹಡಗಿನಂತೆ ಅವಳು ಜೀವಾವಧಿ ನೆಲೆಯಿಲ್ಲದೆ ಅಲೆಯಬೇಕಾಗುತ್ತದೆ. ತನ್ನ ಗಂಡನ ಹತ್ತಿರ ಹೋಗಬಹುದು. ಕೂಡಿ ಬಾಳುವೆ ಮತ್ತೆ ಮಾಡಲೂ ಬಹುದು. ಆದರೆ ಮನಸ್ಸು ಮಾತ್ರ ಅಲ್ಲಿ ಇರುವುದಿಲ್ಲ. ಅದು ತಾನು ಈಗ ಕಂಡ ಹಕ್ಕಿಯ—ಶೀನಪ್ಪನ—ಸುತ್ತ ಪರಿಭ್ರಮಿಸುತ್ತಿರುತ್ತದೆ. ಎಂದರೆ ಶೀನಪ್ಪನ ಮನೆಯನ್ನು ಬಿಟ್ಟು ಹೋದರೆ ಮತ್ತೆ ಅವಳಿಗೆ ಜೀವನದಲ್ಲಿ ಶಾಂತಿ ಇಲ್ಲ. ಕಾದ ಹಂಚಿನ ಮೇಲೆ ಇಟ್ಟ ಹೂವಿನಂತೆ ಮಿಡುಕುತ್ತಿರಬೇಕಾಗುತ್ತದೆ.

ಅದು ಪ್ರಾರಬ್ಧ. ಅದನ್ನು ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲ. ಅನುಭವಿಸಬೇಕು. ಆದರೆ ಈ ಜಗತ್ತಿನಲ್ಲಿ ಅವಳ ವಿಷಯದಲ್ಲಿ ಇಷ್ಟು ಅಗಾಧ ಆತ್ಮೀಯತೆಯನ್ನು ತೋರಿಸಿದವನು ಶೀನಪ್ಪನೊಬ್ಬನೇ. ಯಾರೊಬ್ಬರ ಸಲು

ವಾಗಿಯಾದರೂ ಪದ್ಮಾ ತನ್ನ ಜೀವನವನ್ನೇ ಕೊಡಲು ಸಿದ್ಧಳಾಗಿದ್ದರೆ ಅದು ಶೀನಪ್ಪನಿಗಾಗಿಯೇ. ಆದ ಕಾರಣ ಶೀನಪ್ಪನಿಗೆ ಯಾವ ರೀತಿಯಿಂದಲೂ ಹಾನಿಯಾಗದಂತೆ, ತನ್ನಿಂದ ಆತನಿಗೆ ಯಾವ ಕಷ್ಟವೂ ಆಗದಂತೆ ನೋಡಿ ಕೊಳ್ಳಬೇಕಾದ್ದು ತನ್ನ ಕರ್ತವ್ಯ ಎಂದು ಪದ್ಮಳ ಖಚಿತ ಭಾವನೆ.

ಈಗ ಶೀನಪ್ಪನೂ ಪದ್ಮಳ ಪ್ರೀತಿಯಲ್ಲಿ ಬದ್ಧನಾಗಿದ್ದಾನೆ. ಕೇವಲ ಅನಾಥೆಯೊಬ್ಬಳಿಗೆ ಆಶ್ರಯ ಕೊಟ್ಟದ್ದಕ್ಕಾಗಿಯೇ ಅವನಿಗೆ ಅಂಥ ಅಪವಾದ ಬಂತು. ಸಮಾಜ ಜೀವನವೇ ಅವನಿಗೆ ಇಲ್ಲದಂತಾಯಿತು. ದೇವರ ಪೂಜೆ ತಪ್ಪಿತು. ಇಷ್ಟು ದಿನದ ಬಳಕೆಯೆಲ್ಲಾ ಕೊನೆಗಂಡಿತು. ಊರಿನಲ್ಲಿ ಮುಖ ವೆತ್ತಿ ತಿರುಗದಂತಾಯಿತು. ಇನ್ನು ಅಪವಾದಕ್ಕೆ ನಿಜವಾದ ಕಾರಣವೂ ಸಿಕ್ಕಿದರೆ ? ಆಗ ಅವನ ಜೀವನವೇ ಭಯಂಕರವಾದ ಅನಾಹುತಕ್ಕೆ ತುತ್ತಾ ಗುವುದು. ಮದುವೆಯಾದ ಹೆಂಗಸು ತಾನು. ತನ್ನೊಡನೆ ಶೀನಪ್ಪನಿಗೆ ಸಮಾಜ ಸಮ್ಮತವಾದ ಯಾವ ಸಂಬಂಧವನ್ನು ಬೆಳೆಸುವುದೂ ಅಸಾಧ್ಯ. ಆದರೆ ಈಗ ಆತ ತನ್ನ ಪ್ರೀತಿಯ ಬಲೆಯಲ್ಲಿ ಸಿಕ್ಕಿಬಿದ್ದಿದ್ದಾನೆ. ತಾನು ಇಲ್ಲಿಂದ ಹೊರಟು ಹೋದರೆ ಆಗ ಅವನು ಈ ಜಾಲದಿಂದ ಬಿಡುಗಡೆ ಹೊಂದ ಬಹುದು. ಮದುವೆಯನ್ನೂ ಮಾಡಿಕೊಳ್ಳಬಹುದು. ಆಮೇಲೆ ಸುಖವಾಗಿ ಬಾಳಬಹುದು. ಗಂಡಸಿಗೆ ಬಂದ ಅಪವಾದ ಬಹು ಬೇಗ ಮರೆಯುತ್ತದೆ. ಧರ್ಮಶಾಸ್ತ್ರ ಅದಕ್ಕೆಲ್ಲ ತಕ್ಕ ಪರಿಹಾರವನ್ನು ಹೇಳಿದೆ. ಯಾವ ತೊಂದರೆ ಯಿಲ್ಲ. ತಾನು ಇಲ್ಲಿಂದ ಹೊರಟು ಹೋಗಬೇಕು—ಆಗ ಮಾತ್ರವೇ ಶೀನ ಪ್ಪನ ಜೀವನ ಮೊದಲಿನಂತೆಯೇ ಸುಸೂತ್ರವಾಗಲು ಸಾಧ್ಯ. ಇಲ್ಲವಾದರೆ, ಕೊನೆಯಿಲ್ಲದ ನರಕಯಾತನೆ: ಕೈಗೆಟುಕದ ಹಣ್ಣಿಗಾಗಿ ತವಕ, ಕಾತರ, ನಿರಾಶೆ.

“ಹೌದು, ಅದೇ ಸರಿ. ನಾನು ಇಲ್ಲಿಂದ ತೊಲಗಬೇಕು—ಅದೂ ಆದಷ್ಟು ಬೇಗ. ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ” ಎಂದು ಪದ್ಮಾ ತನಗೆ ತಾನೇ ಹೇಳಿಕೊಂಡಳು.

ಸರಿ, ಆದರೆ ಹೋಗುವುದೆಲ್ಲಿಗೆ ? ಅವಳಿಗೆ ಈಗ ಎಲ್ಲಿ ಆಶ್ರಯ ವಿದೆ ? ಗಂಡ ಎಲ್ಲಿದ್ದಾರೋ ? ಏನು ಮಾಡುತ್ತಿದ್ದಾರೋ ? ಅವಳ ವಿಷಯ ದಲ್ಲಿ ಯಾವ ಭಾವನೆಯಿಟ್ಟುಕೊಂಡಿದ್ದಾರೋ ? ಕಳೂರುಕಟ್ಟೆಗೆ ಹೋಗು ವುದೇ ? ಅಷ್ಟು ದೂರ ಒಬ್ಬಳೇ ಹೇಗೆ ಹೋಗುವುದು ? ತಮ್ಮನ ಮನೆಗೆ

ಹೋಗುವುದೇ ? ಅಷ್ಟು ಚಿತ್ರಹಿಂಸೆಗೆ ಸಿಕ್ಕಿದ ಆ ಮನೆಗೆ ?

"ಹೌದು, ಆ ಮನೆಗೇ. ಅಲ್ಲಿ ನನ್ನ ಅನಂತ, ನನ್ನ ಕಂದ ಇದ್ದಾನೆ" ಎಂದುಕೊಂಡಳು. ಅನಂತನ ನೆನಪು ಪ್ರವಾಹ ರೂಪದಲ್ಲಿ ಅವಳ ಮನಸ್ಸಿನಲ್ಲಿ ಭೋರ್ಗರೆಯಿತು. ಆ ಮಹಾ ಪ್ರವಾಹದಲ್ಲಿ ಉಳಿದೆಲ್ಲ ನೆನಪುಗಳೂ ಯೋಚನೆಗಳೂ ಕೊಚ್ಚಿ ಹೋದುವು. ಅನಂತನನ್ನು ನೋಡಬೇಕು, ಎದೆಗವಚಿಕೊಳ್ಳಬೇಕು, ಎತ್ತಿ ಮುದ್ದಾಡಬೇಕು ಎಂಬ ಬಯಕೆ ಮನಸ್ಸಿನಲ್ಲಿ ದಳ್ಳುರಿಯಿತ್ತು. ತನಗಾಗಿದ್ದ ಅವಮಾನ, ತನ್ನನ್ನು ತನ್ನ ತಮ್ಮ ಮತ್ತು ಅತ್ತಿಗೆ ಆಡಿಕೊಂಡದ್ದು, ತುಚ್ಛವಾಗಿ ಕಂಡದ್ದು—ಎಲ್ಲವೂ ಕ್ಷಣಾರ್ಧದಲ್ಲಿ ಮರೆತುಹೋಯಿತು. ಅನಂತನ ಮುದ್ದು ಮುಖ ಕಣ್ಣೆದುರು ಮೂಡಿ ನಿಂತು 'ಅಮ್ಮಾ, ಅಮ್ಮಾ, ಅಮ್ಮಾ' ಎಂದು ವಿಹ್ವಲವಾಗಿ ಕೂಗಿತ್ತು. "ಮಗೂ, ಕಂದ, ನನ್ನ ರಾಜಾ" ಎಂದ. ಪದ್ಮಳ ಮನಸ್ಸು ಮಾರ್ದನಿಗೊಟ್ಟು ಮೈಲಿ ಮೈಲಿಗಳನ್ನು ದಾಟಿ ಹಲಸೂರಿನ ಕಡೆಗೆ ಓಡಿತು.

ಅನಂತ ಈಗ ಹೇಗಿದ್ದಾನೋ? ಆಗಲೇ ಅತ್ತಿಂದಿತ್ತ ಓಡಾಡುತ್ತ ಮುದ್ದು ಮುದ್ದಾಗಿ ತೊದಲು ಮಾತಾಡುತ್ತಾ ಮನೆಯನ್ನೆಲ್ಲ ತನ್ನ ಕೇಕೆಯಿಂದ, ನಗುವಿನಿಂದ, ಕುಣಿತದಿಂದ ತುಂಬುತ್ತಿದ್ದ. ಧಷ್ಟಪುಷ್ಟವಾಗಿ ಆರೋಗ್ಯವಾಗಿ ಇದ್ದ. ಅವನ ಆ ಕಣ್ಣುಗಳು. ದುಂಡು ದುಂಡಾಗಿ ಹೃದಯವನ್ನೇ ಮುಟ್ಟಿ ವಾತ್ಸಲ್ಯದ ಗಂಗೆಯನ್ನು ಚಿಮ್ಮಿಸುವ ಆ ಕಣ್ಣುಗಳು. "ಮಗೂ, ನಾನು ದೊಡ್ಡ ಅಪರಾಧ ಮಾಡಿದೆ. ತಾಯಿ ಇದ್ದೂ ಇಲ್ಲ ಅಂತ ಅನಿಸಿದೆ. ನಿಜವಾಗಿಯೂ ನಾನು ನಿನಗೆ ತಾಯಿಯೇ? ತಾಯಿಯಾದವಳು ಯಾರೇ ಆಗಲಿ ನಾನು ಮಾಡಿದ ಹಾಗೆ ಮಾಡುವಳೇ?" ಎಂದು ಪದ್ಮಾ ಬಿಕ್ಕಿಬಿಕ್ಕಿ ಅತ್ತಳು. ಮನವಾರೆ ಅತ್ತಳು. ನಿಸ್ಸಂಕೋಚವಾಗಿ, ನಿರ್ಭಯವಾಗಿ ತನ್ನ ಮನಸ್ಸಿನ ದುಃಖವನ್ನೆಲ್ಲ ಕಂಬನಿಯ ರೂಪವಾಗಿ ಉಕ್ಕಿಸಿದಳು.

ಶೀನಪ್ಪ–ಅನಂತ; ಅನಂತ–ಶೀನಪ್ಪ—ಈ ಎರಡು ಬಿಂದುಗಳ ಮಧ್ಯೆ ಅವಳ ಮನಸ್ಸು ಹೊಯ್ದಾಡಿತು. ಒಮ್ಮೆ ಈ ಕಡೆ ತುಯ್ತು; ಒಮ್ಮೆ ಆ ಕಡೆ. ಆದರೆ ಈಗ ಆ ಎರಡೂ ಬಿಂದುಗಳು ಒಂದೇ ಆಗಿವೆ. ಶೀನಪ್ಪನ ಮೇಲಿನ ಪ್ರೀತಿ, ಮಗುವಿನ ಮೇಲಿನ ವಾತ್ಸಲ್ಯ—ಈ ಎರಡೂ ಒಂದೇ ಒಂದು ದಿಕ್ಕನ್ನು ಸೂಚಿಸುತ್ತವೆ: ಶೀನಪ್ಪನ ಮನೆಯನ್ನು ಬಿಟ್ಟು ಹೋಗುವುದು. ಎಲ್ಲಿಗೆ? ಎನ್ನುವ ಪ್ರಶ್ನೆ ಆಮೇಲೆ. ಆಮೇಲೆ ಏನಾಗುತ್ತದೆ ಅಂತ ಈಗ ಯೋಚಿಸ

ಕೂಡದು. ಶೀನಪ್ಪನಿಗೆ ಒದಗಬಹುದಾದ ಇನ್ನು ಮುಂದಿನ ಎಲ್ಲ ಅನಿಷ್ಟಗಳನ್ನೂ ದೂರ ಮಾಡುವುದಕ್ಕಾಗಿ ಈ ಮನೆ ಬಿಡಬೇಕು. ತನ್ನ ಮುದ್ದು ಕಂದ ಅನಂತನಿಗೆ ತಾನು ಮಾಡಿದ ಮಹಾಪರಾಧದ ಪಾಪ ವಿಮೋಚನೆಗಾಗಿ ಅನಂತನಿರುವಲ್ಲಿಗೆ ಹೋಗಬೇಕು.

"ಹೋಗಲೇ ಬೇಕು" ಎಂದು ಪದ್ಮಾ ನಿರ್ಧರಿಸಿಕೊಂಡಳು. ಈ ನಿರ್ಧಾರದಿಂದ ಮನಸ್ಸಿನ ಗೊಂದಲ ಕಳೆದು ಕೊಂಚವಾದರೂ ಸ್ತಿಮಿತ ಬಂತು. "ಸರಿ, ಈ ದಿನವೇ ಹೊರಟು ಬಿಡಬೇಕು. ಅವರೂ ಇಲ್ಲ. ಇದ್ದಿದ್ದರೆ ಹೊರಡುವುದು ಆಗುತ್ತಲೇ ಇರಲಿಲ್ಲ. ಇದೇ ಸರಿಯಾದ ಸಮಯ." ಎಂದು ಕೊಂಡಳು.

ಹೇಳದೆ ಕೇಳದೆ ಹೊರಟು ಹೋದರೆ ಶೀನಪ್ಪ ಏನು ತಿಳಿದುಕೊಳ್ಳುತ್ತಾನೋ ಅಂತ ಕಳವಳ. "ಆದರೆ ಅವರಿಗೆ ಎಲ್ಲವೂ ಅರ್ಥವಾಗುತ್ತದೆ. ನನ್ನ ವಿಷಯದಲ್ಲಿ ಅವರು ತಪ್ಪು ತಿಳಿದು ಕೊಳ್ಳುವುದಿಲ್ಲ" ಎಂದು ಅವಳ ಅಂತರಂಗ ಅವಳಿಗೆ ಭರವಸೆ ಕೊಟ್ಟಿತು. "ಆದರೆ ಅಯ್ಯೋ ಅಂಥವರನ್ನು ಬಿಟ್ಟು ಹೋಗವುದು ಸಾಧ್ಯವೇ ? ಈ ಕಾಲು ಇಲ್ಲಿಂದ ಕಿತ್ತು ಹೊರಟೀತೇ ?" ಎಂದು ಮತ್ತೆ ಆ ಶಂಕೆ. ಈ ರೀತಿ ಶಂಕೆ, ಅಳುಕು ಕೂಡದು. ತಾನು ಇಲ್ಲಿಂದ ಹೋಗಲೇ ಬೇಕು. ಬೇರೆ ದಾರಿ ಇಲ್ಲ. ಆದರೆ ಮನಸ್ಸು ಮಾತ್ರ, ಹೃದಯ ಮಾತ್ರ, ಹೃದಯದ ಮೃದುಭಾವಗಳೆಲ್ಲ ಇಲ್ಲೇ ಸುತ್ತುತ್ತಿರುತ್ತವೆ. ಶೀನಪ್ಪನ ರೂಪ ತನ್ನ ಮನಸ್ಸಿನಲ್ಲಿ ಚಿರಕಾಲವೂ ಅಚ್ಚೊತ್ತಿದಂತೆ ಉಳಿಯುತ್ತದೆ. ಆ ಗುಣ, ಆ ಸೌಜನ್ಯ, ಆ ಔದಾರ್ಯ, ಆ ಅಪಾರ ಅನುಕಂಪ– ಇವುಗಳ ನೆನಪು ಎಂದೂ ಮಾಸುವುದಿಲ್ಲ–ಎಂದೂ, ಎಂದೆಂದೂ.

ಇಂಥ ಒಬ್ಬ ಮನುಷ್ಯನನ್ನು ನೋಡಿದ್ದು ತನ್ನ ಪುಣ್ಯ ಎಂದುಕೊಂಡಳು ಪದ್ಮಾ. ಅವನು ದೇವರಲ್ಲ, ಮನುಷ್ಯ ಎಂಬುದೇನೋ ಅವಳಿಗೆ ಈಗ ತಿಳಿಯಿತು. ಆದರೆ ಎಂಥ ಮನುಷ್ಯ ? ಎಂಥ ಉದ್ವೇಗಕಾಲದಲ್ಲೂ, ಹೃದಯದ ಎಂಥ ಅಲ್ಲೋಲಕಲ್ಲೋಲ ಕಾಲದಲ್ಲೂ ತನ್ನನ್ನು ಮರೆತು ಇನ್ನೊಬ್ಬರನ್ನು ಕುರಿತೇ ಯೋಚಿಸುವಂಥ ಮನುಷ್ಯರು ಈ ಜಗತ್ತಿನಲ್ಲಿ ಎಷ್ಟು ವಿರಳ ! ಅಂಥ ಮನುಷ್ಯನ ಬಾಳು ಕೆಡದಂತೆ ಮಾಡುವಷ್ಟಾದರೂ ಮನುಷ್ಯತ್ವ ತನ್ನಲ್ಲಿದೆ ಎಂದು ತೋರಿಸಬೇಕೆಂದು ಪದ್ಮಾ ನಿಶ್ಚಯಿಸಿಕೊಂಡಳು. ಮನಸ್ಸಿನಲ್ಲಿ ಮತ್ತೆ ಮತ್ತೆ ತಲೆಯೆತ್ತಿ ವಿಜೃಂಭಿಸುತ್ತಿದ್ದ ಕಾಮುಗಳನ್ನೆಲ್ಲ ಹತ್ತಿಕ್ಕಿದಳು.

ಅಲ್ಲಿ ಕೊನೆಗೆ ಉಳಿದದ್ದು ಒಂದೇ ನಿರ್ಧಾರ: “ಈ ದಿನವೇ ಇಲ್ಲಿಂದ ಹೊರಟು ಹೋಗಬೇಕು.”

ಈ ನಿರ್ಧಾರ ಮಾಡಿದ ಮೇಲೆ ಮನಸ್ಸು ಎಷ್ಟೋ ಹಗುರವಾಯಿತು. ಹರ್ಷವಿಲ್ಲ: ಆದರೆ ತಾನು ತನ್ನ ಕೆಲಸವನ್ನು, ತನ್ನ ಕರ್ತವ್ಯವನ್ನು ಮಾಡುತ್ತಿದ್ದೇನೆಂಬ ತೃಪ್ತಿ. ಸಂಜೆಯ ವರೆಗೂ ಅವಳು ಮನೆಯಲ್ಲಿ ಏನೇನೋ ಕೆಲಸ ಮಾಡುತ್ತಲೇ ಕಳೆದಳು. ಮನೆಯನ್ನೆಲ್ಲ ತಾನೆ ಗುಡಿಸಿ ಸಾರಿಸಿ ಓರಣಗೊಳಿಸಿದಳು. ಸಂದು ಮೂಲೆಗಳ, ಗೋಡೆಗಳ ಮೇಲಿನ ಕಸವನ್ನು ಜೇಡರ ಬಲೆಯನ್ನು ಝಾಡಿಸಿ ತೆಗೆದಳು. ಮನೆಯೆಲ್ಲ ಅಚ್ಚುಕಟ್ಟಾದ ಮೇಲೆ ದೇವರ ಮನೆಯಲ್ಲಿ ದೀಪ ಹಚ್ಚಿಟ್ಟು ದೇವರಿಗೆ ನಮಸ್ಕಾರ ಮಾಡುತ್ತಾ “ ಈ ಮನೆಯ ದೀಪ ಎಂದೆಂದಿಗೂ ಆರದಿರಲಿ ಶೀನಪ್ಪನವರ ಜೀವನ ಸುಖಮಯವಾಗಲಿ” ಎಂದು ಬೇಡಿಕೊಂಡು ಹೊರಗೆ ಹೋಗಿ ಕೊಂಚ ಕುಳಿತಳು.

ಆಮೇಲೆ ಯಥಾಪ್ರಕಾರ ಅಡಿಗೆಯ ಕೆಲಸ. ತಾನೊಬ್ಬಳೇ ಊಟ ಮಾಡುವುದಾದ್ದರಿಂದ ಅಡಿಗೆಯ ಮನೆಯಲ್ಲಿ ಪದ್ಮಳಿಗೆ ಹೆಚ್ಚು ಕಾಲ ಹಿಡಿಯಲಿಲ್ಲ. ಮಧ್ಯಾಹ್ನದ್ದೇ ಅಷ್ಟು ಮೇಲೋಗರ ಉಳಿದಿತ್ತು. ಈಗ ಅಷ್ಟು ಅನ್ನವನ್ನು ಮಾತ್ರ ಬೇಯಿಸಿಕೊಂಡಳು.

ಕತ್ತಲು ಕತ್ತಲಾಗುವಷ್ಟರಲ್ಲೇ ನಾಗಿ ಬಂದಳು. ಪದ್ಮಾ ಬೇಗ ಬೇಗ ಊಟ ಮುಗಿಸಿ ಮಿಕ್ಕದ್ದನ್ನು ನಾಗಿಗೂ ಬಡಿಸಿದಳು. ಒಳಗಿನ ಕಸಮುಸರೆ ಎಲ್ಲ ಮುಗಿಸಿ ಹೊರಗೆ ಬಂದು ಕುಳಿತಳು.

“ ನಾಗಿ, ಏನು ಮತ್ತೆ ವಿಶೇಷ ? ” ಎಂದು ಕೇಳಿದಳು.

“ ವಿಶೇಷವೇನು ಅಮ್ಮಾ. ನಿನ್ನೆ ರಾತ್ರಿಯೆಲ್ಲ ನಿದ್ದೆಯಿಲ್ಲ. ಈಗಲೇ ಮಲಗಿಬಿಡುವ ಅನ್ನಿಸುತ್ತಿದೆ ”

“ ನಿನ್ನೆ ರಾತ್ರಿ ನೀನು ಎಷ್ಟು ಹೊತ್ತಿಗೆ ಬಂದೆ, ನಾಗಿ? ”

“ ಬರುವಾಗ ಕೋಳಿ ಕೂಗುವ ಹೊತ್ತು ಅಮ್ಮಾ; ರಾತ್ರಿಯೆಲ್ಲ ದೈವ ಆಳಿಸುವುದು ಕೋಳಿ ಕುಯ್ಯುವುದು– ಇದೇ ಕೆಲಸ ಆಯ್ತು.”

“ ಸುಬ್ಬಿ ಮನೆಯಲ್ಲೇ ಇದ್ದಾಳೋ ? ಇಲ್ಲ, ನಂಟರ ಮನೆಯಲ್ಲೇ ಉಳಕೊಂಡಳೋ ? ”

“ ಬಂದಿದ್ದಾಳೆ ಅಮ್ಮಾ ” ಎಂದು ನಾಗಿ “ಮುದುಕರಾದ ಮೇಲೆ ಬದುಕುವುದು ತಪ್ಪು ಅಮ್ಮಾ ” ಎಂದಳು. ನಾಗಿಯ ಧ್ವನಿ ಭಾರವಾಗಿತ್ತು. ಹೃದ

ಯದಲ್ಲಿ ಉಕ್ಕಿ ಬರುತ್ತಿದ್ದ ದುಃಖವನ್ನು ಅವಳು ಕಷ್ಟಪಟ್ಟು ತಡಕೊಳ್ಳುತ್ತಿರುವಂತೆ ತೋರಿತು.

" ಏಕಮ್ಮಾ ನಾಗಿ, ಏನಾಯಿತು ?" ಎಂದಳು ಪದ್ಮಾ ಕೊಂಚ ಗಾಬರಿಯಾಗಿ.

" ಅಂಥದ್ದೇನೂ ಇಲ್ಲ, ಅಮ್ಮಾ. ನನಗೆ ವಯಸ್ಸಾಯಿತು. ಮೊದಲಿನ ಹಾಗೆ ಕೆಲಸ ಮಾಡಲು ಆಗುವುದಿಲ್ಲ. ಮನೆಯಲ್ಲಿ ಕೂತು ತಿನ್ನುವುದಕ್ಕೆ ಏನಿದೆ ಹೇಳಿ. ಎಲ್ಲಾದರೂ ಕೂಲಿ ಮಾಡಿದ್ರೇ ಒಂದು ತುತ್ತು ಅನ್ನ. ಸುಬ್ಬಿ ನನ್ನ ಮೇಲೆ ದಿನವೆಲ್ಲ ರೇಗುತ್ತಾಳೆ. ಏನು ಮಾಡುವುದು?"

" ಸುಬ್ಬಿ ಒಳ್ಳೆಯವಳು ಅಂತ ತಿಳಿದಿದ್ದೆ."

" ಸುಬ್ಬಿ ಕೆಟ್ಟವಳು ಅಂತ ನಾನು ಹೇಳಲಿಲ್ಲ, ಅಮ್ಮಾ. ಆದರೆ ಅವಳಿಗೂ ಮೈ ಚೆಂದಾಗಿಲ್ಲ. ದಿನವೆಲ್ಲ ದುಡಿದರೂ ಹೊಟ್ಟೆ ತುಂಬುವುದಿಲ್ಲ. ಅದಕ್ಕೆ ಸುಮ್ಮಸುಮ್ಮನೆ ಸಿಟ್ಟು. ಪಾಪ, ಅವಳೂ ಎಷ್ಟು ಸೊರಗಿದ್ದಾಳೆ ಅಂತೀರಿ " ಎಂದಳು, ನಾಗಿ. ಅವಳ ಮಾತಿನಲ್ಲಿ ತನ್ನ ಮಗಳ ಬಗ್ಗೆ ವ್ಯಕ್ತವಾದ ಮರುಕವನ್ನು ಕಂಡು ಪದ್ಮಾ ಆಶ್ಚರ್ಯಪಟ್ಟಳು.

ನಾಗಿಯೇ ಮತ್ತೆ ಹೇಳಿದಳು: " ಮಕ್ಕಳು ದೊಡ್ಡವರಾದ ಮೇಲೆ ಅಮ್ಮಾ, ತಂದೆತಾಯಿಗಳು ಇರಬಾರದು. ಮಕ್ಕಳಿಗೆ ಅವರು ಆಮೇಲೆ ಬೇಡ. ಮುದುಕರಾದರಂತೂ ಮನೆಗೆ ಒಂದು ಹೊರೆ ಆಗುತ್ತಾರೆ. ಕೆಲಸ ಮಾಡುವುದಕ್ಕೆ ಆಗುವುದಿಲ್ಲ: ತಿನ್ನುವುದಕ್ಕೆ ಮಾತ್ರ ಬೇಕು ಎಂದರೆ ಹೇಗೆ ನಡೆಯುತ್ತದೆ, ಹೇಳಿ."

" ಅಲ್ಲ ನಾಗಿ, ನೀನು ಈ ವಯಸ್ಸಿನಲ್ಲೂ ಎಷ್ಟು ಕೆಲಸ ಮಾಡುತ್ತೀ. ಇದಕ್ಕಿಂತ ಹೆಚ್ಚು ಏನು ಮಾಡುವುದಕ್ಕಾಗುತ್ತದೆ ನಿನಗೆ? ಸುಬ್ಬಿ ಅಷ್ಟು ಯೋಚನೆ ಮಾಡಬೇಡವೇ ?"

" ಸುಬ್ಬಿಯು ಯೋಚನೆ ಮಾಡುತ್ತಾಳಮ್ಮಾ; ಅವಳಿಗೂ ತಿಳಿಯುತ್ತದೆ. ಆದರೆ ಈ ಹಸಿವು ಕೆಟ್ಟದ್ದು. ಅದು ಬುದ್ಧಿ ಕೆಡಿಸುತ್ತದೆ. ಅಂಥ ಹೊತ್ತಿನಲ್ಲಿ ಕೆಟ್ಟ ಮಾತೂ ಬರುತ್ತದೆ." ಎಂದಳು.

ಪದ್ಮಾ ಈ ಮಾತುಗಳನ್ನು ಕೇಳಿ ಯೋಚಿಸತೊಡಗಿದಳು. ನಾಗಿಯ ತಿಳಿವಳಿಕೆಯನ್ನು ಕಂಡು ಅವಳಿಗೆ ಆಶ್ಚರ್ಯವಾಗಿತ್ತು. ಅನುಭವಕ್ಕಿಂತ ದೊಡ್ಡ ಪಾಠಶಾಲೆ ಯಾವುದಿದೆ ? ಕಷ್ಟಗಳನ್ನೇ ಅನುಭವಿಸಿ ಬಂದ ಮುದುಕಿ

ಆದರೂ ಎಷ್ಟು ತಾಳ್ಮೆ, ಎಷ್ಟು ವಿವೇಕ !

" ನಾಗಿ, ನೀನು ಬಹಳ ಒಳ್ಳೆಯ ಹೆಂಗಸು. ಶೀನಪ್ಪನವರಿಗೆ ತಕ್ಕ ಒಕ್ಕಲು. ಎಷ್ಟು ಒಳ್ಳೆಯ ಮನಸ್ಸು ನಿನ್ನದು " ಎಂದಳು.

" ನನ್ನ ಒಳ್ಳೆ ಮನಸ್ಸಿಗಷ್ಟು ಮಣ್ಣು ಹಾಕಿ " ಎಂದು ನಾಗಿ, ಕೊಂಚ ಸುಮ್ಮನಿದ್ದು " ಆದರೆ ಶೀನಪ್ಪ ಒಡೇರ ವಿಚಾರವಾಗಿ ನೀವು ಹೇಳಿದ್ದು ಸತ್ಯ. ಅವರು ಇಲ್ಲದೆ ಹೋಗಿದ್ದರೆ ನಾವು ಯಾವಾಗಲೋ ಮಣ್ಣು ತಿನ್ನುತ್ತಿದ್ದೆವು. ಇಂಥ ಮನುಷ್ಯರೂ ಉಂಟಾ ? ಅಂತ ನನಗೆ ಎಷ್ಟೋ ಸಲ ಅನ್ನಿಸುತ್ತಿತ್ತು. ಮನಸ್ಸು ದೊಡ್ಡದು; ಕೈಯೂ ದೊಡ್ಡದು. ಆ ಭೂತರಾಯ ಒಡೇರಿಗೆ ಒಳ್ಳೇದು ಮಾಡಲಿ ಅಂತ ದಿನಾ ನಾನು ಅಡ್ಡ ಬೀಳುತ್ತಿದ್ದೇನೆ " ಎಂದಳು.

" ನಾಗಿ ಈಗ ಊರಲ್ಲೆಲ್ಲ ಶೀನಪ್ಪನ ವಿಚಾರ ಕೆಟ್ಟ ಮಾತು ಆಡುತ್ತಿದ್ದಾರೆ– ಅಲ್ಲವೇ ?"

" ಜನದ ಬಾಯಿಗೆ ಬೀಗ ಹಾಕಲಿಕ್ಕೆ ಆಗುತ್ತದಾ ಅಮ್ಮಾ. ಯಾರೋ ನಾಲ್ಕು ಜನ ಏನೇನೋ ಹೇಳಿಕೊಂಡು ತಿರುಗುತ್ತಾರೆ. ಆದರೆ ಶೀನಪ್ಪನವರನ್ನು ಬಲ್ಲವರು ಯಾರೂ ಅಂಥ ಮಾತು ಆಡಲು ಸಾಧ್ಯವೇ ಇಲ್ಲ. ನಮಗಂತೂ ಶೀನಪ್ಪ ಎಂದರೆ ದೇವರೇ."

" ಎಲ್ಲ ನನ್ನಿಂದ ಅಲ್ಲವೇ, ನಾಗಿ ? ಇಲ್ಲವಾದರೆ ಅವರಿಗೆ ಈ ಅಪವಾದ ಬರುತ್ತಿರಲಿಲ್ಲ. ನಾನು ಪಾಪಿ, ನಾಗಿ " ಎಂದಳು.

" ಹಾಗೆಲ್ಲ ಹೇಳಬೇಡಿ ಅಮ್ಮಾ. ನಿಮ್ಮ ಗುಣ ನಾವು ಕಾಣೆವಾ ? ನೀವಾದರೂ ಪಾಪ ಏನು ಮಾಡಬೇಕು; ಎಲ್ಲ ಅದೃಷ್ಟ, ಅಮ್ಮಾ."

" ನಾನು ಆದಷ್ಟು ಬೇಗ ಇಲ್ಲಿಂದ ಹೊರಟು ಹೋಗುವುದೇ ಒಳ್ಳೆಯದಲ್ಲವೆ, ನಾಗಿ ? ಆಮೇಲೆ ಅವರಿಗೆ ಈ ಅಪವಾದ, ಬಹಿಷ್ಕಾರ ಯಾವುದೂ ಇರುವುದಿಲ್ಲ. ಅಂಥ ಸಜ್ಜನರು ತೊಂದರೆಗೆ ಸಿಕ್ಕಬಾರದು."

" ಸರಿ ಅಮ್ಮಾ, ನೀವು ಹೇಳುವುದು ಸರಿ. ಹೆಂಗಸಿಗೂ ಅವಳ ಗಂಡನ ಪಾದವೇ ಸರಿಯಾದ ಸ್ಥಳ. ಅದು ತಪ್ಪಿದರೆ ಹೆಂಗಸಿಗೆ ಮತ್ತೆ ಸುಖವಿಲ್ಲ." ಎಂದಳು ನಾಗಿ. ನಾಗಿಯ ಮಾತು ಲೋಕಾನುಭವದ ನಿರ್ಧಾರದ ಮಾತು ಅಂತ ಪದ್ಮಳಿಗೆ ತೋರಿತು.

ಒಂದು ಸ್ವಲ್ಪ ಹೊತ್ತು ಬಿಟ್ಟು ನಾಗಿಯೇ ಮತ್ತೆ ಮಾತಾಡಿದಳು:

"ಶೀನಪ್ಪ ಒಡೆಯರು ಮದುವೆ ಮಾಡಿಕೊಂಡದ್ದು ನೋಡಬೇಕು ; ಮನೆ ತುಂಬ ಮಕ್ಕಳು ಓಡಾಡಬೇಕು ಅಂತ ನನಗೆ ಬಹಳ ಆಶೆ ಅಮ್ಮಾ. ಅದೊಂದನ್ನು ಕಂಡು ಕಣ್ಣು ಮುಚ್ಚಿದರೆ ಸಾಕು ಈ ಪಾಪಿ ಜನ್ಮ" ಎಂದಳು ನಾಗಿ. ಅವಳ ಕಂಠದಲ್ಲಿ ಸಹಾನುಭೂತಿ, ಆಳವಾದ ವಿಶ್ವಾಸ ತುಂಬಿತ್ತು. ಅವಳ ಮಾತನ್ನು ಕೇಳಿ ಪದ್ಮಳಿಗೂ ಕಂಠ ಬಿಗಿದು ಬಂತು.

"ನಾಗಿ, ನೀನು ಮಲಗಿಕೊ. ನಿನ್ನೆ ರಾತ್ರಿಯೆಲ್ಲ ನಿದ್ದೆಯಿಲ್ಲ ಅಂತೀ" ಎಂದು "ನಾನೂ ಅದನ್ನೇ ದೇವರಲ್ಲಿ ಬೇಡಿಕೊಳ್ಳುತ್ತಿರುವುದು: ಶೀನಪ್ಪನವರು ಸುಖವಾಗಿರಲಿ ಅಂತ. ಅವರ ಸುಖಕ್ಕಾಗಿ ಏನು ಬೇಕಾದರೂ ಮಾಡಬಹುದು. ಅವರು ಸುಖವಾಗಿದ್ದರೆ ಹತ್ತು ಜನ ಸುಖವಾಗಿರುತ್ತಾರೆ; ಅಲ್ಲವೇ, ನಾಗಿ ?" ಎಂದು ಕೇಳಿದಳು.

ನಾಗಿ ಅದಕ್ಕೆ ಸೈಗುಡುತ್ತ ಕಂಬಳಿಯನ್ನು ಬಿಚ್ಚಿ ಮಲಗಿದಳು. ಪದ್ಮಾವತಿಯ ಮನಸ್ಸು ಈಗ ಗಟ್ಟಿಯಾಗಿತ್ತು. ಅದರಲ್ಲಿ ಈಗ ಒಂದೇ ಯೋಚನೆ. "ಈ ಮನೆ ಬಿಟ್ಟು ಹೋಗಲೇ ಬೇಕು– ಈ ರಾತ್ರಿಯೇ."

ಪದ್ಮಾ ತಾನೂ ಮಲಗಿಕೊಂಡಳು. ನಿದ್ದೆ ಹತ್ತದು. ಹಿಂದಿನ ನೆನಪುಗಳು, ಮುಖ್ಯವಾಗಿ ಶೀನಪ್ಪನ ಪ್ರೀತಿಯ ಪರಿಧಿಯೊಳಗೆ ತಾನು ಕಳೆದ ದಿನಗಳ ನೆನಪುಗಳು ಮನಸ್ಸಿನಲ್ಲಿ ನರ್ತಿಸುತ್ತಿದ್ದುವು– ಒಂದಾದ ಮೇಲೊಂದು ಬಂದು ನಿದ್ದೆ ಬಂದ ಹಾಗೆ ಆಗುವುದು; ಇದ್ದಕ್ಕಿದ್ದ ಹಾಗೆ ಎಚ್ಚರವಾಗುವುದು. ಹೀಗೆ ಎಷ್ಟೋ ಸಲ ನಡೆಯಿತು. ಕೊನೆಯ ಬಾರಿ ಹೀಗೆ ಹಠಾತ್ತಾಗಿ ಎಚ್ಚರವಾದಾಗ ಎಲ್ಲೋ ದೂರ ಕೋಳಿ ಕೂಗಿದ್ದು ಕೇಳಿಸಿತು. ಕೂಡಲೇ ಹಾಸಿಗೆ ಬಿಟ್ಟೆದ್ದಳು.

ಹೊರಗೆ ಬಂದಳು. ನಾಗಿ ಸುಖವಾಗಿ ನಿದ್ರಿಸುತ್ತ ಸಣ್ಣಗೆ ಗೊರಕೆ ಹೊಡೆಯುತ್ತಿದ್ದಳು. ಹೊರಗೆ ತಂಗಾಳಿ ಬೀಸುತ್ತಿತ್ತು. ಬೆಳ್ಳಿ ಆಗಲೇ ಮೂಡಿತ್ತು.

ನಿರ್ಧಾರದ ಆವೇಗದಿಂದ ಪದ್ಮಾ ಹಲ್ಲು ಕಚ್ಚಿ ತುಟಿ ಬಿಗಿದಳು. ಹೋಗಿ ಮುಖ ತೊಳೆದುಕೊಂಡು ದೇವರ ಕೋಣೆಗೆ ಹೋಗಿ ದೀಪ ಹಚ್ಚಿಟ್ಟು "ಶೀನಪ್ಪನವರ ಜೀವನ ಆನಂದ ಸಾಮ್ರಾಜ್ಯವಾಗಲಿ" ಎಂದು ಬೇಡಿಕೊಳ್ಳುತ್ತ ದೇವರಿಗೆ ಸಾಷ್ಟಾಂಗ ಪ್ರಣಾಮ ಮಾಡಿದಳು.

ಅಲ್ಲಿಂದ ಹೊರ ಹೊರಟಳು. ಬಾಗಿಲನ್ನೆಲ್ಲ ಹಾಕಿದಳು. ನಾಗಿಯ

ಹತ್ತಿರ ಹೋದಳು. ಅವಳಿಗೆ ಇನ್ನೂ ಸುಖ ನಿದ್ರೆ. ಹೆಬ್ಬಾಗಿಲಿಗೆ ಬಂದು ಬಾಗಿಲು ತೆರೆದಳು. ಹೊರಗೆ ಹೋಗಿ ಮತ್ತೆ ಬಾಗಿಲನ್ನು ಮುಂದಕ್ಕೆ ಮಾಡಿ ಕೊಂಡಳು.

ನಾಲ್ಕಾರು ತಿಂಗಳುಗಳ ಹಿಂದೆ ತಾನು ಯಾವ ಮೆಟ್ಟಿಲುಗಳ ಮೇಲೆ ನಿಶ್ಚೇಷ್ಟಳಾಗಿ ಬಿದ್ದಿದ್ದಳೋ ಅದೇ ಮೆಟ್ಟಿಲುಗಳ ಮೇಲೆ ಮತ್ತೆ ನಿಂತಳು. ಹಿಂದಿನ ನೆನಪೆಲ್ಲ ಒಂದೇ ಸಲ ಕಟ್ಟೆಯೊಡೆದ ಪ್ರವಾಹದಂತೆ ಮನಸ್ಸಿನಲ್ಲಿ ಭೋರ್ಗರೆಯಿತು. ಒಂದು ಕ್ಷಣ "ಏನಾದರಾಗಲಿ, ಈ ಮನೆ ಬಿಟ್ಟು ಹೋಗಬಾರದು" ಎಂಬ ಭಾವನೆ ಮನಸ್ಸಿನಲ್ಲಿ ಬೆಟ್ಟದಷ್ಟು ದೊಡ್ಡದಾಗಿ ಎದ್ದು ನಿಂತಿತು. ಆದರೆ ಮರುಕ್ಷಣವೇ ಮನಸ್ಸು ತನ್ನ ನಿರ್ಧಾರವನ್ನು ಅರಿತು ಸ್ಥಿರವಾಯಿತು. ಒತ್ತೊತ್ತಿ ಬರುತ್ತಿರುವ ಅಳುವನ್ನು ಹಲ್ಲು ಕಚ್ಚಿ ಬಿಗಿಹಿಡಿದಳು. ಬಿಗಿದ ರಭಸದಲ್ಲಿ ತುಟಿ ಗಾಯವಾಗಿ ರಕ್ತ ಚಿಮ್ಮಿತು.

ಹೆಬ್ಬಾಗಿಲ ಹೊಸ್ತಿಲ ಮೇಲೆ ಒಂದು ಕ್ಷಣ ತಲೆಯಿಟ್ಟು ಮಲಗಿದಳು. ಆ ಮನೆಯ ಅಧಿದೇವತೆಯನ್ನು ನಮಸ್ಕರಿಸಿ ' ಶೀನಪ್ಪನವರೇ, ನನ್ನ ಅಪರಾಧ ಕ್ಷಮಿಸಿ, ನಾನು ಪಾಪಿ " ಎಂದು ಎದ್ದು ನಿಂತು ಆ ಮನೆ ಬಿಟ್ಟು ಹೊರಟೇ ಬಿಟ್ಟಳು. ಇನ್ನೂ ನಾಲ್ಕೈದು ಗಳಿಗೆ ರಾತ್ರಿ ಇತ್ತು. ಹೊರಗೆ ಜನಸಂಚಾರವಿಲ್ಲ. ಚಂದ್ರ ಮುಳುಗಿ ಎಷ್ಟೋ ಹೊತ್ತಾಗಿತ್ತು. ಪದ್ಮಾ ಅದು ಯಾವುದನ್ನೂ ಗಮನಿಸಲಿಲ್ಲ. ತುಟಿ ಬಿಗಿದು ಹೆಜ್ಜೆಯಿಟ್ಟಳು.

ಕತ್ತಲಲ್ಲಿ ಕರಗಿ ಹೋದಳು.

## ೧೯

ಗಂಗೆಯ ಮನೆಯಿಂದ ಹೊರಟ ಸುಬ್ಬನಿಗೆ ಆದಷ್ಟು ಬೇಗ ಕೊಲ್ಲೂರಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲ ರಾಮಚಂದ್ರಶಾಸ್ತ್ರಿಗೆ ತಿಳಿಸಬೇಕು ಎಂಬುದೊಂದೇ ಯೋಚನೆ. ಆಮೇಲೆ ಮುಂದಿನ ಕೆಲಸ—ಪದ್ಮಾ ಎಲ್ಲಿದ್ದಾಳೆ ಅಂತ ಪತ್ತೆ ಹಚ್ಚುವುದು. ಅದು ಸುಲಭವಾದ ಕೆಲಸವಾಗಿರಲಿಲ್ಲ. ಮಳೆಗಾಲ; ಒಂದು ಕಡೆಯಿಂದ ಒಂದು ಕಡೆಗೆ ಜನಸಂಚಾರ ಕಡಿಮೆ. ಆದಕಾರಣ ವರ್ತಮಾನ ಹಬ್ಬುವುದೂ ನಿಧಾನ. ಮಂಗಳೂರಿನಿಂದ ಉಡುಪಿಯತನಕ ಬಸ್ಸು ಶುರುವಾಗಿದೆಯಂತೆ. ಆದರೆ ಅದರ ಮುಂದೆ ಯಾವ ವಾಹನವೂ ಇಲ್ಲ. ಸುಬ್ಬಯ್ಯಶೆಟ್ಟಿಯ ಜಟಕಾ ಸರ್ವೀಸೂ ನಿಂತುಹೋಗಿತ್ತು. ಮಳೆಗಾಲದಲ್ಲಿ ಎತ್ತಿನ ಗಾಡಿ ಕೂಡಾ ಸಿಕ್ಕುವುದು ಕಷ್ಟ. ಪ್ರಯಾಣ ಅತಿ ಕಷ್ಟ. ಆದರೆ ಬೇರೆ ಉಪಾಯವಿಲ್ಲ. ಗಂಗೊಳ್ಳಿಯಿಂದ ಕೊಲ್ಲೂರಿಗೆ ಹೋಗದೆ ಗತ್ಯಂತರವಿಲ್ಲ. ಸುಮಾರು ಮೂವತ್ತುನಾಲ್ಕು ಮೈಲಿ ದೂರ. ಒಳದಾರಿಯಿಂದ ಹೋದರೆ ದೂರ ಅಷ್ಟು ಕಡಿಮೆಯಾದೀತು. ಆದರೆ ಈ ಕಾಲದಲ್ಲಿ ರಾಜಬೀದಿಯ ಮೇಲೆ ಹೋಗುವುದೇ ಸರ್ವೋತ್ತಮ.

ಅಂತೆಯೇ ಸುಬ್ಬ ಪದ್ಮಾವತಿಯ ಸಂಗಡ ತಾನು ಮೊದಲು ಆ ಹೊರಟದ್ದ ದಾರಿಯನ್ನೇ ಹಿಡಿದ. ಈಗ ಅವನು ಒಬ್ಬನೇ. ಜೊತೆಗೆ ಹೆಂಗಸಿಲ್ಲ. ಆದಕಾರಣ ಪ್ರಯಾಣ ಬಹಳ ವೇಗವಾಗಿಯೇ ಸಾಗಿತು. ಹೊರಟ ದಿನವೇ ಬೈಂದೂರಿಗೆ ಬಂದು ತಲುಪಿದ–ಸುಮಾರು ಹದಿನಾರು ಮೈಲಿ ದೂರ. ದಾರಿಯುದ್ದಕ್ಕೂ ಸಣ್ಣ ಸಣ್ಣ ಮಳೆ ಬರುತ್ತಲೇ ಇತ್ತು. ಆದರೆ ಉಪ್ಪುಂದಕ್ಕೆ ಬರುವ ಹೊತ್ತಿಗೆ ಭಾರೀ ಮಳೆ ಶುರುವಾಯಿತು. ಕೈಯಲ್ಲಿದ್ದ ಕೊಡೆ ಗಾಳಿಗೆ ಕಡ್ಡಿ ಮುರಿದು ನಿರುಪಯೋಗವಾಯಿತು– ಉಪ್ಪುಂದದ ಹೊಳೆ ಬಾಗಿಲಿಗೆ ಬರುವಷ್ಟರಲ್ಲಿ ಸುಬ್ಬನ ಮೈ ನಖಶಿಖಾಗ್ರ ನೆನೆದು ಅವನು ನಡುಗುತ್ತಿದ್ದ. ಹೊಳೆ ಬಾಗಿಲ ಕಡವಿನ ಕಟ್ಟೆಯಲ್ಲಿ ಕುಳಿತು ಬಟ್ಟೆಯನ್ನೆಲ್ಲ ಹಿಂಡಿಕೊಂಡ. ತಲೆಯಿಂದ ಸುರಿಯುತ್ತಿದ್ದ ನೀರನ್ನು ಒರಸಿಕೊಂಡ. ಅಲ್ಲೇ ಪಕ್ಕದ ಅಂಗಡಿಯಲ್ಲಿ ಛತ್ರಿಯನ್ನೂ ದುರಸ್ತಿ ಮಾಡಿಕೊಂಡ.

ಹೊಳೆ ದಾಟುವಷ್ಟರಲ್ಲಿ ಕತ್ತಲುಕತ್ತಲಾಗಿತ್ತು. ಅಲ್ಲಿಂದ ಬೈಂದೂರಿಗೆ

ಒಂದೂವರೆ ಮೈಲಿ. ಅಲ್ಲಿ ಮಾಲೆಯರ ನಾರಾಯಣ ಅವನಿಗೆ ಬಹಳ ಕಾಲದಿಂದ ಪರಿಚಿತ. ಅವನ ತಂಗಿ ಸುಮಿತ್ರೆಯೂ ಸುಬ್ಬನಿಗೆ ಪರಿಚಿತಳೇ. ಅಲ್ಲಿ ಹೋಗಿ ಒಂದು ರಾತ್ರಿಯನ್ನು ಕಳೆದು ಮಾರನೆಯ ದಿನ ಬೆಳಗ್ಗೆ ಕೊಲ್ಲೂರಿಗೆ ಮತ್ತೆ ಪಯಣ ಹೊರಡುವುದು ಎಂದುಕೊಂಡಿದ್ದ ಸುಬ್ಬ. ಆದರೆ ಹೊಳೆ ದಾಟುತ್ತಲೇ ವಿಪರೀತ ಚಳಿ ಶುರುವಾಯಿತು. ಮೈ ಗಡಗಡ ನಡುಗುತ್ತಿತ್ತು. ಹೆಜ್ಜೆಯಿಡುವುದೇ ಕಷ್ಟವಾಯಿತು.

ನಾರಾಯಣನ ಮನೆಗೆ ಬಂದಾಗ ಸುಬ್ಬನಿಗೆ ಅಸಾಧ್ಯ ಜ್ವರ. ಕುಳಿತುಕೊಳ್ಳುವುದೇ ಅಸಾಧ್ಯವಾಯಿತು. ನಾರಾಯಣ ಸುಮಿತ್ರೆ ಇಬ್ಬರೂ ಬಹಳ ಕಾಲದ ಮೇಲೆ ತಮ್ಮಲ್ಲಿಗೆ ಬಂದಿದ್ದ ಸುಬ್ಬನನ್ನು ಚೆನ್ನಾಗಿ ಉಪಚರಿಸಿದರು.

ರಾತ್ರಿಯೆಲ್ಲ ಜ್ವರ; ಬೆಳಗಾದರೂ ಜ್ವರ ಬಿಡಲಿಲ್ಲ. ಸುಬ್ಬನಿಗೆ ಮತ್ತೆ ಪ್ರಯಾಣವನ್ನು ಮುಂದುವರಿಸುವ ತವಕ. ಆದರೆ ಏಳಲೂ ತ್ರಾಣವಿಲ್ಲ. ಸುಬ್ಬ ನಾರಾಯಣನನ್ನು ಕಂಡು, "ನನಗೆ ಕೊಲ್ಲೂರಿಗೆ ಬಹಳ ಜರೂರಾಗಿ ಹೋಗಬೇಕಾಗಿತ್ತಲ್ಲ ಅಯ್ಯೋ, ಈ ಹಾಳಾದ ಜ್ವರ ಈಗಲೇ ಏಕೆ ಬರಬೇಕಾಗಿತ್ತು?" ಎಂದು ಹಳಹಳಿಸಿ, "ಏನೇ ಆಗಲಿ, ನಾಳೆ ಬೆಳಗ್ಗೆ ಹೊರಟೇ ಬಿಡುತ್ತೇನೆ. ಜ್ವರ ಇರಲಿ, ಇಲ್ಲದಿರಲಿ" ಎಂದ.

ಅದಕ್ಕೆ ನಾರಾಯಣ "ಸುಬ್ಬಣ್ಣನವರೇ, ಅದೆಲ್ಲ ಆಗಹೋಗುವ ಮಾತಲ್ಲ. ಈ ವಿಪರೀತ ಜ್ವರದಲ್ಲಿ, ಈ ಮಳೆಯಲ್ಲಿ ಪ್ರಯಾಣ ಮಾಡಿ ದಾರಿಯ ಹೆಣವಾಗುತ್ತೀರಾ? ಜ್ವರ ಸಂಪೂರ್ಣ ಗುಣವಾದ ಮೇಲೇ ನೀವು ಇಲ್ಲಿಂದ ಹೊರಡುವುದು" ಎಂದ.

ನಾರಾಯಣನ ಮಾತೂ ಸರಿಯೇ. ನಾರಾಯಣ ಸುಬ್ಬನಿಗೆ ಔಷಧಿ ತಂದುಕೊಟ್ಟ. ಸುಮಿತ್ರಾ ಗಂಜಿ ಮಾಡಿ ಕೊಟ್ಟಳು. ಕಾಲ ಕಾಲಕ್ಕೆ ತಕ್ಕ ಉಪಚಾರಗಳನ್ನೂ ಮಾಡಿದಳು.

ಸುಬ್ಬ ಎಲ್ಲವನ್ನೂ ಅನುಭವಿಸುತ್ತ ನಿರುಪಾಯನಾಗಿ ಮಲಗಿದ. ಜ್ವರ ಎರಡು ದಿನ ಚೆನ್ನಾಗಿ ಬಾರಿಸಿ ಮೂರನೆಯ ದಿನ ಬಿಟ್ಟಿತು. ಆದರೆ ಸುಬ್ಬನಿಗೆ ಒಂದಿಷ್ಟೂ ಶಕ್ತಿಯಿಲ್ಲ. ಇದ್ದ ತ್ರಾಣವೆಲ್ಲ ಎರಡು ದಿನಗಳ ಜ್ವರದಲ್ಲೇ ಲುಪ್ತವಾಗಿ ಹೋಗಿತ್ತು. ಈ ಜ್ವರದ ಕಾಲದಲ್ಲಿ ಸುಬ್ಬನಿಗೆ ಎಷ್ಟೋ ಸಲ ಒಂದಷ್ಟು ನಾರಾಯಿ ಹೊಯ್ದುಕೊಂಡರೆ ಜ್ವರ ಕ್ಷಣಾರ್ಧದಲ್ಲಿ ಬಿಟ್ಟು ಹೋಗ

ಬಹುದು ಎನ್ನಿಸಿತ್ತು. ಆದರೆ ಗಂಗೆಗೆ ತಾನು ಮಾಡಿದ ಪ್ರತಿಜ್ಞೆ ನೆನಪಿಗೆ ಬಂದು ಮನಸ್ಸನ್ನು ಬಹಳ ಕಷ್ಟಪಟ್ಟು ಬಿಗಿಹಿಡಿದ. "ಏಕೆ ಅಂಥ ಶಪಥ ಮಾಡಿದೆ?" ಎಂದು ತನ್ನನ್ನು ತಾನೇ ಶಪಿಸಿಕೊಂಡ.

ಮೂರನೆಯ ದಿನ ಸಂಜೆಯ ಹೊತ್ತಿಗೆ ಸುಬ್ಬನಿಗೆ ಸ್ವಲ್ಪ ಓಡಾಡಲು ಸಾಧ್ಯವಾಗಿತ್ತು. ದಿನವೆಲ್ಲ ಸಾರಾಯಿಯ ನೆನಪು ಮನಸ್ಸನ್ನು ತಿವಿಯುತ್ತಿತ್ತು. ಸಂಜೆಯ ವರೆಗೂ ಹಾಗೂ ಹೀಗೂ ತಡಕೊಂಡು ಬಂದ. ಆದರೆ ಸಂಜೆ ಹೊತ್ತಿಗೆ ಮಾತ್ರ ಇನ್ನು ತಡೆಯುವುದು ಸಾಧ್ಯವೇ ಇಲ್ಲ ಎನ್ನಿಸಿತು. ಮಳೆಯೂ ಕೊಂಚ ಬಿಟ್ಟಿತ್ತು. ಸ್ವಲ್ಪ ಹೊರಗೆ ಹೋಗಿ ಬಂದರೆ ಒಳ್ಳೆಯದು ಎನ್ನಿಸಿತು ಸುಬ್ಬನಿಗೆ. ಮನಸ್ಸಿನಲ್ಲಿಯೇ "ಗಂಗೆ, ನಾನು ಬಹಳ ಪಾಪಾತ್ಮ. ನನ್ನ ಪ್ರತಿಜ್ಞೆ ನೀರಿನ ಮೇಲೆ ಬರೆದ ಬರಹ. ಈಗ ಕುಡಿಯದೆ ನಾನು ಉಳಿಯಲಾರೆ. ಸರಿ. ಕುಡಿಯುತ್ತೇನೆ. ಎಂದಿನಂತೆಯೇ ನನ್ನನ್ನು ಕ್ಷಮಿಸುವ ಕೆಲಸ ನಿನಗೆ" ಎಂದುಕೊಂಡ.

"ನಾರಾಯಣಯ್ಯ, ಸ್ವಲ್ಪ ಹೊರಕ್ಕೆ ಹೋಗಿ ಬರುತ್ತೇನೆ" ಎಂದ.

"ಛೆ, ಛೆ, ಈ ಗಾಳಿಯಲ್ಲಿ ಹೊರಗೆ ಹೋಗುವುದೇ? ಸುಬ್ಬಣ್ಣನವರೇ ಮತ್ತೆ ಜ್ವರ ಬೀಳಬೇಕೆಂತ ಮಾಡುತ್ತೀರಾ?" ಎಂದ ನಾರಾಯಣ.

"ಸ್ವಲ್ಪ ಕೆಲಸವಿತ್ತು" ಎಂದ ಸುಬ್ಬ.

"ಏನು ಕೆಲಸ ಹೇಳಿ."

"ಸ್ವಲ್ಪ ಮೈ ಬೆಚ್ಚಗಾಗುವಂಥದು ಏನಾದರೂ...."

"ಓಹೋ ಅಷ್ಟೇನೋ. ಸರಿ; ನೀವು ಸ್ವಸ್ಥವಾಗಿ ಮಲಗಿಕೊಳ್ಳಿ. ನಾನು ತಂದು ಕೊಡುತ್ತೇನೆ. ಸಾರಾಯಿ ಅಲ್ಲವೇ?" ಅಂದ.

"ಹೌದು ಅದೇ" ಎನ್ನುತ್ತಿರುವಾಗಲೇ ನಾರಾಯಣ ಹೊರಟು ಹೋಗಿ ಒಂದಷ್ಟು ಸಾರಾಯಿ ತೆಗೆದುಕೊಂಡು ಬಂದ. ಅದನ್ನು ಕುಡಿದ ಕೂಡಲೇ ಸುಬ್ಬನಿಗೆ ಹೋದ ಜೀವ ಮರಳಿ ಬಂದ ಹಾಗೆ ಆಯಿತು. "ಇನ್ನು ನಾಳೆ ಬೆಳಗ್ಗೆ ಬೇಕಾದರೆ ಪ್ರಯಾಣ ಮಾಡಬಹುದು" ಎಂದ ಸುಬ್ಬ.

"ಆಗಲಿ; ಬೆಳಗಾಗಲಿ" ಎಂದ ನಾರಾಯಣ.

ನಾರಾಯಣ ಹೇಳಿದ ಹಾಗೆ ಬೆಳಗೇನೋ ಆಯಿತು. ಸುಬ್ಬನಿಗೆ ಐದನೆಯ ದಿನವೇ ಪೂರ್ಣ ತ್ರಾಣ ಬಂದದ್ದು. ಆರನೆಯ ದಿನ ಬೆಳಗ್ಗೆ ಹೊರಡಲು ಸಾಧ್ಯವಾದದ್ದು; ಅವನು ಹೊರಡಲು ನಾರಾಯಣ ಸುಮಿತ್ರೆ

ಯರು ಅನುಮತಿ ಕೊಟ್ಟದ್ದು. ಆರನೆಯ ದಿನ ಬೆಳಗ್ಗೆ ಸುಬ್ಬ "ನಾರಾಯಣಯ್ಯ, ನೀವು ನನಗೆ ಮನೆಯುವರಿಗಿಂತ ಹೆಚ್ಚು ಆದರ ತೋರಿಸಿ ಉಪಚರಿಸಿದಿರಿ. ನಿಮ್ಮ ಋಣ ಹೇಗೆ ತೀರಿಸಲಿ ?" ಎಂದ.

"ಇನ್ನೆರಡು ದಿನ ಇಲ್ಲೇ ಇದ್ದಿದ್ದರೆ ನಮ್ಮ ಋಣ ಸಂಪೂರ್ಣ ತೀರಿ ಹೋಗಿರುತ್ತಿತ್ತು. ಈಗ ಸ್ವಲ್ಪ ಬಾಕಿ ಉಳಿದಿರುವುದು ನಿಜ" ಎಂದು ಸುಮಿತ್ರೆ ಮಾತು ಸೇರಿಸಿದಳು.

"ಹಾಗೆಲ್ಲ ತಿಳಿಯ ಬೇಡಿ ಸುಬ್ಬಣ್ಣ. ಮನುಷ್ಯರು ಮನುಷ್ಯರಿಗೆ ಆಗದೆ ಇನ್ನಾರು ಆಗಬೇಕು ?" ಎಂದ ನಾರಾಯಣ.

ಸುಬ್ಬನಿಗೆ ಮಾತು ಹೊರಡಲಿಲ್ಲ. ನಾರಾಯಣ ಶ್ರೀಮಂತನೇನೂ ಅಲ್ಲ. ದೇವಸ್ಥಾನದಲ್ಲಿ ಸಣ್ಣ ಕೆಲಸ. ಹಾಗೂ ಹೀಗೂ ಜೀವನ ನಡಸುವುದೇ ಕಷ್ಟ. ಅಂಥವನಲ್ಲಿ ಇಷ್ಟು ಔದಾರ್ಯ ಇರುವುದನ್ನು ಕಂಡು ಸುಬ್ಬನ ಮನಸ್ಸು ಕರಗಿತು. "ಬಹುಶಃ ಇಂಥಾ ಔದಾರ್ಯ ಇರುವುದು ಇಂಥವರಲ್ಲೇ ಅಂತ ಕಾಣುತ್ತದೆ. ದೊಡ್ಡವರಲ್ಲಿ ಈ ಮನುಷ್ಯತ್ವ ಕಾಣುವುದು ಬಹಳ ಅಪರೂಪ." ಎಂದುಕೊಂಡ ಸುಬ್ಬ, "ನಿಮಗೆ ದೇವರು ಒಳ್ಳೆಯದು ಮಾಡಲಿ. ನಾನೇನು ತಾನೇ ಮಾಡಬಲ್ಲೆ ನಿಮಗೆ ?" ಎಂದ.

"ಆ ಮಾತೆಲ್ಲ ಹಾಗಿರಲಿ; ಮತ್ತೆ ನೀವು ಈ ಕಡೆ ಬರುವುದು ಯಾವಾಗ ಅದನ್ನು ಹೇಳಿ. ಈ ಸಲ ನೀವು ಇದ್ದದ್ದು ಇದ್ದ ಹಾಗೇ ಆಗಲಿಲ್ಲ." ಎಂದು ಸುಮಿತ್ರೆ ನಕ್ಕಳು.

"ಹೌದು, ಏನು ಮಾಡಲಿ, ಹೇಳು. ಈ ಹಾಳಾದ ಜ್ವರ ಬಂದು ಎಲ್ಲವನ್ನೂ ಕೆಡಿಸಿತು. ಇರಲಿ, ಮತ್ತೆ ಬರುತ್ತೇನೆ. ಆದಷ್ಟು ಬೇಗ ಬರುತ್ತೇನೆ" ಎಂದ.

"ಸರಿ, ಬರುವಾಗ ಮತ್ತೆ ಜ್ವರವನ್ನು ಜೊತೆಗೆ ಕರೆದುಕೊಂಡು ಬರಬೇಡಿ" ಎಂದು ಸುಮಿತ್ರೆ ಎಚ್ಚರಿಸಿದಳು.

"ಆಗಲಿ" ಎಂದು ಸುಬ್ಬ ಅಲ್ಲಿಂದ ಹೊರಟ. "ಇಷ್ಟು ದಿನ ವಿನಾ ಕಾರಣ ಸಾವಕಾಶವಾಯಿತಲ್ಲ" ಎಂದು ಅವನ ಮನಸ್ಸು ವ್ಯಗ್ರವಾಗಿತ್ತು. ಇದೇಕೆ ಹೀಗಾಗಬೇಕು ? ತಾನು ಎಷ್ಟು ಸಲ ಮಳೆಯಲ್ಲಿ ನೆನೆದಿಲ್ಲ ? ಈಗಲೇ ಏಕೆ ಜ್ವರ ಬರಬೇಕು ಎಂದು ತನಗೆ ತಾನೇ ಪ್ರಶ್ನೆ ಕೇಳಿಕೊಂಡ. ಪದ್ಮಾವತಮ್ಮನ ಗ್ರಹಚಾರ ಬಹಳ ಕೆಟ್ಟಿರಬೇಕು. ಇಲ್ಲವಾದರೆ ಯಾತಕ್ಕೆ ಈ

ವಿಘ್ನ ಪರಂಪರೆ ?

ಆ ದಿನ ರಾತ್ರಿಯೇ ಸುಬ್ಬ ಕೊಲ್ಲೂರು ತಲುಪಿದ. ಶಾಸ್ತ್ರಿಯನ್ನು ಅಲ್ಲಿ ನೋಡಬಹುದು ಎಂಬ ಆಶೆಯೇ ಅವನಿಗೆ ಬಲವನ್ನು ತುಂಬುತ್ತಿತ್ತು. ಹದಿನೆಂಟು ಮೈಲಿ ದೂರ ನಡೆದು ಕೊಲ್ಲೂರು ಮುಟ್ಟುವಷ್ಟರಲ್ಲಿ ಅವನ ಪ್ರಾಣ ಉಡುಗಿಹೋಗಿತ್ತು. ಒಂದು ಹೆಜ್ಜೆ ಇಡುವುದು ಕೂಡಾ ಅಸಾಧ್ಯವಾಗಿತ್ತು. ಕೊನೆಯ ನಾಲ್ಕೈದು ಮೈಲಿಗಳನ್ನಂತೂ ತೆವಳಿಕೊಂಡು ಬಂದ ಹಾಗೇ ಬಂದಿದ್ದ.

ಕೊಲ್ಲೂರಿಗೆ ಬಂದಾಗ ಹೊತ್ತು ಕಂತುವ ಸಮಯ. ಸುಬ್ಬ ಅಲ್ಲಿ ವೆಂಕಟರಮಣ ಭಟ್ಟರ ಮನೆಗೆ ಹೋಗಿ ಉಳಿದುಕೊಂಡ. ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು ದೇವಸ್ಥಾನಕ್ಕೆ ಹೋಗಿ ಶಾಸ್ತ್ರಿಯನ್ನು ವಿಚಾರಿಸಬೇಕು ಅಂತ ಮಾಡಿದ್ದ. ಆಯಾಸ ಬಹಳವಾಗಿದ್ದದ್ದರಿಂದ ಏಳುವುದಕ್ಕೇ ಆಗಲಿಲ್ಲ. ಭಟ್ಟರ ಮನೆಯಲ್ಲಿ ಊಟ ಮಾಡಿಕೊಂಡು ಮಲಗಿದ್ದೊಂದೇ ಸುಬ್ಬನಿಗೆ ಗೊತ್ತು. ಮತ್ತೆ ಬೆಳಗ್ಗೆ ಬೆಳ್ಳಂಬೆಳಕು ಹರಡುವ ತನಕ ಅವನಿಗೆ ಎಚ್ಚರವಾಗಲಿಲ್ಲ.

ಬೆಳಗ್ಗೆ ಕಾಲು ತುಂಬ ನೋಯುತ್ತಿತ್ತು. ಹಾಗೇ ಎದ್ದು ಮುಖ ತೊಳೆದುಕೊಂಡು ದೇವಸ್ಥಾನಕ್ಕೆ ಹೋಗಿ ಪಾರುಪತ್ಯಗಾರರನ್ನು ಕಂಡು "ರಾಮಚಂದ್ರ ಶಾಸ್ತ್ರಿಗಳು ಇಲ್ಲಿಗೆ ಬಂದಿದ್ದರೆ ?" ಎಂದು ಕೇಳಿದ.

"ಯಾವ ರಾಮಚಂದ್ರಶಾಸ್ತ್ರಿಗಳು ?" ಎಂದರು ಪಾರುಪತ್ಯಗಾರರು.

"ಕಳೂರುಕಟ್ಟೆ ಅಂಗಡಿಯಲ್ಲಿ ನನ್ನನ್ನೂ ಅವರನ್ನೂ ನೀವು ನೋಡಿರಲಿಲ್ಲವೆ ?"

"ಓಹೋ, ಕಳೂರುಕಟ್ಟೆಯವರೋ ? ಬಂದಿದ್ದರು."

"ಈಗ ಎಲ್ಲಿ ಅವರು ?"

"ಬಹುಶಃ ಕಳೂರುಕಟ್ಟೆಗೇ ಹೋಗಿರಬಹುದು."

"ನೀವು ಇಲ್ಲಿ ಕೆಲಸ ಕೊಡಿಸುತ್ತೇನೆಂದು ಹೇಳಿದ್ದಿರಿ ?"

"ಹೇಳಿದ್ದೆ, ಕೆಲಸ ಇರಲಿಲ್ಲ."

"ಸರಿ, ಅವರು ಇಲ್ಲಿಗೆ ಬಂದು ಎಷ್ಟು ದಿನಗಳಾಗಿರಬಹುದು."

"ಹನ್ನೆರಡು ಹದಿನೈದು ದಿನಗಳಾಗಿರಬಹುದು. ಸರಿಯಾಗಿ ಹೇಳಲಾರೆ" ಎಂದರು ಪಾರುಪತ್ಯಗಾರರು. ಸುಬ್ಬ ಅಲ್ಲಿಂದ ಹೊರಟ.

"ಶಾಸ್ತ್ರಿಗಳಿಗೆ ಇಲ್ಲಿ ಕೂಡಾ ನಿರಾಶೆಯಾಯಿತೇ?" ಎಂದು ಸುಬ್ಬ ದೀರ್ಘವಾಗಿ ನಿಟ್ಟುಸಿರು ಬಿಟ್ಟ.

ಅಂತೂ ತಾನು ಕೈ ಕೊಂಡ ಕೆಲಸ ಬೇಗ ಮುಗಿಯುವಂಥದಲ್ಲ ಎಂದು ಸುಬ್ಬನಿಗೆ ತಿಳಿಯಿತು. ಏಕೋ ಎಲ್ಲವೂ ಡೊಂಕು, ಡೊಂಕು. ನೇರವಾಗಿ ಯಾವುದೂ ನಡೆಯುತ್ತಿಲ್ಲ. ಇದು ಶುಭಶಕುನವಲ್ಲ ಎಂದುಕೊಂಡ. ಈಗ ಸುಬ್ಬ ಏನು ಮಾಡಬೇಕು? ಕಳೂರು ಕಟ್ಟೆಗೆ ಹೋಗುವುದು ತಾನೆ? ದಾರಿ ಸುಗಮವಲ್ಲ. ಕಾಡು ದಾರಿ. ಮಳೆಗಾಲ. ಒಬ್ಬನೇ ಹೋಗುವುದು ಬಹಳ ಕಷ್ಟ. ಯಾರನ್ನಾದರೂ ಜೊತೆ ಮಾಡಿಕೊಂಡು ಹೋಗುದೇ ಸರಿ ಎಂದು ಕೊಂಡ ಸುಬ್ಬ.

ಜೊತೆಗೆ ಸಿಕ್ಕ ಬೇಕಾದರೆ ಒಂದೆರಡು ದಿನ ಹಿಡಿಯಿತು. ಆ ಎರಡು ದಿನವೂ ಸುಬ್ಬ ಚೆನ್ನಾಗಿ ವಿಶ್ರಾಂತಿ ತೆಗೆದುಕೊಂಡು ಮುಂದಿನ ಪ್ರಯಾಣಕ್ಕೆ ಸಿದ್ಧವಾದ.

ಪ್ರಯಾಣ ಬಹಳ ಕಷ್ಟವೇ ಆಯಿತು. ಮಳೆಗೆ ರಸ್ತೆಯಲ್ಲೆಲ್ಲ ಹಳ್ಳ. ಜಿರ್ರೆಂದು ಸದ್ದು ಮಾಡುವ ಕಾಡುವ ಕಾಡು, ಹೆದರಿಕೆ ಹುಟ್ಟಿಸುವಂಥ ಗಭೀರ ಮೌನ. ಜನಸಂಚಾರವಿಲ್ಲ. ನಾಗೋಡಿ ಘಾಟಿ ಹತ್ತುವುದೇ ಬಹಳ ಪ್ರಯಾಸವಾಯಿತು. ಪಯಣ ಹೊರಟ ಮೇಲೆ ಆಯಾಸವೆಂದು ಸುಮ್ಮನಿರುವುದಕ್ಕಾಗುತ್ತದೆಯೇ? ಮಧ್ಯೆ ಮಧ್ಯೆ ಜನವಸತಿ ಇರುವಲ್ಲಿ ತಂಗುತ್ತ ಅಲ್ಲಿ ಇಲ್ಲ ಊಟ ಗಿಟ್ಟಿಸುತ್ತ ಮೂರು ದಿನ ಪ್ರಯಾಣ ಮಾಡಿದ ಮೇಲೆ ಕಳೂರುಕಟ್ಟೆ ಹತ್ತಿರ ಹತ್ತಿರವಾಯಿತು. ಸುಬ್ಬನ ಜೊತೆಗೆ ಬಂದವ ನಗರದಲ್ಲೇ ನಿಂತ. ಅಲ್ಲಿಂದ ಎಂಟೊಂಭತ್ತು ಮೈಲಿ ದೂರದ ಕಳೂರುಕಟ್ಟೆಗೆ ಸುಬ್ಬನೊಬ್ಬನೇ ಹೊರಟ. ನಗರದಲ್ಲಿ ಊಟ ಮುಗಿಸಿ ಕೊಂಚ ವಿಶ್ರಾಂತಿ ತೆಗೆದುಕೊಂಡು ಹೊರಡುವಷ್ಟಕ್ಕೆ ಹತ್ತು ಗಳಿಗೆ ಹೊತ್ತಿದ್ದಿರಬಹುದು.

ಮಳೆ ಸುರಿಯುತ್ತಲೇ ಇದ್ದದ್ದರಿಂದ ಪ್ರಯಾಣ ನಿಧಾನವಾಯಿತು. ಆಗಾಗ ಗಾಳಿ ಜೋರಾಗಿ ಬೀಸತೊಡಗಿದಾಗ ಅಲ್ಲಿ ಇಲ್ಲಿ ನಿಂತುಕೊಳ್ಳದೆ ಮುಂದುವರಿಯುವಂತೆ ಇರಲಿಲ್ಲ. ಆದ ಕಾರಣ, ಊರು ಎರಡು ಮೂರು ಮೈಲಿ ಇರುವಷ್ಟರಲ್ಲೇ ಸುತ್ತಲೂ ಗಾಢಾಂಧಕಾರ ಕವಿಯಿತು. ಆ ಕಡೆ ಕಳ್ಳಕಾಕರ ಭಯ ಜಾಸ್ತಿ. ಬೀದಿಯಲ್ಲಿ ಜನದ ಸುಳಿವೂ ಇಲ್ಲ. ಹತ್ತಿರದಲ್ಲಿ ಬೀದಿಯ ಮೇಲೆ ಒಂದು ಮನೆಯೂ ಕಾಣಿಸದು. ಸುಬ್ಬನ ಎದೆ ಡವ

ಗುಟ್ಟುತ್ತಲೇ ಇತ್ತು. ತಾನು ಇನ್ನೂ ಸ್ವಲ್ಪ ಬೇಗ ಹೊರಡದೇ ಬಹಳ ತಪ್ಪು ಮಾಡಿದೆ ಎಂದು ಬಹಳ ಪಶ್ಚಾತಾಪ್ತ ಪಟ್ಟ. ಆದರೆ ಈಗ ಏನು ಮಾಡುವುದೂ ಸಾಧ್ಯವಿಲ್ಲ. ಹಾಗೇ ಕತ್ತಲಲ್ಲಿ ತಡವರಿಸುತ್ತ ಬಹು ನಿಧಾನವಾಗಿ ನಡೆಯುತ್ತ ಅವನು ಊರನ್ನು ಸಮೀಪಿಸುತ್ತಿರುವಾಗ ಆಗಲೇ ಎಳೆಂಟು ಗಳಿಗೆ ರಾತ್ರಿಯಾಗಿ ಹೋಗಿತ್ತು. ಊರಿನ ಹತ್ತಿರ ಬಂದರೂ ಅದೇ ಗಾಢಾಂಧಕಾರ. ಬೀದಿಯಲ್ಲಂತೂ ದೀಪಗಳಿಲ್ಲ. ಮನೆಗಳ ದೀಪವೂ ಕಾಣಿಸಲಿಲ್ಲ. ಮಳೆ ಗಾಳಿಗೆ ಚಳಿಗೆ ಹೆದರಿ ಜನ ಬಾಗಿಲು ಕಿಟಕಿಗಳನ್ನೆಲ್ಲ ಭದ್ರಪಡಿಸಿಕೊಂಡಿದ್ದರು. ಬೀದಿಯಲ್ಲಂತೂ ಒಬ್ಬರೂ ಸುಳಿದಾಡುತ್ತಿರಲಿಲ್ಲ. ಬೀದಿ ತುಂಬ ಕೆಸರು. ಹಳ್ಳಗಳು. ಹಳ್ಳಗಳ ತುಂಬ ನೀರು. ಎಡವುತ್ತ ಮುಗ್ಗರಿಸುತ್ತ ಅಂತೂ ಸುಬ್ಬ ಕೊನೆಗೆ ಶಾಸ್ತ್ರಿಯ ಅಂಗಡಿಯನ್ನು ತಲುಪಿದ.

ಅಂಗಡಿಯ ಬಾಗಿಲು ಹಾಕಿತ್ತು. ಆದರೆ ಒಳಗೆ ದೀಪವಿತ್ತು. ಬಾಗಿಲುಗಳ ಸಂದಿಯಿಂದ ಬೆಳಕು ಹೊರಗೆ ತೂರಿಬರುತ್ತಿತ್ತು. ಶಾಸ್ತ್ರಿ ಒಳಗೆ ಇದ್ದಾರೋ ಇಲ್ಲವೋ ನೋಡುವ ಅಂತ ಸುಬ್ಬ ಒಳಕ್ಕೆ ಇಣಿಕಿ ನೋಡಿದ, ಸಂದಿಯಿಂದ.

ಅಲ್ಲಿ ಸುಬ್ಬನ ಕಣ್ಣು ಕಂಡ ದೃಶ್ಯವನ್ನು ಅವನ ಮನಸ್ಸು ನಂಬಲಿಲ್ಲ. ಕಣ್ಣು ತಿಕ್ಕಿಕೊಂಡು ಮತ್ತೆ ನೋಡಿದ. ಕಂಡದ್ದು ನಿಜ: ರಾಮಚಂದ್ರ ಶಾಸ್ತ್ರಿ ಯಾವಳೋ ಹೆಂಗಸಿನ ಸಂಗಡ ಸರಸವಾಡುತ್ತ ಚಕ್ಕಂದವಾಡುತ್ತ ಕುಳಿತಿದ್ದ. ಈ ದೃಶ್ಯವನ್ನು ಕಂಡು ಸುಬ್ಬನ ಹೃದಯಕ್ಕೆ ಚೂರಿ ಹಾಕಿದಂತಾಯಿತು. ಆ ಹೆಂಗಸಿನ ಎದೆ ತೆರೆದಿತ್ತು. ಗಟ್ಟಿ ಮುಟ್ಟಾದ ಹೆಂಗಸು ಅಂತ ತೋರಿತು. ಆ ದೃಶ್ಯವನ್ನು ಕಂಡಾಗ ಸುಬ್ಬನಿಗೆ ಕೋಪ ಮತ್ತು ದುಃಖ ಒಂದೇ ಕಾಲದಲ್ಲಿ ಹೃದಯದಲ್ಲಿ ಭೋರ್ಗರೆದು ಮೊರೆಯಿತು " ಪದ್ಮಾವತಮ್ಮನ ಅದೃಷ್ಟಕ್ಕೆ ಸಮನಿಲ್ಲ " ಎಂದು ತನ್ನಷ್ಟಕ್ಕೇ ತಾನು ಹೇಳಿಕೊಳ್ಳುತ್ತ ಕಣ್ಣನ್ನು ಆ ದೃಶ್ಯದಿಂದ ಕಿತ್ತು ತೆಗೆದ.

ಸುಬ್ಬ ಒಂದು ಕ್ಷಣ ಹಾಗೇ ಬೀದಿಯಲ್ಲಿ ನಿಂತು ಆಕಾಶವನ್ನು ನೋಡತೊಡಗಿದ. ಅವನ ಮನಸ್ಸು ಬಹಳ ಕೆಟ್ಟು ಹೋಗಿತ್ತು. ಈಗ ಏನು ಮಾಡಬೇಕು ಅಂತ ತೋಚಲಿಲ್ಲ. ಹಾಗೇ ಅಂಗಡಿ ಮುಂದಿನ ಕಟ್ಟೆಯಲ್ಲಿ ಒಂದು ಮೂಲೆಯಲ್ಲಿ ಕುಳಿತು ಬೀಡಿ ಹಚ್ಚಿಕೊಂಡು ಯೋಚಿಸತೊಡಗಿದ. ಅವನು ಮನುಷ್ಯನ ಮನಸ್ಸನ್ನು ಕುರಿತು ಯೋಚಿಸುತ್ತಿದ್ದ. ಅಲ್ಲಿ ಪದ್ಮಾವತಿ ಎಂಥ

ಗಂಡಾಂತರದಲ್ಲಿದ್ದಾಳೋ, ಹೊಳೆ ಕೆರೆ ಪಾಲಾಗಿ ಸತ್ತು ಹೋಗಿದ್ದಾಳೋ ಯಾವುದೂ ತಿಳಿಯದು. ಊರಿನಲ್ಲಿ ಬಿಟ್ಟು ಬಂದ ಮಗು ಇದೆಯೋ ಸತ್ತಿದೆಯೋ ಅದರ ಗಮನವಿಲ್ಲ. ಇಲ್ಲಿ ಈ ಶಾಸ್ತ್ರಿ ಯಾವಳೋ ಹೆಂಗಸಿನ ಸಂಗಡ ಚಕ್ಕಂದವಾಡುತ್ತ ಕುಣಿಯುತ್ತಿದ್ದಾನೆ! ಅಬ್ಬಾ ಮನುಷ್ಯನ ಮನಸ್ಸೇ. ಕಣ್ಣು ಮುಂದೆ ಇದ್ದಾಗ ಎಲ್ಲ ಸರಿ, ಇಲ್ಲದಿದ್ದಾಗ ಎಲ್ಲವನ್ನೂ ಮರೆಯುವುದೆ? ಶಾಸ್ತ್ರಿ ಇಷ್ಟು ನಿರ್ಘೃಣನಾಗಬಹುದೆಂದು ಸುಬ್ಬ ಒಂದು ಕ್ಷಣವೂ ಯೋಚಿಸಿರಲಿಲ್ಲ. ಮನಸ್ಸು ಸ್ವಲ್ಪ ದುರ್ಬಲ, ವ್ಯವಹಾರ ಜ್ಞಾನವಿಲ್ಲ ಅಂತ ಅಷ್ಟೇ ಅವನು ತಿಳಿದಿದ್ದ. ಆದರೆ ಈ ದಯಾಹೀನತೆ, ಈ ಹೃದಯರಾಹಿತ್ಯ–ಇದನ್ನು ಕಂಡು ಸುಬ್ಬನ ರಕ್ತ ಕುದಿಯಿತು. ಈಗಲೇ ಎದ್ದು ಹೋಗಿ ಶಾಸ್ತ್ರಿಯ ಕಪಾಳಕ್ಕೆ ಒಂದೇಟು ಬಿಗಿಯಬೇಕೆನ್ನುವಷ್ಟು ಸಿಟ್ಟು ಬಂತು.

ಆದರೆ ಇನ್ನೂ ಅಷ್ಟು ಯೋಚನೆ ಮಾಡಿದಾಗ ಆ ರೀತಿ ಸಿಟ್ಟು ಮಾಡಲು ತನಗೆ ಏನೂ ಅರ್ಹತೆಯಿಲ್ಲ ಎಂದು ತೋರಿತು. ತಾನೂ ಜೀವನದಲ್ಲಿ ಎಷ್ಟು ಸಲ ಎಷ್ಟು ತಪ್ಪುಮಾಡಿಲ್ಲ? ಕುಡಿದು ಸ್ಮೃತಿ ತಪ್ಪಿ ಬಿದ್ದು, ತನ್ನನ್ನೇ ನಂಬಿ ಬಂದಿದ್ದ ಪದ್ಮಾವತಿಯನ್ನು ಬೀದಿಯ ಪಾಲೋ ಸಾವಿನ ಪಾಲೋ ಮಾಡಿದ. ಗಂಗೆಯ ಮುಂದೆ "ಪದ್ಮಾವತಿಯ ಪತ್ತೆ ಹತ್ತುವ ತನಕ ಹೆಂಡ ಮುಟ್ಟುವುದಿಲ್ಲ" ಎಂದು ಪ್ರತಿಜ್ಞೆ ಮಾಡಿದವ ಬೈಂದೂರಿಗೆ ಬರುವಷ್ಟರಲ್ಲಿ ಆ ಪ್ರತಿಜ್ಞೆಯನ್ನು ಮುರಿದ. ಗಂಗೆಗೇ ಮೋಸ ಮಾಡಿದ. ಇದು ಮನುಷ್ಯನ ದೌರ್ಬಲ್ಯ. ತನ್ನ ದೌರ್ಬಲ್ಯ. ಹೆಂಡದಾಶೆಯಿಂದ ನಾನು ಕೆಟ್ಟೆ. ಹೆಣ್ಣಿನಾಶೆಯಿಂದ ಶಾಸ್ತ್ರಿ ಕೆಟ್ಟ. "ಒಂದು ಸರಿ, ಇನ್ನೊಂದು ತಪ್ಪು ಎನ್ನೋಣವೇ? ಹೆಂಗಸಿನ ಮುಖವನ್ನು ಕಂಡು ಎಷ್ಟೋ ದಿನವಾಗಿದ್ದ ಶಾಸ್ತ್ರಿಗೆ ಇಲ್ಲಿ ಯಾವಳೋ ಗಂಟು ಬಿದ್ದಿರಬೇಕು. ತನ್ನ ಹೆಂಡತಿಯಲ್ಲಿ ನಿಜವಾದ ಪ್ರೀತಿ ಇದ್ದಿದ್ದರೆ ಹಾಗೆ ಅವನು ಮಾಡುತ್ತಿರಲಿಲ್ಲ." ಎಂದು ಸುಬ್ಬನಿಗೆ ಒಂದು ಕ್ಷಣ ಅನ್ನಿಸಿತು. ಆದರೆ ಪ್ರೀತಿ ಎಂಬುದು ಬಹು ವಿಚಿತ್ರವಾದದ್ದು ಎಂದು ಮರುಕ್ಷಣವೇ ಸುಬ್ಬನಿಗೆ ತೋರಿತು. ನಿಜವಾಗಿ ನೋಡಿದರೆ ಸುಬ್ಬನಿಗೆ ಗಂಗೆಯೊಬ್ಬಳಲ್ಲೇ ನಿಜವಾದ ಪ್ರೀತಿ ಇರುವುದು. ಆದರೆ ಹೋದ ಹೋದ ಊರಿನಲ್ಲಿ ಹೆಂಗಸು ಸಿಕ್ಕಿದರೆ ಅವನು ಬಿಟ್ಟದ್ದುಂಟೇ ಹೀಗಿರುವಾಗ. ತನಗೆ ಶಾಸ್ತ್ರಿಯನ್ನು ಕುರಿತು ಸಿಟ್ಟು ಮಾಡಿಕೊಳ್ಳಲು ಅಧಿಕಾರವಿಲ್ಲ ಎನ್ನಿಸಿತು. ಆದರೆ ಪದ್ಮಾವತಮ್ಮ ಬದುಕಿದ್ದರೆ ಇದರಿಂದ ಅವಳಿಗೆ ಬಹಳ ಅನ್ಯಾಯವಾ

ಗುತ್ತದೆ. ಆದ್ದರಿಂದ ಶಾಸ್ತ್ರಿಯ ಈ ಹುಚ್ಚನ್ನು ಬಿಡಿಸಿ ಹೇಗಾದರೂ ಊರಿಗೆ ಎಳೆದುಕೊಂಡು ಹೋಗಲೇ ಬೇಕು ಎಂದು ನಿರ್ಧರಿಸಿದ. ಇದರಿಂದ ಸುಬ್ಬನ ಮನಸ್ಸು ಕೊಂಚ ಸ್ತಿಮಿತಕ್ಕೆ ಬಂತು.

ಅಲ್ಲೇ ಅವನು ಎಷ್ಟೋ ಹೊತ್ತು ಕುಳಿತಿದ್ದ. ಒಳಗಿನಿಂದ ಆಗಾಗ ನಗುವಿನ ಲಹರಿ ಬಾಗಿಲ ಸಂದಿಯಲ್ಲಿ ತೂರಿ ಬರುತ್ತಿತ್ತು. ಕೊನೆಗೆ ಸಿಧಾನ ವಾಗಿ ಬಾಗಿಲು ಅರ್ಧ ತೆರೆಯಿತು. ಶಾಸ್ತ್ರಿ ಹೊರಗೆ ಮುಖ ಹಾಕಿ ನೋಡಿದ "ಯಾರೂ ಇಲ್ಲ" ಎಂದ. ಅವಳು ಹೊರಕ್ಕೆ ಬಂದು ಕತ್ತಲಲ್ಲಿ ಕಣ್ಮರೆಯಾಗಿ ಹೋದಳು. ಶಾಸ್ತ್ರಿ ಮತ್ತೆ ಬಾಗಿಲು ಹಾಕಿಕೊಂಡು ಒಳಕ್ಕೆ ಹೋದ.

ಸುಬ್ಬ ಇನ್ನೂ ಸ್ವಲ್ಪ ಹೊತ್ತು ಅಲ್ಲೇ ಕುಳಿತಿದ್ದು ಮತ್ತೆ ಬಾಗಿಲ ಬಳಿ ಹೋಗಿ ಬಾಗಿಲು ತಟ್ಟುತ್ತಾ "ಶಾಸ್ತ್ರಿಗಳೇ" ಎಂದು ಎರಡು ಸಲ ಕೂಗಿದ.

"ಯಾರು, ಯಾರು?" ಎನ್ನುತ್ತ ಶಾಸ್ತ್ರಿ ಬಂದು ಬಾಗಿಲು ತೆರೆದ. ಸುಬ್ಬನೆಂದು ತಿಳಿದಾಗ ಬಹಳ ಸಂತೋಷದಿಂದ "ಓಹೋ, ಸುಬ್ಬನೇ, ಬಾ, ಬಾ, ಯಾವಾಗ ಬಂದೆ?" ಎಂದು ಕೇಳಿದ.

"ಪದ್ಮಾವತಿ ಎಲ್ಲಿ?" ಎಂದು ಕೇಳುವ ಮೊದಲನೆಯ ಪ್ರಶ್ನೆ. ಅದಕ್ಕೆ ಉತ್ತರ ಕೊಡಬೇಕು ಅಂತ ಯೋಚಿಸುತ್ತಿದ್ದ ಸುಬ್ಬನಿಗೆ ಅವನು ಪದ್ಮಾವ ತಿಯ ಹೆಸರನ್ನೇ ಎತ್ತದ್ದು ಕಂಡು ಆಶ್ಚರ್ಯವಾಯಿತು; ದುಃಖವೂ ಆಯಿತು.

"ಇದೇ ಈಗ ತಾನೆ ಬಂದೆ" ಎಂದ ಸುಬ್ಬ.

"ಎಲ್ಲಿಂದ ಬಂದೆ ಈಗ?"

"ಅದು ಬಹಳ ದೊಡ್ಡ ಕಥೆ, ಶಾಸ್ತ್ರಿಗಳೇ."

"ಹಾಗಾದರೆ ಮೊದಲು ಅಷ್ಟು ಊಟ ಮಾಡಿ ಮುಗಿಸಿದ ಮೇಲೆ ಆಮೇಲೆ ಹೇಳುವೆಯಂತೆ." ಎಂದು ಶಾಸ್ತ್ರಿ ಸುಬ್ಬನನ್ನು ಒಳಕ್ಕೆ ಕರೆದುಕೊಂಡು ಹೋದ– ಅಂಗಡಿಯ ಹಿಂದೆ ಒಂದು ಅಡಿಗೆ ಮನೆ, ಬಚ್ಚಲು ಮನೆ ಇತ್ತು.

"ಸುಬ್ಬ, ಅನ್ನ ಒಬ್ಬರಿಗಾಗುವಷ್ಟೇ ಇದೆ. ಮತ್ತೆ ಮಾಡಲೋ ಇಲ್ಲ ಅವಲಕ್ಕಿ ಮೊಸರು ಅಷ್ಟು ಕಲಿಸಿಕೊಂಡು ಅನ್ನ ಅವಲಕ್ಕಿ ಊಟ ಅಂತ ಮುಗಿಸೋಣವೊ?" ಎಂದು ಶಾಸ್ತ್ರಿ ಕೇಳಿದ.

"ಇಷ್ಟು ಹೊತ್ತಿನಲ್ಲಿ ಅನ್ನ ಮಾಡುವುದು ಬೇಡ. ಇರುವಷ್ಟೇ ಸಾಕು" ಎಂದ ಸುಬ್ಬ.

ಶಾಸ್ತ್ರಿ ಅವಲಕ್ಕಿಯನ್ನು ನೀರಿಗೆ ಹಾಕಿ ಬಂದು ಎಲೆ ಹಾಕಿದ. ಇಬ್ಬರೂ ಊಟಕ್ಕೆ ಕುಳಿತರು. ಊಟದ ಸಮಯದಲ್ಲಿ ಇಬ್ಬರೂ ಹೆಚ್ಚಿಗೆ ಮಾತಾಡ ಲಿಲ್ಲ.

ಊಟವಾದ ಮೇಲೆ ಅಂಗಡಿಗೆ ಬಂದು ಇಬ್ಬರೂ ಕುಳಿತರು. ಸುಬ್ಬ ವಿಸ್ತಾರವಾಗಿ ನಡೆದದ್ದನ್ನೆಲ್ಲ ಹೇಳಿದ. ಶಾಸ್ತ್ರಿ ಅನುದ್ವಿಗ್ನನಾಗಿ ಕೇಳುತ್ತಿದ್ದ. ಸುಬ್ಬ ಪದ್ಮಳಿಗೆ ಅಪವಾದ ಬಂದುದನ್ನು ಹೇಳಿದಾಗ ಮಾತ್ರ

"ಅಯ್ಯೋ ಪಾಪ; ಅದಕ್ಕೆ ನಾನೇ ಕಾರಣ. ಪದ್ಮಳಿಗೆ ಬಹಳ ಅನ್ಯಾಯವಾಯಿತು" ಎಂದ. ಆದರೆ ಮಾತಿನಲ್ಲಿ ಇರಬೇಕಾದಷ್ಟು ಪಶ್ಚಾತ್ತಾಪ ಇದ್ದ ಹಾಗೆ ಸುಬ್ಬನಿಗೆ ತೋರಲಿಲ್ಲ. ಇದರಿಂದ ಅವನ ಮನಸ್ಸಿಗೆ ಬಹಳ ನೋವಾಯಿತು.

ಸುಬ್ಬ ಕಥೆಯನ್ನೆಲ್ಲ ಹೇಳಿ ಮುಗಿಸಿದ. ಹೆಂಡ ಕುಡಿದು ಬಿದ್ದು ಪದ್ಮಾವತಿ ಅದೃಶ್ಯಳಾಗಲು ಕಾರಣನಾದ ತನ್ನನ್ನು ಶಾಸ್ತ್ರಿ ಚೆನ್ನಾಗಿ ಬಯ್ಯಬಹುದು, ತನ್ನ ಮೇಲೆ ರೇಗಾಡಬಹುದೆಂದು ತಿಳಿದಿದ್ದ ಸುಬ್ಬನಿಗೆ ಶಾಸ್ತ್ರಿ ಏನೂ ಹೇಳದೆ ಇದ್ದದ್ದನ್ನು ಕಂಡು ಸಮಾಧಾನವಾಗಲಿಲ್ಲ. ಬಹಳ ಅತೃಪ್ತಿ ಹುಟ್ಟಿತು. ಸುಬ್ಬನೇ,

"ಇಷ್ಟೆಲ್ಲ ಅನರ್ಥಕ್ಕೆ ನಾನೇ ಕಾರಣನಾದೆ, ಶಾಸ್ತ್ರಿಗಳೇ. ಈ ಪಾಪಿ ಹೆಂಡ ಕುಡಿದು ಜ್ಞಾನತಪ್ಪಿ ಬೀಳದೆ ಹೋಗಿದ್ದರೆ ಪದ್ಮಾವತಮ್ಮನಿಗೆ ಇಂಥ ಗತಿ ಬರುತ್ತಿರಲಿಲ್ಲ" ನನ್ನನ್ನು ನೀವು ಕ್ಷಮಿಸಬೇಕು. ಕಾಲಿಗೆ ಬೀಳುತ್ತೇನೆ" ಎಂದ. ಹೀಗೆ ಹೇಳುತ್ತಿದ್ದಾಗ ಸುಬ್ಬನಿಗೆ ಕಣ್ಣೀರು ತುಂಬಿತ್ತು.

ಆದರೆ ಶಾಸ್ತ್ರಿ ಬಹಳ ಶಾಂತ ಧ್ವನಿಯಲ್ಲಿ, "ಇದರಲ್ಲಿ ಕ್ಷಮಿಸುವಂಥದ್ದೇನಿದೆ ಸುಬ್ಬಾ. ಏನೋ ಅಚಾತುರ್ಯ ನಡೆಯಿತು. ಇಷ್ಟೆಲ್ಲ ಆಗುತ್ತದೆ ಅಂತ ನಿನಗಾದರೂ ತಿಳಿದಿತ್ತೆ? ಎಲ್ಲ ದೈವಲೀಲೆ" ಎಂದು ಹೇಳಿದ. ಈ ಮಾತನ್ನೂ ಅದರ ಧಾಟಿಯನ್ನೂ ಕೇಳಿ ಸುಬ್ಬನಿಗೆ ತನ್ನನ್ನು ಸಿಕ್ಕಾಪಟ್ಟೆ ಅವನು ಬಯ್ದಿದ್ದರೆ ಎಷ್ಟು ದುಃಖವಾಗುತ್ತಿತ್ತೋ ಅದರ ನೂರು ಪಾಲು ದುಃಖವಾಯಿತು. "ಪದ್ಮಾವತಮ್ಮನ ಅದೃಷ್ಟ ಚೆನ್ನಾಗಿಲ್ಲ" ಎಂದು ಮತ್ತೆ ಅವನ ಮನಸ್ಸು ಕೂಗಿ ಹೇಳಿತು.

ಅನಂತರ ಕೊಂಚ ಹೊತ್ತು ಬಿಟ್ಟು, ಸುಬ್ಬ, "ನಾನು ಇಲ್ಲಿ ಬರುತ್ತಿರುವಾಗ ಒಬ್ಬಳು ಹೆಂಗಸು ನಿಮ್ಮ ಅಂಗಡಿಯಿಂದ ಹೊರಟು ಹೋದಳಲ್ಲ, ಅವಳ

ಯಾರು ?" ಎಂದು ಕೇಳಿದ.

ಈ ಪ್ರಶ್ನೆಗೆ ಶಾಸ್ತ್ರಿ ಕೂಡಲೇ ಉತ್ತರ ಹೇಳಲಿಲ್ಲ. ಕೊಂಚ ಹಿಂದೆ ಮುಂದೆ ನೋಡುತ್ತಿರುವಂತೆ ತೋರಿತು. ಕೊನೆಗೆ

" ಅದೂ ದೊಡ್ಡ ಕಥೆ ಸುಬ್ಬ. ಅವಳು ಚೆಲುವಿ ಅಂತ ಇದೇ ಊರವಳೇ. ಆಗಾಗ ಅಂಗಡಿಗೆ ಬರುತ್ತಿದ್ದಳು. ಒಂದು ದಿನ ನಾನು ಅವಳ ಬಲೆಗೆ ಬಿದ್ದೆ. ತಪ್ಪಿಸಿಕೊಳ್ಳಬೇಕೆಂದರೆ ಆಗುವುದಿಲ್ಲ."

" ನಿಮಗೆ ನಿಜವಾಗಿಯೂ ತಪ್ಪಿಸಿಕೊಳ್ಳಬೇಕು ಅಂತ ಅನ್ನಿಸುತ್ತದೆಯೇ ?"

" ಹೌದು, ಸುಬ್ಬ; ಖಂಡಿತವಾಗಿ ಹೌದು. ಎಷ್ಟು ಕಷ್ಟ ಪಟ್ಟರೂ ನನಗೆ ಅವಳಿಂದ ಬಿಡಿಸಿಕೊಳ್ಳಲು ಆಗಲಿಲ್ಲ ನಾನು ಹೋಗದಿದ್ದರೆ ಅವಳೇ ಇಲ್ಲಿಗೆ ಬರುತ್ತಾಳೆ. ಬಂದ ಮೇಲೆ ಗೊತ್ತೇ ಇದೆಯಲ್ಲ ?" ಏನು ಮಾಡಬೇಕೋ ನನಗೆ ತಿಳಿಯುವುದಿಲ್ಲ."

" ಏನು ಮಾಡಬೇಕು ಅಂತ ನಾನು ಹೇಳುತ್ತೇನೆ. ಮೊದಲು ನಿಮಗೆ ಬರಬೇಕಾದ ಬಾಕಿ ಎಲ್ಲ ವಸೂಲಾಯಿತೋ ? ಹೇಳಿ."

" ಬಹಳ ಮಟ್ಟಿಗೆ ವಸೂಲಾಗಿದೆ ಸುಬ್ಬ; ಇನ್ನೇನೋ ಅಲ್ಪ ಸ್ವಲ್ಪ ಉಳಿದಿದೆ."

" ಅಲ್ಪ ಸ್ವಲ್ಪ ಹಾಳಾಗಿ ಹೋಗಲಿ: ಕೈಯಲ್ಲಿ ಎಷ್ಟು ದುಡ್ಡಿದೆ ?"

" ಸುಮಾರು ಐನೂರು ರೂಪಾಯಿ ಇದೆ, ಸುಬ್ಬ."

" ನೀವು ಶೀನ ಭಂಡಾರಿಗೆ ಬಾಕಿ ಕೊಡಬೇಕಾದದ್ದು ಎಷ್ಟು ?"

" ಇನ್ನೂರು ರೂಪಾಯಿ "

" ಸರಿ, ಈಗ ನೀವು ಮಾಡಬೇಕಾದ ಮೊದಲನೆಯ ಕೆಲಸ ಈ ಊರು ಬಿಡುವುದು. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ. ನಾಳೆಯೇ."

" ಆದರೆ...."

" ಆದರೆ ಗೀದರೆ ಏನೂ ಇಲ್ಲ, ಶಾಸ್ತ್ರಿಗಳೇ. ನಾನು ಹೇಳುವುದನ್ನು ನೀವು ಕೇಳಿ. ಶೀನ ಭಂಡಾರಿ ಸಾಲ ತೀರಿಸಿ ಊರಲ್ಲೇ ಎಲ್ಲಾದರೂ ಮೂಲಗೇಣಿ ಗದ್ದೆ ಮಾಡಿಕೊಳ್ಳಿ. ಒಂದು ಜೊತೆ ಎತ್ತು ಕೊಂಡುಕೊಳ್ಳಿ. ಈ ವ್ಯಾಪಾರ ನಿಮಗೆ ಬೇಡ " ಎಂದ.

" ಆದರೆ ಈ ಅಂಗಡಿ ಏನು ಮಾಡುವುದಪ್ಪಾ ?"

" ಈ ಊರಲ್ಲೇ ಯಾರಿಗಾದರೂ ವಹಿಸಿಬಿಡುವುದು. ನಾಳೆ ಅದಕ್ಕೆ ತಕ್ಕ ವ್ಯವಸ್ಥೆ ಮಾಡೋಣ. ಈ ನಿರ್ಧಾರ ನೀವು ಮಾಡಿಬಿಡಿ. ನಾಡಿದ್ದು ಹೊರಟುಬಿಡೋಣ."

" ಇನ್ನೊಂದು ನಾಲ್ಕು ದಿನ ಇದ್ದರೆ ಹೇಗೆ ಸುಬ್ಬಾ ? ಮಳೆ ಕೊಂಚ ಕಡಿಮೆಯಾಗಲಿ ಅಂತ."

" ಮಳೆಗಿಳೆ ಯೋಚನೆ ನಿಮಗೆ ಹೇಗೆ ಬರುತ್ತದೆ ಶಾಸ್ತ್ರಿಗಳೇ. ಪದ್ಮಾವತಮ್ಮ ಎಲ್ಲಿ ಕಷ್ಟ ಪಡುತ್ತಿದ್ದಾರೋ ಆ ಯೋಚನೆ ನಿಮಗೆ ಬರುವುದೇ ಇಲ್ಲವೇ ?" ಎಂದ ಸುಬ್ಬ ಸ್ವಲ್ಪ ಖಾರವಾಗಿ.

" ಸುಬ್ಬಾ, ನೀನು ಏನು ಬೇಕಾದರೆ ಹೇಳು; ನನಗೇನೋ ಅವಳು ಈ ಜಗತ್ತಿನಲ್ಲಿದ್ದಾಳೆ ಅನ್ನಿಸುವುದಿಲ್ಲ. ಪಾಪ, ಎಲ್ಲಿ ಯಾವ ರೀತಿ ತೀರಿ ಕೊಂಡಳೋ " ಎಂದ. ಮಾತು ದುಃಖದ ಮಾತು. ಆದರೆ ಆದರಲ್ಲಿ ದುಃಖ ಸುಬ್ಬನಿಗೆ ಕಂಡು ಬರಲಿಲ್ಲ. ಅವನ ಅಂತರಂಗದ ರೋಷ ಇನ್ನಷ್ಟು ಹೆಚ್ಚಿತು.

ಆದರೆ ನಾವು ಮಾಡುವಷ್ಟು ಕೆಲಸ ಮಾಡಬೇಡವೆ ? ಪದ್ಮಾವತಮ್ಮ ನನ್ನು ಪತ್ತೆ ಹಚ್ಚಲು ಸರಿಯಾಗಿ ಪ್ರಯತ್ನಿಸಬೇಡವೇ, ಶಾಸ್ತ್ರಿಗಳೇ." ಎಂದ ಸುಬ್ಬ.

" ಸರಿ, ಸರಿ. ನೀನು ಹೇಳಿದ ಹಾಗೇ ಮಾಡೋಣ " ಎಂದ ಶಾಸ್ತ್ರಿ. ಈ ಮಾತು ಕತೆಯಿಂದ ಸುಬ್ಬನಿಗೆ ತಕ್ಕಷ್ಟು ತೃಪ್ತಿಯಾಗಲಿಲ್ಲ. ಪದ್ಮಾವತಮ್ಮನ ಬಗ್ಗೆ ತನಗಿರುವಷ್ಟು ಅವಳ ಗಂಡನಿಗೆ ಅನುಕಂಪವಿಲ್ಲ ಎಂದು ಆಶ್ಚರ್ಯವಾಯಿತು. ಹೃದಯಕ್ಕೇ ದೊಡ್ಡ ಏಟು ಬಿದ್ದ ಹಾಗೆ ಆಯಿತು. ಆದರೆ ಸುಬ್ಬ ಏನು ತಾನೇ ಮಾಡಲು ಸಾಧ್ಯ.

ಮರು ದಿನವೇ ಸುಬ್ಬ ಪಕ್ಕದ ಅಂಗಡಿಯವರ ಹತ್ತಿರ ಮಾತಾಡಿ ಇದ್ದ ಸಾಮಾನನ್ನೆಲ್ಲ ಅವರಿಗೆ ಇನ್ನೂರು ರೂಪಾಯಿಗೆ ವಹಿಸಿಕೊಟ್ಟ. ಆದರ ಮಾರನೆಯ ದಿನವೇ ' ಮಳೆ ಮಳೆ' ಎಂದು ಗೊಣಗುತ್ತಿದ್ದರೂ ಬಿಡದೆ ಸುಬ್ಬ ಶಾಸ್ತ್ರಿಯನ್ನು ಆ ಊರಿನಿಂದ ಹೊರಡಿಸಿಬಿಟ್ಟ. ಎತ್ತ ಕಡೆ ಎಳೆದರೆ ಅತ್ತ ಕಡೆ ಬರುವ ಶಾಸ್ತ್ರಿಯನ್ನು ಕಂಡು ಸುಬ್ಬನಿಗೆ ಕೋಪಕ್ಕಿಂತ ಹೆಚ್ಚಾಗಿ ಕನಿಕರವೇ ಹುಟ್ಟಿತು.

ಇಬ್ಬರೂ ಊರಿಗೆ ಬಂದರು. ಭಂಡಾರಿಯ ಸಾಲ ತೀರಿಸಿ ಶಾಸ್ತ್ರಿ ಆವನಿಂದ

ಮುಕ್ತನಾದ. ಇಬ್ಬರೂ ಕೂಡಿ ಚಂದ್ರಶೇಖರನ ಮನೆಗೆ ಹೋದರು.

ಚಂದ್ರಶೇಖರನಿಗೆ ಭಾವನನ್ನು ಕಂಡು ಸಂತೋಷವೇ ಆಯಿತು. ಅನಂತ ಅತ್ತಿಂದಿತ್ತ ಸುಖವಾಗಿ ಓಡಾಡುತ್ತಿದ್ದ. "ನೋಡು, ಅಪ್ಪ ಬಂದಿದ್ದಾರೆ" ಎಂದು ಹತ್ತಿರ ಕರೆದುಕೊಂಡು ಬಂದರೆ ಚೀರಿ ದೂರ ಸರಿದು ಚಂದ್ರಶೇಖರನ ಹಿಂದೆ ಅಡಗಿಕೊಂಡ. ಚಂದ್ರಶೇಖರನಿಗೆ ಇವನ್ನು ಕಂಡು ಒಂದು ಕ್ಷಣ ಬಹಳ ವೇದನೆಯಾಯಿತು. "ಮಗುವಿಗೆ ನನ್ನ ಗುರುತೇ ಇಲ್ಲ" ಎಂದ ವ್ಯಸನದಿಂದ.

"ಹೌದು, ಇವನು ಹುಟ್ಟಿದ ಕೂಡಲೇ ನೀವು ಊರು ಬಿಟ್ಟಿರಿ. ಅನಂತರ ಹೆತ್ತ ತಾಯಿಯೋ ತೊರೆದು ಓಡಿ ಹೋದಳು" ಎಂದ ಚಂದ್ರಶೇಖರ.

"ಪದ್ಮಾವತಮ್ಮ ಓಡಿ ಹೋಗಲಿಲ್ಲ. ತಮ್ಮ ಗಂಡನ ಕಡೆಗೆ ಹೊರಟಿದ್ದರು." ಎಂದು ಹೇಳಿದ ಸುಬ್ಬ.

"ಹೌದು ಭಾವಯ್ಯ; ಅವಳನ್ನು ಕರೆಯಲು ಸುಬ್ಬನನ್ನು ಕಳಿಸಿದ್ದೂ ನಾನೇ. ಅವಳಿಗೆ ಅಪವಾದ ಬರುವುದಕ್ಕೂ ನಾನೇ ಕಾರಣನಾದೆ. ಪಾಪ, ಪದ್ಮಾ ಬಹಳ ಕಷ್ಟಪಟ್ಟಳು" ಎಂದ ರಾಮಚಂದ್ರ.

ಈ ಮಾತನ್ನು ಕೇಳಿ ಚಂದ್ರಶೇಖರನಿಗೆ ಮನಸ್ಸು ಏನೋ ಒಂದು ತರಹ ಆಗತೊಡಗಿತು. ತಾವು ಪದ್ಮಳಿಗೆ ಆಡಿದ ಒಂದೊಂದು ಮಾತೂ ಹೇಗೆ ಶಲ್ಯದಂತೆ ಅವಳ ಮನಸ್ಸನ್ನು ಚುಚ್ಚಿರಬೇಕು ಎಂದು ಈಗ ಪಶ್ಚಾತ್ತಾಪವಾಯಿತು. ಪದ್ಮಳ ಕೈ ಬಿಡುವುದಿಲ್ಲ ಎಂದು ತಾನು ತಾಯಿಗೆ ಆಡಿದ ಮಾತೂ ನೆನಪಿಗೆ ಬಂದು ತಾನು ಬಹಳ ಕೆಟ್ಟ ಕೆಲಸ ಮಾಡಿದೆ ಎನ್ನಿಸಿತು.

"ಆದರೆ ಈಗ ಪದ್ಮಾ, ಎಲ್ಲಿ ?" ಎಂದು ಕಾತರನಾಗಿ ಕೇಳಿದ.

"ಅದು ದೊಡ್ಡ ಕಥೆ ಚಂದ್ರಶೇಖರಯ್ಯನವರೇ, ಕೇಳಿ" ಎಂದು ಸುಬ್ಬ ನಡೆದದ್ದನ್ನೆಲ್ಲ ಸೂಕ್ಷ್ಮವಾಗಿ ಹೇಳಿ "ನನ್ನಂಥ ಪಾಪಿ ಈ ಜಗತ್ತಿನಲ್ಲಿಲ್ಲ, ಚಂದ್ರಶೇಖರಯ್ಯನವರೇ; ನನ್ನಿಂದ ಆ ಸಾಧ್ವಿ ಏನು ಕಷ್ಟಪಟ್ಟಳೋ, ಏನು ಕಷ್ಟ ಪಡುತ್ತಿದ್ದಾಳೋ. ನನಗೆ ಯಾವ ಪ್ರತ್ಯೇಕ ನರಕ ಸಿದ್ಧವಾಗುತ್ತಿದೆಯೋ ದೇವರೇ ಬಲ್ಲ" ಎಂದು ಗದ್ಗದನಾಗಿ ನುಡಿದು ಸಿಟ್ಟುಸಿರುಬಿಟ್ಟ.

"ಎಲ್ಲ ಗ್ರಹಚಾರ, ಸುಬ್ಬ. ಅದಕ್ಕಾಗಿ ಸುಮ್ಮನೆ ಕೊರಗಿದರೆ ಏನು ಪಯೋಗ ?" ಎಂದು ರಾಮಚಂದ್ರಶಾಸ್ತ್ರಿ ಸಮಾಧಾನ ಹೇಳಲು ಪ್ರಯತ್ನಿಸಿದ.

“ ಆದರೆ ಈಗ ಪದ್ಮಳ ಗತಿ ಏನಾಗಿರಬಹುದು ?” ಎಂದು ಚಂದ್ರಶೇಖರ ದುಃಖದಿಂದ ಪ್ರಶ್ನೆ ಕೇಳಿದ.

“ ಅದೇ ಚಿಂತೆಗೆ ಕಾರಣ. ನನಗಂತೂ ಅವಳು ಜೀವದಿಂದಿದ್ದಾಳೆ ಅನ್ನಿಸುವುದಿಲ್ಲ.” ಎಂದು ರಾಮಚಂದ್ರ ನಿಡುಸುಯ್ದ.

“ ನಿಮ್ಮ ಮಾತು ಸರಿ ಭಾವಯ್ಯ; ಗರ್ಭಿಣಿ; ಮಳೆಗಾಲ; ಅಪರಾತ್ರಿ ಹೊತ್ತು ಎಲ್ಲಿತಾನೇ ಹೋದಾಳು ? ಎಲ್ಲೋ ಹೊಳೆಗೋ ಕೆರೆಗೋ ಬಿದ್ದು ಹೋಗಿರಬೇಕು ಪಾಪ; ಒಟ್ಟಿನಲ್ಲಿ ಎಲ್ಲರಿಂದಲೂ ಅವಳಿಗೆ ಅನ್ಯಾಯವಾಯಿತು” ಎಂದ ಚಂದ್ರಶೇಖರ.

“ನನಗೇನೋ ಪದ್ಮಾವತಮ್ಮ ಎಲ್ಲೋ ಜೀವಸಹಿತ ಇದ್ದಿರಬೇಕು ಅನ್ನಿಸುತ್ತದೆ. ಮಳೆಯೊಂದು ನಿಂತು ಬಿಡಲಿ, ಆ ಪ್ರದೇಶದ ಪ್ರತಿಯೊಂದು ಮನೆಮನೆಗೂ ಹೋಗಿ ವಿಚಾರಿಸಿ ಪದ್ಮಾವತಮ್ಮನನ್ನು ಪತ್ತೆ ಹಚ್ಚದೆ ಬಿಡುವುದಿಲ್ಲ. ಅಲ್ಲಿಯ ತನಕ ನನ್ನ ಮನಸ್ಸು ಸುಮ್ಮನಿರುವುದಿಲ್ಲ ” ಎಂದ ಸುಬ್ಬ.

“ ಸುಬ್ಬ, ನಿನಗೊಂದು ಭ್ರಮೆ. ಪದ್ಮಾ ಎಲ್ಲಿರುತ್ತಾಳೆ? ಇದ್ದರೆ ಇಷ್ಟು ಹೊತ್ತಿಗೆ ಸಮಾಚಾರ ಸಿಕ್ಕುತ್ತಿರಲಿಲ್ಲವೆ ? ಅವಳಾದರೂ ಸಮಾಚಾರ ಕಳಿಸಲು ಯತ್ನಿಸುತ್ತಿರಲಿಲ್ಲವೆ ? ” ಎಂದ ರಾಮಚಂದ್ರ.

ಶಾಸ್ತ್ರಿ, ಚಂದ್ರಶೇಖರ ಇಬ್ಬರಿಗೂ ಪದ್ಮಾವತಿ ಕೈ ತಪ್ಪಿಹೋದಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲದಂತೆ ತೋರಿತು. ಒಂದು ದೃಷ್ಟಿಯಿಂದ ನೋಡಿದರೆ ಅವರಿಗೆ ಅನ್ನಿಸಿದ್ದೂ ಸರಿಯೆ. ಆದರೆ ಸುಬ್ಬನಿಗೆ ಮಾತ್ರ ಎಷ್ಟು ಯೋಚಿಸಿದರೂ ಹಾಗೆ ಅನ್ನಿಸಲಿಲ್ಲ. ಪದ್ಮಾವತಿಯ ಜೀವಕ್ಕೇನಾದರೂ ಅಪಾಯವಾಯಿತು ಎಂದು ತಿಳಿದರೆ ಅವನು ಜೀವಾವಧಿ ಕೊರಗಬೇಕಾಗುತ್ತಿತ್ತು. ಅವಳು ಬದುಕಿರಬಹುದು ಎಂಬ ಆಶೆಯೊಂದೇ ಅವನ ಮನಸ್ಸಿಗೆ ಕೊಂಚ ಭರವಸೆಯನ್ನು ಕೊಡುತ್ತಿತ್ತು.

“ ಭಾವಾ, ನೀವು ಮತ್ತೆ ಗಟ್ಟದ ಮೇಲೆ ಏಕೆ ಹೋಗಬೇಕು ? ಇಲ್ಲೇ ಎಲ್ಲಾದರೂ ಇರಬಹುದಲ್ಲ.” ಎಂದ ಚಂದ್ರಶೇಖರ.

“ ಅದೇ ಯೋಚನೆಯಿಂದಲೇ ಬಂದೆ. ಶೀನ ಭಂಡಾರಿಯ ಸಾಲವೆಲ್ಲ ತೀರಿದ ಹಾಗೂ ಆಯಿತು. ಇಲ್ಲೇ ಎಲ್ಲಾದರೂ ಮೂಲಗೇಣಿ ಗದ್ದೆ ಸಿಕ್ಕಿದ್ದರೆ—” ಎಂದ ಶಾಸ್ತ್ರಿ.

“ ನೋಡಿ, ಇಲ್ಲೇ ಹತ್ತಿರ ಮೂಡುಬೆಟ್ಟು ಖಾಲಿಯಾಗಿದೆ. ಮನೆಗೆ

ಹೊಂದಿಕೊಂಡು ಮೂರು ಮುಡಿ ಗದ್ದೆಯೂ ಇದೆ. ನೀವು ನೋಡಿ. ಇಷ್ಟವಿದ್ದರೆ ಏನಾದರೂ ಮಾಡಬಹುದು ” ಎಂದ ಚಂದ್ರಶೇಖರ.

“ ಆ ಜಿಟ್ಟು ಯಾರಿಗೆ ಸೇರಿದ್ದು? ”

“ ಅದು ನಮ್ಮ ಸೂರ್ಯಣ್ಣ ಶೆಟ್ಟ್ರೇದು. ಮನುಷ್ಯ ಒಳ್ಳೆಯವ. ನ್ಯಾಯ ಮೀರಿ ಹೋಗುವವನಲ್ಲ. ಸಿಕ್ಕಿದರೆ ಬಹಳ ಅನುಕೂಲವೇ.”

ಅದೇ ಮರುದಿನ ಎಲ್ಲರೂ ಹೋಗಿ ಸೂರ್ಯಣ್ಣಶೆಟ್ಟಿಯನ್ನು ಕಂಡು ಮಾತಾಡಿ ಮನೆಗದ್ದೆಗಳನ್ನು ಮೂಲಗೇಣಿಗೆ ಪಡೆದರು. ಮನೆ ಕೊಂಚ ದುರಸ್ತಿ ಆಗಬೇಕಾಗಿತ್ತು. ಎತ್ತಿನ ಜೊತೆ ಕೊಂಡುಕೊಳ್ಳಬೇಕಾಗಿತ್ತು. ರಾಮಚಂದ್ರ ತನ್ನ ಹತ್ತಿರವಿದ್ದ ದುಡ್ಡಿನಿಂದ ಮನೆಯನ್ನು ಮಳೆ ನಿಂತ ಸಮಯ ನೋಡಿ ಕೊಂಚ ದುರಸ್ತಿ ಮಾಡಿಸಿ ಒಂದು ಎತ್ತಿನ ಜೊತೆಯನ್ನೂ ಮನೆಗೆ ಬೇಕಾದ ಸಾಮಾನುಗಳನ್ನೂ ಕೊಂಡುಕೊಂಡು ಮತ್ತೆ ಒಂದು ಮನೆ ಅಂತ ಆರಂಭಿಸಿದ.

ಇಷ್ಟು ಹೊತ್ತಿಗೆ ಸೋಣೆ ತಿಂಗಳ ಅರ್ಧಭಾಗ ಕಳೆದಿತ್ತು. ಮಳೆಯ ಆರ್ಭಟ ಕುಗ್ಗಿತ್ತು. ರಾಮಚಂದ್ರಶಾಸ್ತ್ರಿ ಮನೆ ಮಾಡಿದ್ದು ಕೇಳಿದೊಡನೆಯೇ ಅವನ ಸೋದರಮಾವ, ಮಹಾದೇವಭಟ್ಟ ಎಲ್ಲಿಂದಲೋ ಬಂದು ಅವನ ಮನೆಯಲ್ಲಿ ಹಾಜರಾದ. ಅವನಿಗೆ ಹೆಂಡಿರುಮಕ್ಕಳು ಯಾರೂ ಇಲ್ಲ. ಎಲ್ಲೋ ಒಂದು ಕಡೆ ಹರಕು ಝೋಪಡಿಯಲ್ಲಿ ಅಹನ್ಯಹನಿ ಕಾಲಕ್ಷೇಪ ಮಾಡುತ್ತಿದ್ದ. ಈಗ ತನ್ನ ಅಳಿಯ ಮನೆ ಮಾಡಿದ್ದು ಕೇಳಿದೊಡನೆ ಅಲ್ಲಿಗೆ ಬಂದು ಮನೆಯ ಸೂತ್ರವನ್ನೇ ಕೈಗೆ ತೆಗೆದುಕೊಂಡ. ಪ್ರತಿದಿನವೂ ರಾಮಚಂದ್ರನಿಗೆ “ ನೀನೊಂದು ಮದುವೆಮಾಡಿಕೊಳ್ಳಬೇಕಪ್ಪಾ ” ಎಂದು ಬೋಧಿಸತೊಡಗಿದ.

“ ಪದ್ಮ ಏನಾದಳು ಅಂತ ತಿಳಿಯಬೇಡವೇ ?” ಎಂದು ರಾಮಚಂದ್ರ ಕೇಳಿದರೆ “ ಅಯ್ಯೋ ಅವಳು ಇನ್ನೆಲ್ಲಿ ಬರುತ್ತಾಳೆ, ರಾಮಚಂದ್ರ? ನಿನಗೊಂದು ಭ್ರಮೆ. ಅದನ್ನು ಬಿಟ್ಟುಬಿಡು. ಹಿರಿಯರ ಮಾತು ಕೇಳು. ಬೇಗ ಮದುವೆ ಮುಗಿಸಿಬಿಡೋಣ.”

“ ಮದುವೆಯೇ ಬೇಡ ಅನ್ನಿಸಿಬಿಟ್ಟಿದೆ ” ಎಂದು ರಾಮಚಂದ್ರ ಲೋಕಾಭಿರಾಮವಾಗಿ ಹೇಳಿದರೆ “ ಸಾಕು, ರಾಮಚಂದ್ರ, ನಿನಗೇನು ಬಹಳ ವರ್ಷ ಆದದ್ದು ಈಗ? ಇನ್ನೂ ಎಳೇ ಪ್ರಾಯ. ಹಾಗೆಲ್ಲ ಅನ್ನಬಾರದು ” ಎನ್ನುತ್ತಿದ್ದ. ಎನ್ನುತ್ತಿದ್ದುದು ಮಾತ್ರವಲ್ಲದೆ, ವಧುವಿನ ತಪಾಸಣೆಗೂ ಆಗಲೇ

ಶುರು ಮಾಡಿ ಬಿಟ್ಟಿದ್ದ. ಅವನ ಪರಿಚಯದವರಾದ ಮಾಧವ ಸೋಮಯಾಜಿಗಳ ಮಗಳಿಗೆ ವರ ಸಿಕ್ಕದೆ ಬಹಳ ಒದ್ದಾಡುತ್ತಿದ್ದರು. "ಮಹಾದೇವಭಟ್ಟರೇ, ಈ ಹುಡುಗಿಗೊಂದು ವರ ಗೊತ್ತು ಮಾಡಿಕೊಡಿ. ನಿಮ್ಮ ಉಪಕಾರ ಏಳೇಳು ಜನ್ಮಕ್ಕೂ ಮರೆಯುವುದಿಲ್ಲ. ನಿಮಗೂ ಸುಮ್ಮನೆ ಮಾಡುವುದಿಲ್ಲ. ಏನಾದರೂ ನಡಕೊಳ್ಳುತ್ತೇನೆ" ಎಂದಿದ್ದ. ಅದನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು ಭಟ್ಟ ರಾಮಚಂದ್ರನ ಮನಸ್ಸನ್ನು ಒಲಿಸಿಕೊಳ್ಳತೊಡಗಿದ.

ಇದನ್ನು ಕಂಡು ಸುಬ್ಬನಿಗೆ ಹೆದರಿಕೆಯಾಯಿತು. "ಅಯ್ಯೋ ಭಟ್ಟರೇ, ಇಷ್ಟು ಅವಸರವೇಕೆ? ಇನ್ನೂ ಒಂದೆರಡು ತಿಂಗಳು ಕಳೆಯಲಿ" ಎಂದ.

"ಇಲ್ಲ ಸುಬ್ಬಣ್ಣ, ನಿನಗೆ ತಿಳಿಯುವುದಿಲ್ಲ. ಪ್ರಾಯದ ಗಂಡಸು ಮನೆಯಲ್ಲಿ ಹೆಂಗಸಿಲ್ಲದೆ ಇರಬಾರದಪ್ಪಾ" ಎಂದ.

ರಾಮಚಂದ್ರನನ್ನು ಹತ್ತಿರ ಇದ್ದವರು ಹೇಗೆ ಬೇಕಾದರೆ ಹಾಗೆ ನಡಸಿಕೊಳ್ಳಬಹುದು ಎಂಬುದು ಸುಬ್ಬನಿಗೆ ಚೆನ್ನಾಗಿ ತಿಳಿದಿತ್ತು. ಅವನಿಗೆ ಈಗ ತಾನೇನು ಮಾಡಬೇಕು ಅಂತ ತೋಚಲಿಲ್ಲ.

"ಶಾಸ್ತ್ರಿಗಳೇ, ನಾನು ಮಳೆಗಾಲ ನಿಲ್ಲುತ್ತಲೇ ಪದ್ಮಾವತಮ್ಮನನ್ನು ಹುಡುಕಿಕೊಂಡು ಹೊರಡುತ್ತೇನೆ. ನೀವೂ ನನ್ನ ಜೊತೆಯಲ್ಲಿ ಬಂದರೆ ಒಳ್ಳೇದು" ಅಂದ.

"ಇಲ್ಲ ಸುಬ್ಬ, ಆ ಕೆಲಸ ನೀನೇ ಮಾಡಿಬಿಡಪ್ಪಾ. ಈ ಮನೆ ಅಂತ ಮಾಡಿಕೊಂಡಾಯಿತು. ಆ ಕೆಲಸ ಈ ಕೆಲಸ ಅಂತ ಕಾಲಕ್ಕೆ ಸರಿಯಾಗಿ ಮಾಡದಿದ್ದರೆ ಹೇಗೆ?"

"ಹಾಗಾದರೆ ನಾನು ಈ ದಿನವೇ ಗಂಗೊಳ್ಳಿಗೆ ಹೊರಡುತ್ತೇನೆ. ನಾನು ಇನ್ನು ಎರಡು ತಿಂಗಳಿನಲ್ಲಿ ಹಿಂತಿರುಗಿ ಬರುತ್ತೇನೆ. ಬರುವ ತನಕ ನೀವು ಮದುವೆ ವಿಚಾರ ಮಾಡಬಾರದು—ಆಗಬಹುದೇ?"

"ಹಾಗೇ ಆಗಲಿ; ಅಷ್ಟು ಬೇಗ ಎಲ್ಲಿ ಮದುವೆ ಆಗುತ್ತದೆ. ನನಗಂತೂ ಮದುವೆ-ಸಂಸಾರ ಎಂದರೇ ಸಾಕಾಗಿ ಬಿಟ್ಟಿದೆ" ಎಂದ. ಚೆಲುವಿಯ ಕಥೆ ನೆನಪಿಗೆ ಬಂದು ಸುಬ್ಬ ತನ್ನೊಳಗೇ ಈ ಮಾತು ಕೇಳಿ ನಕ್ಕ.

ಮಾರನೆಯ ದಿನವೇ ಸುಬ್ಬ ಹೊರಟು ಗಂಗೆಯ ಮನೆಗೆ ಸಂಜೆಯ ಹೊತ್ತಿಗೆ ಬಂದು ತಲುಪಿದ. ಸುಬ್ಬನನ್ನು ಕಂಡು ಗಂಗೆಯ ಮುಖ ಅರಳಿತು.

"ಬನ್ನಿ ನನ್ನೊಡೆಯಾ, ಬನ್ನಿ" ಎಂದಳು.

" ಸೂಜಿಗಲ್ಲಿನ ಹತ್ತಿರ ಕಬ್ಬಿಣ ಬರಲೇ ಬೇಕು—ವಿಧಿಯಿಲ್ಲ " ಎಂದ ಸುಬ್ಬ.

" ಅಂತೂ ನಾನು ನಿಮ್ಮ ದೃಷ್ಟಿಯಲ್ಲಿ ಕಲ್ಲೇ ಆದೆ—ಆಗಲಿ."

" ಬರೀ ಕಲ್ಲಲ್ಲ ಗಂಗಾ ; ಜೊತೆಗೆ ಸೂಜಿಯೂ ಇದೆ. ಅಲ್ಲದೆ ನಾನು ಕಬ್ಬಿಣ ಅಂತ ಹೇಳಿಕೊಂಡೆನಲ್ಲ, ಚಿನ್ನ ಅಂದೆನೆ ? "

" ಅದನ್ನು ನನಗೆ ಹೇಳಿದ್ದರೆ ! "

" ಹೇಳದೇ ಏನು ? ನೂರು ಬಾರಿ ಹೇಳುತ್ತೇನೆ. ಚಿನ್ನಾ, ಚಿನ್ನಾ, ಚಿನ್ನಾ ! "

" ಸಾಕು ಮಹಾರಾಯರೇ, ಇದು ಅತ್ತು ಕರೆದು ಔತಣಕ್ಕೆ ಹೇಳಿಸಿಕೊಂಡ ಹಾಗೆ. ಇದರಲ್ಲೇನು ಸಂತೋಷ ? "

" ತಪ್ಪಾಯಿತು ; ಮಹಾರಾಣಿಯುವರೇ; ತಮಗೆ ಹೇಗೆ ಸಂತೋಷವಾಗುತ್ತದೋ ಹಾಗೆಯೇ ಮಾಡೋಣ. ಸರಿಯೆ ? " ಎಂದ.

ಇಬ್ಬರೂ ನಗುನಗುತ್ತ ಮನೆಯೊಳಕ್ಕೆ ಹೋದರು. ಸುಬ್ಬ ಹೇಳಿದ :

" ಗಂಗೆ, ನನಗೆ ಎಷ್ಟೋ ಸಲ ಎನ್ನಿಸುತ್ತದೆ–ನೀನು ನನ್ನ ಹೆಂಡತಿಯೇ ಆಗಿದ್ದರೆ ಎಷ್ಟು ಚೆನ್ನಾಗಿತ್ತು ಅಂತ ! "

" ಹಾಗೇನಾದರೂ ಆಗಿದ್ದರೆ ದಿವಸಕ್ಕೆ ನೂರು ಜಗಳ ; ವಾರಕ್ಕೆ ಮೂರು ಯುದ್ಧ."

" ಅದು ಏಕೆ ಹಾಗೆ ಹೇಳುತ್ತೀ? ನಾವೀಗ ಎಷ್ಟು ಅನ್ಯೋನ್ಯವಾಗಿಲ್ಲ ?"

" ಅದು ಅಪರೂಪವಾದ್ದರಿಂದ. ಇನ್ನೊಬ್ಬರ ಜೊತೆಗೆ ಸದಾ ಕಾಲ ಇರುವುದು ಬಹಳ ಕಷ್ಟ ಸುಬ್ಬಣ್ಣನವರೇ: ನಿಮಗೆ ಅದೆಲ್ಲ ಹೇಗೆ ತಿಳಿಯಬೇಕು ? " ಎಂದಳು ಗಂಗೆ ನಗುತ್ತ.

ಒಳಗೆ ಹೋಗಿ ಇಬ್ಬರೂ ಕುಳಿತುಕೊಂಡ ಮೇಲೆ ಗಂಗೆ " ಈ ಒಣ ಹರಟೆಯೆಲ್ಲ ಸದ್ಯಕ್ಕೆ ಸಾಕು ಬಿಡಿ. ನೀವು ಹೋದ ಕೆಲಸವೇನಾಯಿತು ? " ಎಂದು ಗಂಗೆ ಗಂಭೀರವಾಗಿ ಕೇಳಿದಳು.

" ಕೆಲಸ? ಕೆಲಸ ಏನೂ ಆಗಲಿಲ್ಲ. ಕುಟ್ಟಿ ಕುಂದಾಪುರಕ್ಕೆ ಹೋದ ಹಾಗೆ ಆಯಿತು. ಪದ್ಮಾವತಮ್ಮ ಸಿಕ್ಕಲಿಲ್ಲ. ಅವಳ ಗಂಡ...."

" ಏನು ಅವಳ ಗಂಡ ? "

" ಅವಳ ಗಂಡನಿಗೆ ಅವಳಲ್ಲಿ ಆಸಕ್ತಿಯೇ ಇದ್ದ ಹಾಗೆ ಇಲ್ಲ, ಗಂಗೆ,

ಸತ್ತರೂ ಅಷ್ಟೆ, ಇದ್ದರೂ ಅಷ್ಟೆ ಅನ್ನುವ ಹಾಗೆ ಆಡುತ್ತಾರೆ. ಆಕೆ ಇನ್ನೂ ಜೀವಂತಳಾಗಿದ್ದಾಳೆ ಅಂತ ಅವರೂ ನಂಬುವುದಿಲ್ಲ, ಯಾರೂ ನಂಬುವುದಿಲ್ಲ. ನನ್ನ ಮನಸ್ಸು ಬೆಂಕಿಯಾಗಿದೆ, ಗಂಗಾ" ಎಂದ. ಸುಬ್ಬನ ಮಾತಿನಲ್ಲಿ ಹತ್ತಿಕ್ಕಲಾರದ ನಿರಾಶೆಯು, ನಿರುತ್ಸಾಹದ ಧ್ವನಿಯಿತ್ತು.

ಗಂಗೆ ಕೊಂಚ ಸುಮ್ಮನಿದ್ದು ಅನಂತರ "ಏನೋ ಶಾಸ್ತ್ರಿಗಳು, ಬಹಳ ಒಳ್ಳೆಯವರು ಹಾಗೆ ಹೀಗೆ ಅಂತ ಬಹಳ ಹೇಳುತ್ತಿದ್ದಿರಿ?" ಎಂದಳು.

"ಹೇಳುತ್ತಿದ್ದೆ ಚಿನ್ನಾ. ಒಳ್ಳೆಯವರೂ ಹೌದು. ಆದರೆ ಒಳ್ಳೆಯತನದಲ್ಲಿ ಹಲವು ಪ್ರಕಾರದ್ದೂ ಇದೆ ಅಂತ ನನಗೆ ಈಗೀಗ ಅನ್ನಿಸುತ್ತದೆ ಗಂಗಾ."

"ಹೇಳಿ, ಹೇಳಿ. ಏನೇನು ನಡೆಯಿತು, ಹೇಳಿ. ಪದ್ಮಾವತಮ್ಮನ ಕಷ್ಟ ನೆನಸಿಕೊಂಡರೆ ನನಗೆ ಅಳು ತಡೆಕೊಳ್ಳುವುದಕ್ಕೇ ಆಗುವುದಿಲ್ಲ" ಎಂದಳು ಗಂಗೆ.

ಸುಬ್ಬ ನಿಧಾನವಾಗಿ ಕುಳಿತುಕೊಂಡು ಎಲ್ಲ ಕಥೆಯನ್ನೂ ಹೇಳಿದ. ತಾನು ಕೊಲ್ಲೂರಿಗೆ ಹೋಗಿದ್ದು, ಅಲ್ಲಿಂದ ಆಗಲೇ ಶಾಸ್ತ್ರಿ ಕಳೂರುಕಟ್ಟೆಗೆ ಹೊರಟು ಹೋಗಿದ್ದರಿಂದ ತಾನೂ ಅಲ್ಲಿಗೆ ಹೋಗಿದ್ದು, ಚೆಲುವಿಯ ವೃತ್ತಾಂತ, ತಾವು ಮತ್ತೆ ಊರಿಗೆ ಬಂದದ್ದು, ಶಾಸ್ತ್ರಿಗೆ ಇನ್ನೊಂದು ಮದುವೆ ಮಾಡಲು ಅವರ ಮಾವ ಆಕಾಶ ಪಾತಾಳ ಒಂದು ಮಾಡುತ್ತಿರುವುದು—ಎಲ್ಲವನ್ನೂ ವಿಸ್ತಾರವಾಗಿ ಹೇಳಿ ಕಂಬನಿಗರೆದ.

ಮೌನವಾಗಿ ಎಲ್ಲವನ್ನೂ ಕೇಳುತ್ತ ಕುಳಿತಿದ್ದ ಗಂಗೆ, "ಈ ವರೆಗೆ ಪದ್ಮಾವತಮ್ಮನ ವಿಚಾರ ಏನೂ ತಿಳಿಯದೆ ಇದ್ದದ್ದು ಕಂಡರೆ ಸ್ವಲ್ಪ ಭಯವೇ ಆಗುತ್ತದೆ. ಅವರೆಲ್ಲ ಹೇಳುವಂತೆ ಆಗಿದ್ದರೆ?" ಎಂದಳು.

"ಆಗಿದ್ದರೆ ಆಗಿರಬಹುದು ಗಂಗಾ. ಆದರೆ ನನ್ನ ಮನಸ್ಸೇಕೋ ಅದನ್ನು ಒಪ್ಪುವುದಿಲ್ಲ. ಹೇಗಾದರೂ ಮಾಡಿ ಅವರನ್ನು ಪತ್ತೆ ಹಚ್ಚಲೇ ಬೇಕು."

"ಏನು ಮಾಡಬೇಕೆಂದಿದ್ದೀರಿ; ಹಾಗಾದರೆ?"

"ಸ್ವಲ್ಪ ಮಳೆ ನಿಲ್ಲಲಿ. ನವರಾತ್ರಿ ಕಳೆಯಲಿ. ನಾನು ಆ ಪ್ರದೇಶಕ್ಕೆ ಹೋಗಿ, ಪ್ರತಿಯೊಂದು ಮನೆಗೂ ಹೋಗಿ ವಿಚಾರಿಸಿಕೊಂಡು ಬರುತ್ತೇನೆ. ಎಷ್ಟು ದಿನ ಹಿಡಿದರೂ ಸರಿಯೆ. ಅಲ್ಲಿಯ ತನಕ ನನ್ನ ಮನಸ್ಸಿಗೆ ನೆಮ್ಮದಿ

ಸಿಕ್ಕಲಾರದು" ಎಂದ ಸುಬ್ಬನನ್ನು ಎವೆಯಿಕ್ಕದೆ ನೋಡುತ್ತ ಗಂಗೆ,

"ಜಗತ್ತೇ ತೆಗೆದು ಹಾಕಿದವರು ನೀವು, ಸುಬ್ಬಣ್ಣ. ಆದರೆ ನಿಮ್ಮಂಥವರು ಈ ಜಗತ್ತಿನಲ್ಲಿ ಹೆಚ್ಚು ಜನರಿಲ್ಲ!" ಎಂದಳು, ಅಭಿಮಾನಪೂರ್ವಕವಾಗಿ.

"ಸರಿ, ಸರಿ; ನೀನೊಬ್ಬಳೇ ಈ ಮಾತು ಹೇಳಬೇಕು. ನಾನೇ ಅಲ್ಲವೇ, ಈ ದೊಡ್ಡ ಮನುಷ್ಯನೇ ಅಲ್ಲವೇ ಪದ್ಮಾವತಮ್ಮ ದಿಕ್ಕುಪಾಲಾಗಲು ಕಾರಣ?" ಎಂದು ಸುಬ್ಬ ದುಃಖ ತುಂಬಿದ ಕಂಠದಿಂದ ನುಡಿದ.

"ತಪ್ಪು ಮಾಡುವುದು, ಎಚ್ಚರ ತಪ್ಪುವುದು—ಇದು ಮನುಷ್ಯರಿಗೆ ಸಹಜ; ಆದರೆ ಶುದ್ಧವಾದ ಅಂತರಂಗವುಳ್ಳವರು ಮಾತ್ರ ಕಡಿಮೆ. ಆ ಮಾತು ಹಾಗಿರಲಿ, ನಿಮ್ಮ ಶಾಸ್ತ್ರಿಗಳು ಹಾಗಾದರೆ ಮದುವೆ ಯೋಚನೆ ಆಗಲೇ ಶುರು ಮಾಡಿದ್ದಾರೆ ಅನ್ನಿ."

"ಅವರು ಹೆಚ್ಚು ಯೋಚನೆ ಮಾಡುವುದೇ ಇಲ್ಲ, ಗಂಗಾ. ಅದೇ ತೊಂದರೆ. ಹತ್ತಿರ ಇದ್ದವರು ಏನು ಹೇಳಿದರೆ ಹಾಗೆ ಮಾಡಿ ಬಿಡುತ್ತಾರೆ. ಅವರ ಆ ಸೋದರಮಾವ ಮಹಾದೇವ ಭಟ್ಟ ಬಹಳ ಖದೀಮ; ಏನೇನು ಮಾಡಿಸಿ ಬಿಡುತ್ತಾನೋ ದೇವರೇ ಬಲ್ಲ."

"ತನ್ನ ಹೆಂಡತಿ, ಅಷ್ಟು ವರ್ಷ ಜೊತೆಯಾಗಿ ಸಂಸಾರ ಮಾಡಿದವಳು ಅಂತ ಅಷ್ಟಾದರೂ ಬೇಡವೇ? ಏನೋ ಅಪ್ಪ, ನಿಮ್ಮ ಶಾಸ್ತ್ರಿಗಳು ಸರಿಯಾದ ಜನ ಅಂತ ನನಗೆ ತೋರುವುದಿಲ್ಲ."

"ಅವರನ್ನು ನಾನು ಸರಿಯಾಗಿ ಅರ್ಥ ಮಾಡಿಕೊಂಡಿದ್ದೇನೆ, ಗಂಗಾ. ಅವರ ಪ್ರೀತಿ, ದ್ವೇಷ, ಕಾರುಣ್ಯ,—ಎಲ್ಲವೂ ಕ್ಷಣಿಕವೇ. ಆಯಾಯ ಕ್ಷಣಕ್ಕೆ ಆ ಆ ಭಾವನೆ ಯಥಾರ್ಥವೇ. ಆದರೆ ಯಾವುದನ್ನೇ ಆಗಲಿ ಮನಸ್ಸಿನಲ್ಲಿಟ್ಟುಕೊಳ್ಳುವ ತ್ರಾಣವೇ ಅವರಿಗಿಲ್ಲ. ಏನು ಮಾಡಲಿ, ಹೇಳು. ನಾನು ಹೋಗಿ 'ಘಟ್ಟದ ಮೇಲೆ ಅಂಗಡಿಯಿಡಿ' ಎಂದೆ, ಇಟ್ಟರು. ಚೆಲುವಿ ಬಂದು ಬೆಡಗು ಬಿನ್ನಾಣ ಮಾಡಿ ಕರೆದಳು, ಅವಳ ಹತ್ತಿರ ಹೋದರು. ನಾಳೆ ಈ ಮಾವ ನೆಂಟಸ್ತಿಕೆ ಏರ್ಪಡಿಸುತ್ತಾನೆ, ಮದುವೆ ಮಾಡಿಕೊಳ್ಳುತ್ತಾರೆ. ಅಂಥ ಜನ ಅದು, ಗಂಗೆ ಅದೇ ಕಷ್ಟ."

"ಈಗ ನಿಮಗೆ ಪದ್ಮಾವತಮ್ಮ ಎಲ್ಲಾದರೂ ಸಿಕ್ಕಿದರು ಅಂತ ಇಟ್ಟುಕೊಳ್ಳಿ. ಅಷ್ಟು ಹೊತ್ತಿಗೆ ಅವಳ ಗಂಡ ಇನ್ನೊಂದು ಮದುವೆ ಮಾಡಿಕೊಂಡಿದ್ದರೆ? ಆಗ?"

" ಹಾಗೆ ಮಾಡಬೇಡಿ ಅಂತ ಹೇಳಿ ಬಂದಿದ್ದೇನೆ. ಇನ್ನೇನು ಮಾಡು ವುದು, ಹೇಳು."

" ಪದ್ಮಾವತಮ್ಮನಿಗೆ ಒಳ್ಳೆಯದಾಗಲಿ " ಅಂತ ಇಬ್ಬರೂ ದೇವರಿಗೆ ಮನಃಪೂರ್ವಕವಾಗಿ ಪ್ರಾರ್ಥನೆ ಮಾಡಿಕೊಂಡರು.

ಮಹಾನವಮಿಯ ತನಕ ಸುಬ್ಬ ಗಂಗೆಯ ಜೊತೆಯಲ್ಲೇ ಇದ್ದ. ಮಹಾನವಮಿಯ ದಿನ ಬೆಳಗ್ಗೆ ಬೇಗ ಎದ್ದು ತನ್ನ ಸಂಗಡವೇ ಇದ್ದ ಅರದಾಳ ಮುಂತಾದ ವೇಷ ಹಾಕುವ ಸಾಧನಗಳಿಂದ ಸೊಗಸಾದ ವೇಷ ಹಾಕಿಕೊಂಡ: ಉದ್ದನೆಯ ಗಡ್ಡ, ಕಪನಿ ; ಕೈಯಲ್ಲಿ ತಾಳ— ತಲೆಯ ಮೇಲೆ ಮುಂಡಾಸು. ಹೀಗೆ ಹಗಲು ವೇಷ ಹಾಕಿಕೊಂಡು ಗಂಗೊಳ್ಳಿಯಿಂದ ಹೊರಟು ಮಧ್ಯೆ ಇದ್ದ ಊರೂರು ಸುತ್ತುತ್ತ ಮನೆ ಮನೆಗೂ ಹೋಗಿ ಪದ ಹೇಳಿ ಕೊಟ್ಟ ಸಂಭಾವನೆ ತೆಗೆದುಕೊಂಡು ಮುಂದುವರಿದ. ತಕ್ಕಷ್ಟು ಸಂಪಾದನೆಯೂ ಆಯಿತು.

ಹೀಗೆ ಅವನು ಊರೂರು ಸುತ್ತುತ್ತ ಕಂಭದಕೋಣೆಯ ಹತ್ತಿರ ಬರು ವಾಗ ಕಾರ್ತಿಕಮಾಸ ಆರಂಭವಾಗಿತ್ತು. ಕಂಭದಕೋಣೆಯ ದಕ್ಷಿಣಕ್ಕಿರುವ ಪ್ರದೇಶವನ್ನೆಲ್ಲ ಹುಡುಕಿ ಆಗಿತ್ತು. ಆಕಾಶ ನಿರ್ಮಲವಾಗಿತ್ತು. ಕೊಯ್ಲು ನಡೆ ಯುತ್ತಿತ್ತು. ಎಷ್ಟೋ ಫಸಲು ಮನೆಗೂ ಬಂದಿತ್ತು. ಕಂಭದಕೋಣೆಗೆ ಬಂದ ಮೇಲೆ ಇನ್ನು ಮುಂದೆ ತನ್ನ ಕೆಲಸ ಬಹಳ ಎಚ್ಚರಿಕೆಯಿಂದ ನಡೆಯಬೇಕು ಎಂದು ಸುಬ್ಬ ನಿಶ್ಚಯಿಸಿಕೊಂಡ. ಪದ್ಮಾವತಮ್ಮ ಇನ್ನೂ ಜೀವಂತಳಾಗಿದ್ದರೆ ಈ ಪ್ರದೇಶದಲ್ಲೇ ಇರಬೇಕು. ಕಂಭದಕೋಣೆಗೆ ಬಂದಾಗ ಆ ದಿನ ನಡೆದದ್ದೆಲ್ಲ ಜ್ಞಾಪಕಕ್ಕೆ ಬಂದು ಸುಬ್ಬನ ಮನಸ್ಸು ವಿಹ್ವಲವಾಯಿತು. ಕಂಭದಕೋಣೆಯ ರಸ್ತೆಗೆ ಪಶ್ಚಿಮದ ಹಳ್ಳಿ ಕೆಲವನ್ನು ಒಂದು ದಿನ ಸುತ್ತಿ ಬಂದ. ಅಲ್ಲಿ ಯಾವ ಸಮಾಚಾರವೂ ಸಿಕ್ಕಲಿಲ್ಲ. ಪದ್ಮಾವತಿ ಇದ್ದ ಬಳುವಡಿ ರಸ್ತೆಯ ಪೂರ್ವಕ್ಕಿದೆ ಎಂದು ಅವನೇನು ಬಲ್ಲ ?

ಇದರಿಂದ ಸುಬ್ಬ ಹತಾಶನಾಗಲಿಲ್ಲ. ಅವನು ಸುತ್ತಬೇಕಾದ ಹಳ್ಳಿ ಗಳು ಇನ್ನು ಅನೇಕವಿದ್ದುವು. ಮತ್ತೆ ಯಥಾಪ್ರಕಾರ ಮನೆಯಿಂದ ಮನೆಗೆ ಸುತ್ತಿದ ; ಪದ ಹೇಳಿದ; ಸಂಭಾವನೆ ತೆಗೆದುಕೊಂಡ. ಆದರೆ ಯಾವ ಕೆಲಸ ಮಾಡುತ್ತಿದ್ದರೂ ಅವನ ಗಮನವಿರುತ್ತಿದ್ದುದು ಪದ್ಮಾವತಿಯ ವಿಚಾರದಲ್ಲಿ. ಕಂಭದಕೋಣೆಯಿಂದ ಹಿಡಿದು ರಸ್ತೆಯ ಪಶ್ಚಿಮಕ್ಕೆ ಉಪ್ಪುಂದದ ವರೆಗಿದ್ದ ಎಲ್ಲ

ಹಳ್ಳಿಗಳನ್ನೂ ಸುತ್ತಿಮುಗಿಸಿದ. ಇಷ್ಟಕ್ಕೆ ಆಗಲೇ ಹತ್ತು ದಿನ ಕಳೆದಿತ್ತು.

ಇನ್ನುಳಿದಿದ್ದು ರಸ್ತೆಯ ಪೂರ್ವಕ್ಕೆ ಇರುವ ಹಳ್ಳಿಗಳು. ಪಶ್ಚಿಮಕ್ಕೆ ಒಂದೂವರೆ ಎರಡು ಮೈಲಿಯಲ್ಲೇ ಸಮುದ್ರವಿದ್ದದ್ದರಿಂದ ಆ ಭಾಗವನ್ನು ಬೇಗ ಮುಗಿಸಲು ಸಾಧ್ಯವಾಯಿತು. ಆದರೆ ಪೂರ್ವದಲ್ಲಿ ಪಶ್ಚಿಮಘಟ್ಟಗಳ ವರೆಗೂ ಹಳ್ಳಿಗಳೇ. ಆದರೆ ಆಸುಪಾಸಿನ ನಾಲ್ಕೈದು ಮೈಲಿ ದೂರವನ್ನಾದರೂ ಸುತ್ತಿ ಮುಗಿಸಬೇಕೆಂದು ಅವನು ನಿರ್ಧರಿಸಿಕೊಂಡು ಮಾರನೆಯ ದಿನ ಅಲ್ಲಿಂದ ಪೂರ್ವಾಭಿಮುಖವಾಗಿ ಹೊರಟ.

ಹೊರಟು ಸ್ವಲ್ಪ ಹೊತ್ತಿನಲ್ಲಿಯೇ ಒಂದು ದೊಡ್ಡ ಮನೆ ಕಾಣಿಸಿತು. ಕಂಭದಕೋಣೆಯಿಂದ ಹೊರಟು ಹಳ್ಳವನ್ನು ದಾಟಿ ಕೆಲವು ಗದ್ದೆಗಳನ್ನು ಹಾಯ್ದುಹೋದ ಕೂಡಲೇ ಈ ಮನೆ ಕಾಣಿಸಿತು. ಹತ್ತಿರದಲ್ಲೇ ಗದ್ದೆಯಲ್ಲಿ ಕೊಯ್ಯುತ್ತಿರುವವರನ್ನು ಕೇಳಿದಾಗ ಅದು ಊರ ಶ್ಯಾನುಭಾಗರ ಮನೆ ಅಂತ ತಿಳಿಯಿತು.

ಮನೆಯೊಳಗೆ ಹೋದ. ಶ್ಯಾನುಭಾಗರು ಇರಲಿಲ್ಲ. ಅವರ ಹೆಂಡತಿ ಇದ್ದರು. ಅವರಿಗೆ ಪದ ಎಂದರೆ ಬಹಳ ಹುಚ್ಚು. ಸುಬ್ಬನ ಪದ ಕೇಳಿ ಅವರಿಗೆ ತುಂಬ ಸಂತೋಷವಾಯಿತು :

" ಯಾವೂರವರಪ್ಪಾ ನೀವು ? " ಎಂದು ಕೇಳಿದಳು.

" ನನಗೆ ಕುಂಡಲಾಪುರ ಅಮ್ಮ."

" ಕುಂಡಲಾಪುರ ಎಲ್ಲಿದೆ ? ಆ ಊರ ಹೆಸರನ್ನೇ ಕೇಳಿಲ್ಲ."

" ಕುಂಡಲಾಪುರಕ್ಕೆ ಹತ್ತು ಮೈಲಿ ದೂರವಾಗುತ್ತದೆ, ತಾಯಿ."

" ಅಷ್ಟು ದೂರದಿಂದ ಬಂದಿರಾ? "

" ಹೌದು ತಾಯಿ ; ಏನು ಮಾಡುವುದು ? ಹೊಟ್ಟೇಪಾಡು " ಎಂದು ಸುಬ್ಬ " ಈ ಕಡೆ ಯಾರಾದರೂ ಒಬ್ಬರು ಅನಾಥ ಹೆಂಗಸರು ಬಂದ ಸುದ್ದಿ ನಿಮಗೆ ಗೊತ್ತೆ ? " ಎಂದು ಕೇಳಿದ. ಆ ಹೆಂಗಸು ಕೊಂಚ ಯೋಚಿಸುತ್ತಿರುವ ಹಾಗೆ ಕಂಡಿತು.

" ಏನಾದರೂ ಕೇಳಿದ್ದರೆ ಹೇಳಬೇಕು, ಅಮ್ಮಾ " ಎಂದ.

" ಅದೇ ಏನೋ ಕೇಳಿದಹಾಗಿತ್ತು. ನಮ್ಮ ಯಜಮಾನರು ಹೇಳುತ್ತಿದ್ದರು : ಯಾರೋ ಗರ್ಭಿಣಿ ಹೆಂಗಸು ಮಳೆಯಲ್ಲಿ ಸ್ಮೃತಿತಪ್ಪಿಬಿದ್ದದ್ದು— ಅಂತ."

" ಸ್ವಲ್ಪ ಸರಿಯಾಗಿ ಹೇಳಿ ಅಮ್ಮ. ಎಲ್ಲಿ ಎಲ್ಲಿ ಬಿದ್ದದ್ದು?"

" ನನಗೆ ಸರಿಯಾಗಿ ನೆನಪಿಲ್ಲ. ಇಲ್ಲೇ ಬಳುವಡಿ ಎಂಬ ಊರಿನಲ್ಲಿ ಅಂತ ಕಾಣುತ್ತದೆ. ಅಲ್ಲಿ ಶೀನಪ್ಪ ಅಂತ ಒಬ್ಬರು ಇದ್ದಾರೆ. ಅವರೂ ಬಹಳ ಚೆನ್ನಾಗಿ ಪದ ಹೇಳುತ್ತಾರೆ. ಈ ಕಡೆ ಎಲ್ಲಿ ತಾಳಮದ್ದಲೆ ಆಗಲಿ ಅವರೇ ಭಾಗವತರಾಗಬೇಕು" ಎಂದು ಆ ಹೆಂಗಸು ತನ್ನ ಮಾತಿನಲ್ಲೇ ಮೈ ಮರೆತಳು.

" ಏನು, ಅವರ ಮನೆಯ ಮುಂದೆ ಸ್ಮೃತಿ ತಪ್ಪಿ ಆ ಹೆಂಗಸು ಬಿದ್ದಿದ್ದಳೇ ?"

" ಹಾ, ಹಾ, ಹೌದು."

" ಈಗ ಆ ಹೆಂಗಸು ಏನಾದಳು. ಎಲ್ಲಿದ್ದಾಳೆ ?"

" ಅಲ್ಲೇ ಇರಬೇಕು. ಆ ಮಹಾರಾಯನೇ ಅವಳನ್ನು ಮನೆಯಲ್ಲಿಟ್ಟುಕೊಂಡು ಬಾಣಂತನ ನಡೆಸಿದ ಅಂತ ಕೇಳಿದೆ. ನೀವು ಒಂದು ಸಲ ಶೀನಪ್ಪನವರ ಹಾಡುಗಾರಿಕೆ ಕೇಳಬೇಕು. ಅಲ್ಲಿಗೆ ಹೋಗುತ್ತೀರಾ ?"

" ಖಂಡಿತ ಹೋಗುತ್ತೇನೆ, ನಮಸ್ಕಾರ, ಅಮ್ಮಾ" ಎಂದು ಸುಬ್ಬ ಆತುರದಿಂದ ಹೊರಡುವಾಗ ಅವಳು " ಆ ಹೆಂಗಸು ನಿಮಗೆ ಏನಾದರೂ ಆಗಬೇಕೆ ?" ಎಂದು ಜ್ಞಾಪಿಸಿಕೊಂಡು ಪ್ರಶ್ನೆ ಕೇಳಿದಳು.

" ಇಲ್ಲ ಏನೂ ಆಗಬೇಕಿಲ್ಲ, ಸುಮ್ಮನೆ ಕೇಳಿದೆ;" ಎಂದು ಅವಸರ ಅವಸರವಾಗಿ ಅಲ್ಲಿಂದ ಸುಬ್ಬ ಕಾಲುಕಿತ್ತ.

ಸುಬ್ಬ ಅಲ್ಲಿ ಇಲ್ಲಿ ಕೇಳಿಕೊಂಡು ಶೀನಪ್ಪನ ಮನೆಗೆ ಬರುವಾಗ ಆಗಲೇ ಮಧ್ಯಾಹ್ನವಾಗಿತ್ತು. ಇವನು ಹೋಗುತ್ತಲೇ ಶೀನಪ್ಪ ಚಾಪೆ ಹಾಕಿ " ಕುಳಿತುಕೊಳ್ಳಿ" ಎಂದು ಬೆಲ್ಲ ನೀರು ತಂದಿಟ್ಟು, ಎಲೆ ಸಂಚಿಯನ್ನು ಬಿಚ್ಚಿದ.

ಸುಬ್ಬನಿಗೆ ಶೀನಪ್ಪನನ್ನು ಕಂಡ ಕೂಡಲೇ ಗೌರವ ಹುಟ್ಟಿತು. ಇವನೀಗ ಒಬ್ಬ ಮನುಷ್ಯ–ಎನ್ನಿಸಿತು. ಸುತ್ತ ಮುತ್ತಲೂ ಕಣ್ಣು ಹೊರಳಿಸಿದ. ಆದರೆ ಯಾರೂ ಕಣ್ಣಿಗೆ ಬೀಳಲಿಲ್ಲ; ಮನೆಯಲ್ಲಿ ಶೀನಪ್ಪನಲ್ಲದೆ ಇನ್ನಾರೂ ಇದ್ದ ಹಾಗೆ ತೋರಲಿಲ್ಲ.

" ನಿಮಗೆ ಯಾವ ಊರು ?" ಎಂದು ಶೀನಪ್ಪ ಕೇಳಿದ. " ನಿಮ್ಮನ್ನು ಎಲ್ಲೋ ಕಂಡ ಹಾಗೆ ಇದೆ. ಎಲ್ಲಿ ಅಂತ ಜ್ಞಾಪಕವಿಲ್ಲ" ಎಂದು ಮಾತು ಸೇರಿಸಿದ.

" ನನಗೆ ಒಂದು ಊರು ಅಂತ ಇಲ್ಲ, ಸ್ವಾಮಿ. ಶೆಟ್ಟಿ ಇಳಿದಿದ್ದೆ ಪಟ್ಟಣ ಎನ್ನುವ ಹಾಗೆ. ನಾನು ಹುಟ್ಟಿದ್ದು ಕುಂಡಲಾಪುರದಲ್ಲಿ. ನನ್ನ ಹೆಸರು ಸುಬ್ಬ ಅಂತ. ನಾನು ಮೇಳಗಳಲ್ಲಿ ಕೆಲಸ ಮಾಡುತ್ತಿದ್ದೆ. ಅಲ್ಲಿ ನೀವು ನನ್ನನ್ನು ನೋಡಿರಬಹುದು " ಎಂದ.

" ಎಂದರೆ ನೀವು ಹಾಸ್ಯಗಾರ ಸುಬ್ಬ, ಹಗಲು ವೇಷದ ಸುಬ್ಬಣ್ಣ ಅಲ್ಲವೆ ?—"

" ಹೌದು ಸ್ವಾಮಿ, ಅದೇ ಪಾಪಿ ನಾನು " ಎಂದ ಸುಬ್ಬ.

ಶೀನಪ್ಪನಿಗೆ ಹಠಾತ್ತಾಗಿ ಪದ್ಮಾ ಹೇಳಿದ ಕಥೆಯೆಲ್ಲ ಜ್ಞಾಪಕ ಬಂತು.

" ಪದ್ಮಾವತಮ್ಮ ಎನ್ನುವವರು– ನನ್ನ ಸ್ನೇಹಿತರು ರಾಮಚಂದ್ರಶಾಸ್ತ್ರಿಗಳು ಎಂಬವರ ಹೆಂಡತಿ. ಇಲ್ಲಿ ಬಂದಿದ್ದರು ಅಂತ ಕೇಳಿದೆ. ಆ ಮಾತು ನಿಜವೇ ?" ಎಂದು ಸುಬ್ಬ ಕೇಳಿದ.

ಒಂದು ಕ್ಷಣ ಶೀನಪ್ಪ ಮಾತಾಡಲಿಲ್ಲ. ಅನಂತರ

" ಹೌದು ಸುಬ್ಬಣ್ಣನವರೇ ಬಂದಿದ್ದರು. ಈಗ್ಗೆ ಐದಾರು ತಿಂಗಳ ಕೆಳಗೆ ಆದರೆ ..."

" ಆದರೆ ಏನು ಶೀನಪ್ಪನವರೇ ?"

" ಈಗ ಇಲ್ಲಿ ಆಕೆ ಇಲ್ಲ."

" ಎಲ್ಲಿಗೆ ಹೋದರು ?"

" ಅದು ನನಗೆ ತಿಳಿದಿದ್ದರೆ !" ಎಂದು ಶೀನಪ್ಪ ಶೂನ್ಯ ದೃಷ್ಟಿಯಿಂದ ಸ್ವಲ್ಪ ಹೊತ್ತು ನೋಡುತ್ತ ಕುಳಿತು " ನೋಡಿ ಸುಬ್ಬಣ್ಣನವರೇ, ಏನೋ ಕೆಲಸದ ನಿಮಿತ್ತ ನಾನು ಬೈಂದೂರಿಗೆ ಹೋಗಿದ್ದೆ. ಒಂದು ರಾತ್ರಿ ಅಲ್ಲಿರಬೇಕಾಗಿ ಬಂತು. ಮಾರನೆಯ ದಿನ ಬೆಳಗ್ಗೆ ಬಂದಾಗ ಪದ್ಮಾ ಮನೆಯಲ್ಲಿರಲಿಲ್ಲ." ಎಂದ.

" ಅಯ್ಯೋ ದೇವರೇ "ಎನ್ನುತ್ತ ಸುಬ್ಬ ನಿಟ್ಟುಸಿರು ಬಿಟ್ಟು ಮುಖ ಕೆಳಗೆ ಹಾಕಿ ಕುಳಿತುಕೊಂಡ.

ಆ ದಿನ ನಡೆದ ಸಂಗತಿಯ ನೆನಪು ಚೂರಿಯಂತೆ ಬಂದು ಶೀನಪ್ಪನ ಹೃದಯವನ್ನು ತಿವಿಯಿತು. ದೇಹದ ಹಸಿವನ್ನು ತೀರಿಸುವೆನೆಂದು ಬೈಂದೂರಿನ ಕಡೆಗೆ ಆ ದಿನ ಹೊರಟಿದ್ದ. ಉಪ್ಪುಂದ ಹೊಳೆಯ ಹತ್ತಿರ ಹೋಗುವಷ್ಟರಲ್ಲೇ ತನ್ನ ಮನಸ್ಸಿಗೆ ಅಂಥ ವಿಚಾರ ಹೇಗೆ ಬಂತು ಎಂದು ಅಸಹ್ಯ ಪಟ್ಟುಕೊಳ್ಳ

ತೊಡಗಿದ. ಅವನ ಮನಸ್ಸು ಪದ್ಮಳಿಂದ ತುಂಬಿ ಹೋಗಿತ್ತು. ಮತ್ತೆ ಮತ್ತೆ ಅವಳದ್ದೇ ಯೋಚನೆ. ಪದ್ಮಳ ಪವಿತ್ರ ಮೂರ್ತಿಯಿಂದ ಪಾವನವಾದ ತನ್ನ ಮನಸ್ಸಿನಲ್ಲಿ ಇನ್ನು ಯಾವಳಿಗೂ ಸ್ಥಳ ದೊರೆಯಲಾರದು ಎಂದು ಅವನಿಗೆ ಖಚಿತವಾಗಿ ಈಗ ತಿಳಿಯಿತು. ಆದರೆ ಹೊರಟು ಬಂದಾಗಿದೆ. ನಾಳೆ ಬೆಳಗ್ಗೆಯೇ ಮನೆಗೆ ಹೋಗುವುದು ಎಂದುಕೊಂಡು ಬೈಂದೂರಿಗೆ ಹೋದ. ತನ್ನ ಗುರ್ತಿನವರಾದ ಲಕ್ಷ್ಮಣ ಪ್ರಭುಗಳ ಮನೆಯಲ್ಲಿ ಆ ರಾತ್ರಿಯನ್ನು ಕಳೆದ. ಆದರೆ ರಾತ್ರಿಯೆಲ್ಲ ಏಕೋ ಮನಸ್ಸಿನಲ್ಲಿ ಕೊನೆಯಿಲ್ಲದ ಚಿಂತೆ. ಪದ್ಮಳನ್ನು ತಾನು ಬಿಟ್ಟು ಬಂದದ್ದು ತಪ್ಪಾಯಿತು ಎಂದು ಅವನ ಅಂತರಾತ್ಮ ಮತ್ತೆ ಮತ್ತೆ ಸಾರಿ ಸಾರಿ ಹೇಳಿತು. ಎಷ್ಟೋ ಸಲ ಆ ರಾತ್ರಿಯೇ ಹೊರಟು ಬಿಡೋಣ ಎಂದು ಕೂಡಾ ಎನ್ನಿಸಿತು. ಆದರೆ ಹೊರಡಲಿಲ್ಲ. ಬೆಳಗ್ಗೆ ನಸಕು ನಸುಕಿರುವಾಗಲೇ ಹೊರಟು ನಾಲ್ಕು ಗಳಿಗೆ ಹೊತ್ತು ಏರುವಷ್ಟರಲ್ಲೇ ಮನೆಯನ್ನು ಸಮೀಪಿಸಿದ.

ಮನೆ ಹತ್ತಿರವಾಗುತ್ತ ಬಂದಂತೆ ಶೀನಪ್ಪನ ಎದೆ ಡವಗುಟ್ಟ ತೊಡಗಿತು. ಕಳವಳದಿಂದಲೇ ಮನೆಯ ಬಾಗಿಲು ತಳ್ಳಿ ಒಳಗೆ ಹೋದ. ನಾಗಿ ಒಂದು ಮೂಲೆಯಲ್ಲಿ ಬೆಪ್ಪಾಗಿ ಕುಳಿತಿದ್ದಳು.

" ಪದ್ಮಾ ಎಲ್ಲಿ?" ಎಂದು ಕೇಳಿದ ಶೀನಪ್ಪ, ಒಳಗೆ ಕಾಲಿಟ್ಟ ಕೂಡಲೇ.

" ಅದೇ ನಾನು ನೋಡುತ್ತಾ ಇದ್ದೇನೆ, ಒಡೇರೆ. ಎಲ್ಲೋ ಒಳಗೆ ಇರಬಹುದು ಎಂದುಕೊಂಡಿದ್ದೆ. ಈಗ ನೋಡಿದರೆ ಇಲ್ಲೆಲ್ಲೂ ಕಾಣಿಸುವುದಿಲ್ಲ. ಎಲ್ಲಿಗೆ ಹೋದರು ಅಂತ ಗೊತ್ತಾಗುವುದಿಲ್ಲ." ಎಂದಳು.

ಶೀನಪ್ಪ ಗಾಬರಿಯಾಗಿ ಮನೆಯೊಳಗೆ ಅಡಿಗೆಮನೆ ಬಚ್ಚಲ ಮನೆ, ದೇವರ ಕೋಣೆ, ಹಿತ್ತಲು ಎಲ್ಲ ನೋಡಿ ಬಂದ. ಪದ್ಮಾ ಎಲ್ಲೂ ಇಲ್ಲ.

" ಪದ್ಮಾ ಮನೆಯಲ್ಲಿಲ್ಲ, ನಾಗಿ" ಎಂದ.

" ಹಾಗಾದರೆ ಎಲ್ಲಿ ಹೋದರು ?" ಎಂದು ಗಾಬರಿಯಿಂದ ಕೇಳಿದಳು, ನಾಗಿ.

" ನಿನ್ನೆ ರಾತ್ರಿ ಪದ್ಮಾ ಸುಖವಾಗಿದ್ದಳೇ ?"

" ಹೌದು ಒಡೇರೆ. ಬಹಳ ಹೊತ್ತು ಏನೇನೋ ಮಾತಾಡುತ್ತಾ ಇದ್ದೆವು. ಮೊನ್ನೆ ರಾತ್ರಿ ನಿದ್ದೆಯಿರಲಿಲ್ಲ ನನಗೆ. ಹಾಳಾದ ನಿದ್ದೆ ಬೇಗ ಬಂದು ಬಿಟ್ಟಿತು. ಮತ್ತೆ ಎಚ್ಚರವಾದದ್ದು ಬೆಳಗಾದ ಮೇಲೇ. ಆಗ ಅವರು

ಹಾಸಿಗೆಯ ಮೇಲೆ ಇರಲಿಲ್ಲ."

ಈಗ ಶೀನಪ್ಪನಿಗೆ ಪದ್ಮಾ ತನ್ನಿಂದ ಆಶೀರ್ವಾದ ಪಡೆದದ್ದು ನೆನಪಿಗೆ ಬಂತು. " ಸರಿ ಅವಳು ಈ ಮನೆ ಬಿಟ್ಟು ಹೋದಳು, ನಾಗಿ" ಎಂದು ಶೀನಪ್ಪ ಒಂದು ಮೂಲೆಯಲ್ಲಿ ತಲೆ ತಗ್ಗಿಸಿ ಕುಳಿತುಕೊಂಡ.

ಮನೆಯೇ ಶ್ಮಶಾನದಂತೆ ಕಂಡಿತು ಶೀನಪ್ಪನಿಗೆ. ಐದಾರು ತಿಂಗಳಿಂದ ಆ ಮನೆಯನ್ನು ತುಂಬಿದ್ದ ಬೆಳ್ದಿಂಗಳು ಈಗ ಇಲ್ಲ. ಗಾಢಾಂಧಕಾರ ಕವಿದಿದೆ. ಅರಳಿ ನಿಂತಿದ್ದ ಮಲ್ಲಿಗೆ ಗಿಡ ಈಗ ಬಾಡಿ ಹೋಯಿತು. ಕನಸಿನ ಗೋಪುರ ಭಗ್ನವಾಯಿತು. ಆತ್ಮೀಯತೆಯ ಭದ್ರವಾದ ನೆಲಗಟ್ಟು ಸಡಿಲಿ ಕುಸಿದು ಬಿದ್ದು ಕೆಳಗೆ ಮಹಾಕಂದರ ಬಾಯ್ದೆರೆಯಿತು.

ಶೀನಪ್ಪನಿಗೆ ಏನು ಮಾಡುವುದು ಅಂತ ತೋರಲಿಲ್ಲ. ಪದ್ಮಳಿಗೆ ಅವಳ ಗಂಡನ ಸಮಾಚಾರ ತಿಳಿದಿಲ್ಲ ಅವಳು ತನ್ನ ತಮ್ಮನ ಮನೆಗೆ ಮತ್ತೆ ಹೋಗಲಾರಳು. ಹಾಗಾದರೆ ಎಲ್ಲಿ ಹೋದಳು ?

ಹೊಳೆ– ಕೆರೆ– ಬಾವಿ ?

ಸುತ್ತ ಮುತ್ತಲಿನ ಕೆರೆ ಬಾವಿಗಳನ್ನೆಲ್ಲ ನೋಡಿ ಬಂದಾಯಿತು. ಎಲ್ಲೂ ಪದ್ಮಳ ಕುರುಹಿಲ್ಲ. ಸುತ್ತಮುತ್ತಲೆಲ್ಲ ವಿಚಾರಿಸಿ ಆಯಿತು. ಅವಳನ್ನು ಕಂಡವರು ಯಾರೂ ಇಲ್ಲ. ಶೀನಪ್ಪ ಹತಾಶನಾಗಿ ಮರವಟ್ಟ ಹಾಗೆ ಮನೆಯಲ್ಲಿ ಕುಳಿತ. ಎರಡು ದಿನ ಊಟವಿಲ್ಲ, ನಿದ್ದೆಯಿಲ್ಲ.

ಏಕೆ ಹೋಗಿರಬಾರದು ಅವಳು ? ಕೊಂಚ ಯೋಚನೆ ಮಾಡಿದಾಗ ಶೀನಪ್ಪನಿಗೆ ಅವಳು ತನ್ನ ಮನೆ ಬಿಟ್ಟು ಹೋದದ್ದಕ್ಕೆ ತಾನೇ ಕಾರಣ ಎಂದು ಹೊಳೆಯದಿರಲಿಲ್ಲ. ಆ ರಾತ್ರಿಯ ಅವಿವೇಕವೆಲ್ಲ ಅವನಿಗೆ ನೆನಪಿಗೆ ಬಂತು. ಪದ್ಮ ತನ್ನನ್ನೇ ಕುರಿತು ಚಿಂತಿಸಿ ಚಿಂತಿಸಿ ಬೇರೆ ಉಪಾಯ ಕಾಣದೆ ಮನೆ ಬಿಟ್ಟು ಹೋದಳು ಎಂದು ಶೀನಪ್ಪನಿಗೆ ಬಹಳ ದುಃಖವಾಯಿತು. ಅವಳ ಮನಸ್ಸಿನ ಉದಾರತೆಯನ್ನು ತಿಳಿದು ಅವನ ಮನಸ್ಸಿಗೆ ಬೆಂಕಿ ಹಾಕಿದಂತಾಯಿತು. ಅಥವಾ ಅವಳು ತನ್ನ ವರ್ತನೆಗೆ ಹೆದರಿರಬಹುದು. ಸಜ್ಜನ ಎಂದು ತಾನು ತಿಳಿದಿದ್ದ ಆ ರೀತಿ ನಡೆದದ್ದನ್ನು ಕಂಡು ಅವಳು ಹತಾಶಳಾಗಿ ಮಾನ ಸಂರಕ್ಷಣೆಗಾಗಿ ಓಡಿ ಹೋಗಿರಲೂ ಬಹುದು.

ಯಾವ ರೀತಿ ಯೋಚಿಸಿದರೂ ಶೀನಪ್ಪನಿಗೆ ಮನಃಶಾಂತಿ ದೊರೆಯಲಿಲ್ಲ. ತನ್ನ ವರ್ತನೆಗೆ ಹೆದರಿ ಅವಳು ಹೋಗಲಿಲ್ಲ ಎಂದು ಮಾತ್ರ ಶೀನಪ್ಪನ ಅಂತ

ರಾತ್ಮ ಹೇಳುತ್ತಿತ್ತು. ತನಗೆ ಪದ್ಮಳಲ್ಲಿ ಹುಟ್ಟಿದ್ದ ಭಾವನೆಯೇ ಅವಳಿಗೂ ತನ್ನಲ್ಲಿ ಹುಟ್ಟಿದೆ ಎಂದು ಅವನ ಮನಸ್ಸು ಅವನಿಗೆ ಹೇಳಿತು. ಅದರಿಂದ ತಾನು ಅಪರಾಧಿಯಲ್ಲ ಎಂದು ಕೊಂಚ ಸಮಾಧಾನವಾದರೂ ಪದ್ಮಳು ತನ್ನ ಗಂಡಾಂತರದಿಂದ ಪಾರು ಮಾಡಬೇಕೆಂದೇ ಊರು ಬಿಟ್ಟಳು ಎಂದು ಅನ್ನಿಸಿದಾಗ ಮಾತ್ರ ದುಃಖ ಅದಮ್ಯವಾಗಿ ಕಣ್ಣು ಹನಿಗೂಡುತ್ತಿತ್ತು.

ಈ ಎಲ್ಲ ನೆನಪುಗಳೂ ಶೀನಪ್ಪನ ಮನಸ್ಸಿನಲ್ಲಿ ಬೆಂಕಿಯ ಬಾಣಗಳಂತೆ ನುಗ್ಗುತ್ತಿದ್ದಾಗ ಸುಬ್ಬ ಮಾತಿಲ್ಲದೆ ಕೂತು ಯೋಚಿಸುತ್ತಿದ್ದ. ಶೀನಪ್ಪನೇ

"ಸುಬ್ಬಣ್ಣನವರೇ, ಆಕೆ ಯಾಕೆ ಹೀಗೆ ಹೇಳದೆ ಕೇಳದೆ ಹೋಗಿರಬಹುದು ? ನಿಮಗೇನಾದರೂ ಕಾರಣ ಹೊಳೆಯುತ್ತದೋ ?" ಎಂದು ಕೇಳಿದ.

ಒಂದು ಕ್ಷಣ ಸುಬ್ಬ ಸುಮ್ಮನಿದ್ದು "ಬಹುಶಃ ಮಗುವಿನ ನೆನಪು ಬಂದು ತಡೆಯಲಾರದೆ ಹೋಗಿರಬಹುದು" ಎಂದ.

"ಮಗು ? ಯಾವ ಮಗು ? ಹುಟ್ಟಿದ ಮಗು ಹುಟ್ಟಿದ ಕೂಡಲೇ ಸತ್ತು ಹೋಯಿತಲ್ಲ. ಇನ್ಯಾವ ಮಗು ?"

"ಊರಲ್ಲಿ ಬಿಟ್ಟು ಬಂದದ್ದು."

"ಊರಲ್ಲಿ ಮಗುವನ್ನು ಬಿಟ್ಟು ಬಂದಿದ್ದಳೇ ? ನನಗೆ ಯಾಕೆ ಹೇಳಲಿಲ್ಲ?"

"ಹೇಳಲಿಲ್ಲ ? ಯಾಕೆ ಹೇಳಲಿಲ್ಲ?"

ತನಗೆ ಎಲ್ಲವನ್ನೂ ಚಾಚೂ ತಪ್ಪದೆ ಹೇಳಿದವಳು ಇದೊಂದು ಮಾತನ್ನು ಏಕೆ ಮುಚ್ಚಿಟ್ಟಳು ? ಎಂದು ಶೀನಪ್ಪ ಯೋಚಿಸತೊಡಗಿದ. ಆ ದಿನ 'ಮಗು ಏನಾಯಿತು?' ಎಂದು ತಾನು ಕೇಳಿದಾಗ ಅವಳು ಬಿಕ್ಕಿ ಬಿಕ್ಕಿ ಅತ್ತದ್ದು ಅವನಿಗೆ ನೆನಪಿಗೆ ಬಂತು. ಊರಿನಲ್ಲೊಂದು ಮಗುವಿದೆ ಎಂದು ಕೇಳಿದಾಗ ಶೀನಪ್ಪನಿಗೆ ಅವಳು ಅನುಭವಿಸಿದ ಉಭಯ ಸಂಕಟದ ಯಾತನೆಯ ಅರಿವು ಸಂಪೂರ್ಣವಾಗಿ ಬಂತು. ಇಲ್ಲಿ ತನ್ನ ಮನೆಯಲ್ಲಿ ಇದ್ದಾಗ ಮಗುವನ್ನು ನೆನೆದು ನೆನೆದು ಎಷ್ಟು ಕೊರಗಿದ್ದಳೋ, ಮೂಕ ಸಂಕಟವನ್ನು ಎಷ್ಟು ಅನುಭವಿಸಿದ್ದಳೋ.

"ಪದ್ಮಾವತಮ್ಮನಿಗೆ ಬಂದಂಥ ಕಷ್ಟ ಮನುಷ್ಯ ಮಾತ್ರದವರಿಗೆ ಬರಬಾರದು" ಎಂದ ಶೀನಪ್ಪ.

"ಅದಕ್ಕೆ ನಾನೇ ಕಾರಣನಾದೆನಲ್ಲ ಎಂದು ನಾನು ಎಷ್ಟು ಕೊರಗಿ

ದ್ದೇನೆ ಗೊತ್ತೆ ಶೀನಪ್ಪನವರೇ ?”

“ ಸುಬ್ಬಣ್ಣ, ತಪ್ಪು ಮನುಷ್ಯರು ಮಾಡುತ್ತಾರೆ; ಆದರೆ ಮಾಡಿದ ತಪ್ಪನ್ನು ತಿಳಿದು ಪಶ್ಚಾತ್ತಾಪ ಪಡುವವರು, ಪಶ್ಚಾತ್ತಾಪ ಪಟ್ಟು ಮಾಡಿದ ತಪ್ಪನ್ನು ಸರಿ ಪಡಿಸಲು ಯತ್ನಿಸುವವರು ಬಹಳವಿಲ್ಲ. ” ಎಂದ ಶೀನಪ್ಪ.

ಆಮೇಲೆ ಸುಬ್ಬ ಶೀನಪ್ಪನಿಗೆ ಎಲ್ಲ ವಿಷಯವನ್ನೂ ತಿಳಿಸಿದ. ಆದರೆ ತನ್ನ ಸ್ನೇಹಿತನ ನಿಜರೂಪವನ್ನು ವಿವರವಾಗಿ ಹೇಳಲು ಸಾಧ್ಯವಾಗದೆ ಅದನ್ನು ಸೂಚಿಸಿ

“ ಪದ್ಮಾವತಮ್ಮನ ಗಂಡ, ಅಣ್ಣ ಎಲ್ಲರೂ ಅವರು ಸತ್ತರೆಂದೇ, ತಿಳಿದಿದ್ದಾರೆ, ಶೀನಪ್ಪನವರೇ” ಎಂದ.

“ ಎಂದರೆ ? ”

“ ಅವರ ಗಂಡ ಇನ್ನೊಂದು ಮದುವೆ ಮಾಡಿಕೊಂಡರೂ ಮಾಡಿಕೊಳ್ಳಬಹುದು. ಆಗಲೇ ಅವರ ಸೋದರ ಮಾವ ಅದಕ್ಕೆಲ್ಲ ತಯ್ಯಾರಿ ನಡಸಲು ಶುರು ಮಾಡಿ ಬಿಟ್ಟಿದ್ದ.”

“ ಅಯ್ಯೋ ದೇವರೇ, ಆ ಮದುವೆ ಆಗಬಾರದು; ಪದ್ಮಾ ಅನಾಥೆಯಾಗಬಾರದು ” ಎಂದು ಶೀನಪ್ಪ ನಡುಗುವ ಧ್ವನಿಯಲ್ಲಿ ಹೇಳಿದ.

“ ಆಗಬಾರದು, ಖಂಡಿತ ಆಗಬಾರದು. ನಾನು ಈಗಲೇ ಹೊರಟು ಬಿಡುತ್ತೇನೆ.”

“ ಎಲ್ಲಿಗೆ ?”

“ ರಾಮಚಂದ್ರ ಶಾಸ್ತ್ರಿಗಳು ಇರುವಲ್ಲಿಗೆ.”

“ ಊಟ ಮಾಡಿಕೊಂಡು ಹೋಗಿ ” ಎನ್ನೋಣ ಎಂದು ಶೀನಪ್ಪನಿಗೆ ಅನ್ನಿಸಿತ್ತು. ಆದರೆ ಬಾಯಿಂದ ಆ ಮಾತು ಹೊರಡಲಿಲ್ಲ.

“ ನಾನೂ ಬಂದುಬಿಡಲೇ ಸುಬ್ಬಣ್ಣನವರೇ ?”

“ ಬನ್ನಿ, ಹೊರಟುಬಿಡೋಣ ”

“ ಆದರೆ...”

“ಆದರೆ ಏನು ?”

“ ನೋಡಿ, ಅವಳು ನನ್ನ ಮನೆಯಲ್ಲಿದ್ದುದಕ್ಕೇ ನನ್ನ ಮೇಲೆ ಅಪವಾದ ಬಂದಿತ್ತು. ನನ್ನನ್ನು ಜಾತಿಯಿಂದಲೂ ತೆಗೆದು ಹಾಕಿದರು. ಆದರೆ ಅದು ಮುಖ್ಯವಲ್ಲ. ಈಗ ಅವಳ ಮೇಲೂ ಅಪವಾದ ಬರುತ್ತದೆ.— ಪರಪುರುಷನ

21

ಮನೆಯಲ್ಲಿ ಐದಾರು ತಿಂಗಳು ಇದ್ದಳು ಅಂತ. ಆದರೆ ಅವಳು ಪತಿವ್ರತೆಯಾಗಿಯೇ ಇಲ್ಲಿಂದ ಹೊರಬಿದ್ದಳು, ಸುಬ್ಬಣ್ಣ" ಎಂದ ಶೀನಪ್ಪ.

"ಅದರಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ, ಶೀನಪ್ಪನವರೇ. ನಿಮಗೆ ಜಾತಿಕಟ್ಟು ಮಾಡಿದರೇ ?"

"ಹೌದು, ಮಾಡಿದರು. ಅದು ಈಗ ಮಹತ್ವದ್ದಲ್ಲ, ಸುಬ್ಬಣ್ಣ ನಾನು ಪದ್ಮಾವತಿಯನ್ನು ಹುಡುಕಿಕೊಂಡು ಬಂದರೆ ಆಡಿಕೊಳ್ಳುವವರಿಗೆ ಇನ್ನೊಂದು ಮಾತು ಸಿಕ್ಕುತ್ತದೆ. ಅವಳ ಗಂಡನೂ ತಪ್ಪು ತಿಳಿದುಕೊಳ್ಳಬಹುದು"

"ಹಾಗಾದರೆ ನೀವು ಬರಬೇಡಿ. ನಾನೇ ಹೊರಟೆ."

"ಸರಿ. ನೀವು ಹೊರಡಿ. ಊಟ ಮಾಡಿಕೊಂಡು ಹೋಗಿ ಎನ್ನುತ್ತಿದ್ದೆ. ಆದರೆ ಪದ್ಮಾ ಜೀವಂತಳಾಗಿಯೇ ಇರುವಳಾದರೆ ಸಮಯಕ್ಕೆ ಬಹಳ ಬೆಲೆ. ಒಂದು ಕ್ಷಣವೂ ಸಾವಕಾಶ ಮಾಡುವ ಹಾಗಿಲ್ಲ"

"ಹೌದು, ಹೊರಟೆ" ಎಂದು ಸುಬ್ಬಣ್ಣ ಎದ್ದು ನಿಂತ.

"ಆದರೆ ಒಂದು ಮಾತು" ಎಂದ ಶೀನಪ್ಪ.

"ಏನು ?"

"ಪದ್ಮಳ ಗತಿ ಏನಾಯಿತು ಎಂತ ತಿಳಿಯಲು ನನ್ನ ಜೀವ ತಳಮಳಿಸುತ್ತಿರುತ್ತದೆ, ಸುಬ್ಬಣ್ಣ. ನೀವು ಮತ್ತೆ ಇಲ್ಲಿ ಬಂದು ನನಗೆ ಎಲ್ಲವನ್ನೂ ತಿಳಿಸಬೇಕು, ಹಾಗೆ ಮಾತು ಕೊಟ್ಟು ಹೋಗಬೇಕು."

"ಆಗಲಿ, ಹಾಗೇ ಆಗಲಿ; ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಮತ್ತೆ ಈ ಕಡೆಗೆ ಬಂದು ನಿಮಗೆ ಎಲ್ಲವನ್ನೂ ತಿಳಿಸುತ್ತೇನೆ" ಎಂದು ಸುಬ್ಬ ಹೊರಡುತ್ತಿದ್ದಾಗ ಶೀನಪ್ಪ ಒಳಕ್ಕೆ ಹೋಗಿ ಹತ್ತು ರೂಪಾಯಿಗಳನ್ನು ತಂದು ಕೊಟ್ಟು,

"ಇದನ್ನು ತೆಗೆದುಕೊಳ್ಳಿ" ಎಂದ.

"ಇದು ಏಕೆ ಶೀನಣ್ಣನವರೇ, ಬೇಡ" ಎಂದ ಸುಬ್ಬ.

"ಇದು ಯಥಾಶಕ್ತಿ ನಾನು ಕೊಡುವ ದಕ್ಷಿಣೆ. ನಿಮಗಿಂತ ಅರ್ಹರಾದವರು ನನಗೆ ಸಿಕ್ಕಲಾರರು." ಎಂದ.

ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು. ಇಬ್ಬರ ಕಣ್ಣೂ ಮಂಜಾಯಿತು. "ಪದ್ಮಾವತಮ್ಮನ ಯಾತನೆ ಕೊನೆಗೊಳ್ಳಲಿ" ಎಂಬ ಪ್ರಾರ್ಥನೆ ಇಬ್ಬರ ಮನಸ್ಸಿನಲ್ಲೂ ತುಂಬಿತ್ತು.

# ೨೦

ಪದ್ಮಾ ಹೊರಟು ಹೋದ ದಿನ ಸಂಜೆ ಕತ್ತಲುಕತ್ತಲಾಗುವ ಸಮಯ. ಶೀನಪ್ಪ ಚಿಂತಿಸುತ್ತ ಅಂಗಳದಲ್ಲಿ ಮಂಚದ ಮೇಲೆ ಕುಳಿತಿದ್ದ. ಆ ದಿನ ಅವನಿಗೆ ಊಟ ಬೇಕೆನ್ನಿಸಿರಲೇ ಇಲ್ಲ. ಮಧ್ಯಾಹ್ನ ಅಡಿಗೆ ಮನೆಯೊಳಕ್ಕೂ ಕಾಲಿಡಲಿಲ್ಲ. ಸ್ನಾನವಿಲ್ಲ. ಸಂಧ್ಯಾವಂದನವಿಲ್ಲ. ದಿನವೆಲ್ಲ ಮಂಕಾಗಿ ಕುಳಿತಿದ್ದ.

ಅವನು ಹೀಗೆ ಚಿಂತೆಯಲ್ಲಿ ಮಗ್ನನಾಗಿದ್ದಾಗ ನಾರಣಪ್ಪ ಬಂದು ಅವನ ಬೆನ್ನ ಮೇಲೆ ಕೈಯಿಟ್ಟು, " ಶೀನಾ, ಮಗೂ ?" ಎಂದರು. ಮಾತಿನಲ್ಲಿ ಕರುಣೆ, ವಾತ್ಸಲ್ಯ ತುಂಬಿತ್ತು.

" ದೊಡ್ಡಪ್ಪಾ " ಎಂದು ಮುಖ ಮುಚ್ಚಿಕೊಂಡ ಶೀನ. ಅಳು ತಡೆಯುವುದು ಅವನಿಗೆ ಬಹಳ ಕಷ್ಟವಾಯಿತು.

" ಮಗೂ, ಅವಳು ಹೊರಟುಹೋದಳಲ್ಲವೆ? ಅವಳು ಬಹಳ ಒಳ್ಳೆಯ ಹೆಂಗಸು. ಸಾಮಾನ್ಯರಿಗೆ ಅಷ್ಟು ಬುದ್ಧಿ ಇರುವುದಿಲ್ಲ."

" ಆದರೆ ಅವಳ ಗತಿಯೇನು ದೊಡ್ಡಪ್ಪಾ ? ಎಲ್ಲಿ ಹೊಳೆ ಕೆರೆ ಪಾಲಾದಳೋ ? ಒಂದು ಮಾತೂ ಹೇಳದೆ ಹೊರಟುಹೋದಳು."

" ಹೇಳಿದರೆ ನೀನು ಹೋಗಲು ಬಿಡುತ್ತಿದ್ದೆಯಾ ?"

" ಅವಳ ಗಂಡನ ಪತ್ತೆ ತಿಳಿದಿದ್ದರೆ ಬಿಡುತ್ತಿದ್ದೆ, ಇಲ್ಲವಾದರೆ ಬೇಡ ಎನ್ನುತ್ತಿದ್ದೆ."

" ಅವಳು ಇಲ್ಲೇ ಇದ್ದಿದ್ದರೆ ಏನಾಗುತ್ತಿತ್ತು ಗೊತ್ತೆ ? ನಿಮ್ಮಿಬ್ಬರ ಜೀವನವೂ ನರಕವಾಗುತ್ತಿತ್ತು."

" ಈಗಲೇ ಆದದ್ದು ಸಾಲದೆ ?"

" ಅದರ ಹತ್ತು ಪಾಲು ಆಗುತ್ತಿತ್ತು. ನಮ್ಮ ಸಮಾಜದಲ್ಲಿ ಪರಸ್ತ್ರೀ—ಪರ ಪುರುಷ ಇಬ್ಬರು ಒಟ್ಟಿಗೆ ಇರುವುದು ಸಾಧ್ಯವೇ ಇಲ್ಲ, ಶೀನಾ. ಅದರಿಂದ ನಿನಗೆ ಮಾತ್ರವಲ್ಲ, ಅವಳಿಗೂ ಕ್ಷಣಕಾಲ ಸುಖ ಸಿಕ್ಕುತ್ತಿರಲಿಲ್ಲ. ಅವಳು ಮಾಡಿದ್ದು ಸರಿ. ಬೇರೆ ದಾರಿಯಿಲ್ಲ."

" ಇಲ್ಲವೇ ಇಲ್ಲ, ಅಲ್ಲವೇ ದೊಡ್ಡಪ್ಪಾ ?" ಎಂದು ಶೀನಪ್ಪ ಮುಗ್ಧ

ವಾಗಿ ಕೇಳಿದ.

" ಇಲ್ಲ ಶೀನಾ, ಇಲ್ಲ."

" ಹಾಗಾದರೆ ಅಲ್ಲಿ ಅವಳ ಗಂಡ ಅವಳ ಮೇಲೆ ಅಪವಾದ ಹೊರಿಸಿ ಮತ್ತೆ ಮನೆಯಿಂದಟ್ಟಿದರೆ ಅವಳ ಗತಿಯೇನು ದೊಡ್ಡಪ್ಪಾ ? ಅದನ್ನು ಕುರಿತ ನಾನು ಯೋಚಿಸದೆ ಇರುವುದು ಹೇಗೆ ? "

" ನೀನು ಚಿಂತಿಸುವುದು ಸರಿ. ನಿನ್ನ ಹೃದಯದಲ್ಲಿರುವ ಮನುಷ್ಯ ಸಹಜವಾದ ಕಾರುಣ್ಯವನ್ನು ಅದು ಸೂಚಿಸುತ್ತದೆ ಆದರೆ ಇದರಲ್ಲಿ ನೀನು ಏನೂ ಮಾಡುವ ಹಾಗೆ ಇಲ್ಲ. ಲೋಕವನ್ನೇ ಉದ್ಧರಿಸುವುದು ನಮಗೆ ಸಾಧ್ಯವೇ ? "

" ಸಾಧ್ಯವಲ್ಲ. ಆದರೆ...."

" ನಮ್ಮ ಹತ್ತಿರ ಬಂದವರನ್ನು ಕೈ ಬಿಡಬಾರದು; ಅನಾಥರನ್ನು ರಕ್ಷಿಸಬೇಕು; ಜೀವನ ಕಾರುಣ್ಯ ತೋರಿಸಬೇಕು. ಸರಿ. ಅವಳು ಇಲ್ಲಿ ನಿರ್ಗತಿಕಳಾಗಿ ಇಲ್ಲಿಗೆ ಬಂದಾಗ ನೀನು ಅವಳನ್ನು ಬದುಕಿಸಿದೆ, ಮನೆಯಲ್ಲಿಟ್ಟುಕೊಂಡೆ, ಅದು ಸರಿ. ನಿನ್ನ ಉದ್ದೇಶ ಶುದ್ಧವಾಗಿತ್ತು. ಆದರೂ ಜನ ಆಡಿಕೊಂಡರು, ಸಂದೇಹ ಪಟ್ಟರು. ಜನ ಮಾಡಿದ್ದು ಸರಿಯಲ್ಲ. ಆದರೆ ಅವರಿಗೆ ಎಲ್ಲವೂ ಹೇಗೆ ತಿಳಿಯಬೇಕು. ಆದರೆ ಈಗಲೇ ಇರುವುದು ನಿನ್ನ ಸತ್ವಪರೀಕ್ಷೆ."

" ಈಗ, ಹೇಗೆ?"

" ಈಗಲೂ ನೀನು ಅವಳನ್ನೇ ಹಚ್ಚಿಕೊಂಡು ಕೊರಗುತ್ತ ಕುಳಿತರೆ, ಅವಳನ್ನು ಹುಡುಕಾಡುತ್ತ ತಿರುಗಿದರೆ ಆಗ ಜನ ಮತ್ತೆ ಆಡಿಕೊಳ್ಳುತ್ತಾರೆ. ಆಗ ಜನರದ್ದೇ ತಪ್ಪು ಅಂತ ಖಚಿತವಾಗಿ ಹೇಳಲು ಆಗುವುದಿಲ್ಲ." ನಾರಣಪ್ಪನ ಧ್ವನಿ ಗಡುಸಾಗಿತ್ತು. ಶೀನಪ್ಪನಿಗೆ ನಿಜಸ್ಥಿತಿಯನ್ನು ಅರಿವು ಮಾಡಿಕೊಡಲೇಬೇಕು ಎಂಬ ದೃಢತೆ ಇತ್ತು.

" ದೊಡ್ಡಪ್ಪಾ " ಎಂದು ಏನೋ ಹೇಳ ಹೋಗಿದ್ದ ಶೀನಪ್ಪ ಮಾತನ್ನು ಮಧ್ಯದಲ್ಲೇ ನಾಲಗೆಯಲ್ಲಿ ಬಿಗಿಹಿಡಿದ.

"ಅಲ್ಲದೇ, ಇದನ್ನು ನೀನು ಯೋಚಿಸಬೇಕು ಶೀನಾ. ಪದ್ಮಳೂ ಇಲ್ಲೇ ಇದ್ದಳು ಅನ್ನು. ಅವಳು ಸುಖವಾಗಿರುವಂತೆ ಮಾಡಲು ನಿನಗೆ ಸಾಧ್ಯವೇ ? ಅವಳ ಜೀವನವನ್ನು ಸರಿಪಡಿಸುವುದು ನಿನ್ನ ಕೈಯಲ್ಲಿ ಆಗುವ ಕೆಲಸವಲ್ಲ.

ದೇವರೊಬ್ಬನೇ ಆ ಕೆಲಸ ಮಾಡಬಲ್ಲ. ಅವನು ಅದನ್ನು ಮಾಡುತ್ತಾನೋ ಇಲ್ಲವೋ ನಮಗೆ ತಿಳಿಯದು. ನಾವಂತೂ ದೇವರಲ್ಲ."

"ಹೌದು ನಾವು ದೇವರಲ್ಲ. ನಿಮ್ಮ ಮಾತು ನಿಜ, ದೊಡ್ಡಪ್ಪಾ" ಎಂದ ಶೀನ. ಪದ್ಮಾ ತನ್ನನ್ನು ದೇವರು ಎಂದದ್ದು, ತಾನು ತೀರಾ ಸಾಮಾನ್ಯ ಮನುಷ್ಯನಂತೆ ನಡೆದದ್ದು ಅವನಿಗೆ ನೆನಪಿಗೆ ಬಂತು.

"ಹಾಗಾದರೆ ಅವಳು ಮತ್ತೆ ನಿರ್ಗತಿಕಳಾಗಿ, ಎಲ್ಲೂ ಆಶ್ರಯ ಸಿಕ್ಕದೆ ನನ್ನ ಹತ್ತಿರ ಬಂದರೆ ನಾನು ಅವಳನ್ನು ಹೊರಗಟ್ಟಬೇಕೆ ?"

"ಹಾಗಲ್ಲ ನಾನು ಹೇಳಿದ್ದು. ನೀನು ಮತ್ತೆ ಕೂಡಾ ಅವಳಿಗೆ ಆಶ್ರಯ ಕೊಡಬೇಕು, ಅದೇ ಆರ್ಯಧರ್ಮ; ಆದರೆ ಅದಕ್ಕೆ ಮೊದಲು ನೀನು ಇನ್ನೊಂದು ಕೆಲಸ ಮಾಡಬೇಕು. ಅದೂ ಆರ್ಯಧರ್ಮವೇ."

"ಅದೇನು, ಆ ಕೆಲಸ ?"

"ನೀನು ಮದುವೆ ಮಾಡಿಕೊಳ್ಳಬೇಕು."

"ಮದುವೆ ?" ಎಂದು ಶೀನಪ್ಪ ಗಾಬರಿಯಿಂದ ನುಡಿದ.

"ಹೌದು ಶೀನಾ; ಆಗಲೇ ನೀನು ಗೃಹಸ್ಥ ಧರ್ಮ ಪಾಲಿಸಿದ ಹಾಗೆ ಆಗುತ್ತದೆ. ಅಂಥ ಗೃಹಸ್ಥನಿಗೆ ಮಾತ್ರ ಅನಾಥ ರಕ್ಷಣೆ ಮಾಡುವ ಅಧಿಕಾರ ಬರುತ್ತದೆ. ಇದನ್ನು ನೀನು ಸರಿಯಾಗಿ ಯೋಚನೆ ಮಾಡು. ಚಿಂತೆ, ಸಾಕು" ಎಂದು ಹೇಳಿ ನಾರಣಪ್ಪ ಹೊರಟು ಹೋದ.

ದೊಡ್ಡಪ್ಪನ ಈ ಮಾತು ಕೇಳಿದ ಮೇಲೆ ಶೀನಪ್ಪನ ಮನಸ್ಸು ಕೊಂಚ ಸಮಾಧಾನಗೊಂಡಿತು. ಸ್ನಾನ ಮಾಡಿ, ಸಂಧ್ಯಾವಂದನ ಮುಗಿಸಿ, ಅಡಿಗೆ ಮಾಡಿಕೊಂಡು ಊಟ ಮಾಡಿದ. ಮಲಗಿದ. ನಿದ್ದೆಯೂ ಬಂತು.

ಮದುವೆಯನ್ನು ಕುರಿತು ಶೀನಪ್ಪ ಬಹಳ ಯೋಚನೆ ಮಾಡಿದ. ಮೊದಮೊದಲು ಅವನ ಮನಸ್ಸು ಮದುವೆಯನ್ನು ಕುರಿತು ಯೋಚಿಸಲು ನಿರಾಕರಿಸಿತು. ಆದರೆ ಕ್ರಮೇಣ ತನ್ನ ದೊಡ್ಡಪ್ಪನ ಮಾತಿನಲ್ಲಿ ಬಹಳ ತಥ್ಯಾಂಶವಿದೆ ಎಂದು ಅವನಿಗೆ ತೋರಿತು. ತನಗೆ ಮದುವೆಯಾಗಿದ್ದಿದ್ದರೆ ಈ ಬಗೆಯ ಅಪವಾದ ತನ್ನ ಮೇಲೆ ಬರುತ್ತಿರಲಿಲ್ಲ. ಪದ್ಮಳಿಗೂ ಇನ್ನೊಂದು ಅಪವಾದದಿಂದ ಮುಕ್ತಿ ದೊರೆಯುತ್ತಿತ್ತು. ಈಗ ತನ್ನ ಮನೆಯಲ್ಲಿ, ಒಬ್ಬನೇ ಗಂಡಸಿರುವ ಮನೆಯಲ್ಲಿ, ಐದಾರು ತಿಂಗಳು ಇದ್ದವಳು ಎಂಬ ಅಪವಾದ ಅವಳಿಗೆ ಅಂಟಿಕೊಳ್ಳುತ್ತದೆ—ಅದರಲ್ಲಿ ಸಂದೇಹವಿಲ್ಲ.

ಆದರೆ " ಶಾರದೆಯಂಥ ಹುಡುಗಿಯನ್ನು ಕಳೆದುಕೊಂಡ ಮೇಲೆ, ಪದ್ಮ ಳಂತ ಹೆಂಗಸನ್ನು ಕಂಡ ಮೇಲೆ ಮದುವೆಯೇ, ಛೇ " ಎಂದು ಅವನ ಹೃದಯ ಚೀರಿತು.

ಆದರೆ ಈ ಯೋಚನೆಗಳಿಂದ ಅವನ ಮನಸ್ಸು ಮೆತ್ತಗಾಗಿತ್ತು. ಅವನ ಅಜ್ಜಿ ಬಂದು ಮದುವೆ ಮಾಡಿಕೋ ಎಂದಾಗ, ಈರ, ನಾಗಿ ಎಲ್ಲರೂ ಅದೇ ಮಾತನ್ನು ಹೇಳಿದಾಗ ಅವನು ನಿಷ್ಠುರವಾಗಿ ನಿರಾಕರಿಸಲಿಲ್ಲ. " ಆಗಲಿ, ನೋಡುವಾ " ಎಂದ.

ಮರುಕ್ಷಣವೇ " ಅದು ಸಾಧ್ಯವಿಲ್ಲ " ಎಂದು ತನಗೆ ತಾನೇ ಹೇಳಿ ಕೊಂಡ.

೨೧

ಪದ್ಮಾ ಶೀನಪ್ಪನ ಮನೆಬಿಟ್ಟು ಹೊರಟಾಗ ಕೋಳಿಯೇನೋ ಕೂಗಿತ್ತು. ಆದರೆ ಇನ್ನೂ ಒಂದು ಝಾವ ರಾತ್ರಿ ಇದ್ದದ್ದು ಅವಳಿಗೆ ತಿಳಿಯಲಿಲ್ಲ. ಮೂಡಲಲ್ಲಿ ಬೆಳ್ಳಿ ಮೂಡಿತ್ತು, ಆಕಾಶ ನಿರ್ಮಲವಾಗಿತ್ತು. ಆದ ಕಾರಣ ಬೆಳಗಾಗುವ ಸಮಯ ಎಂದು ತಿಳಿದಳು. ಅವಳಿಗೆ ದಾರಿ ಸರಿಯಾಗಿ ತಿಳಿದಿರಲಿಲ್ಲ. ಆದರೆ ನೇರವಾಗಿ ಪಶ್ಚಿಮದ ಕಡೆ ನಡೆದರೆ ರಸ್ತೆ ಸಿಕ್ಕುತ್ತದೆ, ರಸ್ತೆಯ ಮೇಲೆ ದಕ್ಷಿಣಾಭಿಮುಖವಾಗಿ ಹೋದರೆ ಗಂಗೊಳ್ಳಿಗೆ ಹೋಗುತ್ತದೆ ಎಂಬುದು ಮಾತ್ರ ಅವಳಿಗೆ ಗೊತ್ತಿತ್ತು.

'ಶೀನಪ್ಪನ ಮನೆಯಲ್ಲಿರುವುದು ನನಗೆ ಶ್ರೇಯಸ್ಕರವಲ್ಲ; ಶೀನಪ್ಪನಿಗಂತೂ ಶ್ರೇಯಸ್ಕರವಲ್ಲವೇ ಅಲ್ಲ' ಎಂದು ಅವಳ ಅಂತರಂಗ ಸ್ಪಷ್ಟವಾಗಿ ಹೇಳುತ್ತಿತ್ತು. ಅವಳ ಬುದ್ಧಿ ಮಂಕಾಗಿತ್ತು, ಯಾವ ವಿಚಾರ ಮಾಡಲೂ ಅಸಮರ್ಥವಾಗಿತ್ತು. ತನ್ನ ಅಂತರಂಗದ ಭಾವನೆಯೊಂದನ್ನು ನೆಚ್ಚಿ ಮನಸ್ಸು ಗಟ್ಟಿಮಾಡಿ ಹೊರಟ್ಟಿದ್ದಳು. ಶೀನಪ್ಪನ ಮನೆಯಿಂದ ಹೊರಡಬೇಕಾದ್ದು ಒಂದು, ತನ್ನ ಮಗುವನ್ನು ಹೋಗಿ ಕಾಣಬೇಕಾದ್ದು-ಇನ್ನೊಂದು; ಈ ಎರಡು ವಿಷಯಗಳನ್ನು ಬಿಟ್ಟರೆ ಇನ್ನಾವುದೂ ಅವಳ ಮನಸ್ಸಿಗೆ ಸುಳಿಯಲಿಲ್ಲ.

ಹಲ್ಲು ಕಚ್ಚಿ ತುಟಿ ಬಿಗಿದು ಅತ್ತಿತ್ತ ನೋಡದೆ ಅವಳು ವೇಗವಾಗಿ ನಡೆದಳು. ನಾಲ್ಕೈದು ಮೈಲಿ ದೂರ ಬರುವಷ್ಟರಲ್ಲಿ ಅವಳಿಗೆ ಬಹಳ ಆಯಾಸವಾಗಿತ್ತು. ಹೆಜ್ಜೆ ನಿಧಾನವಾಯಿತು. ನಾಗೂರಿನ ಹತ್ತಿರ ಅವಳು ಹೋಗುತ್ತಿದ್ದಾಗ ಗಣಗಣ ಎನ್ನುತ್ತ ಎತ್ತಿನ ಗಾಡಿಯೊಂದು ರಸ್ತೆಯಲ್ಲಿ ಓಡೋಡುತ್ತ ಬಂತು. ಗಾಡಿ ಖಾಲಿಯಾಗಿತ್ತು. ಅದನ್ನು ನೋಡಿ ಪದ್ಮಾ

"ಅಯ್ಯಾ, ಸ್ವಲ್ಪ ಗಾಡಿಯಲ್ಲಿ ಕೂರಿಸಿಕೊಳ್ಳುತ್ತೀಯಾ?" ಎಂದಳು.

ಗಾಡಿ ನಿಂತಿತು. ಗಾಡಿಯವನು, "ಎಲ್ಲಿಗೆ ಹೋಗಬೇಕಿತ್ತು, ತಾಯಿ?" ಎಂದು ಕೇಳಿದ.

"ಗಂಗೊಳ್ಳಿ ತನಕ ಹೋಗಬೇಕಪ್ಪಾ" ಎಂದಳು.

"ಅಮ್ಮ, ನನ್ನ ಗಾಡಿ ಮರವಂತೆಗೆ ಹೋಗುತ್ತದೆ. ಅಲ್ಲಿಯವರೆಗೆ ಬೇಕಾದರೆ ಕೂತುಕೊಳ್ಳಿ. ಗಾಡಿ ಹೇಗೂ ಖಾಲಿಯಿದೆ" ಎಂದ.

ಪದ್ಮಾ ಗಾಡಿ ಹತ್ತಿ ಕುಳಿತಳು. ಎತ್ತಿನ ಕೊರಳಿನ ಗಂಟೆಸರ ಗಣಗಣ ಎನ್ನುತ್ತಿರಲು ಗಾಡಿ ಮುಂದೋಡಿತು. ಗಾಡಿಯಲ್ಲಿ ಕುಳಿತು ಪದ್ಮಾ ಯೋಚಿಸಲು ಪ್ರಯತ್ನಿಸಿದಳು ಆಗಲಿಲ್ಲ. ಹಾಗೇ ಮರದ ಹಾಗೆ ಅಲ್ಲಿ ಕುಳಿತಳು.

ಗಾಡಿ ಮರವಂತೆಗೆ ಬಂದು ನಿಂತಾಗಲೇ ಅವಳಿಗೆ ಮೈ ಅರಿವು ಬಂದದ್ದು.

“ಅಮ್ಮಾ, ಇದೇ ಮರವಂತೆ, ಇಳಿಯಿರಿ” ಎಂದ ಗಾಡಿಯವ. ಪದ್ಮಾ ಗಾಡಿಯನ್ನಿಳಿಯುತ್ತ “ಅಣ್ಣಾ, ಬಹಳ ಉಪಕಾರವಾಯಿತು, ದೇವರು ನಿನಗೆ ಒಳ್ಳೆಯದು ಮಾಡಲಿ” ಎಂದಳು.

ಆಗ ಏಳೆಂಟು ಗಳಿಗೆ ಹೊತ್ತು ಬಂದಿತ್ತು. ಮತ್ತೆ ಅವಳ ಪ್ರಯಾಣ ಶುರುವಾಯಿತು. ಮರವಂತೆಯನ್ನು ದಾಟಿ ಮಾರಸ್ವಾಮಿ ಬಂತು. ಸಮುದ್ರ ಆಚೆ, ಹೊಳೆ ಈಚೆ. ಮಧ್ಯೆ ದಾರಿ. ಸುಖವಾಗಿ, ಹಿತವಾಗಿ ಗಾಳಿ. ತ್ರಾಸಿಗೆ ಬರುವ ತನಕವೂ ಅವಳಿಗೆ ಏನೂ ಆಯಾಸ ತೋರಲಿಲ್ಲ. ಆಮೇಲೆ ಮಾತ್ರ ದಾರಿಯ ಕಷ್ಟದ ಅರಿವು ಆಗತೊಡಗಿತು. ಬಿಸಿಲೂ ಏರುತ್ತಿತ್ತು. ರಸ್ತೆಯಲ್ಲಿ ಏರುಗಳು ಹೆಚ್ಚು.

ಅವಳು ಗಂಗೊಳ್ಳಿಯನ್ನು ತಲುಪಿದಾಗ ಹೊತ್ತು ಪಶ್ಚಿಮಕ್ಕೆ ತಿರುಗಿ ಎರಡು ಗಳಿಗೆ ಆಗಿತ್ತು. ಮೈಯೆಲ್ಲ ಬೆವರು. ಬಹಳ ಆಯಾಸ. ಎಲ್ಲಾದರೂ ಒಂದು ಕಡೆ ಹೋಗಿ ತಣ್ಣಗೆ ನೀರಿನಲ್ಲಿ ಸ್ನಾನ ಮಾಡಿದರೆ ಸಾಕು ಎನ್ನಿಸಿತ್ತು ಅವಳಿಗೆ. ಎಲ್ಲಿಗೆ ಹೋಗಲಿ ಎಂದು ಯೋಚಿಸುತ್ತಿದ್ದಾಗ ಅವಳಿಗೆ ಗಂಗೆಯು ನೆನಪು ಬಂತು. ‘ಪಾಪ, ಬಹಳ ಒಳ್ಳೆಯ ಹೆಂಗಸು. ಅಲ್ಲಿಗೆ ಹೋಗಿ ಸ್ನಾನಮಾಡಿ ಆ ಮೇಲೆ ಮುಂದಿನ ವಿಚಾರ” ಎಂದು ಮನಸ್ಸಿನಲ್ಲೇ ನಿರ್ಧರಿಸಿಕೊಂಡು ಆಯಾಸದಿಂದ ಉಸ್ ಉಸ್ ಎನ್ನುತ್ತ ಗಂಗೆಯ ಮನೆಗೆ ಹೋದಳು.

ಮನೆಯ ಹೊರಜಗಲಿಯ ಮೇಲೆ ಕುಳಿತಿದ್ದ ಗಂಗೆ ಪದ್ಮಳನ್ನು ಕಂಡೊಡನೇ “ಬನ್ನಿ, ಬನ್ನಿ, ಪದ್ಮಾವತಮ್ಮ, ಬನ್ನಿ” ಎಂದು ಅವಳನ್ನು ಒಳಕ್ಕೆ ಕರೆದುಕೊಂಡು ಹೋದಳು.

“ಬಹಳ ಆಯಾಸವಾಗಿರಬೇಕು, ಪದ್ಮಾವತಮ್ಮ, ಪಾನಕ ಮಾಡಿ ತರುತ್ತೇನೆ” ಎಂದು ಹೇಳಿ ಒಂದು ಲೋಟಾ ಪಾನಕವನ್ನು ತಂದು ಅವಳ ಮುಂದಿಟ್ಟಳು. ಅದನ್ನು ಕುಡಿಯುತ್ತ ಪದ್ಮಾ “ಗಂಗಮ್ಮಾ, ನಿಮ್ಮನ್ನು

ಕಂಡರೆ ನನಗೆ ಸ್ವಂತ ಅಕ್ಕನನ್ನು ಕಂಡ ಹಾಗೇ ಆಗುತ್ತದೆ” ಎಂದಳು.

“ಬಹುಶಃ ಹಿಂದಿನ ಜನ್ಮದಲ್ಲಿ ನಾವು ಅಕ್ಕತಂಗಿಯರೇ ಆಗಿದ್ದಿರಬಹುದು. ಅಥವಾ ಮುಂದಿನ ಜನ್ಮದಲ್ಲಾದರೂ ಅಕ್ಕತಂಗಿಯರಾಗಿ ಹುಟ್ಟಬಹುದು” ಎಂದಳು ಗಂಗೆ ನಗುತ್ತ.

“ಗಂಗಮ್ಮಾ, ನಿಮಗೆ ನಾನು ಈಗ ಇಲ್ಲಿ ಹೇಗೆ ಬಂದೆ ಅಂತ ಅನ್ನಿಸಬಹುದು” ಎಂದು ಪದ್ಮಾವತಿ ಹೇಳಲು ಗಂಗೆ “ಅದೆಲ್ಲ ಆಮೇಲೆ ಹೇಳುವಿರಂತೆ ಪದ್ಮಾವತಮ್ಮ. ಈಗ ನೀವು ಸ್ನಾನ ಮಾಡಿ, ಅಡಿಗೆ ಮಾಡಿಕೊಂಡು ಊಟ ಮಾಡಿ. ಆಮೇಲೆ ಮಾತು” ಎಂದಳು.

“ಇಲ್ಲ, ನಾನು ಹೆಚ್ಚು ಹೊತ್ತು ಇರುವುದಿಲ್ಲ. ನನ್ನ ಮಗು....” ಎಂದು ಪದ್ಮಾ ಅಳತೊಡಗಿದಳು.

“ನೋಡಿ ಪದ್ಮಾವತಮ್ಮ, ನಾನು ನಿಮ್ಮ ಅಕ್ಕ ಅಂತ ಹೇಳಿದಿರಿ. ಅಕ್ಕನ ಮಾತು ತಂಗಿ ಕೇಳಬೇಕು. ಎಷ್ಟೋ ಸಹಿಸಿದ್ದೀರಿ. ಇನ್ನೂ ಕೊಂಚ ಸಹಿಸಿಕೊಳ್ಳಿ. ಈ ದಿನ ಪ್ರಯಾಣ ಮಾಡಿ ನಿಮಗೆ ಬಹಳ ಆಯಾಸವಾಗಿದೆ. ಈ ರಾತ್ರಿ ನೀವು ಇಲ್ಲೇ ಇರಬೇಕು. ಇಲ್ಲಿಂದ ಹೋಗುವುದಕ್ಕೆ ಆಗುವುದಿಲ್ಲ. ನಾಳೆ ಬೆಳಗ್ಗೆ ನಸುಕು ಹರಿಯುವಷ್ಟರಲ್ಲೇ ನಾನು ದೋಣಿ ಮಾಡಿಸಿಕೊಡುತ್ತೇನೆ. ಊರಿಗೆ ಹೋಗಿ. ಇನ್ನೇನೂ ಯೋಚನೆ ಮಾಡಬೇಡಿ” ಎಂದಳು.

ಪದ್ಮಾ ಈ ಮಾತಿಗೆ ಒಪ್ಪಲೇ ಬೇಕಾಯಿತು. ಸ್ನಾನವಾಯಿತು, ಊಟವಾಯಿತು. ಊಟವಾದ ಮೇಲೆ ಶೂನ್ಯಮನಸ್ಕಳಾಗಿ ಸ್ವಲ್ಪ ಹೊತ್ತು ಮಲಗಿಕೊಂಡಿದ್ದಳು. ಈಗ ಪದ್ಮಳ ಮನಸ್ಸು ಸಂಪೂರ್ಣ ಮೂಕವಾಗಿತ್ತು. ಯಾವ ಯೋಚನೆಯೂ ಇಲ್ಲ. ಯಾವ ಭಾವನೆಯೂ ಇಲ್ಲ. ಶೀನಪ್ಪನನ್ನು ಬಿಟ್ಟು ಬಂದ ಮೇಲೆ ಅವಳಿಗೆ ತನ್ನ ಹೃದಯವೇ ಸತ್ತು ಹೋದ ಹಾಗೆ ಅನ್ನಿಸುತ್ತಿತ್ತು.

ಸಂಜೆ ಗಂಗೆ, ಪದ್ಮಾ ಇಬ್ಬರೂ ಮಾತಾಡುತ್ತ ಕುಳಿತರು. ಪದ್ಮಾ ತನ್ನ ಕಥೆಯನ್ನೆಲ್ಲ ಗಂಗೆಗೆ ಹೇಳಿಕೊಂಡಳು. ಇಲ್ಲಿ ಸಹೃದಯತೆ ಇದೆ ಎಂದು ಪದ್ಮಳಿಗೆ ಖಚಿತವಾಗಿತ್ತು. ಶೀನಪ್ಪನಿಗೆ ತನ್ನ ಮನಸ್ಸು ಮಾರಿಹೋದ ಕಥೆಯನ್ನೂ ಬಚ್ಚಿಡಲಿಲ್ಲ. ಎಲ್ಲವನ್ನೂ ಹೇಳಿದ ಬಳಿಕ ಅವಳ ಮನಸ್ಸು ಬಹಳ ಹಗುರವಾದ ಹಾಗೆ ತೋರಿತು. ತನ್ನ ಕಥೆ ಹೇಳಿ ಮುಗಿಸಿ ಪದ್ಮಾ ಗಂಗೆಯ ತೊಡೆಯ ಮೇಲೆ ಚಿಕ್ಕ ಮಗುವಿನಂತೆ ಮುಖವಿಟ್ಟು ಬಹಳ ಹೊತ್ತು ಅತ್ತಳು.

ಗಂಗೆಯ ಕಣ್ಣಿನಿಂದಲೂ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. ಗಂಗೆ ಅವಳ ತಲೆಯನ್ನು ನೇವರಿಸುತ್ತ ಕುಳಿತಳು.

ಹೀಗೆ ಎಷ್ಟು ಹೊತ್ತು ಕಳೆಯಿತೋ ಇಬ್ಬರಿಗೂ ತಿಳಿಯದು. ಕೊನೆಗೆ ಗಂಗೆ "ಸುಬ್ಬಣ್ಣ ತಮ್ಮ ತಪ್ಪಿಗಾಗಿ ಬಹಳ ಪಶ್ಚಾತ್ತಾಪ ಪಟ್ಟರು, ತಾಯಿ. ಈಗ ನಿಮ್ಮನ್ನು ಹುಡುಕಿಕೊಂಡು ಆ ಪ್ರದೇಶವನ್ನೆಲ್ಲ ಅಲೆಯುತ್ತಿದ್ದಾರೆ" ಎಂದಳು.

"ಅಯ್ಯೋ ಪಾಪ, ಅವರನ್ನೇಕೆ ದೂರಲಿ ನಾನು, ಗಂಗಮ್ಮ. ಮುಖ್ಯ ನನ್ನ ಹಣೆಬರಹ" ಎಂದು ಪದ್ಮಾವತಿ "ಸುಬ್ಬ ಇಲ್ಲಿಗೆ ಬಂದಿದ್ದರೆ?" ಎಂದು ಕೇಳಿದಳು.

"ಹೌದು, ಆಗಾಗ ಬರುತ್ತಲೇ ಇರುತ್ತಾರೆ. ನೀವು ತಿಳಿದ ಹಾಗೆ ನಾನೇನೂ ಗರತಿಯಲ್ಲ. ಆದರೆ ಅವರು ನಾನು ಅಂದರೆ ನಮ್ಮ ಮಟ್ಟಿಗೆ ನಾವು ಗಂಡ ಹೆಂಡಿರ ಹಾಗೆಯೇ. ಇಲ್ಲಿಂದ ಅವರು ಹೊರಟು ಹೋಗಿ ಸುಮಾರು ಇಪ್ಪತ್ತು ದಿನಗಳಾಯಿತು. ಇನ್ನೂ ಬರಲಿಲ್ಲ."

"ನನ್ನನ್ನೇ ಹುಡುಕಿಕೊಂಡು ತಿರುಗುತ್ತಿರಬೇಕು. ಅಯ್ಯೋ ದೇವರೇ, ನನ್ನಿಂದ ಎಷ್ಟು ಜನಕ್ಕೆ ತೊಂದರೆ!" ಎಂದು ಪದ್ಮಾ ನಿಟ್ಟುಸಿರು ಬಿಟ್ಟಳು.

ಆಮೇಲೆ ಸ್ವಲ್ಪ ಹೊತ್ತು ಬಿಟ್ಟು ಪದ್ಮಾ "ಅವರು ಈಗ ಎಲ್ಲಿದ್ದಾರೆ?" ಎಂದು ಕೇಳಿದಳು.

"ಶಾಸ್ತ್ರಿಗಳು ಊರಿಗೆ ಬಂದಿದ್ದಾರಂತೆ. ನಿಮ್ಮ ತವರು ಮನೆಯ ಹತ್ತಿರವೇ ಒಂದು ಮನೆ ಗದ್ದೆ ಮೂಲಗೇಣಿಗೆ ತೆಗೆದುಕೊಂಡಿದ್ದಾರಂತೆ."

"ಆದರೂ ಕೂಡಾ ನಾನು ಸತ್ತಿದ್ದೇನೋ ಬದುಕಿದ್ದೇನೋ ಅಂತ ಸ್ವಲ್ಪ ವಿಚಾರಿಸಬೇಕು ಅಂತ ಅನ್ನಿಸಲಿಲ್ಲ ಅವರಿಗೆ" ಎಂದಳು ಪದ್ಮಾ. ಅವಳ ಮಾತಿನಲ್ಲಿ ದಾರುಣವಾದ ಬೇಗೆ ಇತ್ತು. "ನನಗೆ ಏನೇನೂ ಸಂಬಂಧವಿಲ್ಲದ ಸುಬ್ಬ ನನ್ನನ್ನು ಹುಡುಕಿಕೊಂಡು ಊರೂರು ಅಲೆಯಬೇಕು. ಸರಿ, ಗಂಗಮ್ಮ, ನಾನು ಪಡೆದುಕೊಂಡು ಬಂದದ್ದು ಎರಡೂ ಕೈಲಿ ಊಟ ಮಾಡುತ್ತಿದ್ದೇನೆ."

"ನಿಮ್ಮ ಗಂಡ ನೀವು ಈ ಜಗತ್ತಿನಲ್ಲೇ ಇಲ್ಲ ಅಂತ ನಂಬಿದ್ದಾರಂತೆ. ನಿಮ್ಮ ತಮ್ಮನೂ ಕೂಡಾ ಹಾಗೆ ತಿಳಿದುಕೊಂಡಿರುವ ಹಾಗೇ ಇದೆ."

"ಹಾಗಾಗಿದ್ದರೇ ಬಹಳ ಒಳ್ಳೆಯದಾಗುತ್ತಿತ್ತು. ಆದರೆ ಈ ಪಾಪಿ ಜೀವ ಹೋಗುವುದಿಲ್ಲ. ಎಲ್ಲಾದರೂ ಹೊಳೆಗೋ ಕೆರೆಗೋ ಬಿದ್ದು ಸಾಯುವಾ

ಎಂದರೆ ಅಷ್ಟೊ ಧೈರ್ಯವಿಲ್ಲ ನನಗೆ" ಎಂದು ಪದ್ಮಾ ಹೇಳಲು ಗಂಗೆ ಏನು ಹೇಳಬೇಕೆಂದು ತೋಚದೆ ಹಾಗೇ ಕುಳಿತಳು.

ಮತ್ತೆ ಪದ್ಮಳೇ ಹೇಳಿದಳು: "ಹಾಗಾದರೆ ನಮ್ಮ ಯಜಮಾನರು ಇನ್ನೊಂದು ಮದುವೆಯ ಯೋಚನೆಯಲ್ಲೂ ಇರಬಹುದು." ಎಂದಳು ಪದ್ಮಾ ಕಟುವಾಗಿ.

"ಅವರ ಮಾವ ಆ ವ್ಯವಸ್ಥೆಗೂ ಕೈ ಹಚ್ಚಿದ್ದಾರಂತೆ" ಎಂದಳು ಗಂಗೆ. ಪದ್ಮಾವತಿಯ ಮನಸ್ಸು ಬರಬಹುದಾದ ಎಲ್ಲ ಆಘಾತಗಳಿಗೂ ಈಗಲೇ ಸಿದ್ಧವಾಗಿರುವುದು ಒಳ್ಳೆಯದು ಅಂತ ಅವಳಿಗೆ ತೋರಿತು.

"ಯಾವ ಮಾವ?"

"ಅದು ಯಾರೋ ಭಟ್ಟರು ಅಂತ ಸುಬ್ಬ ಹೇಳಿದರು."

"ಓಹೋ, ಮಹಾದೇವಭಟ್ಟರೋ. ಆ ಮನುಷ್ಯ ಕೈ ಹಚ್ಚಿದರೆ ಅಲ್ಲಿಗೆ ಮುಗಿಯಿತು ಎಂದ ಹಾಗೇ. ಅವರ ಗಂಡಾಗುಂಡಿ ಜಗತ್ತಿಗೇ ಗೊತ್ತು. ಆಗಲಿ, ಅದೂ ಆಗಲಿ; ಎಲ್ಲ ಅನುಭವಿಸಿಯೇ ಸಾಯುತ್ತೇನೆ" ಎಂದು ಪದ್ಮಾ ನುಡಿದಳು.

"ಹಾಗೆ ಆಗದೆ ಹೋಗಬಹುದು, ಪದ್ಮಾವತಮ್ಮನವರೇ; ಆದರೆ ಈ ಜಗತ್ತಿನಲ್ಲಿ ಇದು ಆಗುತ್ತದೆ, ಅದು ಆಗುವುದಿಲ್ಲ ಎಂತ ಹೇಗೆ ಹೇಳಲಿ? ಏನೇನೋ ಆಗುತ್ತದೆ. ಇದೂ ಆಗಬಹುದು. ಯೋಚನೆ ಮಾಡಿದರೆ ನನಗೆ ನಿಮ್ಮ ಎಲ್ಲ ಪರೀಕ್ಷೆಗಳೂ ಇದೇ ಜನ್ಮದಲ್ಲಿ ಆಗುತ್ತಿರುವ ಹಾಗೆ ಕಾಣುತ್ತದೆ" ಎಂದಳು ಗಂಗೆ ಖಿನ್ನಳಾಗಿ.

"ಎಲ್ಲ ಬರಲಿ, ಗಂಗಮ್ಮ, ಆದರೆ ಅದನ್ನೆಲ್ಲ ತಡೆದುಕೊಳ್ಳುವ ಶಕ್ತಿಯೊಂದನ್ನು ದೇವರು ನನಗೆ ಕೊಟ್ಟರೆ ಸಾಕು" ಎಂದಳು ಪದ್ಮಾ.

ಅಂಥ ಶಕ್ತಿ ಮನುಷ್ಯಮಾತ್ರರಾದವರಲ್ಲಿ ಇಲ್ಲ ಎನ್ನಿಸಿತು ಗಂಗೆಗೆ. ಆದರೆ ಹಾಗೆ ಹೇಳಲಿಲ್ಲ.

ಕತ್ತಲಾಯಿತು. ಇಬ್ಬರೂ ಮಲಗಿಕೊಂಡರು. ಮಲಗಿಕೊಂಡಾಗ ಯಾರೋ ಬಾಗಿಲು ತಟ್ಟಿದರು. ಗಂಗೆ ಎದ್ದು ಹೋಗಿ ಬಾಗಿಲು ತೆರೆದು, "ಈ ದಿವಸ ನನಗೆ ಹುಶಾರಿಲ್ಲ, ಹೋಗಿ" ಎಂದು, ಬಂದವರು ಏನೇನೋ ಹೇಳುತ್ತಿದ್ದರೂ ಅದನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ಮತ್ತೆ ಬಾಗಿಲು ಹಾಕಿಕೊಂಡು ಒಳಕ್ಕೆ ಬಂದು "ನೋಡಿದಿರಾ ಪದ್ಮಾವತಮ್ಮ, ಇದು ನನ್ನ ಹಣೆಯ

ಬರಹ. ನನ್ನ ಹೀನ ಜನ್ಮ. ಏನು ಮಾಡಲಿ ಹೇಳಿ. ಸುಬ್ಬ ಮತ್ತು ನಾನು ಗಂಡ ಹೆಂಡತಿಯರಾಗಿದ್ದರೆ ಎಷ್ಟು ಸುಖವಾಗಿರುತ್ತಿದ್ದೆವು! ಆದರೆ ಅದು ನನಗಲ್ಲ" ಎಂದು ಸಿಟ್ಟುಸಿರುಬಿಟ್ಟಳು.

"ಈಗ ಮದುವೆ ಆಗಿ ನಾನು ಸುಖ ಪಟ್ಟದ್ದು ಸಾಲದೆ, ಗಂಗಮ್ಮ. ಸುಖ ಹಾಗೆ ಸಿಕ್ಕುತ್ತದೆ, ಹೀಗೆ ಸಿಕ್ಕುತ್ತದೆ ಅಂತ ನಾವೆಲ್ಲ ಕನಸು ಕಾಣುತ್ತೇವೆ. ಅದು ಹೇಗೆ ಸಿಕ್ಕುತ್ತದೆ ಅಂತ ಯಾರಿಗೂ ತಿಳಿಯದು" ಎಂದಳು ಪದ್ಮಾ.

"ಅದು ಸರಿ, ಪದ್ಮಾವತಮ್ಮ. ಆದರೆ ನಿಮಗೆ ತಕ್ಕ ಗಂಡ ನಿಮಗೆ ಸಿಕ್ಕಲಿಲ್ಲ. ನಿಮ್ಮೆಲ್ಲ ಯಾತನೆಗೂ ಅದೇ ಬೇರು" ಎಂದಳು ಗಂಗೆ.

ಅದಕ್ಕೆ ಪದ್ಮಾ ಏನೂ ಉತ್ತರ ಹೇಳಲಿಲ್ಲ. ಶೀನಪ್ಪನ ನೆನಪು ಬಂದು ಅವಳ ಕೊರಳು ಬಿಗಿಯಿತು.

ಬೆಳಗ್ಗೆ ಬೇಗ ಎದ್ದು ಇಬ್ಬರೂ ಹೊಳೆದಂಡೆಗೆ ಹೋದರು. ಗಂಗೆ ದೋಣಿಯನ್ನು ಗೊತ್ತು ಮಾಡಿಕೊಟ್ಟು ಪದ್ಮಾವತಿಯನ್ನು ತಬ್ಬಿಕೊಂಡು ಅತ್ತಳು.

ಪದ್ಮಾ ದೋಣಿಯಲ್ಲಿ ಕುಳಿತುಕೊಂಡ ಮೇಲೆ ಗಂಗೆ

"ನೀವು ನನ್ನನ್ನು ಅಕ್ಕ ಎಂದಿರಿ. ಆ ಮಾತು ಮರೆಯಬೇಡಿ. ಈ ಗಂಗೆಯ ಮನೆ ತನ್ನ ತಂಗಿಗೆ ಸದಾ ತೆರೆದಿರುತ್ತದೆ ಎಂಬುದನ್ನು ಮರೆಯಬೇಡಿ" ಎಂದಳು.

"ಆಗಲಿ, ಗಂಗಮ್ಮ; ಆ ಮಾತನ್ನು ಎಂದೆಂದಿಗೂ ಮರೆಯುವುದಿಲ್ಲ" ಎಂದಳು ಪದ್ಮಾ.

ದೋಣಿ ಹೊರಟಿತು. ದೋಣಿ ಸಣ್ಣ ಸಣ್ಣದಾಗುತ್ತ ಕಣ್ಮರೆಯಾಗುವ ತನಕ ಅಲ್ಲಿ ನಿಂತು ನೋಡುತ್ತಿದ್ದ ಗಂಗೆ ಆನಂತರ ಕಣ್ಣೊರಸಿಕೊಂಡು ನಿಧಾನವಾಗಿ ಹೆಜ್ಜೆಯಿಡುತ್ತ ಮನೆಯ ಕಡೆಗೆ ನಡೆದಳು.

ಪದ್ಮಾ ಕುಳಿತ ದೋಣಿ ಹಾಲಾಡಿಗೆ ಬರುವಾಗ ಹೊತ್ತು ನೆತ್ತಿಗೇರಿತ್ತು. ದೋಣಿಯಿಳಿದು ಅವಳು ತನ್ನ ತಮ್ಮನ ಮನೆಯ ಕಡೆಗೆ ನಡೆದಳು. ಹಲಸೂರಿಗೆ ಹೋಗುವ ಪರಿಚಿತವಾದ ದಾರಿಯಲ್ಲಿ ಕಾಲಿಟ್ಟಾಗ ಪದ್ಮಳ ಮನಸ್ಸಿನಲ್ಲಿ ಹಳೆಯ ನೆನಪುಗಳೆಲ್ಲ ಬಂದು ತುಂಬಿದುವು. ತಂದೆ, ತಾಯಿ. ಅವರ ಅನಂತವಾತ್ಸಲ್ಯ. ಕೆರೆ, ಗದ್ದೆ, ಹಾಡಿ, ಹಿತ್ತಲು. ಒಂದೊಂದರ

ಸುತ್ತಲೂ ಒಂದೊಂದು ನೆನಪು, ಮಧುರವಾದ ನೆನಪು.

ತನ್ನ ಅನಂತನನ್ನು ಇನ್ನೇನು ಕಾಣುತ್ತೇನೆ ಎಂಬ ಆಶೆ ಅವಳ ಕಾಲಿಗೆ ಅಪೂರ್ವ ತ್ರಾಣವನ್ನು ಕೊಟ್ಟಿತು. ಓಡೋಡಿ ಮುಂದೆ ನಡೆದಳು. ಅನಂತ ತನ್ನನ್ನು ಕಂಡ ಕೂಡಲೇ "ಅಮ್ಮಾ, ಅಮ್ಮಾ" ಎಂದು ಹಾರಿ ಓಡಿ ಬರುತ್ತಾನೆ. ಅವನನ್ನು ಬಾಚಿ ತಬ್ಬಿಕೊಂಡು ಎದೆಗವಚಿಕೊಂಡು "ಕಂದಾ, ಕಂದಾ, ಕಂದಾ" ಎಂದು ತಲೆಯನ್ನು ನೇವರಿಸಬೇಕು—ಎಂದುಕೊಂಡಳು. ಈ ಯೋಚನೆಯಿಂದಲೇ ಅವಳ ಹೃದಯ ಕರಗಿ ನೀರಾಯಿತು. ದಳದಳನೆ ಕಣ್ಣೀರು ಸುರಿಸುತ್ತಾ ಸೆರಗಿನ ತುದಿಯಿಂದ ಒರಸಿಕೊಳ್ಳುತ್ತ ಹಲಸೂರನ್ನು ಸಮೀಪಿಸಿದಳು.

ಅದೋ ಅಲ್ಲೇ ಅವಳ ಮನೆ. ಅದೇ ಮನೆ ಮುಂದಿನ ಗದ್ದೆ. ಅದೇ ದಿಣ್ಣೆ. ಅದೇ ಹಿತ್ತಲು. ಒಂದು ಕಾಲದಲ್ಲಿ ಅದು ಅವಳು ಆಡಿದ ನಂದನವನವಾಗಿತ್ತು. ಅಮೇಲೆ ಅದೇ ಅವಳ ಇಹಲೋಕದ ನರಕವಾಯಿತು. ಈಗ ಮತ್ತೆ ಅದೇ ಮನೆಯೇ ಅವಳ ಎಲ್ಲ ಆಶೆಯ ಕೇಂದ್ರವೂ ಆಗಿತ್ತು.

"ಅನಂತಾ, ಅನಂತಾ" ಎನ್ನುತ್ತ ಅವಳು ಮನೆಯನ್ನು ಹೊಕ್ಕಳು. ಅನಂತನಿಂದ ಉತ್ತರ ಬರಲಿಲ್ಲ. ಮನೆಯಲ್ಲಿ ಯಾರೂ ಕಾಣಿಸಲಿಲ್ಲ. ಜಗಲಿಯ ಮೂಲೆಯಲ್ಲಿ ಆಳು ಹುಡುಗನೊಬ್ಬ ಕುಳಿತಿದ್ದ. ಅವನು ಅವರ ಒಕ್ಕಲು ಈಸರನ ಮಗ ಎಂದು ಪದ್ಮಳಿಗೆ ನೆನಪು ಬಂತು.

"ಮಗೂ, ಮನೆಯವರೆಲ್ಲ ಎಲ್ಲಿಗೆ ಹೋಗಿದ್ದಾರೆ?" ಎಂದು ಕೇಳಿದಳು. ಅನಂತನನ್ನು ಕಾಣದೆ ಅವಳಿಗೆ ಬಹಳ ನಿರಾಶೆಯಾಗಿತ್ತು.

"ಮದುವೆ ಮನೆಗೆ ಹೋಗಿದ್ದಾರಮ್ಮಾ."

"ಎಲ್ಲಿ ಮದುವೆ?"

"ಇದೇ ಆಚೆ ಮೂಡುಬೆಟ್ಟು ಇಲ್ಲವಾ, ಸೂರ್ಯಣ್ಣಶೆಟ್ಟರದ್ದು. ಅಲ್ಲಿ ಮದುವೆ. ಅದಕ್ಕೆ ಹೋಗಿದ್ದಾರೆ."

ಮದುವೆ ಎಂದ ಕೂಡಲೇ ಪದ್ಮಾವತಿಯ ಎದೆ ಡವಗುಟ್ಟತೊಡಗಿತು. ಆದರೂ ಕೇಳಿದಳು:

"ಯಾರ ಮದುವೆಯಪ್ಪಾ?"

"ಅದೂ ನಿಮಗೆ ಗೊತ್ತಿಲ್ಲವೇ, ಅಮ್ಮಾ. ರಾಮಚಂದ್ರಶಾಸ್ತ್ರಿಗಳ ಮದುವೆ. ಭಾರೀ ಮದುವೆ ಅಮ್ಮಾ; ಲಾಡು ಮಾಡಿಸುತ್ತಾರಂತೆ. ನಾನೂ

ಆಮೇಲೆ ಹೋಗುತ್ತೇನೆ " ಎಂದು ಹುಡುಗ ಬಾಯಿ ಚಪ್ಪರಿಸಿಕೊಂಡ.

ಪದ್ಮಾವತಿಗೆ ಇದನ್ನು ಕೇಳಿ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದ ಹಾಗೆ ಆಯಿತು. ಹಾಗೆಯೇ ನೆಲದ ಮೇಲೆ ಕುಸಿದು ಕುಳಿತಳು. ಸರಿ, ಇದೂ ಆಗಿಹೋಯಿತು. ಅವಳು ಇದ್ದೂ ಸತ್ತಹಾಗಾಯಿತು. ಇನ್ನೇನು ಗತಿ ?

ಹಾಗೆಯೇ ಎದ್ದು ನಿಂತಳು, ಏನೋ ಕೆಟ್ಟ ಕುತೂಹಲ ಅವಳನ್ನು ಮೂಡುಬೆಟ್ಟಿನ ಕಡೆಗೆ ಸೆಳೆಯಿತು. ಯಾರ ಕಣ್ಣಿಗೂ ಬೀಳಬಾರದೆಂದು ಮನೆಯ ಹತ್ತಿರದ ಕಾಡಿನಲ್ಲೇ ಮೂಡುಬೆಟ್ಟಿನ ಕಡೆಗೆ ನಡೆದಳು. ಮೂಡು ಬೆಟ್ಟು ಅಲ್ಲಿಂದ ಎರಡು ಫರ್ಲಾಂಗು ದೂರ. ಸ್ವಲ್ಪ ದೂರ ಹೋಗುತ್ತಲೇ ಅವಳಿಗೆ ಓಲಗದ ಸದ್ದು ಕೇಳಿ ಬಂತು. ಗರ್ನಾಲಿನ ಶಬ್ದ ಕಿವಿಯನ್ನು ಇರಿಯಿತು. " ಬೇಡ, ಹೋಗುವುದು ಬೇಡ " ಎಂದು ಮನಸ್ಸು ಹೇಳುತ್ತಿತ್ತು. ಆದರೂ ಕಾಲು ಆ ಕಡೆಗೇ ಎಳೆಯಿತು.

ಊರು ಸಮೀಪಿಸಿದಾಗ ಕೆಲಸ ಮಾಡತೊಡಗಿದ್ದ ಮನಸ್ಸು ಈಗ ಮತ್ತೆ ಮೂಕವಾಯಿತು. ಪದ್ಮಳಿಗೆ ಈಗ ಯಾವ ಯೋಚನೆಯೂ ಇಲ್ಲ, ಯಾವ ಭಾವನೆಯೂ ಇಲ್ಲ.

ಹಿತ್ತಲ ಮಾರ್ಗವಾಗಿ ಯಾರೂ ಕಾಣದಂತೆ ಮದುವೆಯ ಚಪ್ಪರದ ಕಡೆಗೆ ನಡೆದಳು. ಧಾರೆಯಾಗಿತ್ತು. ಜನರೆಲ್ಲ ಚಪ್ಪರದೊಳಗೆ ಕಿಕ್ಕಿರಿದಿದ್ದರು. ಚಪ್ಪರದ ಹೊರಗೆ ತೆಂಗಿನ ಗರಿಗಳ ಸಂದಿಯಲ್ಲಿ ಒಳಗೆ ನೋಡಿದಳು.

ಧಾರಾ ಮಂಟಪದಲ್ಲಿ ಹಸೆಮಣೆಯ ಮೇಲೆ ಮದುಮಕ್ಕಳು ಕುಳಿತಿದ್ದರು. ಮುತ್ತೈದೆಯರು ಹಾಡು ಹೇಳುತ್ತಿದ್ದರು, ಆರತಿ ಎತ್ತುತ್ತಿದ್ದರು.

ತನ್ನ ಗಂಡನ ಮುಖವನ್ನು ನೋಡಿದಳು: ಹಸನ್ಮುಖ. ಅದನ್ನೇ ನೋಡುತ್ತ ನಿಂತಳು. ಅವಳ ಮನಸ್ಸು ಕೊಂಚವೂ ಅಲುಗಲಿಲ್ಲ. ಯಾವ ದುಃಖವೂ ಅವಳಿಗೆ ತಾಗಲಿಲ್ಲ.

ಅಲ್ಲೇ ಅವಳ ಅತ್ತಿಗೆ ಅನಂತನನ್ನು ಎತ್ತಿಕೊಂಡು ನಿಂತಿದ್ದಳು. ಅನಂತ ಸುಂದರವಾಗಿ ಬೆಳೆದಿದ್ದ. ಮುದ್ದು ಮುದ್ದಾಗಿ ಬೆಳೆದಿದ್ದ. ಓಡಿಹೋಗಿ ಅವನನ್ನು ಬಾಚಿಕೊಳ್ಳಬೇಕು ಎನ್ನಿಸಿತು ಪದ್ಮಳಿಗೆ. ಆದರೆ ಆ ಧೈರ್ಯ ಬರಲಿಲ್ಲ. ಅಲ್ಲಿ ನಿಲ್ಲಲೂ ಆಗಲಿಲ್ಲ.

ಮತ್ತೆ ಅಲ್ಲಿಂದ ಮನೆಯ ಕಡೆಗೆ ಹೊರಟಳು. ಕಾಲು ನಡುಗುತ್ತಿತ್ತು.

ಮನಸ್ಸೆಲ್ಲ ಸತ್ತು ಕೇವಲ ದೇಹವೊಂದೇ ತನಗೆ ಇರುವ ಹಾಗೂ ಆ ದೇಹದ ಭಾರವನ್ನು ತಾನು ಹೊರಲು ಸಾಧ್ಯವಿಲ್ಲವೆಂದೂ ಅವಳಿಗೆ ತೋರಿತು. ಎಡವುತ್ತ, ಮುಗ್ಗರಿಸುತ್ತ, ನಡುಗುತ್ತ ನಡುನಡುವೆ ಕುಸಿದು ಬೀಳುತ್ತ ಅವಳು ಮನೆಯನ್ನು ಸೇರಿದಳು.

ಆ ಹುಡುಗ ಇನ್ನೂ ಅಲ್ಲೇ ಕುಳಿತಿದ್ದ. ಅವನನ್ನು ಕಂಡು ಪದ್ಮಾ "ಮಗೂ, ನೀನು ಮದುವೆ ಮನೆಗೆ ಬೇಕಾದರೆ ಹೋಗು. ನಾನು ಇಲ್ಲೇ ಇರುತ್ತೇನೆ; ಒಡೇರಿಗೆ ಹೇಳಿ ಬಂದಿದ್ದೇನೆ" ಎಂದಳು.

"ಹೌದಾ, ಅಮ್ಮಾ! ಪಸಂದಾಯ್ತು" ಎನ್ನುತ್ತ ಹುಡುಗ ಮದುವೆ ಮನೆಯ ಕಡೆಗೆ ಓಡಿದ.

ಪದ್ಮಾ ಮನೆಯ ಚಾವಡಿಯ ಮೂಲೆಯಲ್ಲಿ ಕುಸಿದು ಬಿದ್ದಳು. ಅಳಬೇಕು, ಆದರೆ ಅಳು ಬರಲಿಲ್ಲ. ಹಾಗೇ ಮಂಕಾಗಿ ಶೂನ್ಯಹೃದಯಳಾಗಿ ಅಲ್ಲೇ ಬಿದ್ದಿದ್ದಳು.

# ೨೨

ಸುಬ್ಬ ತಾನು ಮಾತುಕೊಟ್ಟ ಹಾಗೇ ತಾನು ಹೊರಟು ಹೋದ ಎಂಟು ದಿನಗಳಲ್ಲಿ ಶೀನಪ್ಪನ ಮನೆಗೆ ಬಂದ. ಅವನು ಬಂದಾಗ ಸಂಜೆಯ ಸಮಯ.

ಯಾವುದೋ ಪುಸ್ತಕವನ್ನು ಹಿಡಿದುಕೊಂಡು ಏನೇನೋ ಯೋಚಿಸುತ್ತ ಕುಳಿತಿದ್ದ ಶೀನಪ್ಪ ಸುಬ್ಬ ಒಳಹೊಕ್ಕದ್ದನ್ನು ಗಮನಿಸಲಿಲ್ಲ.

ಸುಬ್ಬನೇ "ಶೀನಪ್ಪನವರೇ," ಎಂದ. ಅವನ ಧ್ವನಿ ಬಹಳ ಭಾರವಾಗಿತ್ತು.

"ಓಹೋ, ಸುಬ್ಬಣ್ಣ! ಬನ್ನಿ ಬನ್ನಿ" ಎನ್ನುತ್ತ ಶೀನಪ್ಪ ಚಾಪೆ ಹಾಸಿದ. ಸುಬ್ಬ ಕುಳಿತುಕೊಂಡ ಮೇಲೆ ಶೀನಪ್ಪ,

"ಏನು ಸುಬ್ಬಣ್ಣ. ಏನು ವಿಶೇಷ?" ಎಂದ. ಅವನ ಕಂಠ ಕಾತರತೆಯನ್ನು ಸೂಚಿಸುತ್ತಿತ್ತು.

"ವಿಶೇಷವೇನು? ಆಗುವುದೆಲ್ಲ ಆಗಿಹೋಯಿತು" ಎಂದು ಸುಬ್ಬ ದೀರ್ಘವಾಗಿ ನಿಟ್ಟುಸಿರುಬಿಟ್ಟ.

ಇವನ್ನು ಕೇಳಿ ಏನೆಲ್ಲಾ ಅನಾಹುತವಾಯಿತು ಎಂದು ತಿಳಿಯದ ಶೀನಪ್ಪನ ಹೃದಯ ಬಾಯಿಗೇ ಬಂತು.

"ಏನಾಯಿತು, ಹೇಳಿ ಸುಬ್ಬಣ್ಣ; ಎಲ್ಲವನ್ನೂ ಹೇಳಿ" ಎಂದ.

"ಆಗುವುದೇನು? ಪದ್ಮಾವತಮ್ಮ ನಿಜವಾಗಿಯೂ ಅನಾಥೆಯೇ ಆದರು."

"ಎಂದರೆ?"

"ಅವರ ಗಂಡನಿಗೆ ಇನ್ನೊಂದು ಮದುವೆ ಆಗಿಹೋಯಿತು. ಆ ಮದುವೆಯನ್ನು ನೋಡುವ ಭಾಗ್ಯವೂ ಪದ್ಮಾವತಮ್ಮನಿಗೆ ಸಿಕ್ಕಿತು." ಅವನ ಮಾತಿನಲ್ಲಿ ಕಟುವಾದ ಶೋಕ ಸೂಚಕ ವ್ಯಂಗ್ಯವಿತ್ತು.

ಈ ಮಾತು ಕೇಳಿ ಶೀನಪ್ಪನ ಹೃದಯ ತತ್ತರಿಸಿ ಹೋಯಿತು. ಒಂದು ಕ್ಷಣ ಬಾಯಿಂದ ಮಾತೇ ಹೊರಡಲಿಲ್ಲ.

"ಅಲ್ಲ, ತನ್ನ ಹೆಂಡತಿಯ ಗತಿ ಏನಾಯಿತು ಎಂದು ಸರಿಯಾಗಿ ತಿಳಿದುಕೊಂಡೇ ಮದುವೆಯ ಯೋಚನೆ ಮಾಡಬೇಕೆಂಬಷ್ಟು ವಿವೇಕ ಆ

ಮನುಷ್ಯನಿಗೆ ಇಲ್ಲದೆ ಹೋಯಿತಲ್ಲ " ಎಂದ ಶೀನಪ್ಪ.

" ಅವರಿಗೆ ವಿವೇಕವಿಲ್ಲ. ಮನಸ್ಸು ಸ್ಥಿರವೂ ಇಲ್ಲ. ಯಾರು ಹೇಗೆ ಹೇಳಿದರೆ ಹಾಗೆ ಕುಣಿಯುವ ಸ್ವಭಾವ. ಅದು ಹೇಗಾದರೂ ಇರಲಿ, ಪದ್ಮಾವತಮ್ಮನ ಕುತ್ತಿಗೆ ಕೊಯ್ದು ಹಾಗೆ ಆಯಿತು. ನಾನೂ ಶಾಸ್ತ್ರಿಗಳಿಗೆ ಚೆನ್ನಾಗಿ ಬಯ್ದೆ. ಒಂದು ನಾಲ್ಕು ದಿವಸ, ನಾನು ಬರುವ ತನಕವಾದರೂ ಕಾಯ ಲಿಕ್ಕೆ ಆಗಲಿಲ್ಲವೇ ಎಂದು ಗದರಿಸಿದೆ. ಆದರೆ ಏನು ಉಪಯೋಗ? 'ನೋಡು ಸುಬ್ಬ, ಆಗಬಾರದ್ದು ಆಗಿಹೋಯಿತು, ನಮ್ಮ ಸೋದರ ಮಾವನ ಬಲವಂತ. ಈಗ ಏನು ಮಾಡುವುದು?' ಅಂತ ಶಾಸ್ತ್ರಿಗಳು ನನ್ನನ್ನೇ ಕೇಳುತ್ತಾರೆ ನಾನು ಏನು ಹೇಳಲಿ ಅದಕ್ಕೆ? "

" ಪದ್ಮಾ, ಹಾಗಾದರೆ, ಆ ದಿವಸವೇ ಅಲ್ಲಿಗೆ ಹೋದಳೆ? "

" ಹೌದು. ಅವರು ಹೋದಾಗ ಧಾರೆ ಮುಗಿದಿತ್ತು. ಮದುವೆಯ ಮಂಟಪದ ಹತ್ತಿರವೂ ಹೋಗಿ ಮದುಮಕ್ಕಳನ್ನು ನೋಡಿಕೊಂಡು ತನ್ನ ತಮ್ಮನ ಮನೆಗೆ ಹಿಂತಿರುಗಿ ಬಂದು ಮನೆಯ ಒಂದು ಮೂಲೆಯಲ್ಲಿ ಕುಸಿದು ಬಿದ್ದು ಮಂಕಾಗಿ ಕುಳಿತಿದ್ದರು. ಸಂಜೆ ಚಂದ್ರಶೇಖರ ಮತ್ತು ಅವನ ಹೆಂಡತಿ ಮನೆ ಕಡೆ ಬಂದಾಗ ಪದ್ಮಾವತಮ್ಮನನ್ನು ಕಂಡರು. ಚಂದ್ರಶೇಖರನಿಗೆ ಅಳು ತಡೆಯಲಾಗಲಿಲ್ಲವಂತೆ. 'ಅಕ್ಕಾ, ಅಕ್ಕಾ, ನೀನು ಎಷ್ಟು ದುರದೃಷ್ಟವಂತೆ. ನೀನು ನಿನ್ನೆ ಬಂದಿದ್ದರೆ! ಅಯ್ಯೋ ದೇವರೆ, ಇವಳ ಕಷ್ಟಕ್ಕೆ ಕೊನೆಯೆಲ್ಲಿ? ಎಂದು ಬಹಳವಾಗಿ ಅತ್ತನಂತೆ. ಚಂದ್ರಶೇಖರ ಏನೂ ಕೆಟ್ಟವನಲ್ಲ. ಅವನೇ ಈ ಕಥೆಯನ್ನೆಲ್ಲ ನನಗೆ ಹೇಳಿದ ತಾನು ಹಿಂದೆ ತನ್ನ ಅಕ್ಕನನ್ನು ನಡಸಿಕೊಂಡ ರೀತಿಯ ಬಗ್ಗೆ ಅವನಿಗೆ ಈಗ ಬಹಳ ಪಶ್ಚಾತ್ತಾಪವಾಗಿದೆ." ಎಂದ ಸುಬ್ಬ.

" ಹಾಗಾದರೆ ಈಗ ಪದ್ಮಾ ಅಲ್ಲೇ ಇದ್ದಾಳೋ? "

" ಹೌದು. ಅಲ್ಲೇ ತನ್ನ ತಮ್ಮನ ಮನೆಯಲ್ಲೇ ಇದ್ದಾರೆ. ನಾನೂ ಅಲ್ಲೇ ಅವರನ್ನು ನೋಡಿದ್ದೆ."

" ಹೇಗಿದ್ದಾಳೆ, ಪದ್ಮಾ? "

" ಹೇಗೆ ಎಂದರೆ–ಇದ್ದಾರೆ, ಅಷ್ಟೆ. ಜೀವವಿದೆ. ಆದರೆ ಮುಖದಲ್ಲಿ ಜೀವದ ಕಳೆ ಇಲ್ಲ. ಮನೆಗೆಲಸವನ್ನು ತನ್ನ ಪಾಡಿಗೆ ತಾನು ಮಾಡುತ್ತಾ ಇದ್ದಾರೆ. ಒಂದು ಕ್ಷಣವೂ ಸುಮ್ಮನೆ ಕುಳಿತುಕೊಳ್ಳುವುದಿಲ್ಲ. ಮಾತಿಲ್ಲ,

ಕತೆಯಿಲ್ಲ. ಕಣ್ಣಿನಲ್ಲಿ ಕಳೆಯಿಲ್ಲ; ಮುಖದಲ್ಲಿ ಉಲ್ಲಾಸವಿಲ್ಲ. ಜೀವನದಲ್ಲಿ ಆಶೆಯೇ ಇಲ್ಲದ ಹಾಗೆ; ನೋಡಿದರೆ ಕರುಳು ಕತ್ತರಿಸುತ್ತದೆ. "ಅಳುವುದೂ ಇಲ್ಲ, ನಗುವುದೂ ಇಲ್ಲ ಪದ್ಮಕ್ಕ. ನನಗೆ ಬಹಳ ಭಯವಾಗುತ್ತದೆ" ಎಂದು ಚಂದ್ರಶೇಖರಯ್ಯ ಹೇಳಿದರು. ನನಗೂ ಬಹಳ ಹೆದರಿಕೆಯಾಯಿತು." ಎಂದ ಸುಬ್ಬ.

"ಆದರೆ ಅವಳ ಮಗು — "

"ಶೀನಪ್ಪನವರೇ, ಪದ್ಮಾವತಮ್ಮನ ಮನಸ್ಸು ಆ ರೀತಿ ಮಂಕಾಗಿರುವುದಕ್ಕೆ ಅದೇ ಮುಖ್ಯ ಕಾರಣ ಅಂತ ನನಗೆ ತೋರುತ್ತದೆ. ಆ ದಿವಸ ಸಂಜೆ ಚಂದ್ರಶೇಖರಯ್ಯನವರ ಹೆಂಡತಿ ಮಗುವನ್ನು ಎತ್ತಿಕೊಂಡು ಬಂದ ಕೂಡಲೇ ಮೂಲೆಯಲ್ಲಿ ಕುಸಿದು ಬಿದ್ದಿದ್ದ ಪದ್ಮಾವತಮ್ಮ ಚಂಗನೆ ಎದ್ದು "ಮಗೂ, ಮಗೂ, ಅನಂತ, ನನ್ನ ಕಂದಾ" ಎಂದು ಬಾಚಿ ತಬ್ಬಿಕೊಂಡರಂತೆ. ಮಗು ಕಿಟಾರನೆ ಕಿರಿಚಿ ಒದ್ದಾಡತೊಡಗಿತು. 'ಅಮ್ಮ ಅಮ್ಮ' ಅಂತ ಕೂಗುತ್ತಾ ತನ್ನ ಅತ್ತೆಯ ಕಡೆ ಓಡಿತಂತೆ. ಅದನ್ನು ಕಂಡು ಪದ್ಮಾವತಮ್ಮ 'ನನಗೆ ನೀನೂ ಇಲ್ಲವಾದೆಯ, ಸರಿ, ಅನಂತ' ಎಂದು ನೆಲದ ಮೇಲೆ ಹಾಗೇ ಬಿದ್ದುಕೊಂಡುಬಿಟ್ಟಳಂತೆ. ನೋಡಿ, ತನ್ನ ಸ್ವಂತ ಮಗು ತನ್ನನ್ನು ಗುರುತಿಸಲಿಲ್ಲ ಅಂತ ಅವರಿಗೆ ಎಷ್ಟು ಯಾತನೆ ಆಯಿತೋ, ಆಗುತ್ತಿದೆಯೋ ಆ ದೇವರೇ ಬಲ್ಲ." ಎಂದು ಸುಬ್ಬ ಸುಮ್ಮನಾದ. ಮತ್ತೆ ಮಾತು ಹೊರಡಲಿಲ್ಲ.

ಒಂದು ಕ್ಷಣ ಶೀನಪ್ಪನ ಮನೆಯಲ್ಲಿ ಮೌನ ನೆಲಸಿತು. ಹೊತ್ತು ಮುಳುಗುತ್ತಿತ್ತು. ಕಾಗೆ ಗುಬ್ಬಚ್ಚಿಗಳ ಕಾಕಾ ಚಿಲಿಪಿಲಿ ಅಂಗಳದಲ್ಲಿ ಕೇಳುತ್ತಿತ್ತು. ಕೊಟ್ಟಿಗೆಯ ಹೊರಗಡೆ ಹಸು ಬಂದುನಿಂತು ಅಂಬಾ ಎಂದು ಕೂಗಿತು. ಶೀನಪ್ಪ ಎದ್ದು ಹೋಗಿ ಲಾಟೀನು ಹಚ್ಚಿಕೊಂಡು ಬಂದು ಮತ್ತೆ ಚಾಡೆಯ ಮೇಲೆ ಕುಳಿತ.

"ಸುಬ್ಬಣ್ಣ, ದೇವರು ಮನುಷ್ಯರಿಗೆ ಈ ರೀತಿ ಏಕೆ ಯಾತನೆ ಕೊಡುತ್ತಾನೋ? ಕಷ್ಟ ಬಂದರೆ ಅದಕ್ಕೆ ಕೊನೆಯೇ ಬೇಡವೇ?" ಎಂದ ಶೀನಪ್ಪ.

"ದೇವರು ಯಾಕೆ ಯಾತನೆ ಕೊಡುತ್ತಾನೋ ನಮಗೆ ತಿಳಿಯುವುದಿಲ್ಲ, ಶೀನಪ್ಪನವರೇ; ಆದರೆ ಮನುಷ್ಯರಾದ ನಮಗೆ ಆ ಯಾತನೆಯನ್ನು ಕಳೆಯಲು ಆಗುವುದಿಲ್ಲವಲ್ಲ! ಅದೇ ನನ್ನ ಚಿಂತೆ."

"ಹೌದು, ಸುಬ್ಬಣ್ಣ. ಈಗ ನೋಡಿ, ಪದ್ಮಳನ್ನು ನಾನು ಬಹು

ಚೆನ್ನಾಗಿ ಬಲ್ಲೆ. ಅವಳು ಎಷ್ಟು ಗುಣವಂತೆ, ಎಷ್ಟು ಶೀಲವಂತೆ, ಎಂಥ ಮೃದುಸ್ವಭಾವದವಳು ಅಂತ ನನಗೆ ಸರಿಯಾಗಿ ತಿಳಿದಿದೆ? ಅವಳ ಸುಖಕ್ಕಾಗಿ ನಾನು ಏನು ಬೇಕಾದರೂ ಮಾಡಬಲ್ಲೆ. ಅದೇ ರೀತಿ ನೀವು ಕೂಡಾ ಆ ನಿರ್ಭಾಗ್ಯಳಿಗಾಗಿ ಬಹಳ ಕಷ್ಟಪಟ್ಟಿದ್ದೀರಿ, ಕಷ್ಟಪಡಬಲ್ಲಿರಿ. ಆದರೆ ಈ ವ್ಯೂಹ ದಿಂದ ಅವಳನ್ನು ಬಿಡಿಸಲು ಸಾಧ್ಯವೇ? ಅದು ಅಸಾಧ್ಯ ಎಂದು ತೋರಿದಾಗ ಲೆಲ್ಲ ನನಗೆ ಈ ಜೀವದಿಂದ ಏನು ಪ್ರಯೋಜನ ಅನ್ನಿಸುತ್ತದೆ. ಪುರುಷ ಪ್ರಯತ್ನದ ಈ ವಿಫಲತೆಯನ್ನು ಕಂಡೇ ನಮ್ಮ ಹಿರಿಯರು ಸಂನ್ಯಾಸ ಸ್ವೀಕರಿ ಸುತ್ತಿದ್ದರೋ ಏನೋ." ಎಂದ ಸುಬ್ಬಣ್ಣ; ಮಾತಿನಲ್ಲಿ ನಿರಾಶೆಯ ಮಂಜು ಗಾಳಿ ಆಡುತ್ತಿತ್ತು.

"ಬೆಂಕಿಯಲ್ಲಿ ಬಿದ್ದು ಬೇಯುತ್ತಿರುವ ನಿರಪರಾಧಿ ಜೀವನವನ್ನು ಕಂಡು ಅದನ್ನು ಹಾಗೇ ನೋಡುತ್ತ ನೀವು ನಿಂತಿರಬೇಕು. ಅಯ್ಯೋ, ಮನುಷ್ಯ ಜೀವನವೇ!" ಎಂದು ಸುಬ್ಬ ನಿಟ್ಟುಸಿರುಬಿಟ್ಟ.

ಶೀನಪ್ಪ ಸ್ವಲ್ಪ ಹೊತ್ತು ಸುಮ್ಮನಿದ್ದು "ಮಗುವಿನ ಪ್ರೀತಿಯಾದರೂ ಇದ್ದಿದ್ದರೆ? ಪಾಪ, ಎಷ್ಟೋ ದಿನ ತಾಯಿಯನ್ನು ಕಾಣದೆ, ಅತ್ತೆಯನ್ನೇ ತಾಯಿಯೆಂದು ತಿಳಿದಿದೆ. ಕ್ರಮೇಣ ಅದು ತನ್ನ ತಾಯಿಯನ್ನು ಗುರುತಿಸದೆ ಇರುವುದೇ?" ಎಂದ.

"ಗುರುತಿಸಬಹುದು. ಹಾಗಾದರೆ ಮಾತ್ರ ಪದ್ಮಾವತಮ್ಮ ಬದುಕು ವುದು ಸಾಧ್ಯ. ಇಲ್ಲವಾದರೆ—" ಎಂದು ಮುಂದಿನ ಮಾತನ್ನು ಸುಬ್ಬ ತಡೆ ಹಿಡಿದ.

"ನನಗೆ ಒಂದು ಸಲ ಪದ್ಮಳನ್ನು ನೋಡಬೇಕು ಅಂತ ಅನ್ನಿಸುತ್ತದೆ, ಸುಬ್ಬಣ್ಣ; ಏನು ಮಾಡಲಿ?" ಎಂದ ಶೀನಪ್ಪ.

ಸುಬ್ಬ ಕೊಂಚ ಸುಮ್ಮನಿದ್ದು, "ಅದರಿಂದೇನು ಉಪಯೋಗ, ಶೀನಪ್ಪನವರೇ? ನೀವು ಅವರ ಕಷ್ಟ ಪರಿಹಾರವಾಗಲು ಏನು ಮಾಡ ಬಲ್ಲಿರಿ?"

"ಅದು ಸರಿ; ನಾನು ಅಲ್ಲಿಗೆ ಹೋದರೆ ಇನ್ನೂ ತೊಂದರೆಯೇ ಆದೀತು. ಅವಳಿಗೆ ಇನ್ನಷ್ಟು ಅಪವಾದ ಬಂದೀತು. ಅವಳ ಯಾತನೆ ಇನ್ನಷ್ಟು ಹೆಚ್ಚುತ್ತದೆ" ಎಂದು ಶೀನಪ್ಪ "ಅವಳ ಗಂಡ ಅವಳನ್ನು ನೋಡಿ

ದರೇ ? ” ಎಂದು ಕೇಳಿದ.

“ ನಾನೇ ಅವರನ್ನು ಚಂದ್ರಶೇಖರಯ್ಯನವರ ಮನೆಗೆ ಕರೆದುಕೊಂಡು ಹೋದೆ. ಆಗಿನ ಪದ್ಮಾಳ ಸ್ಥಿತಿಯನ್ನು ಕಂಡು ಶಾಸ್ತ್ರಿಗಳಿಗೆ ಬಹಳ ದುಃಖವಾಯಿತು. ಬಹಳ ಮಾತಾಡಿಸಿದರು. ತಾನು ತಪ್ಪುಮಾಡಿದೆ ಎಂದರು ; ತನ್ನ ಮನೆಯಲ್ಲೇ ಬಂದಿರು ಎಂದರು— ಆದರೆ ಪದ್ಮಾ ಒಂದು ಮಾತೂ ಆಡಲಿಲ್ಲ. ಸುಮ್ಮನೆ ಶೂನ್ಯದೃಷ್ಟಿಯಿಂದ ಅವರ ಮುಖವನ್ನೇ ನೋಡುತ್ತ ಕುಳಿತಳು. ಆ ದೃಶ್ಯವನ್ನು ನಾನು ಎಂದೂ ಮರೆಯಲಾರೆ, ಶೀನಪ್ಪನವರೆ, ನರಕದಲ್ಲಿ ಮನುಷ್ಯರನ್ನು ಕಲ್ಲುಗಾಣಕ್ಕೆ ಹಾಕುತ್ತಾರೆ ಎನ್ನುತ್ತಾರೆ. ಇದು ಅದಕ್ಕಿಂತಲೂ ಹೆಚ್ಚು. ಮತ್ತೆ ನರಕವನ್ನು ನೋಡಬೇಕಿಲ್ಲ.” ಅಂದಿನ ಆ ದೃಶ್ಯವನ್ನು ನೆನೆದು ಸುಬ್ಬನ ಕೊರಳು ಬಿಗಿಯಿತು.

ಸ್ವಲ್ಪ ಹೊತ್ತು ಬಿಟ್ಟು ಶೀನಪ್ಪ “ ಜನರ ಅಪವಾದ ಹೊತ್ತು ತನ್ನ ಗಂಡನ ಪಾದವನ್ನು ಸೇರುತ್ತೇನೆ ಎಂದು ಗರ್ಭಿಣಿಯಾದ ಸೀತೆ ವನವಾಸಕ್ಕೆ ಹೊರಟಂತೆ ಪದ್ಮಾ ಹೊರಟಳು. ದಾರಿ ತಪ್ಪಿ ಯಾರದೋ ಮನೆಯಲ್ಲಿ ಕಾಲ ಕಳೆದು ಮತ್ತೆ ಅದೇ ಮನೆಗೆ ಹೋಗಿದ್ದಾಳೆ. ಆಗ ಪತಿಶೋಕ ; ಈಗ ಪುತ್ರಶೋಕ. ಅಗ್ನಿಕುಂಡದಿಂದ ಅಗ್ನಿಕುಂಡಕ್ಕೆ; ಶೂಲದಿಂದ ಫಾಸಿಕಂಭಕ್ಕೆ, ಕಲ್ಲುಗಾಣದಿಂದ ಮುಳ್ಳು ಹಾಸಿಗೆಗೆ. ನಾನು ಬದುಕಿದ್ದೂ ಏನು ಉಪಯೋಗ ? ಸತ್ತರೆ ಯಾರಿಗೆ ನಷ್ಟ !” ಎಂದು ಹೇಳಿ ಸುಬ್ಬನ ಕಡೆಗೆ ನೋಡುತ್ತ ಕುಳಿತ.

“ ನಿಮಗೆ ಹಾಗನ್ನಿಸುವುದು ಸಹಜ, ಶೀನಪ್ಪನವರೇ. ಆದರೆ ಇದೆಲ್ಲಾ ನಮಗೆ ಅರ್ಥವಾಗುವುದಿಲ್ಲ. ಎಲ್ಲವೂ ಒಂದು ಒಗಟು. ಹೆಜ್ಜೆ ಹೆಜ್ಜೆಗೂ ಒಂದೊಂದು ಸಮಸ್ಯೆ. ಪರಿಹಾರವಿಲ್ಲ, ಶೀನಪ್ಪನವರೇ. ಇದಕ್ಕೆ ಯಾವಾಗಲೂ ಪರಿಹಾರವಿಲ್ಲ. ನಾವು ಹೇಗಾದರೂ ಬದುಕಬೇಕು— ನಮ್ಮ ನಮ್ಮ ಕಾಲ ಬರುವ ತನಕ.”

ಶೀನಪ್ಪ ಇದಕ್ಕೆ ಪ್ರತಿ ಏನೂ ಹೇಳಲಿಲ್ಲ. ತನ್ನ ಮನಸ್ಸಿನ ದುಃಖ, ಎಂದೆಂದಿಗೂ ಮಾಯದ ಗಾಯದ ಅರ್ಥ ಇನ್ನೊಬ್ಬರಿಗೆ ಆಗುವುದು ಸಾಧ್ಯವಿಲ್ಲ. ಪದ್ಮಾ ತನ್ನ ಜೀವನದ ಒಂದು ಪ್ರಮುಖ ಅಂಗ. ಅವಳು ಹೋದ ಮೇಲೆ ತನ್ನ ಜೀವನ ಅರೆಯಾಯಿತು ಎಂಬುದು ಮಾತ್ರ ಅವನಿಗೆ ಗೊತ್ತು.

ವನು ಮತ್ತೆ ತುಂಬ ತಕ್ಕಪ್ಪಲ್ಲ. ಅವನು ಸಿರಿಪಾಯಿ! ಕೈಲಾಗದ ಹೇಡಿ ಯಂತೆ ಕೈ ಕಟ್ಟಿಕೊಂಡು ಕುಳಿತುಕೊಳ್ಳಬೇಕು. ಹೋರಾಡಬಹುದು. ಆದರೆ ಹೋರಾಟ ಯಾರೊಡನೆ ? ಅದರಿಂದ ಪದ್ಮಾಳಿಗೆ ಸುಖವಾಗುವ ಹಾಗಿದ್ದರೆ ? ಆದರೆ ಅವಳಿಗೆ ಈ ಜನ್ಮದಲ್ಲಿ ಮತ್ತೆ ಸುಖವಿಲ್ಲ.

ಸುಬ್ಬ ಮತ್ತೆ ಮಾತಾಡಿದ: “ ನಾನು ಇಲ್ಲಿಗೆ ಬರುವ ಮೊದಲು ಪದ್ಮಾವತಮ್ಮನನ್ನು ನೋಡಿ ಬಂದೆ. ಅದೇ ರೀತಿ ಮಂಕಾಗಿದ್ದರು. ‘ ನಾನು ಶೀನಪ್ಪನವರ ಮನೆಗೆ ಹೋಗುತ್ತೇನೆ ’ ಎಂದು ಹೇಳಿದಾಗ ಅವರ ಮುಖ ಕೊಂಚ ಗೆಲುವಾಗಿ ಮತ್ತೆ ಕಪ್ಪಾಯಿತು. ‘ ಸುಬ್ಬಣ್ಣ ನೀವು ನನಗಾಗಿ ಬಹಳ ಕಷ್ಟ ಪಟ್ಟಿರಿ. ಒಂದು ಕೆಲಸ ಮಾಡಿಕೊಡುತ್ತೀರಾ ’ ಎಂದು ಕೇಳಿದರು. ನಾನು ‘ ಆಗಲಿ ’ ಎಂದೆ. ಶೀನಪ್ಪನವರಿಗೆ ಒಂದು ಮಾತು ಹೇಳಿ. ಅವರು ದೇವರೇ ಅಂತ ನಾನು ಹೇಳಿದ್ದೆ. ಆ ಮಾತು ನಿಜ. ಈ ಜನ್ಮದಲ್ಲಿ ಅವರ ಸೇವೆ ಮಾಡುವ ಪುಣ್ಯ ನನಗಿಲ್ಲ. ಅವರ ಸೇವೆಗಾಗಿ ಮತ್ತೆ ಮತ್ತೆ ನನ್ನನ್ನು ಇಲ್ಲಿ ಹುಟ್ಟಿಸು ಅಂತ ದಿನಾ ದೇವರಿಗೆ ಪ್ರಾರ್ಥನೆ ಮಾಡುತ್ತೇನೆ ’ ಎಂದು ಪದ್ಮಾವತಮ್ಮ ಹೇಳಿ ‘ ಅಂಥವರ ಹತ್ತಿರ ನಾನು ಒಂದು ಸುಳ್ಳು ಮಾತಾಡಿದೆ. ಅದು ನನ್ನ ಹೃದಯವನ್ನು ಕೊರೆಯುತ್ತಿದೆ. ಎಷ್ಟೋ ಸಲ ಅವರಿಗೆ ಸತ್ಯವನ್ನು ಮತ್ತೆ ಹೇಳಿಬಿಡಬೇಕು ಅಂದುಕೊಂಡೆ. ಆದರೆ ಆಗಲಿಲ್ಲ. ನನ್ನನ್ನು ಕ್ಷಮಿಸಬೇಕು ಅಂತ ಅವರಿಗೆ ಹೇಳಿ ’ ಎಂದು ಪದ್ಮಾವತಮ್ಮ ಎದ್ದು ಹೊರಟುಹೋದರು. ಆ ಮಾತು ನಿಮಗೆ ತಿಳಿಸಿದ್ದೇನೆ ” ಎಂದು ಸುಬ್ಬಣ್ಣ ಸುಮ್ಮನಾದ.

“ ಅಯ್ಯೋ, ಪದ್ಮಾ, ನಿನ್ನನ್ನು ಕ್ಷಮಿಸುವುದೇ ? ದೇವರು ನಮ್ಮನ್ನೆಲ್ಲ ಕ್ಷಮಿಸಬೇಕು ” ಎಂದು ಶೀನಪ್ಪ ಚಿಕ್ಕ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳತೊಡಗಿದ.

ಎಣ್ಣೆ ತೀರಿ ಹಚ್ಚಿಟ್ಟಿದ್ದ ಲಾಟೀನು ಆರಿಹೋಯಿತು.

ಸುತ್ತಲೂ ಅಂಧಕಾರ.

“ ಶೀನಪ್ಪನವರೇ, ಸಮಾಧಾನ ತಂದುಕೊಳ್ಳಿ ” ಎನ್ನುತ್ತ ಸುಬ್ಬ ತಾನೂ ಅಳತೊಡಗಿದ.

ಕತ್ತಲು ತುಂಬಿದ ಮನೆಯಲ್ಲಿ ಅಳುವಿನ ಸದ್ದು.

ಸುಬ್ಬ ಹೇಳಿದ: "ಇಲ್ಲಿ ಈ ಜಗತ್ತಿನಲ್ಲಿ ಪದ್ಮಾವತಮ್ಮನೊಬ್ಬರೇ ಅನಾ ರಲ್ಲ. ಈ ನಾವೆಲ್ಲರೂ ಅನಾಥರೇ. ಕಾಯುವ ತಂದೆ ಕಣ್ಣು ಬಿಡಬೇಕ ಕಾಯುವವನು, ಕೊಲ್ಲುವವನು, ತೊಳಲಿಸುವವನು, ಅಳಲಿಸುವವ ಅವನೇ" ಎಂದ.

ಅದಕ್ಕೆ ಉತ್ತರ ರೂಪವಾಗಿಯೋ ಎನ್ನುವಂತೆ ಶೀನಪ್ಪ ಇನ್ನೂ ಹೆಚ್ಚು ಹೆಚ್ಚಾಗಿ ಬಿಕ್ಕಿ ಬಿಕ್ಕಿ ಅಳತೊಡಗಿದ.

# ಈ ಲೇಖಕನ ಇತರ ಕೃತಿಗಳು

---

**ಕಾವ್ಯ**

ಭಾವತರಂಗ

ಕಟ್ಟುವೆವು ನಾವು

ನಡೆದು ಬಂದದಾರಿ

ಚಂಡೆ–ಮದ್ದಳೆ

**ಅನುವಾದ**

ಸುವರ್ಣಕೀಟ (ಕಥೆಗಳು)

ರೈತರ ಹುಡುಗಿ ( ,, )

ಜನತೆಯ ಶತ್ರು ( ನಾಟಕ )

ಭೂಗರ್ಭಯಾತ್ರೆ (ಸಾಹಸ ಕಥೆ)

ದೆವ್ವದ ಕಥೆಗಳು (ಅಚ್ಚಿನಲ್ಲಿ)

**ಕಾದಂಬರಿ**

ಆಕಾಶ ದೀಪ

**ಸಣ್ಣಕಥೆ**

ಪುಟ್ಟನ ಪಯಣ (ಅಚ್ಚಿನಲ್ಲಿ)